# ಉಚ್ಚಂಗಿ ಪಾಂಡ್ಯರು : ಇತಿಹಾಸ ಮತ್ತು ಸಂಸ್ಕೃತಿ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)


ಸಂಶೋಧಕರು

ನೆಲ್ಕುದ್ರಿ ಸದಾನಂದಪ್ಪ

ಮಾರ್ಗದರ್ಶಕರು

ಡಾ. ಎಸ್.ವೈ. ಸೋಮಶೇಖರ್

ಸಹಾಯಕ ಪ್ರಾಧ್ಯಾಪಕರು








ಸಮಾಜ ವಿಜ್ಞಾನಗಳ ನಿಕಾಯ

ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೯

# ಉಚ್ಚಂಗಿ ಪಾಂಡ್ಯರು : ಇತಿಹಾಸ ಮತ್ತು ಸಂಸ್ಕೃತಿ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು
**ನೆಲ್ಕುದ್ರಿ ಸದಾನಂದಪ್ಪ**

ಮಾರ್ಗದರ್ಶಕರು
**ಡಾ. ಎಸ್.ವೈ. ಸೋಮಶೇಖರ್**
ಸಹಾಯಕ ಪ್ರಾಧ್ಯಾಪಕರು



ಸಮಾಜ ವಿಜ್ಞಾನಗಳ ನಿಕಾಯ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೯

# ಮಾರ್ಗದರ್ಶಕರ ದೃಢೀಕರಣ ಪತ್ರ

ನೆಲ್ಕುದ್ರಿ ಸದಾನಂದಪ್ಪ ಇವರು ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **"ಉಚ್ಚಂಗಿ ಪಾಂಡ್ಯರು : ಇತಿಹಾಸ ಮತ್ತು ಸಂಸ್ಕೃತಿ"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

- ೧೭।೩।೦೯

**ದಿನಾಂಕ :**

**ಸ್ಥಳ : ವಿದ್ಯಾರಣ್ಯ**

**ಡಾ. ಎಸ್.ವೈ. ಸೋಮಶೇಖರ್**
ಸಹಾಯಕ ಪ್ರಾಧ್ಯಾಪಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ–೫೮೩ ೨೭೬**

# ಸಂಶೋಧಕರ ಘೋಷಣಾ ಪತ್ರ

"ಉಚ್ಚಂಗಿ ಪಾಂಡ್ಯರು : ಇತಿಹಾಸ ಮತ್ತು ಸಂಸ್ಕೃತಿ" ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ಸಹಾಯಕ ಪ್ರಾಧ್ಯಾಪಕರಾದ **ಡಾ. ಎಸ್.ವೈ. ಸೋಮಶೇಖರ್** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

**ದಿನಾಂಕ** : 13-3-2019
**ಸ್ಥಳ** : **ವಿದ್ಯಾರಣ್ಯ**

**ನೆಲ್ಕುದ್ರಿ ಸದಾನಂದಪ್ಪ**
ಪಿಎಚ್.ಡಿ. ಸಂಶೋಧನ ವಿದ್ಯಾರ್ಥಿ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ–೫೮೩ ೨೭೬**

# ಸಂಕ್ಷೇಪಗಳು

| | | |
|---|---|---|
| ಎ.ಕ. | : | ಎಫಿಗ್ರಾಫಿಯಾ ಕರ್ನಾಟಿಕ |
| ಇ.ಸಿ./E.C | : | ಎಫಿಗ್ರಾಫಿಯಾ ಕರ್ನಾಟಕ |
| ಇ.ದ.ಸಂ. | : | ಇತಿಹಾಸ ದರ್ಶನ ಸಂಪುಟ |
| ಕ.ವಿ.ವಿ.ಶಾ.ಸಂ. | : | ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ |
| ಬ.ಜಿ.ಶಾಸನಗಳು | : | ಬಳ್ಳಾರಿ ಜಿಲ್ಲೆಯ ಶಾಸನಗಳು |
| ಸಂ. | : | ಸಂಪಾದಕರು |
| ಮು.ಸಂ. | : | ಮುಖ್ಯ ಸಂಪಾದಕರು |
| ಕೆ.ಆಯ್./K.I. | : | ಕರ್ನಾಟಕ ಇನ್ಸ್ಕ್ರಿಪ್ಷನ್ಸ್ |
| ಎ.ಇ./E.I. | : | ಎಫಿಗ್ರಾಫಿಯಾ ಇಂಡಿಕಾ |
| ಎಸ್.ಐ.ಐ. | : | ಸೌತ್ ಇಂಡಿಯನ್ ಇನ್ಸ್ಕ್ರಿಪ್ಷನ್ಸ್ |
| ತಾ. | : | ತಾಲೂಕು |
| ಶಾ.ಸಂ. | : | ಶಾಸನ ಸಂಖ್ಯೆ |



# ಪರಿವಿಡಿ

ಅಧ್ಯಾಯ : ಒಂದು

**ಅಧ್ಯಯನದ ಉದ್ದೇಶ, ವ್ಯಾಪ್ತಿ, ಅಧ್ಯಯನ ಸಮೀಕ್ಷೆ,**
**ವಿಧಾನ ಮತ್ತು ಸ್ವರೂಪ / ೧ – ೮**

ಅಧ್ಯಾಯ : ಎರಡು

**ಭೌಗೋಳಿಕ ಮತ್ತು ಐತಿಹಾಸಿಕ ಹಿನ್ನೆಲೆ / ೯ – ೨೮**

ಅಧ್ಯಾಯ : ಮೂರು

**ರಾಜಕೀಯ ಇತಿಹಾಸ / ೨೯ – ೨೨೪**

೩.೧. ಪಾಂಡ್ಯ ಅರಸರ ಮೂಲ ಮತ್ತು ವಂಶಾವಳಿ
೩.೨. ಅರಸರ ಜೀವನ ಮತ್ತು ಸಾಧನೆಗಳು
೩.೩. ಆಡಳಿತ ವ್ಯವಸ್ಥೆ

ಅಧ್ಯಾಯ : ನಾಲ್ಕು

**ಸಾಂಸ್ಕೃತಿಕ ಪರಂಪರೆ / ೨೨೫ – ೩೫೯**

೪.೧. ಧಾರ್ಮಿಕ
೪.೨. ಸಾಮಾಜಿಕ
೪.೩. ಆರ್ಥಿಕ
೪.೪. ಕಲೆ ಮತ್ತು ವಾಸ್ತುಶಿಲ್ಪ

ಅಧ್ಯಾಯ : ಐದು

**ಸಮಾರೋಪ / ೩೬೦ – ೩೬೯**

**ಅನುಬಂಧ**

೧. ಗ್ರಂಥಸೂಚಿ / ೩೭೦ – ೩೮೦
೨. ಶಾಸನಸೂಚಿ / ೩೮೧ – ೪೧೨
೩. ನಕ್ಷೆಗಳು / ೪೧೩ – ೪೨೧
೪. ಛಾಯಾಚಿತ್ರಗಳು / ೪೨೨

ಅಧ್ಯಾಯ :ಒಂದು

# ಅಧ್ಯಯನ ಉದ್ದೇಶ, ವ್ಯಾಪ್ತಿ, ಅಧ್ಯಯನ ಸಮೀಕ್ಷೆ, ವಿಧಾನ ಮತ್ತು ಸ್ವರೂಪ

## ಪ್ರಸ್ತಾವನೆ

ಕರ್ನಾಟಕದಲ್ಲಿ ಇತಿಹಾಸ ರಚನೆಯ ಕಾರ್ಯ ೨೦ನೇ ಶತಮಾನದಿಂದ ಸ್ವಲ್ಪ ತ್ವರಿತಗೊಂಡರೂ ಅದು ಕೆಲವು ಪ್ರಮುಖ ಕ್ಷೇತ್ರಗಳಿಗೆ ಮಾತ್ರ ಸೀಮಿತಗೊಂಡಿತ್ತು. ಈ ಹಂತದವರ ಹೆಚ್ಚಿನ ಒಲವು ಪ್ರಮುಖ ರಾಜಮನೆತನಗಳನ್ನು ಗುರುತಿಸುವೆಡೆಗೆ, ಅದರ ಮೂಲ ಸ್ಥಳ, ಭಾಷೆ, ಜಾತಿ ಮತ್ತು ಗೋತ್ರಗಳನ್ನು ಹುಡುಕುವ ಕಡೆಗೆ ಕೇಂದ್ರೀಕೃತವಾಗಿತ್ತು. ಕೆಲವು ದಶಕಗಳಿಂದೀಚೆಗೆ ಇತಿಹಾಸಶಾಸ್ತ್ರದ ಬೆಳವಣಿಗೆಯ ಪರಿಣಾಮವಾಗಿ, ಇತಿಹಾಸಕಾರರಿಂದ ಕಡೆಗಣಿಸಲ್ಪಟ್ಟಿದ್ದ ಸ್ಥಳೀಯ ಇತಿಹಾಸಕ್ಕೆ ಹೆಚ್ಚಿನ ಮಹತ್ವ ದೊರಕಿದೆ. ಪ್ರಾಚೀನ ಅರಸು ಮನೆತನಗಳ ಆಡಳಿತ ಕಾಲದಲ್ಲಿ ವಿಶಾಲ ಸಾಮ್ರಾಜ್ಯದ ಆಡಳಿತ ನಿರ್ವಹಣೆ ಅರಸನಿಗೆ ಶ್ರಮದ ಕೆಲಸ. ಹಾಗಾಗಿ ಸಾಮ್ರಾಜ್ಯವನ್ನು ಅನೇಕ ವಿಭಾಗ ಮತ್ತು ಉಪವಿಭಾಗಗಳಾಗಿ ವಿಂಗಡಿಸಿ, ಅವುಗಳ ಆಡಳಿತ ನೋಡಿಕೊಳ್ಳಲು ತಮಗೆ ಆಪ್ತರಾದವರನ್ನು ನೇಮಿಸುತ್ತಿದ್ದರು. ಇವರನ್ನು ಮಂಡಳಾಧಿಪತಿ, ಮಹಾಮಂಡಳೇಶ್ವರ ಎಂದು ಕರೆಯಲಾಗಿದೆ. ಇವರು ಅರಸನಿಗೆ ನಿಷ್ಠೆಯಿಂದ ಇದ್ದು, ತಮ್ಮ ಕ್ಷೇತ್ರಗಳ ಸ್ಥಾನೀಯ ಸಂಸ್ಕೃತಿಯನ್ನು ಕಾಪಾಡಿ, ರಾಜನ ಶಕ್ತಿಗೆ ಸ್ಥಿರತೆಯನ್ನು ನೀಡುತ್ತಿದ್ದರು. ತಮ್ಮ ನಾಡಿನ ಕಲೆ, ಸಾಹಿತ್ಯ, ವಾಸ್ತುಶಿಲ್ಪದಲ್ಲಿನ ಕೆಲವು ಶ್ರೇಷ್ಠ ಸಾಧನೆಗಳು ಇಂಥ ಮಂಡಳೇಶ್ವರರ ಕೈಕೆಳಗೆ ಪೂರ್ಣವಾದವು.

ಈ ಮಂಡಳೇಶ್ವರರನ್ನು ಎರಡು ರೀತಿಯಲ್ಲಿ ಗುರುತಿಸಬಹುದು. ವಂಶಪರಂಪರಾಗತವಾಗಿ ಬಂದ ಆಡಳಿತ; ಇನ್ನೊಂದು ಅರಸನ ಪ್ರೀತಿ ವಿಶ್ವಾಸಕ್ಕೆ ಪಾತ್ರರಾಗಿ ಪದೋನ್ನತಿ ಪಡೆದ ಮಂಡಳೇಶ್ವರರಾಗಿರುವುದು. ಅರಸನಂತೆ ಮಂಡಳೇಶ್ವರರೂ ಸ್ವತಂತ್ರ ಮಂತ್ರಿಮಂಡಲ, ಅಧಿಕಾರಿವರ್ಗ ಹಾಗೂ ಸೈನಿಕರನ್ನು ಹೊಂದಿದ್ದರು. ಅಲ್ಲದೆ ವಂಶಪಾರಂಪರ್ಯವಾಗಿ ಬಂದ ಬಿರುದು, ರಾಜ ಚಿಹ್ನೆಗಳನ್ನು ಧರಿಸಿ ಸ್ವತಂತ್ರ ಆಡಳಿತ ನಡೆಸಿದರು. ಬಳ್ಳಾರಿ ಮತ್ತು ಚಿತ್ರದುರ್ಗ ಪರಿಸರದಲ್ಲಿ ಆಳ್ವಿಕೆ ಮಾಡಿದ ಸಿಂದರು, ಕದಂಬರು, ನೊಳಂಬ, ಪಲ್ಲವರಂತೆ ಉಚ್ಚಂಗಿ

ಪಾಂಡ್ಯರದ್ದು ಒಂದು ಅರಸು ಮನೆತನ. ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲೂಕಿನ ಉಚ್ಚಂಗಿದುರ್ಗದಿಂದ ಈ ಮಂಡಳೇಶ್ವರರು ಆಡಳಿತ ನಡೆಸಿದ್ದರಿಂದ ಇವರನ್ನು 'ಉಚ್ಚಂಗಿ ಪಾಂಡ್ಯ'ರೆಂದು ಕರೆಯಲಾಗಿದೆ.

ನೊಳಂಬವಾಡಿ ೩೨,೦೦೦ ವಿಭಾಗವನ್ನು ಪ್ರಾರಂಭದಲ್ಲಿ ನೊಳಂಬ ಪಲ್ಲವ, ಗಂಗ, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯರ ಅಧೀನದಲ್ಲಿ ಮಂಡಳೇಶ್ವರರಾಗಿ ಆಡಳಿತ ನಡೆಸಿದರು. ಪರಂಪರಾಗತವಾಗಿ ಆಳುತ್ತಿದ್ದ ಪಲ್ಲವ ಉದಯಾದಿತ್ಯನು ತನ್ನ ನಿಷ್ಠೆಯನ್ನು ಎರಡನೇ ಸೋಮೇಶ್ವರನಿಗೆ ವ್ಯಕ್ತಪಡಿಸಿದ್ದರಿಂದ ಪಲ್ಲವರು ಈ ನಾಡಿನ ಪ್ರಭುತ್ವವನ್ನು ಕಳೆದುಕೊಳ್ಳುತ್ತಾರೆ. ಕ್ರಿ.ಶ. ೧೦೭೬ರಲ್ಲಿ ೬ನೇ ವಿಕ್ರಮಾದಿತ್ಯನು ಅಧಿಕಾರಕ್ಕೆ ಬಂದ ಮೇಲೆ, ಉಚ್ಚಂಗಿ ಪಾಂಡ್ಯರನ್ನು ಆ ನಾಡಿನ ಮಂಡಳೇಶ್ವರರಾಗಿ ನೇಮಿಸಿದ. ಇವರು ಚಾಲುಕ್ಯ ಚಕ್ರವರ್ತಿಗಳಿಗೆ ನಿಷ್ಠೆಯಿಂದ ಇದ್ದು, ೧೨ನೇ ಶತಮಾನದ ಅಂತ್ಯದವರೆಗೂ ಆಳಿದರು. 'ಉಚ್ಚಂಗಿದುರ್ಗ' ಇವರ ರಾಜಧಾನಿ. ಇಲ್ಲಿಂದ ಆಡಳಿತ ನಡೆಸಿದ ಈ ಮಂಡಳೇಶ್ವರರ ಸಾಂಸ್ಕೃತಿಕ ಚರಿತ್ರೆಯನ್ನು "ಉಚ್ಚಂಗಿ ಪಾಂಡ್ಯರು: ಇತಿಹಾಸ ಮತ್ತು ಸಂಸ್ಕೃತಿ" ಎಂಬ ಶೀರ್ಷಿಕೆಯ ಅಡಿಯಲ್ಲಿ ಪ್ರಸ್ತುತ ಅಧ್ಯಯನ ಕೈಗೊಳ್ಳಲಾಗಿದೆ.

ಸೂರ್ಯವಂಶಕ್ಕೆ ಸೇರಿದವರೆಂದು ಹೇಳಿಕೊಳ್ಳುವ ಪಾಂಡ್ಯರು ಮೂಲತಃ ಸಪ್ತಕೊಂಕಣಗಳಲ್ಲಿ ಒಂದಾದ 'ಹೈಹ' ವಿಭಾಗವನ್ನು ಶಿಶುಗಲಿಯಿಂದ ಆಳುತ್ತಿದ್ದರು. ಪಶ್ಚಿಮ ಚಾಲುಕ್ಯ ರಾಜಪುತ್ರ ಜಯಸಿಂಹನು ಸಪ್ತಕೊಂಕಣವನ್ನು ಗೆದ್ದ ಮೇಲೆ ಪಾಂಡ್ಯರು ಉಚ್ಚಂಗಿಗೆ ವಲಸೆ ಹೋದರು. ಕ್ರಿ.ಶ. ೧೦೭೬ರಲ್ಲಿ ಚಾಲುಕ್ಯ ದೊರೆಯಿಂದ ಮಂಡಳೇಶ್ವರರಾಗಿ ನೇಮಕಗೊಂಡು ನೊಳಂಬವಾಡಿ ಪ್ರದೇಶವನ್ನು ಆಳಿದರು. ಮತ್ಸ್ಯ ಇವರ ರಾಜಲಾಂಛನ. ಈ ಮಂಡಳೇಶ್ವರರು ತಮ್ಮ ರಾಜಕೀಯ ಚೌಕಟ್ಟಿನ ಒಳಗೆ ವ್ಯವಸ್ಥಿತ ಆಡಳಿತವನ್ನು ಸಂಘಟಿಸಿ ಮಹಾಮಂಡಳೇಶ್ವರ, ಸಾಮಂತ, ದಂಡನಾಯಕ ಮೊದಲಾದ ಆಡಳಿತ ವರ್ಗಕ್ಕೆ ಆಶ್ರಯ ನೀಡಿದ್ದರು. ಸಾಮಾಜಿಕ, ಆರ್ಥಿಕ, ಧಾರ್ಮಿಕ ಮೊದಲಾದ ಸಾಂಸ್ಕೃತಿಕ ಅನನ್ಯತೆಗೆ ಸಾಕ್ಷಿಯಾದರು. ಈ ಅವಧಿಯಲ್ಲಿ ಅನೇಕ ಮಠ-ಮಾನ್ಯ, ಬಸದಿ, ಕೆರೆ-ಕಾಲುವೆ, ಕೋಟೆ-ಕೊತ್ತಲ, ದೇವಾಲಯ ಹಾಗೂ ಮೂರ್ತಿಶಿಲ್ಪಗಳು ನಿರ್ಮಾಣಗೊಂಡವು. ಇವುಗಳ ನಿರ್ಮಾಣ ಮತ್ತು ನಿರ್ವಹಣೆಗಾಗಿ ದಾನದತ್ತಿಗಳನ್ನು ನೀಡಿರುವುದು ಅವರು ಹಾಕಿಸಿದ ಶಾಸನಗಳಿಂದ ತಿಳಿದುಬರುತ್ತದೆ. ಇವುಗಳು ಅವರ ಸಾಂಸ್ಕೃತಿಕ ಬದುಕಿನ ಮೇಲೂ ಬೆಳಕು ಚೆಲ್ಲುತ್ತವೆ. ಸಾಹಿತ್ಯ ಕೃತಿ, ಶಾಸನ, ಸ್ಮಾರಕ ಹಾಗೂ ಲಾವಣಿ, ಪುರಾಣ, ಐತಿಹ್ಯಗಳಂತಹ ಜಾನಪದೀಯ ಆಕರಗಳ ಮೂಲಕ ಉಚ್ಚಂಗಿ ಪಾಂಡ್ಯರ ಕುರಿತು ಒಂದು ವ್ಯವಸ್ಥಿತವಾದ ಸಾಂಸ್ಕೃತಿಕ ಅಧ್ಯಯನವನ್ನು ಕೈಗೊಳ್ಳುವ ಸಲುವಾಗಿ ಪ್ರಸ್ತುತ ವಿಷಯವನ್ನು ಆಯ್ದುಕೊಳ್ಳಲಾಗಿದೆ.

## ಅಧ್ಯಯನದ ಉದ್ದೇಶ

ಸಂಶೋಧನೆಯ ಉದ್ದೇಶ ಒಂದು ನಿರ್ದಿಷ್ಟ ಸಂಶೋಧನಾ ಯೋಜನೆಯಡಿಯಲ್ಲಿ ಬರುವ ಒಟ್ಟು ಕೆಲಸಗಳ ಒಂದು ಸ್ಥೂಲ ಚಿತ್ರಣ. ಅಧ್ಯಯನದ ಉದ್ದೇಶಗಳು ಸಂಶೋಧನಾ ಕಾರ್ಯಕ್ಕೆ ಮಾರ್ಗಸೂಚಿಯೂ ಹೌದು. ಇತಿಹಾಸದ ಅಧ್ಯಯನದಲ್ಲಿ ಎರಡು ಪ್ರಮುಖ ಸ್ತರಗಳನ್ನು ಗುರುತಿಸಬಹುದು. ೧. ಸ್ಥೂಲಸ್ತರದ ಇತಿಹಾಸ ೨. ಸೂಕ್ಷ್ಮಸ್ತರದ ಇತಿಹಾಸ. ಸ್ಥೂಲಸ್ತರದ ಇತಿಹಾಸವು ದೊಡ್ಡ ದೊಡ್ಡ ಸಾಮ್ರಾಜ್ಯಗಳ ಪಕ್ಷಿನೋಟವನ್ನು ಒಳಗೊಂಡಿದೆ. ಇಂತಹ ಸಂಶೋಧನೆಗಳು ಸ್ಥಳೀಯ ಇತಿಹಾಸದಲ್ಲಿನ ಏರುಪೇರುಗಳನ್ನು ಸ್ಪಷ್ಟವಾಗಿ ಗುರುತಿಸುವಲ್ಲಿ ವಿಫಲವಾಗುತ್ತವೆ. ಅಲ್ಲದೆ ಇಂತಹ ಅಧ್ಯಯನಗಳು ವೈಭವೀಕರಣದಲ್ಲಿ ಮುಳುಗುವ ಸಾಧ್ಯತೆ ಹೆಚ್ಚಾಗಿರುವುದು.

ಸಾಮ್ರಾಜ್ಯಗಳ ನಿಜ ಚಿತ್ರಣ ದೊರೆಯಬೇಕಾದರೆ ಅವುಗಳ ಆಧಾರಸ್ತಂಭಗಳಂತಿದ್ದ ಚಿಕ್ಕ ಚಿಕ್ಕ ರಾಜಕೀಯ ಘಟಕಗಳ ಆಳವಾದ ಸಂಶೋಧನೆಗಳು ಅವಶ್ಯಕ. ಈ ದಿಸೆಯಲ್ಲಿ ಕರ್ನಾಟಕದ ಇತಿಹಾಸ ಸಂಶೋಧನ ವಲಯದಲ್ಲಿ ಆಗಿರುವ ಕೆಲಸ ಅತಿ ಕಡಿಮೆ. ಆದುದರಿಂದ ಸೂಕ್ಷ್ಮಸ್ತರದ ಸಂಶೋಧನೆಯ ಕಡೆಗೆ ಇಂದು ಗಮನ ಕೊಡಬೇಕಾಗಿದೆ. ಈ ನಿಟ್ಟಿನಲ್ಲಿ ಕಲ್ಯಾಣ ಚಾಲುಕ್ಯರ ಮಂಡಳೇಶ್ವರರಾದ ಪಾಂಡ್ಯರ ಕುರಿತು "ಉಚ್ಚಂಗಿ ಪಾಂಡ್ಯರು: ಇತಿಹಾಸ ಮತ್ತು ಸಂಸ್ಕೃತಿ" ಎಂಬ ಶೀರ್ಷಿಕೆಯಲ್ಲಿ ಸಂಶೋಧನೆಯನ್ನು ಕೈಗೊಳ್ಳಲಾಗಿದೆ.

ಉಚ್ಚಂಗಿ ಪಾಂಡ್ಯರ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಂಶಗಳ ಕುರಿತಾಗಿ ಹಲವು ಬಿಡಿ ಅಧ್ಯಯನಗಳು ನಡೆದಿವೆ. ಶಾಸನ ಮತ್ತು ದೇವಾಲಯಗಳ ಕುರಿತು ಕೆಲವು ಅಧ್ಯಯನ ಹಾಗೂ ಲೇಖನಗಳು ಪ್ರಕಟವಾಗಿದ್ದನ್ನು ಹೊರತುಪಡಿಸಿದರೆ, ಸಮಗ್ರ ಹಾಗೂ ಸೂಕ್ಷ್ಮ ನೆಲೆಯಲ್ಲಿ ಅಧ್ಯಯನಗಳು ನಡೆದಿರುವುದು ಅತ್ಯಂತ ಕಡಿಮೆ. ಇಂತಹ ಕೊರತೆಯನ್ನು ತುಂಬಿಕೊಡುವ ಮತ್ತು ಅಧ್ಯಯನವನ್ನು ವಿಸ್ತರಿಸುವ ಉದ್ದೇಶ ಈ ಅಧ್ಯಯನದ್ದಾಗಿದೆ.

ಒಟ್ಟಿನಲ್ಲಿ ಕರ್ನಾಟಕದ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ಕ್ಷೇತ್ರಗಳಲ್ಲಿ ಉಪೇಕ್ಷೆಗೆ ಒಳಗಾಗಿರುವ ಉಚ್ಚಂಗಿ ಪಾಂಡ್ಯರ ಸಾಂಸ್ಕೃತಿಕ ಚರಿತ್ರೆಯನ್ನು ವಿವರಣಾತ್ಮಕ ಹಾಗೂ ವಿಶ್ಲೇಷಣಾತ್ಮಕ ಅಧ್ಯಯನಕ್ಕೆ ಒಳಪಡಿಸುವ ಮೂಲಕ ಪಾಂಡ್ಯರ ಅವಧಿಯ ನೊಳಂಬವಾಡಿ ನಾಡಿನ ಭೌಗೋಳಿಕ ಅಂಶಗಳು, ಪೂರ್ವದ ಚರಿತ್ರೆ, ಅವರ ಮೂಲ ಮತ್ತು ವಂಶಾವಳಿ, ಆಳ್ವಿಕೆ ನಡೆಸಿದ ಅರಸರ ಜೀವನ ಮತ್ತು ಸಾಧನೆ, ಆಡಳಿತ ವ್ಯವಸ್ಥೆ ಒಳಗೊಂಡಂತೆ ಅವರ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುವ ಹಾಗೂ ಚಾರಿತ್ರಿಕ ಸಂದರ್ಭದಲ್ಲಿ ನಿರ್ಮಾಣವಾದ ಎಲ್ಲ ಬಗೆಯ ಸ್ಮಾರಕ, ಶಾಸನ, ನಂಬಿಕೆ-ಆಚರಣೆಗಳ ಕುರಿತು ಅಧ್ಯಯನ ಮಾಡುವ ಬಹುಮುಖ್ಯ ಉದ್ದೇಶದಿಂದ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

## ಅಧ್ಯಯನದ ವ್ಯಾಪ್ತಿ

ಒಂದು ನಿರ್ದಿಷ್ಟ ಹಾಗೂ ಉದ್ದೇಶಪೂರಿತ ಸಂಶೋಧನೆ ಯಶಸ್ಸು ಕಾಣಬೇಕಾದರೆ ಅದಕ್ಕೆ ನಿರ್ದಿಷ್ಟ ಚೌಕಟ್ಟು ಅಗತ್ಯ. ಅಂದರೆ ವ್ಯಾಪ್ತಿ ಬಹುಮುಖ್ಯ. ಉಚ್ಚಂಗಿ ಪಾಂಡ್ಯರು ನೊಳಂಬವಾಡಿ - ೩೨೦೦೦ ಆಡಳಿತ ವಿಭಾಗದ ಮಹಾಮಂಡಳೇಶ್ವರರಾಗಿ ಆಡಳಿತ ನಡೆಸಿದ್ದರಿಂದ ಹಿಂದಿನ ನೊಳಂಬವಾಡಿ ಪ್ರದೇಶವು (ಬಳ್ಳಾರಿ, ದಾವಣಗೆರೆ, ತುಮಕೂರು, ಚಿತ್ರದುರ್ಗ, ಗಂಗಾವತಿ, ಹಾಸನ, ಧರ್ಮಪುರಿ, ಅನಂತಪುರ ಜಿಲ್ಲೆಯ ಕೆಲವು ಗ್ರಾಮಗಳು) ಪ್ರಸ್ತುತ ಅಧ್ಯಯನದ ಪ್ರಾದೇಶಿಕ ವ್ಯಾಪ್ತಿಯಾಗಿದೆ. ಅಲ್ಲದೆ ಕ್ರಿ.ಶ. ೧೧ನೇ ಶತಮಾನದಿಂದ ೧೨ನೇ ಶತಮಾನದ ಅಂತ್ಯದವರೆಗಿನ ಕಾಲಾವಧಿಗೆ ಅಧ್ಯಯನವನ್ನು ಸೀಮಿತಗೊಳಿಸಲಾಗಿದೆ. ಈ ಅವಧಿಯಲ್ಲಿ ರಚನೆಯಾದ ಶಾಸನ, ನಾಣ್ಯ, ಸ್ಮಾರಕಗಳಾದ ದೇವಾಲಯ, ಮೂರ್ತಿಶಿಲ್ಪ, ಕೋಟೆ, ಕೆರೆ–ಕಾಲುವೆ ಇತರೆ ಪ್ರಾಚ್ಯಾವಶೇಷ ಕುರುಹುಗಳನ್ನು ಪ್ರಸ್ತುತ ಅಧ್ಯಯನಕ್ಕೊಳಪಡಿಸಲಾಗಿದೆ.

## ಅಧ್ಯಯನ ಸಮೀಕ್ಷೆ

ಉಚ್ಚಂಗಿ ಪಾಂಡ್ಯರ ಸಾಂಸ್ಕೃತಿಕ ಚರಿತ್ರೆಗೆ ಸಂಬಂಧಿಸಿದಂತೆ ಸಮಗ್ರ ಅಧ್ಯಯನಗಳು ಇಲ್ಲಿಯವರೆಗೂ ನಡೆದಿಲ್ಲ. ಹಲವು ಬಿಡಿ ಬಿಡಿಯಾದ ಅಧ್ಯಯನಗಳು ನಡೆದಿವೆ. ಅವುಗಳನ್ನು ಇಲ್ಲಿ ಗಮನಿಸಬಹುದು. "ಸೌತ್ ಇಂಡಿಯನ್ ಇನ್ಸ್‌ಕ್ರಿಪ್‌ಷನ್ಸ್" ಸಂಪುಟಗಳು ಮತ್ತು 'ಎಫಿಗ್ರಫಿಯಾ ಕರ್ನಾಟಕ' ಸಂಪುಟಗಳು (ಶಿವಮೊಗ್ಗ, ಚಿತ್ರದುರ್ಗ, ತುಮಕೂರು, ದಾವಣಗೆರೆ ಜಿಲ್ಲೆಗೆ ಸೇರಿದ ಸಂಪುಟಗಳು). "ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧", ಬಳ್ಳಾರಿ ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨", ಕೊಪ್ಪಳ ಜಿಲ್ಲೆ, ಆಂಧ್ರಪ್ರದೇಶ ಮತ್ತು ತಮಿಳುನಾಡಿನ ಕನ್ನಡ ಶಾಸನ ಸಂಪುಟಗಳು, ಪಾಟೀಲ್ ಸಿ.ಎಸ್. ಮತ್ತು ವಿನೋದ ಸಿ. ಪಾಟೀಲ್‌ರ "ಇನ್ಸ್‌ಕ್ರಿಪ್‌ಷನ್ಸ್ ಆಫ್ ಬಳ್ಳಾರಿ ಡಿಸ್ಟ್ರಿಕ್ಟ್" ದೇವರಾಜ ಅವರ ಕಳಚೂರಿ ಶಾಸನ ಸಂಪುಟ, ಉತ್ತಂಗಿ ಕೊಟ್ಟೂರೇಶ್ವರ ಅವರ ಹರಿಹರದ ಎಳೆಗಳು, ಮೈಸೂರು ವಿಶ್ವವಿದ್ಯಾನಿಲಯದಿಂದ ಪ್ರಕಟಗೊಂಡ ಎಫಿಗ್ರಫಿಯ ಕರ್ನಾಟಿಕಾ ಸಂಪುಟ ಇತ್ಯಾದಿ ಶಾಸನ ಸಂಪುಟಗಳಲ್ಲಿ ಪಾಂಡ್ಯರ ಕಾಲದ ಶಾಸನಗಳು ಉಲ್ಲೇಖಗೊಂಡಿವೆ. ಮೈಸೂರು ವಿಶ್ವವಿದ್ಯಾನಿಲಯದ "ಕನ್ನಡ ವಿಷಯ ವಿಶ್ವಕೋಶ" (ಇತಿಹಾಸ ಮತ್ತು ಪುರಾತತ್ವ) ಗ್ರಂಥದಲ್ಲಿ ಉಚ್ಚಂಗಿ ಪಾಂಡ್ಯರ ರಾಜಕೀಯ ಚರಿತ್ರೆಯ ಬಗ್ಗೆ ಸಂಕ್ಷಿಪ್ತ ವಿವರಣೆ ದಾಖಲಾಗಿದೆ. ಭಾರತೀಯ ವಿದ್ಯಾಭವನ ಮಾಲಿಕೆಗಳಾದ ಅಭಿಜಾತಯುಗ ಸಂಪುಟ-೫, ಕನೋಜ್ ಸಾಮ್ರಾಜ್ಯಯುಗ ಸಂಪುಟ-೭ರಲ್ಲಿ ಉಚ್ಚಂಗಿ ಪಾಂಡ್ಯರ ಕುರಿತು ಸಂಕ್ಷಿಪ್ತ ವಿವರಣೆ ದಾಖಲಾಗಿದೆ.

ಕುಂ.ಬಾ ಸದಾಶಿವಪ್ಪ ಅವರ "ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ", "ಹರಪನಹಳ್ಳಿ ತಾಲೂಕು ಪರಿಚಯ" ಕೃತಿಗಳಲ್ಲಿ ಉಚ್ಚಂಗಿ ಪಾಂಡ್ಯರ ವಂಶಾವಳಿ ಹಾಗೂ ಪ್ರಮುಖ ಅರಸರುಗಳನ್ನು ಕುರಿತು ಸಂಕ್ಷಿಪ್ತ ಪರಿಚಯವನ್ನು ಮಾಡಿದ್ದರೆ, ಜೆ.ಎಂ. ನಾಗಯ್ಯರವರು

"ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ" ಮತ್ತು "ಆರನೆಯ ವಿಕ್ರಮಾದಿತ್ಯನ ಶಾಸನಗಳು: ಒಂದು ಅಧ್ಯಯನ" ಕೃತಿಗಳಲ್ಲಿ ಮಹಾಮಂಡಳೇಶ್ವರರು ಎಂಬ ಶೀರ್ಷಿಕೆಯಲ್ಲಿ ಪಾಂಡ್ಯರ ರಾಜಕೀಯ ಅಂಶಗಳನ್ನು ಸಂಗ್ರಹಿಸಿದ್ದಾರೆ. ವಾಸುದೇವ ಬಡಿಗೇರ ಅವರು "ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಪರಂಪರೆ" ಎಂಬ ಕೃತಿಯಲ್ಲಿ ಪಾಂಡ್ಯ ಅರಸರನ್ನು ಪರಿಚಯಿಸಿದ್ದಾರೆ. ಈ ಮಾಂಡಳಿಕರ ಕುರಿತು ಇತಿಹಾಸ ದರ್ಶನ ಸಂಪುಟಗಳಲ್ಲಿ ಹಾಗೂ ಪತ್ರಿಕೆಗಳಲ್ಲಿ ಕೆಲವು ಲೇಖನಗಳು ಪ್ರಕಟಗೊಂಡಿವೆ. ದಿನಕರ ದೇಸಾಯಿ ಅವರು "ಮಹಾಮಂಡಳೇಶ್ವರ ಅಂಡರ್ ದಿ ಚಾಲುಕ್ಯಸ್ ಆಫ್ ದಿ ಕಲ್ಯಾಣ", ಝಡ್ ಕೆ. ಅನ್ಸಾರಿ ಅವರು "ಸಮ್ ಫ್ಯುಡಿಟರಿ ಫ್ಯಾಮಿಲೀಸ್ ಆಫ್ ಮಿಡಿವೆಲ್ ಕರ್ನಾಟಕ", ವೆಂಕಟೇಶ ಅವರು "ಸೌತ್ ಇಂಡಿಯನ್ ಫ್ಯುಡಿಟರಿ ಡೈನಾಸ್ಟಿಸ್", ರತ್ನವತಿ ಪಿ. ಅವರು "ದಿ ಪಾಂಡ್ಯಸ್ ಆಫ್ ಉಚ್ಚಂಗಿ" ಎಂ.ಫಿಲ್. ಸಂಶೋಧನಾ ಕಿರುಪ್ರಬಂಧ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು ಈ ಕೃತಿಗಳಲ್ಲಿ ಉಚ್ಚಂಗಿ ಪಾಂಡ್ಯರ ವಂಶಾವಳಿ ಮತ್ತು ಕೆಲವು ಅರಸರ ಸೂಕ್ಷ್ಮ ಪರಿಚಯವನ್ನು ಮಾಡಿಕೊಡಲಾಗಿದೆ. ಬಿ.ಎಲ್. ರೈಸ್, ಮೈಸೂರು ಅಂಡ್ ಕೂರ್ಗ್, ಫ್ರಮ್ ದಿ ಇನ್‌ಸ್ಕ್ರಿಪ್ಸನ್ ಕೃತಿಯಲ್ಲಿ ವಿಜಯಪಾಂಡ್ಯ ಮತ್ತು ಪಾಂಡ್ಯ ಮನೆತನದ ಬಗ್ಗೆ ಸಂಕ್ಷಿಪ್ತವಾಗಿ ಚರ್ಚಿಸಿದ್ದಾರೆ. ನಾಗರಾಜರಾವ್ ಎಂ.ಎಸ್. ಅವರು ದಿ ಚಾಲುಕ್ಯಸ್ ಆಫ್ ಕಲ್ಯಾಣ ಕೃತಿಯಲ್ಲಿ ಪಾಂಡ್ಯ ಅರಸರು ಹೊಂದಿದ್ದ ವೈವಾಹಿಕ ಸಂಬಂಧಗಳ ಬಗ್ಗೆ ಪರಿಚಯಿಸಿದ್ದಾರೆ. ಲಕ್ಷ್ಮಣ್ ತೆಲಗಾವಿ ಮತ್ತು ಎಂ.ವಿ. ಶ್ರೀನಿವಾಸ ಸಂಪಾದಕತ್ವದಲ್ಲಿ "ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನ ಲೇಖನಗಳು", ಲಲಿತಾಂಬ ಎನ್.ಆರ್. ಅವರು "ಉಚ್ಚಂಗಿ ಪಾಂಡ್ಯರು ಮತ್ತು ಕರ್ಕಡ ಮಾರಾಯ ವಂಶಗಳ ಮೇಲೆ ಹೊಸ ಬೆಳಕು" ಎಂಬ ಲೇಖನದಲ್ಲಿ ಉಚ್ಚಂಗಿ ಪಾಂಡ್ಯರ ವಂಶಾವಳಿಯನ್ನು ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಕೆಲವು ಕೃತಿಗಳು, ಲೇಖನಗಳು ರಚಿಸಲ್ಪಟ್ಟಿದ್ದರೂ, ಅವು ಕೇವಲ ರಾಜಕೀಯ ಇತಿಹಾಸಕ್ಕೆ ಸೀಮಿತವಾಗಿವೆ. ಅಲ್ಲದೇ ಬೇರೆ ಬೇರೆ ಗ್ರಂಥಗಳಲ್ಲಿ ಹಂಚಿಹೋಗಿವೆ. ಪಾಂಡ್ಯರ ವಂಶಾವಳಿ ಮತ್ತು ರಾಜಕೀಯ ಇತಿಹಾಸಕ್ಕೆ ಸಂಬಂಧಿಸಿದಂತೆ ಪೂರ್ಣ ಮಾಹಿತಿಯನ್ನು ಹೊಂದಿರುವುದಿಲ್ಲ. ಈ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನದಲ್ಲಿ ಸೀಮಿತಗೊಂಡ ಮನೆತನವನ್ನು ಸಮಗ್ರವಾಗಿ ವಿವರಿಸುವ ಹಾಗೂ ಸೂಕ್ಷ್ಮವಾಗಿ ಅವಲೋಕಿಸುವ ಪ್ರಯತ್ನ ಮಾಡಲಾಗಿದೆ.

### ಅಧ್ಯಯನದ ವಿಧಾನ

ಸಂಶೋಧನೆಗೆ ಅಧ್ಯಯನದ ಕ್ರಮ ಅತಿಮುಖ್ಯ. ಪ್ರಸ್ತುತ ಸಂಶೋಧನೆಗೆ ಸಾಹಿತ್ಯಕ ಹಾಗೂ ಪ್ರಾಕ್ತನ ಅವಶೇಷಗಳು ಪ್ರಮುಖ ಆಕರಗಳಾಗಿವೆ. ಸಾಹಿತ್ಯ ಆಕರಗಳಾದ ಪ್ರಕಟಿತ, ಅಪ್ರಕಟಿತ ಲೇಖನಗಳು, ಸಂಶೋಧನ ಪ್ರಬಂಧಗಳು, ಕೃತಿಗಳು, ವಿಶ್ವಕೋಶಗಳು, ಗ್ಯಾಜೆಟಿಯರ್‌ಗಳು,

ಸಂಶೋಧನಾ ಮಹಾಪ್ರಬಂಧಗಳು, ಸಂಪುಟಗಳು ಹಾಗೂ ಗ್ರಂಥಗಳಿಂದ ಪೂರಕ ಮಾಹಿತಿಯ ಟಿಪ್ಪಣಿ ತಯಾರಿಸಿಕೊಳ್ಳಲಾಗಿದೆ. ಹಾಗೆಯೇ ಪ್ರಾಕ್ತನ ಆಕರಗಳಾದ ಶಾಸನಗಳು, ನಾಣ್ಯಗಳು ಮತ್ತು ಸ್ಮಾರಕಗಳ ಪೂರ್ಣ ಮಾಹಿತಿ ಪಡೆದು ಪಟ್ಟಿಯೊಂದನ್ನು ತಯಾರಿಸಿಕೊಳ್ಳಲಾಗಿದೆ. ಪ್ರಾಥಮಿಕ ಮಾಹಿತಿಯನ್ನು ವ್ಯಾಪಕ ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಲಾಗಿದೆ. ಇದೇ ಸಂದರ್ಭದಲ್ಲಿ ಸ್ಮಾರಕಗಳ ಛಾಯಾಚಿತ್ರ, ತಲನಕ್ಷೆ ತಯಾರಿಸಿ, ಮೌಖಿಕ ಆಕರಗಳನ್ನು ಸಂಗ್ರಹಿಸಿದೆ. ಈ ಕ್ಷೇತ್ರದ ಬಗ್ಗೆ ಅಧ್ಯಯನ ನಡೆಸಿದವರನ್ನು ಸಂಪರ್ಕಿಸಿ ತಾತ್ವಿಕವಾಗಿ ಚರ್ಚಿಸುವುದರ ಜೊತೆಗೆ ಆಕರಗಳನ್ನು ಸಂಗ್ರಹಿಸಿಕೊಳ್ಳಲಾಗಿದೆ. ಹೀಗೆ ಸಂಗ್ರಹಿಸಿದ ಮಾಹಿತಿಯನ್ನು ಕ್ರೋಢೀಕರಿಸಿ, ವಿಮರ್ಶಿಸಿ, ವಿಷಯಾನುಸಾರ ವರ್ಗೀಕರಿಸಿಕೊಂಡು ಚರಿತ್ರೆ ಶಿಸ್ತಿನ ವಿಧಿ-ವಿಧಾನಗಳ ಮೂಲಕ ಪರಿಶೀಲಿಸುವ ಪ್ರಯತ್ನ ಇಲ್ಲಿನದು. ಅನುಬಂಧದಲ್ಲಿ ಶಾಸನಸೂಚಿ, ಗ್ರಂಥಸೂಚಿ, ನಕ್ಷೆಗಳು ಹಾಗೂ ಛಾಯಾಚಿತ್ರಗಳನ್ನು ನೀಡಲಾಗಿದೆ.

**ಅಧ್ಯಯನದ ಸ್ವರೂಪ**

ಅಧ್ಯಯನದ ಉದ್ದೇಶ, ವ್ಯಾಪ್ತಿಗಳ ಹಿನ್ನೆಲೆಯಲ್ಲಿ ಈ ಸಂಶೋಧನಾ ಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಐದು ಅಧ್ಯಾಯಗಳಾಗಿ ವಿಭಾಗಿಸಲಾಗಿದೆ. ಈ ಅಧ್ಯಾಯಗಳಲ್ಲಿ ಉಪಶೀರ್ಷಿಕೆಗಳಿವೆ.

ಮೊದಲನೆಯ ಅಧ್ಯಾಯದಲ್ಲಿ ಪ್ರಸ್ತಾವನೆ, ಉದ್ದೇಶ, ವ್ಯಾಪ್ತಿ, ಅಧ್ಯಯನ ಸಮೀಕ್ಷೆ ಅಧ್ಯಯನದ ವಿಧಾನ ಹಾಗೂ ಸ್ವರೂಪವನ್ನು ಸ್ಪಷ್ಟಪಡಿಸಲಾಗಿದೆ.

ಎರಡನೆಯ ಅಧ್ಯಾಯದ ಭೌಗೋಳಿಕ ಮತ್ತು ಚಾರಿತ್ರಿಕ ವಿವರಣೆಯಲ್ಲಿ ಭೌಗೋಳಿಕ ಅಂಶಗಳಾದ ಭೂವಿಸ್ತೀರ್ಣ, ಹವಾಗುಣ, ಮಣ್ಣು, ಜಲಸಂಪತ್ತು ಮುಂತಾದ ವಿಷಯಗಳ ಪರಿಶೀಲನೆ ಹಾಗೂ ಈ ಭೌಗೋಳಿಕ ಅಂಶಗಳು ಆಡಳಿತ ವಿಭಾಗಗಳ ರಚನೆಯ ಮೇಲೆ ಉಂಟುಮಾಡಿರುವ ಪರಿಣಾಮಗಳನ್ನು ಚರ್ಚಿಸಲಾಗಿದೆ ಹಾಗೂ ಪ್ರಾಗಿತಿಹಾಸ ಕಾಲದ ಮಾಹಿತಿಯನ್ನು ಇಲ್ಲಿ ನೀಡಲಾಗಿದೆ. ನೊಳಂಬವಾಡಿ–೩೨೦೦೦ ಆಡಳಿತ ವಿಭಾಗದ ಚರಿತ್ರೆಯ ಹಿನ್ನೆಲೆಯಲ್ಲಿ ಮೌರ್ಯ, ಕದಂಬ ಅರಸುಮನೆತನಗಳ ಜೊತೆಗೆ ಗಂಗ, ರಾಷ್ಟ್ರಕೂಟ, ಚಾಳುಕ್ಯ ಅರಸುಮನೆತಗಳ ಆಡಳಿತದಲ್ಲಿ ಅವರ ಸಾಮಂತರಾಗಿ ಆಡಳಿತ ನಡೆಸಿದ ನೊಳಂಬ ಪಲ್ಲವರು ಹಾಗೂ ಚಾಳುಕ್ಯ ಅಹವಮಲ್ಲ, ವಿಷ್ಣುವರ್ಧನ ವಿಜಯಾದಿತ್ಯ, ಆರನೇ ವಿಕ್ರಮಾದಿತ್ಯ, ಜಗದೇಕಮಲ್ಲನ ಅವಧಿಯವರೆಗಿನ ಚಾರಿತ್ರಿಕ ಅಂಶಗಳನ್ನು ಕಟ್ಟಿಕೊಡಲಾಗಿದೆ.

ರಾಜಕೀಯ ಇತಿಹಾಸ ಎಂಬ ಶೀರ್ಷಿಕೆಯಲ್ಲಿ ಉಚ್ಚಂಗಿ ಪಾಂಡ್ಯರ ಮೂಲ ಮತ್ತು ವಂಶಾವಳಿ ಬಗ್ಗೆ ವಿಶ್ಲೇಷಿಸಲಾಗಿದೆ. ಉಪಶೀರ್ಷಿಕೆಯ ಮೂರನೆಯ ಅಧ್ಯಾಯದಲ್ಲಿ ಉಚ್ಚಂಗಿ ಪಾಂಡ್ಯರು ಪ್ರಾಚೀನ ತಮಿಳುನಾಡಿನಲ್ಲಿ ಆಡಳಿತ ನಡೆಸಿದ ಮಧುರೈ ಪಾಂಡ್ಯ ಮನೆತನದ ಮೂಲಕ್ಕೆ ಸೇರಿದವರು ಎಂಬುವುದರ ಬಗ್ಗೆ ಕೂಲಂಕಷವಾಗಿ ಚರ್ಚಿಸಲಾಗಿದೆ. ಕರ್ನಾಟಕದ

ಪಶ್ಚಿಮ ಕರಾವಳಿಯ ಮೂಲಕ್ಕೆ ಸಂಬಂಧಿಸಿದಂತೆ ಕೆಲವು ಊಹೆಗಳನ್ನು ಪರಿಶೀಲಿಸುವ ಪ್ರಯತ್ನವನ್ನು ಮಾಡಲಾಗಿದೆ. ತುಳು ಮೂಲದವರಾದ ಉಚ್ಚಂಗಿ ಪಾಂಡ್ಯರು ಸಪ್ತಕೊಂಕಣದಲ್ಲಿ ಒಂದಾದ ಕರ್ನಾಟಕದ ಪಶ್ಚಿಮ ಕರಾವಳಿಯ ಹೈಹ ಭಾಗದಲ್ಲಿದ್ದರು. ಪಶ್ಚಿಮ ಚಾಳುಕ್ಯ ಜಯಸಿಂಹ ಹೈಹ ಅಥವಾ ಸಪ್ತಕೊಂಕಣವನ್ನು ಗೆದ್ದಾಗ ಪಾಂಡ್ಯರು ಕದಂಬಳಿಗೆ-೧೦೦೦ಕ್ಕೆ ಬಂದರು ಎಂಬುದನ್ನು ಕಂಡುಕೊಳ್ಳಲಾಗಿದೆ.

ಅರಸರ ಜೀವನ ಮತ್ತು ಸೈನಿಕ ಸಾಧನೆಗಳೆಂಬ ಉಪಶೀರ್ಷಿಕೆಯಲ್ಲಿ ಉಚ್ಚಂಗಿ ಪಾಂಡ್ಯ ಮನೆತನದಲ್ಲಿ ಆಳ್ವಿಕೆ ನಡೆಸಿದ ಪಲಮಾಂದ್ಯ ಪಾಂಡ್ಯ, ತ್ರಿಭುವನಮಲ್ಲಪಾಂಡ್ಯ, ರಾಯಪಾಂಡ್ಯ, ವೀರಪಾಂಡ್ಯ, ವಿಜಯಪಾಂಡ್ಯ ಅರಸರ ಸೈನಿಕ ಸಾಧನೆಗಳು, ಅವರ ಆಡಳಿತದಲ್ಲಿ ಆಶ್ರಯ ಪಡೆದ ಮಹಾಮಂಡಳೇಶ್ವರ, ಸಾಮಂತ, ಗೌಡ, ಪೆರ್ಗಡೆ ಮೊದಲಾದ ಅಧಿಕಾರಿ ವರ್ಗದವರನ್ನು ಪರಿಚಯಿಸಲಾಗಿದೆ. ಬಿರುದಾವಳಿಗಳು ಎಂಬ ಉಪಶೀರ್ಷಿಕೆಯಲ್ಲಿ ಪಾಂಡ್ಯ ಅರಸರು ಹೊಂದಿದ್ದ ಬಿರುದಾವಳಿಗಳು ಮತ್ತು ಅದರ ಅರ್ಥ ವಿಶ್ಲೇಷಣೆಯನ್ನು ಕಂಡುಕೊಳ್ಳಲಾಗಿದೆ. ವೈವಾಹಿಕ ಸಂಬಂಧಗಳೆಂಬ ಉಪಶೀರ್ಷಿಕೆಯಲ್ಲಿ ಪಾಂಡ್ಯ ಅರಸರು, ಕಲ್ಯಾಣ ಚಾಳುಕ್ಯ, ನೊಳಂಬ ಪಲ್ಲವ, ಹೊಯ್ಸಳ, ಚೋಳ, ಗುತ್ತರು ಮತ್ತು ಕೊಟ್ಟೂರಿನ ಕದಂಬ ಶಾಖೆಯ ಅರಸುಮನೆತನಗಳು ಹಾಗೂ ಮಹಾಪ್ರಧಾನ ಆದಿತ್ಯದೇವ ದಂಡನಾಯಕರೊಂದಿಗೆ ಮಾಡಿಕೊಂಡಿರುವ ವೈವಾಹಿಕ ಸಂಬಂಧಗಳನ್ನು ಗುರುತಿಸಲಾಗಿದೆ. ರಾಜಧಾನಿಗಳು ಎಂಬ ಉಪಶೀರ್ಷಿಕೆಯಲ್ಲಿ ನೊಳಂಬವಾಡಿ-೩೨೦೦೦ ಆಡಳಿತ ವಿಭಾಗದ ಆಡಳಿತವನ್ನು ನಿರ್ವಹಿಸಲು ಪಾಂಡ್ಯ ಅರಸರು ಆಯ್ಕೆ ಮಾಡಿಕೊಂಡಿದ್ದ ಉಳವಿ, ಕೇಸವೂರು, ಬೇತೂರು, ಉಚ್ಚಂಗಿದುರ್ಗ ರಾಜಧಾನಿ ಪ್ರದೇಶಗಳ ಕುರಿತು ಶಾಸನಗಳ ಹಿನ್ನೆಲೆಯಲ್ಲಿ ವಿಶ್ಲೇಷಣೆ ಮಾಡಲಾಗಿದೆ.

ಆಡಳಿತ ವ್ಯವಸ್ಥೆ ಎಂಬ ಉಪಶೀರ್ಷಿಕೆಯಡಿಯಲ್ಲಿ ಉಚ್ಚಂಗಿ ಪಾಂಡ್ಯರ ಆಡಳಿತದಲ್ಲಿ ಅವರಿಗೆ ಅಧೀನರಾಗಿದ್ದ ಸಾಮಂತ ಅರಸುಮನೆತನಗಳು ಮತ್ತು ಅಧಿಕಾರಿ ವರ್ಗದ ಕುರಿತು ಚರ್ಚಿಸಲಾಗಿದೆ. ಈ ಅಧಿಕಾರಿ ವರ್ಗದವರು ಹೊಂದಿರುವ ಅಧಿಕಾರದ ವಿವಿಧ ಪ್ರಕಾರಗಳನ್ನು ಗುರುತಿಸಲಾಗಿದೆ. ಪಾಂಡ್ಯರ ಸಾಮಂತ ಮಹಾಮಂಡಳೇಶ್ವರರಲ್ಲಿ ಕೊಟ್ಟೂರಿನ ಕದಂಬರು, ಕುರುಗೋಡು ಸಿಂದರು, ಬೆಳಗುತ್ತಿ ಸಿಂದರು, ಗುತ್ತವೊಳಲಿನ ಗುತ್ತರಸರು, ನಿಡಗಲ್ಲು ಚೋಳರು, ಸಾಮಂತ-ಮಹಾಸಾಮಂತರಾದ ಉದಯಾದಿತ್ಯನಾಯಕ, ಕಾಮಯ್ಯನಾಯಕ, ಗಂಗರಸ ಮೊದಲಾದವರನ್ನು ಕುರಿತು ವಿವರವಾಗಿ ಚರ್ಚಿಸಲಾಗಿದೆ. ಅಧಿಕಾರಿ ವರ್ಗದವರಾದ ದಂಡನಾಯಕ-ಮಹಾದಂಡನಾಯಕ, ಸಂಧಿವಿಗ್ರಹಿ, ಸರ್ವಾಧ್ಯಕ್ಷ, ರಾಜ್ಯಾಡಳಿತ ನಿರೂಪಿತ, ಪೆರ್ಗಡೆ, ಹೆಗ್ಗಡೆ, ಗೌಡ, ಶಾನಭೋವ, ತಳಾರ ಮೊದಲಾದ ಆಡಳಿತವರ್ಗದ ವಿವರಣೆಯನ್ನು ಕಟ್ಟಿಕೊಡಲಾಗಿದೆ.

ಅಲ್ಲದೆ ಆಡಳಿತ ವಿಭಾಗಗಳ ಕುರಿತು ಇದುವರೆಗೆ ನಡೆದ ಅಧ್ಯಯನಗಳು ಹಾಗೂ ಪಾಂಡ್ಯ ಅರಸರ ಲಭ್ಯ ಶಾಸನಗಳ ಹಿನ್ನೆಲೆಯಲ್ಲಿ ಆಡಳಿತ ವಿಭಾಗಗಳ ಅರ್ಥವಿಶ್ಲೇಷಣೆ

ಹಾಗೂ ನೊಳಂಬವಾಡಿ - ೩೨೦೦೦ ಆಡಳಿತ ವಿಭಾಗದ ಸ್ಥಿತ್ಯಂತರದ ಬಗ್ಗೆ ಕಂಡುಕೊಳ್ಳಲಾಗಿದೆ. ಉಚ್ಚಂಗಿ ಪಾಂಡ್ಯರ ಆಡಳಿತ ಕಾಲಕ್ಕಿದ್ದ ನೊಳಂಬವಾಡಿ - ೩೨೦೦೦ ಪ್ರಾಂತ್ಯದ ಭೌಗೋಳಿಕ ವಿವರಣೆ, ಅದರಲ್ಲಿ ಅಂತರ್ಗತವಾಗಿದ್ದ ಸಣ್ಣ ಅತಿಸಣ್ಣ ಆಡಳಿತ ವಿಭಾಗಗಳನ್ನು ಗುರುತಿಸಲಾಗಿದೆ.

ಸಾಂಸ್ಕೃತಿಕ ಪರಂಪರೆ ಎಂಬ ನಾಲ್ಕನೆಯ ಅಧ್ಯಾಯದಲ್ಲಿ ಉಚ್ಚಂಗಿ ಪಾಂಡ್ಯ ಅರಸರ ಆಡಳಿತ ಕಾಲಘಟ್ಟದ ಶಾಸನಗಳ ಸಾಂಸ್ಕೃತಿಕ ವಿಷಯಗಳಾದ ಧಾರ್ಮಿಕ, ಸಾಮಾಜಿಕ, ಆರ್ಥಿಕ, ಕಲೆ, ವಾಸ್ತುಶಿಲ್ಪವನ್ನು ಚರ್ಚಿಸಲಾಗಿದೆ. ಈ ಹಿಂದೆ ಆಡಳಿತ ನಡೆಸಿದ ನೊಳಂಬ ಪಲ್ಲವರು ಆಶ್ರಿತ ಕಲ್ಯಾಣ ಚಾಳುಕ್ಯ ಮತ್ತು ಸಮಕಾಲೀನ ಹೊಯ್ಸಳ ಅರಸುಮನೆತನಗಳ ತೌಲನಿಕ ಅಧ್ಯಯನದಿಂದ ಪಾಂಡ್ಯ ಅರಸರ ಸಾಂಸ್ಕೃತಿಕ ಪರಂಪರೆಯನ್ನು ಕಂಡುಕೊಳ್ಳಲಾಗಿದೆ.

ಐದನೆಯ ಅಧ್ಯಾಯವು ಸಮಾರೋಪವಾಗಿದ್ದು, ಇದರಲ್ಲಿ ಅಧ್ಯಯನದಲ್ಲಿ ಕಂಡುಕೊಂಡ ಸಂಶೋಧನೆಯ ಫಲಿತಗಳು, ಅದರೊಂದಿಗೆ ಇಡೀ ಅಧ್ಯಯನಗಳ ಸಂಕ್ಷಿಪ್ತ ರೂಪವನ್ನು ಕಾಣಬಹುದು. ಪ್ರಸ್ತುತ ಸಂಶೋಧನಾ ಅಧ್ಯಯನದ ಹಿನ್ನೆಲೆಯಲ್ಲಿ ಕಂಡುಬಂದ ಸಂಶೋಧನಾ ಸಮಸ್ಯೆಗಳನ್ನು ಮುಂದಿನ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲು ಇರುವ ಅವಕಾಶಗಳನ್ನು ತಿಳಿಸಲಾಗಿದೆ.

ಅನುಬಂಧದಲ್ಲಿ ಶಾಸನಸೂಚಿ, ಗ್ರಂಥಸೂಚಿ, ನಕ್ಷೆಗಳು ಮತ್ತು ಛಾಯಾಚಿತ್ರಗಳನ್ನು ನೀಡಲಾಗಿದೆ.



ಅಧ್ಯಾಯ : ಎರಡು

# ಭೌಗೋಳಿಕ ಮತ್ತು ಐತಿಹಾಸಿಕ ಹಿನ್ನೆಲೆ

## ಭೌಗೋಳಿಕ ಹಿನ್ನೆಲೆ

ಚರಿತ್ರೆಯ ಬೇರೆ ಬೇರೆ ಕಾಲದಲ್ಲಿ ಪ್ರಚಲಿತದಲ್ಲಿದ್ದ ಕೆಲವು ಆಡಳಿತ ವಿಭಾಗಗಳನ್ನು ಗಮನಿಸಿದರೆ ಅವುಗಳ ಹೆಸರುಗಳು ರಾಜವಂಶದ ಮತ್ತು ಆ ವಂಶದ ರಾಜಧಾನಿಯ ಹೆಸರಿನಿಂದ ಸಮಕಾಲೀನವಾಗಿ ಅಥವಾ ನಂತರದಲ್ಲಿಯಾಗಲೀ ಗುರುತಿಸಲ್ಪಡುತ್ತಿದ್ದ ಪದ್ಧತಿಯೊಂದು ಪ್ರಚಲಿತದಲ್ಲಿತ್ತು. ಒಂದು ರಾಜವಂಶ ಪತನದ ನಂತರ ಅವರ ಆಳ್ವಿಕೆಯ ಭೂಭಾಗವನ್ನು ಆಕ್ರಮಿಸಿಕೊಂಡವರು ಈ ದಿಗ್ವಿಜಯ ಸಾಧಿಸಿದ ಸೂಚಕವಾಗಿ ಆ ರಾಜವಂಶಗಳ ಹೆಸರುಗಳಲ್ಲಿ ಆಡಳಿತ ವಿಭಾಗಗಳನ್ನು ಕರೆದಿರುವುದು ವಿಶೇಷವೆನಿಸುತ್ತದೆ. ಉದಾ: ಗಂಗವಾಡಿ-೯೬೦೦೦, ಕದಂಬಳಿಗೆ-೧೦೦೦, ಸಾಂತಳಿಗೆ-೧೦೦೦, ಬನವಾಸಿ-೧೨೦೦ ಈ ಪ್ರದೇಶಗಳಲ್ಲಿ ಆಳ್ವಿಕೆ ನಡೆಸಿ ಪತನ ಹೊಂದಿದ ನಂತರ ಆ ಮನೆತನದ ಹೆಸರಿನೊಂದಿಗೆ ಇಲ್ಲಿ ಗುರುತಿಸಿದೆ. ಹಾಗೆ ನೊಳಂಬವಾಡಿ-೩೨೦೦೦; ಇಲ್ಲಿ ಆಡಳಿತ ನಡೆಸಿದ ನೊಳಂಬ ಪಲ್ಲವರು ತಮ್ಮ ಆಡಳಿತ ಪ್ರದೇಶವನ್ನು ತಮ್ಮ ಹೆಸರಿನೊಂದಿಗೆ ಗುರುತಿಸಿಕೊಂಡಿದ್ದಾರೆ. ಚಾಳುಕ್ಯ ವಿಕ್ರಮಾದಿತ್ಯನ ಅವಧಿಯಲ್ಲಿ ಈ ಪ್ರದೇಶದ ಆಡಳಿತ ವಹಿಸಿಕೊಂಡ ಉಚ್ಚಂಗಿ ಪಾಂಡ್ಯರು ಯಾವ ಬದಲಾವಣೆ ಮಾಡದೆ ಮುಂದುವರಿಸಿದ್ದಾರೆ. ಕ್ರಿ.ಶ. ೧೧೨೭ರ ರಾಗಿಮಸಲವಾಡ ಶಾಸನ ಚೋಳದೇವ ದಂಡನಾಯಕನು ಪಾಂಡ್ಯನಾಡಿನ ಹೆರ್ಜುಂಕದ ತೆರಿಗೆಯಲ್ಲಿ ಎರಡು ಪಣವನ್ನು ದೇವರ ಸೇವೆಗಾಗಿ ದಾನ ನೀಡುತ್ತಾನೆ.[೧] ಪಾಂಡ್ಯರ ಕಾಲದಲ್ಲಿ ಈ ಪ್ರದೇಶವನ್ನು ಪಾಂಡ್ಯನಾಡು ಎಂದು ಕರೆಯುವ ಪ್ರಯತ್ನ ನಡೆದಿದ್ದರೂ ನೊಳಂಬವಾಡಿ-೩೨೦೦೦ದ ಹೆಸರಿನಲ್ಲಿಯೇ ಮುಂದುವರಿಯಿತು. ಹೊಯ್ಸಳ ವೀರಬಲ್ಲಾಳ ಉಚ್ಚಂಗಿ ಪಾಂಡ್ಯರನ್ನು ಜಯಿಸಿದ ನಂತರ ನೊಳಂಬವಾಡಿ-೩೨೦೦೦ ಆಡಳಿತ ವಿಭಾಗವನ್ನು 'ಪಾಂಡ್ಯನಾಡು' ಎಂದು ಕರೆಯಲಾಯಿತು.[೨] ವಿಜಯನಗರದ ಅರಸರ ಕಾಲದಲ್ಲೂ ಈ ಹೆಸರು ಮುಂದುವರಿದಿರುವುದನ್ನು ಶಾಸನಗಳು ಸ್ಪಷ್ಟಪಡಿಸುತ್ತವೆ.[೩]

ಪ್ರಾಚೀನ ಆಡಳಿತ ವಿಭಾಗದ ಭೌಗೋಳಿಕ ವ್ಯಾಪ್ತಿಯನ್ನು ಸ್ಪಷ್ಟವಾಗಿ ಗುರುತಿಸುವುದು ಕಷ್ಟ ಸಾಧ್ಯ. ಸಮಗ್ರವಾದ ವಿಶ್ಲೇಷಣೆ ಮತ್ತು ಸಂಶ್ಲೇಷಣೆಯನ್ನೊಳಗೊಂಡ ಅಧ್ಯಯನದಿಂದ

ಮಾತ್ರ ಅದರ ಹರವು ಶೋಧಿಸಲು ಸಾಧ್ಯವಾಗುತ್ತದೆ. ಈ ದಿಸೆಯಲ್ಲಿ ಉಚ್ಚಂಗಿ ಪಾಂಡ್ಯರು ಮತ್ತು ನೊಳಂಬ ಪಲ್ಲವರ ಶಾಸನಗಳು ಇದುವರೆಗೂ ನಡೆದ ಕೆಲವು ಅಧ್ಯಯನಗಳ ಹಿನ್ನೆಲೆಯಲ್ಲಿ 'ಪಾಂಡ್ಯನಾಡು' ಅಥವಾ ನೊಳಂಬವಾಡಿ - ೩೨೦೦೦ ಆಡಳಿತ ವಿಭಾಗದ ಗಡಿರೇಖೆಗಳನ್ನು ಗುರುತಿಸುವ ಮೂಲಕ ಅದರ ಭೌಗೋಳಿಕ ಲಕ್ಷಣಗಳನ್ನು ತಿಳಿಯಲಾಗಿದೆ. ಜೊತೆಗೆ ಉಚ್ಚಂಗಿ ಪಾಂಡ್ಯರ ಆಡಳಿತದ ಆರಂಭದ ಕಾಲದವರೆಗಿನ ಈ ಪ್ರದೇಶದ ಪೂರ್ವದ ಇತಿಹಾಸವನ್ನು ಕಟ್ಟಿಕೊಡುವ ಪ್ರಯತ್ನವನ್ನು ಮಾಡಲಾಗಿದೆ.

ಭೌಗೋಳಿಕತೆ ಎನ್ನುವುದು ಕೇವಲ ಭೂಮಿಯ ಮೇಲ್ಮೈ ಲಕ್ಷಣಗಳು, ಹವಾಗುಣ ಇಷ್ಟಕ್ಕೆ ಸೀಮಿತವಾಗಿರದೆ ಮಾನವ ಪರಿಸರದಲ್ಲಿ ನಿರಂತರವಾಗಿ ನಡೆಯುವ ಸಾಂಸ್ಕೃತಿಕ ರಾಜಕಾರಣದ ವಿವಿಧ ಆಯಾಮಗಳಿಗೂ ಸಂಬಂಧಪಟ್ಟದ್ದಾಗಿದೆ. ಸಮಾಜವನ್ನು ರೂಪಿಸುವಲ್ಲಿ ಕಾಲ ಮತ್ತು ಪರಿಸರ (ಚರಿತ್ರೆ ಮತ್ತು ದೇಶ) ಮುಖ್ಯ ಪಾತ್ರವಹಿಸುತ್ತದೆ.

ಉಚ್ಚಂಗಿ ಪಾಂಡ್ಯರ ಆಡಳಿತದಲ್ಲಿ ಹೊಯ್ಸಳರು ಮತ್ತು ಕಳಚೂರಿಗಳ ದಾಳಿಯಿಂದಾಗಿ ನೊಳಂಬವಾಡಿ-೩೨೦೦೦ದ ಗಡಿಭಾಗ ಸ್ಥಿರವಾಗಿರದೆ ಕೆಲವು ಬದಲಾವಣೆಗಳಿಗೆ ಅನುವು ಮಾಡಿಕೊಟ್ಟಿದೆ. ಪಾಂಡ್ಯನಾಡು ಅತೀ ವಿಸ್ತಾರವಾಗಿಲ್ಲದಿದ್ದರೂ ಚಿಕ್ಕದಾಗಿರಲಿಲ್ಲ. ಕರ್ನಾಟಕದ ಈಗಿನ ಬಳ್ಳಾರಿ, ಚಿತ್ರದುರ್ಗ, ದಾವಣಗೆರೆ, ತುಮಕೂರು, ಶಿವಮೊಗ್ಗ ಜಿಲ್ಲೆಯ ಭಾಗಗಳನ್ನು ಒಳಗೊಂಡಿತ್ತು. ನೊಳಂಬ ಪಲ್ಲವರ ಉಚ್ಛ್ರಾಯ ಕಾಲದಲ್ಲಿ ಅವರ ರಾಜ್ಯವು ಈ ಜಿಲ್ಲೆಗಳೊಂದಿಗೆ ಅನಂತಪುರ, ಧರ್ಮಪುರಿ, ಚಿತ್ತೂರು, ಮಂಡ್ಯ ಜಿಲ್ಲೆಯ ತಾಲ್ಲೂಕಿನವರೆಗೂ ವಿಸ್ತರಿಸಿದ್ದಿತು. ಪಾಂಡ್ಯರ ಕಾಲಕ್ಕೆ ಬಾಣರು, ನಿಡುಗಲ್ಲು ಚೋಳರು ಮತ್ತು ಹೊಯ್ಸಳರು ಪ್ರಬಲರಾಗಿದ್ದರಿಂದ ಈ ಭಾಗಗಳು ಅವರಿಗೆ ಸೇರಿದವು.

ಪಾಂಡ್ಯನಾಡಿನ ಪೂರ್ವಕ್ಕೆ ಗಂಗವಾಡಿ-೯೬೦೦೦ ಅದರ ಉಪವಿಭಾಗಗಳಾದ ಕೋಳಾಲನಾಡು, ಕುಣಿಗಲ್‌ನಾಡು, ಮಂಡಳ ಸಾಸಿರನಾಡು, ಮಗರೆ-೩೦೦ ನಿರಗುಂದ ನಾಡುಗಳು.

ಪಶ್ಚಿಮಕ್ಕೆ ತುಂಗಾಭದ್ರಾ ನದಿ; ಕ್ರಿ.ಶ. ೧೧೮೭ರ ವಿಪ್ರ ಶಾಸನ.[೪] ತ್ರಿಭುವನಮಲ್ಲ ಪಾಂಡ್ಯ ತುಂಗಾಭದ್ರ ನದಿಯನ್ನು ದಾಟಿ ಗಂಗಾವತಿ ತಾಲೂಕಿನ ಕಂಪ್ಲಿಯವರೆಗೂ ಪಾಂಡ್ಯನಾಡನ್ನು ವಿಸ್ತರಿಸಿದಂತೆ ಮಾಹಿತಿ ನೀಡುತ್ತದೆ. ಆದರೆ ನಂತರ ಇವರು ಆಳ್ವಿಕೆ ನಡೆಸಿದ ಕುರುಹುಗಳು ಈ ಭಾಗದಲ್ಲಿ ಸಿಗುವುದಿಲ್ಲ.

ಉತ್ತರಕ್ಕೆ ಎಡದೊರೆ-೨೦೦೦, ಕರಡಿಕಲ್ಲು-೩೦೦, ಕಳಚೂರಿ ಬಿಜ್ಜಳ ಸ್ವತಂತ್ರನಾದ ಕಾಲದಲ್ಲಿ ಕುರುಗೋಡಿನ ಸಿಂದ ವಂಶದ ರಾಚಮಲ್ಲ ಕಳಚೂರಿಗಳ ಅಧೀನತೆಯನ್ನು ಬಯಸಿದ್ದರಿಂದ ವಿಜಯಪಾಂಡ್ಯನ ಕಾಲಕ್ಕೆ ಸಿಂದವಾಡಿ-೧೦೦೦, ಬಲ್ಲಕುಂದೆ-೩೦೦ ಪಾಂಡ್ಯ ನಾಡಿನ ಉತ್ತರದ ಗಡಿರೇಖೆಯಾಯಿತು.

ದಕ್ಷಿಣಕ್ಕೆ ಬನವಾಸಿ-೧೨೦೦೦, ಸಾಂತಳಿಗೆ-೧೦೦೦ ಪ್ರಾಂತ್ಯಗಳು. ಕದಂಬಳಿಗೆ-೧೦೦೦, ಬನವಾಸಿ-೧೨೦೦೦ದ ಭಾಗವಾಗಿದ್ದರೂ ಪಾಂಡ್ಯರ ಕಾಲದಲ್ಲಿ ಅದು ನೊಳಂಬವಾಡಿ ಪ್ರಾಂತ್ಯಕ್ಕೆ ಸೇರಿತು. ಕದಂಬಳಿ–೧೦೦೦ದೊಳಗಿನ ಬೇತೂರು ಮತ್ತು ಉಚ್ಚಂಗಿದುರ್ಗ ಪಾಂಡ್ಯ ಅರಸರ ರಾಜಧಾನಿ ಕೇಂದ್ರವಾಗಿರುವುದು ವಿಶೇಷವಾಗಿದೆ. ಪೂರ್ವದಲ್ಲಿ ಮಹಾಸಾಮಂತ ಉದಯಾದಿತ್ಯ, ಕಾಮಯ್ಯನಾಯಕ ಚಿತ್ರದುರ್ಗ ಜಿಲ್ಲೆಯಲ್ಲಿ, ಪಶ್ಚಿಮದಲ್ಲಿ ಗುತ್ತರಸರು, ಉತ್ತರದಲ್ಲಿ ಕುರುಗೋಡು ಸಿಂದರು, ಕೊಟ್ಟೂರಿನ ಕದಂಬರು, ದಕ್ಷಿಣದಲ್ಲಿ ಮಹಾಸಾಮಂತ ಸೋವಿದೇವ, ಬೆಳಗುತ್ತಿ ಸಿಂದರು ಪಾಂಡ್ಯ ಅರಸರ ಪಾದಪದ್ಮೋಪ ಜೀವಿಗಳಾಗಿ ನೊಳಂಬವಾಡಿ-೩೨೦೦೦ ರಾಜ್ಯಕ್ಕೆ ರಕ್ಷಣೆ ನೀಡಿದರು.

ಕರ್ನಾಟಕದ ಮಧ್ಯ ಭಾಗದಲ್ಲಿರುವ ಈ ಆಡಳಿತ ಪ್ರದೇಶವು ಪ್ರಾಕೃತಿಕ ಸಂಪತ್ತಾದ ಬೆಟ್ಟ-ಗುಡ್ಡ, ಗಿರಿಗಹ್ವರ, ನದಿ, ಹಳ್ಳ-ಕೊಳ್ಳ, ಫಲವತ್ತಾದ ಮಣ್ಣು, ಖನಿಜ ಸಂಪತ್ತು, ಹವಾಮಾನ ಮೊದಲಾದ ಭೌಗೋಳಿಕ ಅಂಶಗಳು ಮಾನವನ ಚಟುವಟಿಕೆಗಳ ವಿಸ್ತರಣೆಗೆ ಅವಕಾಶ ನೀಡಿದೆ. ಓಬಳದೇವರಗುಡ್ಡ, ಜೋಗಿಮಟ್ಟಿ, ದವಳಪ್ಪನಗುಡ್ಡ, ಬ್ರಹ್ಮಗಿರಿ, ನುಂಕೆಮಲೆ-ಸಂತೆಗುಡ್ಡ, ಹಾಲು ರಾಮೇಶ್ವರ, ತಿರುಮಲದೇವರಗುಡ್ಡ, ಮಾರಿಕಣಿವೆ ಬೆಟ್ಟಸಾಲು, ವೇಣುಕಲ್ಲುಗುಡ್ಡ ಪರಿಸರ ಚಿತ್ರದುರ್ಗ ಜಿಲ್ಲೆಯಲ್ಲಿ ಕಂಡುಬರುತ್ತದೆ. ಬಳ್ಳಾರಿ ಜಿಲ್ಲೆಯ ಕುಮಾರಸ್ವಾಮಿ ಬೆಟ್ಟ, ರಾಮನಮಲೆ ಬೆಟ್ಟ, ಆನೆಕಲ್ಲು ದುರ್ಗ, ಜರಿಮಲೆಗುಡ್ಡ, ಅರಣ್ಯ ಪ್ರದೇಶ, ದಾವಣಗೆರೆ ಜಿಲ್ಲೆಯಲ್ಲಿ ಮಾಯಕೊಂಡದಿಂದ ಅಣಜಿಯವರೆಗೆ ಪೂರ್ವಭಾಗದಲ್ಲಿರುವ ಬೆಟ್ಟಸಾಲು, ನರಗನಹಳ್ಳಿ ಗುಡ್ಡ, ತಿಮ್ಮಪ್ಪನ ಬೆಟ್ಟ, ಕೊಣಚಗಲ್ಲು ರಂಗನಾಥಸ್ವಾಮಿ ಬೆಟ್ಟ, ಉರುಲು ಕಟ್ಟೆಗುಡ್ಡ, ಗುರುಸಿದ್ಧಪುರ ಬೆಟ್ಟ, ಕಣಕುಪ್ಪೆ ಬೆಟ್ಟದ ಸಾಲು, ಮಲ್ಲಪ್ಪನ ಗುಡ್ಡ, ಉಚ್ಚಂಗಿದುರ್ಗ ಬೆಟ್ಟಸಾಲು ತುಂಗಭದ್ರ ನದಿಯ ದಂಡೆಯ ನೈರುತ್ಯಕ್ಕಿರುವ ಕಲ್ಲರನಗುಡ್ಡ ವಾಯುವ್ಯದಿಂದ ಈಶಾನ್ಯಕ್ಕೆ ಸಾಗಿದೆ. ಈ ಬೆಟ್ಟ-ಗುಡ್ಡಗಳಿಗೆ ಹೊಂದಿಕೊಂಡಂತೆ ವಿಶಾಲ ಅರಣ್ಯ ಪ್ರದೇಶವನ್ನು ಪಾಂಡ್ಯನಾಡು ಒಳಗೊಂಡಿದೆ. ಈ ಬೆಟ್ಟಗುಡ್ಡಗಳು ಧಾರ್ಮಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರಗಳಾಗಿ ಇಂದಿಗೂ ಮುಂದುವರೆದುಕೊಂಡು ಬಂದಿವೆ.

ಮರಡಿಹಳ್ಳಿಯ ದಿಂಬುರಚನೆಯ(ಪಿಲ್ಲೋಲಾವಾ) ಶಿಲಾಪದರ, ಕಣಶಿಲೆ, ಸಿಸ್ಟ್, ಡಯೋರೈಟ್ ಮತ್ತು ಡಾಲೋರೈಟ್,[೫] ಗ್ರಾನೈಟ್, ಕ್ರಿಸ್ಟಸ್ ಲೈನ್‌ಸಿಸ್ಟ್, (ಸ್ಫೂಟಕಾತ್ಮಕ ಪದರಶಿಲೆ) ಎಪಿಡಿಯೋರಾಯಿಟ್ಸ, ಗ್ರಾನೈಟ್ ಲೇಟರ್ ಗ್ರಾನೈಟ್ಸ್,[೬] ಅಲ್ಲಲ್ಲಿ ಪೈಕ್‌ಶಿಲೆ ಕಂಡುಬರುತ್ತದೆ. ಕಬ್ಬಿಣ, ಮ್ಯಾಂಗನೀಸ್, ತಾಮ್ರ, ಸತು, ಮ್ಯಾಗ್ನಸೈಟ್, ಚಿನ್ನ, ಜಿಪ್ಸಮ್, ಜೇಡಿಮಣ್ಣು, ಸುಣ್ಣಕಲ್ಲು, ಬಳಪದಕಲ್ಲು, ಹಳದಿ ಓಕರ್, ರೆಸ್‌ಓಕರ್, ಬೆಣಚುಕಲ್ಲು ವಜ್ರ[೭] ಬೆಸಾಲ್ಟ್ ಖನಿಜ ಸಂಪತ್ತು ಈ ಪ್ರದೇಶದಲ್ಲಿ ಕಂಡುಬರುವುದು ಗಮನಾರ್ಹ.

ಈ ಪರಿಸರದ ಅರಣ್ಯ ಪ್ರದೇಶ ಹೆಚ್ಚಾಗಿ ಕುರುಚಲು ಕಾಡಾಗಿದ್ದು ಕರಿಜಾಲಿ, ಬೇವು, ಹುಣಸೆ, ಹಿಪ್ಪೆ, ಬಂದರಿಕೆ, ಸೀತಾಫಲ, ನೀಲಗಿರಿ, ನೇರಳೆ, ಬಿದಿರು, ಬೆಟ್ಟದಾವರೆ, ರಕ್ತಚಂದನ,

ಆಲ, ಶ್ರೀಗಂಧ, ಹಾಸು ಮತ್ತಿ, ಜಾಲಿ, ಮಾವು, ಹಲಸು, ಹೊಂಗೆ, ತಾಳೆ, ಈಚಲ ಮೊದಲ ಹಲವಾರು ಜಾತಿಯ ಮರಗಿಡಗಳು ಬೆಳೆಯುತ್ತಿದ್ದವು. ಕೊಟ್ನೆಕಲ್ಲು ಶಾಸನ ಹುಣಸೆ ಮರದ ತೋಪಿನ ಬಗ್ಗೆ ಹೇಳುತ್ತದೆ. ದಾನ ನೀಡುವಾಗ ತೋಟದ ಮರಗಳನ್ನು ದಾನ ನೀಡಿರುವುದು ಈ ಪರಿಸರದ ಶಾಸನಗಳಲ್ಲೂ ಕಂಡುಬರುತ್ತದೆ. ಈ ಪರಿಸರ ಬಹುತೇಕ ಭಾಗ ಮಳೆಯಾಶ್ರಿತ ಪ್ರದೇಶವಾಗಿದೆ. ಚನ್ನಗಿರಿ, ಹೊಳಲಕೆರೆ ಮೊದಲಾದ ಭಾಗಗಳು ಮಾತ್ರ ಅರೆಮಳೆನಾಡು ಭಾಗವಾಗಿವೆ. ಮಳೆಗಾಲದಲ್ಲಿ ಈ ಪರಿಸರದ ಅರಣ್ಯ ಹುಲ್ಲುಗಾವಲುಗಳಿಂದ ಹಚ್ಚಹಸಿರಾಗಿರುತ್ತದೆ. ಈ ಪರಿಸರವು ಪಶುಸಂಗೋಪನೆ ಜೊತೆಗೆ ಕೃಷಿ ಚಟುವಟಿಕೆಗಳಿಗೆ ಯೋಗ್ಯವಾಗಿದೆ. ಇಲ್ಲಿನ ವೀರಗಲ್ಲುಗಳು ಪಶುಸಂಗೋಪನೆಯ ಮಹತ್ವವನ್ನು ಸಾರುತ್ತವೆ. ಈ ಪರಿಸರದಲ್ಲಿ ಚಿರತೆ, ಕತ್ತೆಕಿರುಬ, ಕಾಡುಹಂದಿ, ಜಿಂಕೆ, ಕರಡಿ, ತೋಳ, ನರಿ, ಕಾಡುಕುರಿ, ನವಿಲು, ಮರಕುಟ್ಟಿಗ ಗೌಜಗ, ಕೋಗಿಲೆ ಮೊದಲಾದ ಪಕ್ಷಿಗಳು, ಸಾಕುಪ್ರಾಣಿಗಳಾದ ಎತ್ತು ಹಸು, ಕೋಣ, ನಾಯಿಗಳ ಉಲ್ಲೇಖ ಶಾಸನಗಳಲ್ಲಿ ಕಂಡುಬರುತ್ತದೆ.

ಹರಿಯುತ್ತಿರುವ ತುಂಗಭದ್ರಾ ನದಿ ಪಾಂಡ್ಯನಾಡಿನ ಉತ್ತರ ಮತ್ತು ಪಶ್ಚಿಮದ ಗಡಿರೇಖೆಯಾಗಿ ಪರಿಣಮಿಸಿದೆ. ಈ ನದಿಗೆ ಬಂದು ಸೇರುವ ಹಗರಿ, ಚಿಕ್ಕಹಗರಿ, ಚಿನ್ನಹಗರಿ ನದಿಗಳು ಪ್ರಾಚೀನ ಕಾಲದಿಂದಲೂ ಕೃಷಿ ಮತ್ತು ಜನವಸತಿ ಚಟುವಟಿಕೆಗಳಿಗೆ ನೀರನ್ನೊದಗಿಸಿವೆ. ಪಾಂಡ್ಯರ ಆಡಳಿತ ಕಾಲದಲ್ಲಿ ಈ ಪ್ರದೇಶದ ಕೆಲವು ಭಾಗಗಳು ಹೆಚ್ಚಿನ ತೆರಿಗೆ ನೀಡುವ ಭಾಗಗಳಾಗಿದ್ದವು. ಹಾಗಾಗಿ ಅವುಗಳನ್ನು ಹೆರ್ಜ್ಜುಂಕದ ಸೀಮೆಗಳೆಂದೇ ಶಾಸನಗಳು ಕರೆದಿವೆ.

ಪಶ್ಚಿಮದಿಂದ ಪೂರ್ವಕ್ಕೆ ಚಿಕ್ಕಮಗಳೂರು ಜಿಲ್ಲೆಯ ಪಶ್ಚಿಮ ಬೆಟ್ಟಸಾಲಿನ ವರಹ ಪರ್ವತದಲ್ಲಿ ಉಗಮವಾದ ತುಂಗ ಮತ್ತು ಭದ್ರ ಎರಡು ಹರಿಗಳು ಕೂಡಲಿಯಲ್ಲಿ ಕಲೆತು ಪಾಂಡ್ಯ ನಾಡಿನಲ್ಲಿ ತುಂಗಭದ್ರಾವಾಗಿ ಬೆರೆತು ಹರಿಯುತ್ತದೆ. ಇದು ಹರಿಹರ, ಹರಪನಹಳ್ಳಿ, ಹಡಗಲಿ, ಹಗರಿಬೊಮ್ಮನಹಳ್ಳಿ, ಹೊಸಪೇಟೆ ಮತ್ತು ಸಿರಗುಪ್ಪ ತಾಲೂಕುಗಳನ್ನೊಳಗೊಂಡಂತೆ ಆಲೂರು ತಾಲೂಕಿನ ಕೂಡಲೂರು ಗ್ರಾಮದಲ್ಲಿ ಆಂಧ್ರಪ್ರದೇಶವನ್ನು ಸೇರುತ್ತದೆ.[೮] ಪಾಂಡ್ಯನಾಡಿನಲ್ಲಿ ಹರಿಯುವ ಈ ಉಪನದಿಯ ಎಡಬಲಗಳಲ್ಲಿ ಅಂಬಳಿ, ಕೋಗಳಿ-೫೦೦, ಉಚ್ಚಂಗಿ-೩೦, ಕೊಟ್ಟೂರು-೧೨, ಬಿಕ್ಕಿಗ-೭೦ ಆಡಳಿತ ಭಾಗಗಳು ಇಲ್ಲಿ ಕಂಡುಬರುವುದು ವಿಶೇಷವೆನಿಸುತ್ತದೆ. ಪಾಂಡ್ಯರ ಸಾಮಂತರಾದ ಕೊಟ್ಟೂರಿನ ಕದಂಬರು ಈ ಭಾಗದಲ್ಲಿ ಆಡಳಿತ ನಡೆಸಿದರು.

ಚಿಕ್ಕಮಗಳೂರು ಜಿಲ್ಲೆಯ ಮುಳ್ಳಯ್ಯನಗಿರಿಯಲ್ಲಿ ಹುಟ್ಟುವ ವೇದ ಮತ್ತು ಆವತಿ ಹರವುಗಳು ಚಿತ್ರದುರ್ಗ ಜಿಲ್ಲೆಯಲ್ಲಿ ಸೇರಿ ವೇದಾವತಿ ಎಂದು ಕರೆಸಿಕೊಂಡು ಹೊಸದುರ್ಗ, ಹಿರಿಯೂರು, ಚಳ್ಳಕೆರೆ ಪರಿಸರದಲ್ಲಿ ಹರಿದು ರೂಪನಗುಡಿಯಲ್ಲಿ ಬಳ್ಳಾರಿ ಜಿಲ್ಲೆಯನ್ನು ಪ್ರವೇಶಿಸಿ ಹಗರಿಯಾಗಿ ಸಿರುಗುಪ್ಪ ತಾಲೂಕಿನ ಶ್ರೀಧರಗಡ್ಡೆ ಬಳಿ ತುಂಗಭದ್ರಾ ನದಿಯನ್ನು ಸೇರುತ್ತದೆ.[೯] ಈ ನದಿ ಪರಿಸರದಲ್ಲಿ ಮಹಾಸಾಮಂತ ಉದಯಾದಿತ್ಯ, ಕಾಮಯ್ಯ ನಾಯಕ, ಚೋಳಯ್ಯ ನಾಯಕ ಹಾಗೂ ಕುರುಗೋಡ ಸಿಂದರು ಸಾಮಂತರಾಗಿ ಆಳುತ್ತಿದ್ದರು.

ತುಂಗಭದ್ರಾ ನದಿಯ ಉಪನದಿ ಚಿಕ್ಕಹಗರಿ. ಚಿತ್ರದುರ್ಗದಲ್ಲಿ ಉಗಮವಾಗಿ ಜಗಳೂರು, ಹರಪನಹಳ್ಳಿ, ಹಡಗಲಿ, ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ, ತಾಲೂಕುಗಳಲ್ಲಿ ಹರಿದು ತುಂಗಭದ್ರಾ ನದಿಯನ್ನು ಸೇರುತ್ತದೆ. ಚಿನ್ನಹಗರಿ ನದಿಯು ಚಿತ್ರದುರ್ಗ ಜಿಲ್ಲೆಯಲ್ಲಿ ಹುಟ್ಟಿ ಅಲ್ಲಿ ಜನಗಿಹಳ್ಳ ಎಂದು ಕರೆಸಿಕೊಂಡು ಬಳ್ಳಾರಿ, ಚಿತ್ರದುರ್ಗ ಜಿಲ್ಲೆಗಳ ಗಡಿಯಾಗಿ ಆಂಧ್ರಪ್ರದೇಶದ ರಾಯದುರ್ಗ ತಾಲೂಕಿನ ಉತ್ತರದಲ್ಲಿ ಹಗರಿ ನದಿಗೆ ಬಂದು ಕೂಡುತ್ತದೆ. ಪೆದ್ದ ವಂಕಾ ಎಂದು ಕರೆಯುವ ಒಂದು ನೀರಿನ ಹರಿವು ತಾಮ್ರ ಪರ್ವತದಲ್ಲಿ ಹುಟ್ಟಿ ಕುಮತಿಯಲ್ಲಿ ಈ ಚಿನ್ನಹಗರಿಗೆ ಬಂದು ಸೇರುತ್ತದೆ.[೧೦]

ಪಾಂಡ್ಯನಾಡಿನಲ್ಲಿ ಹರಿಯುವ ತುಂಗಭದ್ರಾ ಹಾಗೂ ಅದರ ಉಪನದಿಗಳ ಜೊತೆಗೆ ಆ ಪರಿಸರದ ಅನೇಕ ಹಳ್ಳಗಳು ಹರಿಯುತ್ತಿರುವುದನ್ನು ಗುರುತಿಸಬಹುದಾಗಿದೆ. ಕೆಲವು ಹಳ್ಳಗಳು ನದಿ, ಉಪನದಿಯನ್ನು ಸೇರಿದರೆ ಕೆಲವು ಹರಿಯುವ ಪ್ರದೇಶದಲ್ಲಿ ಕೆರೆ-ಬಾವಿಗಳನ್ನು ನಿರ್ಮಿಸಿ ಜನಜೀವನಕ್ಕೆ ಸಹಾಯಕವಾಗಿವೆ. ಶ್ಯಾಗಲೆಹಳ್ಳ-ಹೊಳಲ್ಕೆರೆ ತಾಲೂಕಿನ ಪಶ್ಚಿಮ ಬೆಟ್ಟಗಳಲ್ಲಿ ಹುಟ್ಟಿ ದಾವಣಗೆರೆ ತಾಲೂಕಿನ ಮೂಲಕ ವಾಯುವ್ಯ-ಪೂರ್ವ, ಉತ್ತರಾಭಿಮುಖವಾಗಿ ಹರಿದು ತುಂಗಭದ್ರೆಯನ್ನು ಸೇರುತ್ತದೆ. ಈ ಹಳ್ಳವನ್ನು ಶ್ಯಾಗಲೆಹಳ್ಳ ಅಥವಾ ಸೂಳೆಕೆರೆ ಎಂದು ಕರೆಯುತ್ತಾರೆ.[೧೧] ನಾರಿಹಳ್ಳ ಇದನ್ನು ಕ್ರಿ.ಶ. ೧೫೪೧ರ ಶಾಸನ ನಾರಾಯಣಿ ಎಂದು ಕರೆದಿದೆ. ಹಗರನೂರುಹಳ್ಳ, ಹಂಪಸಾಗರ ಹಳ್ಳ ಹರಿವನಮಹಳ್ಳ (ಕಾಜ್ರಿವಂಕ) ಮಾದಿಹಳ್ಳ, ತೆಲಗಿಹಳ್ಳ ಹಿರೇಹಳ್ಳ ಮೊದಲಾದ ಕೆಲವು ಸಣ್ಣಪುಟ್ಟ ಹಳ್ಳಗಳು ಹರಿಯುತ್ತವೆ. ನೊಳಂಬವಾಡಿ ನಾಡಿನ ಬೇರೆ ಬೇರೆ ಭಾಗಗಳಲ್ಲಿ ಹರಿಯುವ ಹಳ್ಳ ಮತ್ತು ಕೆರೆಗಳನ್ನು ದಾನ ಬಿಡುವ ಸಮಯದಲ್ಲಿ ಗಡಿರೇಖೆಗಳನ್ನು ಹೇಳುವ ಸಂದರ್ಭದಲ್ಲಿ ಈ ಹಳ್ಳಗಳು ಮತ್ತು ಕೆರೆಗಳನ್ನು ಪಾಂಡ್ಯರ ಶಾಸನಗಳು ಉಲ್ಲೇಖಿಸುತ್ತವೆ. ಭತ್ತ, ಗೋಧಿ, ಹತ್ತಿ, ತೆಂಗು, ಅಡಿಕೆ, ಎಲೆ, ಎಳ್ಳು, ಖರ್ಜೂರ, ಮಾವು, ತೆಂಗು, ನಿಂಬೆ, ಮೆಣಸು ಮೊದಲಾದ ಕೃಷಿ ಉತ್ಪನ್ನಗಳ ಮಾಹಿತಿ ಈ ಶಾಸನಗಳಲ್ಲಿ ಲಭ್ಯವಿದೆ.

ಪಾಂಡ್ಯನಾಡಿನ ಈ ಭೌಗೋಳಿಕ ಪರಿಸರ ಅವರ ರಕ್ಷಣೆ ಹಾಗೂ ಸಮೃದ್ಧ ಆಡಳಿತಕ್ಕೆ ಅನುವು ಮಾಡಿಕೊಟ್ಟಿತು. ಹೊಯ್ಸಳ ವೀರಬಲ್ಲಾಳನ ಒಂದು ಶಾಸನ ಚೋಳರು ೧೨ ವರ್ಷಗಳ ಕಾಲ ಉಚ್ಚಂಗಿ ಕೋಟೆಯನ್ನು ಮುತ್ತಿದ್ದರೂ ಜಯಶಾಲಿಗಳಾಗಲಿಲ್ಲ. ಅಂತಹ ಅಭೇದ್ಯವಾದ ಕೋಟೆಯನ್ನು ವೀರಬಲ್ಲಾಳ ತನ್ನ ಸೈನ್ಯದಿಂದ ಸುಲಭವಾಗಿ ಗೆದ್ದನೆಂದು ಹೇಳುತ್ತದೆ. ಉಚ್ಚಂಗಿಯ ಈ ಭೌಗೋಳಿಕ ಪರಿಸರ ಪಾಂಡ್ಯರಿಗೆ ರಕ್ಷಣೆಗೆ ನಿಂತಿತ್ತು ಎಂಬುದು ಈ ಶಾಸನದ ವರ್ಣನೆಯಿಂದ ಸ್ಪಷ್ಟವಾಗುತ್ತದೆ. ಹೂವಿನಹಡಗಲಿ, ಹಿರೆಹಡಗಲಿ, ಹೊಳಗುಂದಿ, ಬೇತೂರು, ಹರಿಹರ, ಅಂಬಳಿ, ಕೋಗಳಿ, ಉಚ್ಚಂಗಿ ಶಾಸನಗಳು ನೊಳಂಬವಾಡಿ-೩೨೦೦೦ ಆಡಳಿತ ವಿಭಾಗದ ಪರಿಸರ ವರ್ಣನೆಯನ್ನು ಮಾಡುತ್ತವೆ. ವೇದಾವತಿ, ಚಿನ್ನಹಗರಿ, ಚಿಕ್ಕಹಗರಿ

ನದಿಗಳು ಹಾಗೂ ಕೆಲವು ಹಳ್ಳ ಮತ್ತು ಬೆಟ್ಟಗುಡ್ಡಗಳು ಹೊಯ್ಸಳರು ಮತ್ತು ಚೋಳರ ಆಕ್ರಮಣವನ್ನು ತಡೆಯುವಲ್ಲಿ ತುಂಬಾ ಅನುಕೂಲ ಮಾಡಿಕೊಟ್ಟಿವೆ. ⁹

ಈ ಭೌಗೋಳಿಕ ಸಂಪತ್ತು ಅನಾದಿಕಾಲದಿಂದಲೂ ಮಾನವನ ಚಟುವಟಿಕೆಗಳ ವಿಸ್ತರಣೆಗೆ ಅವಕಾಶ ಮಾಡಿಕೊಟ್ಟಿದೆ. ರಾಬರ್ಟ್ ಬ್ರೂಸ್‌ಫೂಟ್, ಎಂ.ಎಚ್. ಕೃಷ್ಣ, ಮಾರ್ಟಿಮರ್ ವೀಲರ್, ಅ. ಸುಂದರ, ಎಂ.ಎಸ್. ಕೃಷ್ಣಮೂರ್ತಿ ಮೊದಲಾದವರು ಕೈಗೊಂಡ ಕ್ಷೇತ್ರಕಾರ್ಯ ಮತ್ತು ಉತ್ಖನನಗಳಿಂದ ಮಾನವ ಚಟುವಟಿಕೆಯ ನೆಲೆಗಳು ಮತ್ತು ಅಂದಿನ ಸಾಂಸ್ಕೃತಿಕ ಲಕ್ಷಣಗಳನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ.

ನೊಳಂಬವಾಡಿ-೩೨೦೦೦ ಪರಿಸರದ ೧. ಆದಿ ಶಿಲಾಯುಗ, ೨. ಮಧ್ಯ ಹಳೆಯ ಶಿಲಾಯುಗ, ೩. ಅಂತ್ಯ ಹಳೆ ಶಿಲಾಯುಗ, ೪. ಸೂಕ್ಷ್ಮ ಶಿಲಾಯುಗ, ೫. ನವಶಿಲಾ-ತಾಮ್ರಯುಗ, ೬. ಕಬ್ಬಿಣ-ಬೃಹತ್ ಶಿಲಾಯುಗ, ೭. ಆದಿ ಇತಿಹಾಸ ಕಾಲದ ನೆಲೆಗಳನ್ನು ಕೆ.ಬಿ. ಶಿವತಾರಕ್ ಅವರು ಕರ್ನಾಟಕದ ಪುರಾತತ್ವ ನೆಲೆಗಳು ಎಂಬ ಕೃತಿಯಲ್ಲಿ ದಾಖಲಿಸಿದ್ದಾರೆ. ಹೊಸ ಶೋಧಿತ ನೆಲೆಗಳು ಇತಿಹಾಸ ದರ್ಶನ ಸಂಪುಟಗಳು, ವೃತ್ತಪತ್ರಿಕೆಗಳು. ಎಂ.ಫಿಲ್., ಪಿಎಚ್.ಡಿ. ಸಂಶೋಧನ ಪ್ರಬಂಧಗಳಲ್ಲಿ ಪ್ರಕಟಗೊಂಡಿವೆ.

ಆಡಳಿತ ವಿಭಾಗಗಳ ಗಡಿರೇಖೆ ರಾಜ್ಯ ವ್ಯವಸ್ಥೆಯಲ್ಲಿ ಸ್ಥಿರವಾಗಿರಲು ಸಾಧ್ಯವಿಲ್ಲ. ಅದು ಆಡಳಿತ ಕೇಂದ್ರದ ಸುತ್ತಲಿನ ಅರಸರೊಂದಿಗೆ ಹೊಂದಿರುವ ಸಂಬಂಧಗಳ ಮೇಲೆ ಆ ಮೇರೆಗಳು ಸ್ಥಿರವಾಗಿರುತ್ತವೆ. ನೊಳಂಬವಾಡಿ ಪ್ರದೇಶದ ಮೇಲಿನ ಹೊಯ್ಸಳರ ನಿರಂತರ ದಾಳಿಗಳು ಪಾಂಡ್ಯನಾಡಿನ ಗಡಿರೇಖೆಗಳನ್ನು ಬದಲಾಯಿಸುತ್ತಿದ್ದವು. ಹಾಗಾಗಿ ಶಾಸನ ದೊರೆತಿರುವ ಪ್ರದೇಶಗಳ ಹಿನ್ನೆಲೆಯಲ್ಲಿ ಭೌಗೋಳಿಕ ಲಕ್ಷಣಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

**ಚಾರಿತ್ರಿಕ ಹಿನ್ನೆಲೆ**

ರಾಜಕೀಯ ಚರಿತ್ರೆಯಲ್ಲಿ ಪ್ರಭುತ್ವದ ಯಜಮಾನಿಕೆಯನ್ನು ಶಾಸನಗಳು "ವೊಡೆತಿಟ್ಟಿ" 'ಆಳುತ್ತಮಿರೆ'[೧೦] ಎಂಬ ಪಾರಿಭಾಷಿಕ ಪದದಿಂದ ಕರೆದಿವೆ. ಅರಸು ಆಡಳಿತ ಪ್ರಭುವರ್ಗ ಅಥವಾ ಚಕ್ರವರ್ತಿಯ ಸಾರ್ವಭೌಮತ್ವವನ್ನು ಪ್ರತಿನಿಧಿಸುತ್ತದೆ. ಇನ್ನೊಂದು ರಾಜನಿಗೆ/ಅರಸನಿಗೆ ನಿಷ್ಠರಾಗಿ ಅಧೀನತೆಯಲ್ಲಿ ಆಳುವುದು ಸಾಮಂತ ಅಥವಾ ಮಂಡಳೇಶ್ವರರ ಆಡಳಿತವನ್ನು ಪ್ರತಿನಿಧಿಸುತ್ತದೆ. ಇದರಲ್ಲಿ ಮಹಾಮಂಡಳೇಶ್ವರ, ದಂಡನಾಯಕ, ಮನ್ನೆಯ, ಗಾವುಂಡ ಮೊದಲಾದ ಆಡಳಿತವರ್ಗದ ಸೇವೆಯನ್ನು ಇದು ಹೊಂದಿರುತ್ತದೆ. ಇವರು ಚಕ್ರವರ್ತಿಯ ಪಾದಪದ್ಮೋಪ ಜೀವಿಗಳಾಗಿರುತ್ತಾರೆ. ಸಮರ್ಥ ಆಡಳಿತದ ಪರಿಕಲ್ಪನೆ ಈ ರೀತಿ ಅಧಿಕಾರ ವಿಕೇಂದ್ರೀಕರಣವನ್ನು ಪ್ರತಿನಿಧಿಸುತ್ತದೆ. ಈ ವಿಕೇಂದ್ರೀಕರಣ ವ್ಯವಸ್ಥೆಯಲ್ಲಿ ಪ್ರಾಂತೀಯ ಆಡಳಿತದ ಒಡೆತನ ಪ್ರಭುವರ್ಗದ ವಿಶ್ವಾಸಕ್ಕೆ ಪಾತ್ರರಾದವರಿಗೆ ಸಲ್ಲುತ್ತದೆ. ಚಾಳುಕ್ಯ ಸಹೋದರರ ಕದನದಲ್ಲಿ ಚಾಳುಕ್ಯ ವಿಕ್ರಮಾದಿತ್ಯನ ವಿಶ್ವಾಸದಿಂದಾಗಿಯೇ ಉಚ್ಚಂಗಿ ಪಾಂಡ್ಯರು ನೊಳಂಬವಾಡಿ-೩೨೦೦೦ ಪ್ರದೇಶದ

ಮಹಾಮಂಡಳೇಶ್ವರ ಪದವಿಯ ಆಡಳಿತ ಪಡೆಯುತ್ತಾರೆ. ಈ ಹಿಂದೆ ಆಡಳಿತ ನಡೆಸಿದ ನೊಳಂಬ ಪಲ್ಲವರು ೨ನೇ ಸೋಮೇಶ್ವರನ ವಿಶ್ವಾಸಕ್ಕೆ ಪಾತ್ರರಾಗಿದ್ದರು. ಈ ಕಾರಣಕ್ಕೆ ನೊಳಂಬವಾಡಿ ಪ್ರಾಂತ್ಯದ ಆಡಳಿತವನ್ನು ಕಳೆದುಕೊಂಡರು.

ಭಾರತದ ಚರಿತ್ರೆಯ ಆರಂಭಿಕರಾದ ಮೌರ್ಯರು, ಅನಂತರ ಶಾತವಾಹನರು, ಕದಂಬರು, ಮುಂದೆ ಗಂಗ, ಚಾಳುಕ್ಯ ರಾಜಮನೆತನಗಳು ನೊಳಂಬವಾಡಿ ನಾಡಿನಲ್ಲಿ ರಾಜಕೀಯ ಆಡಳಿತವನ್ನು ನಡೆಸಿದರು. ಕದಂಬರ ನೇರ ಆಳ್ವಿಕೆಯ ನಂತರ ಚಾಳುಕ್ಯ, ಗಂಗ, ರಾಷ್ಟ್ರಕೂಟ ಮತ್ತು ಚಾಳುಕ್ಯರ ಆಶ್ರಯದಲ್ಲಿ ನೊಳಂಬ ಪಲ್ಲವರು ಮತ್ತು ಉಚ್ಚಂಗಿ ಪಾಂಡ್ಯರು ಆಡಳಿತ ನಡೆಸಿರುವುದು ಈ ಪರಿಸರದಲ್ಲಿ ದೊರೆಯುವ ಶಾಸನಗಳಿಂದ ಸ್ಪಷ್ಟವಾಗುತ್ತದೆ. ಈ ಅರಸುಮನೆತನಗಳ ಕಾಲದಲ್ಲಿ ಅಧಿಕಾರ ವಿಕೇಂದ್ರೀಕರಣ ಪ್ರಕ್ರಿಯೆ ಆರಂಭವಾಗಿತ್ತು. ಹಾಗಾಗಿ ತಮ್ಮ ಅಧೀನ ಅಧಿಕಾರಿಗಳು ಬೇರೆ ಬೇರೆ ಭಾಗಗಳಲ್ಲಿ ಅವರ ಪ್ರತಿನಿಧಿಗಳಾಗಿ ಆಳುತ್ತಿದ್ದರು. ಮೌರ್ಯ, ಶಾತವಾಹನ ಅರಸರ ಕಾಲದಲ್ಲಿ ನೊಳಂಬವಾಡಿ ಪರಿಸರದಲ್ಲಿ ಇದ್ದ ಸಾಮಂತ ಅಧಿಕಾರಿಗಳ, ಅರಸರ ಬಗ್ಗೆ ಸ್ಪಷ್ಟವಾದ ದಾಖಲೆಗಳು ದೊರೆಯುವುದಿಲ್ಲ. 'ಇಸಿಲ' ಆ ಕಾಲದಲ್ಲಿ ಆಡಳಿತ ವಿಭಾಗವಾಗಿರಬೇಕು ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಕದಂಬರ ಕಾಲದಲ್ಲಿ ಕದಂಬ ವಂಶದ ಒಂದು ಶಾಖೆ ಈ ಪರಿಸರದಲ್ಲಿ ಆಡಳಿತ ನಡೆಸುತ್ತಿತ್ತು. ಪಲ್ಲವರಿಂದ ಅವಮಾನಿತನಾದ ಮಯೂರವರ್ಮನು ಶ್ರೀಪರ್ವತ ದ್ವಾರದ ದಟ್ಟವಾದ ಅಡವಿಯಲ್ಲಿ ಸಂಚರಿಸಿ ಬೃಹದ್ಬಾಣರೇ ಮೊದಲಾದ ರಾಜರಿಂದ ಕಪ್ಪವನ್ನು ಪಡೆದುಕೊಂಡನು. ಶ್ರೀ ಪರ್ವತವು ಶ್ರೀಶೈಲವಾಗಿರಬಹುದೆಂದು ಸಾಮಾನ್ಯವಾಗಿ ಒಪ್ಪಿತವಾಗಿರುವ ವಿಷಯವೆಂದು ಗೋಪಾಲರು ಅಭಿಪ್ರಾಯಪಡುತ್ತಾರೆ. ಎಂ. ಗೋವಿಂದ ಪೈ ತ್ರಿಪರ್ವತಾಂತರ ಸಂಶ್ರಿತಾಮ್ ಎಂಬ ಪಾಠವನ್ನು ಸೂಚಿಸಿ ತ್ರಿಪರ್ವತವು ಉಚ್ಚಶೃಂಗಿ-ಉಚ್ಚಂಗಿ ಆಗಿರಬೇಕೆಂದು ಪ್ರತಿಪಾದಿಸಿದ್ದಾರೆ.[೧೩] ಬಿ.ರಾಜಶೇಖರಪ್ಪ ಅವರು ಇದು ಚಿತ್ರದುರ್ಗ ತಾಲೂಕಿನ ಮಯೂರವರ್ಮನ ಶಾಸನ ಇರುವ ಚಂದ್ರವಳ್ಳಿಯ ಸಮೀಪವಿರುವ ಧವಳಪ್ಪನ ಗುಡ್ಡವಿರಬೇಕೆಂದು ಸೂಚಿಸಿದ್ದಾರೆ.[೧೪]

ಎರಡನೆಯ ಕೃಷ್ಣವರ್ಮನ ಏಳನೆಯ ವರ್ಷದ ಬನಹಳ್ಳಿ ತಾಮ್ರಶಾಸನದಲ್ಲಿ ಕಾರ್ತೀಕ ಬಹುಳ ಪಂಚಮಿ ಜೇಷ್ಠದಂದು ವಿಷ್ಣುಶರ್ಮನಿಗೆ ವಳ್ಳಾವಿ ವಿಷಯದ ಕೊಳನಲ್ಲೂರು ಗ್ರಾಮವನ್ನು ಸರ್ವಪರಿಹಾರವಾಗಿ ದಾನ ನೀಡಿದ ವಿವರವಿದೆ. ದಾನ ನೀಡಿದ ಕೊಳನಲ್ಲೂರು ಚನ್ನಗಿರಿ ತಾಲೂಕಿನ ನಲ್ಲೂರು ಸೀಮೆಯಲ್ಲಿರಬಹುದೆಂದು ಗೋಪಾಲರು ಅಭಿಪ್ರಾಯಪಟ್ಟಿದ್ದಾರೆ.[೧೫]

ಕಾಕುಸ್ಥವರ್ಮನ ಕಾಲದಲ್ಲಿ ಕದಂಬರ ಸಣ್ಣ ಸಣ್ಣ ಗುಂಪುಗಳು ಆರಂಭವಾಗಿದ್ದವು. ಅದರಲ್ಲಿ ಒಂದು ಶಾಖೆ ಉಚ್ಚಂಗಿ ಪ್ರದೇಶದಲ್ಲಿ ನೆಲೆನಿಂತು ಆಡಳಿತವನ್ನು ನೋಡಿಕೊಳ್ಳುತ್ತಿತ್ತು. ಹರಿವರ್ಮನ ನಾಲ್ಕನೆಯ ವರ್ಷದ (೫೧೬-೫೨೬) ತಾಮ್ರಶಾಸನದಲ್ಲಿ ಅರಸನು ಉಚ್ಚಶೃಂಗಿಯಲ್ಲಿ ತಂಗಿದ್ದಾಗ ತನ್ನ ಚಿಕ್ಕಪ್ಪನಾದ ಶಿವರಥನಿಂದ ಉಪದೇಶಿತನಾಗಿ ಪಲಾಶಕೆಯಲ್ಲಿನ ಜಿನಾಲಯದಲ್ಲಿ ವರ್ಷಂಪ್ರತಿ ಎಂಟು ದಿನಗಳು ನಡೆಯುವ ಕ್ರಿಯೆಗಾಗಿ ದಾನ ನೀಡಿದ ಉಲ್ಲೇಖವಿದೆ.[೧೬]

ಉಚ್ಚಂಗಿ ಶಾಖೆಯ ಒಂದನೆಯ ಕೃಷ್ಣವರ್ಮನ ತಂಗಿಯನ್ನು ಗಂಗ ವಿಷ್ಣುಗೋಪನ ಮಗ ಮಾಧವನಿಗೆ ಕೊಟ್ಟು ಲಗ್ನ ಮಾಡಲಾಗಿತ್ತು. ಇವರು ಕೇಕೆಯ ಮನೆತನದವರ ಸಂಬಂಧವನ್ನು ಹೊಂದಿದ್ದರು. ಒಂದನೇ ಕೃಷ್ಣವರ್ಮನ ಮಗ ವಿಷ್ಣುವರ್ಮ ಕೇಕೆ/ಕೈಕೆಯಸುತ. ಅಂದರೆ ಕೃಷ್ಣವರ್ಮನ ಹೆಂಡತಿ/ರಾಣಿ ಕೇಕೆಯ ಮನೆತನದವಳು ಎಂಬುದು ಸ್ಪಷ್ಟವಾಗುತ್ತದೆ.[೧೬]

ಆರಂಭದಲ್ಲಿ ಕದಂಬ ವಂಶದ ನೇರ ಆಡಳಿತಕ್ಕೆ ಒಳಪಟ್ಟಿದ್ದು, ಕಾಕುತ್ಸವರ್ಮನ ಕಾಲದಲ್ಲಿ ಕದಂಬ ಕುಲದ ಉಚ್ಚಂಗಿ ಶಾಖೆಯ ಕದಂಬರು ಬಾದಾಮಿ ಚಾಳುಕ್ಯರ ಕಾಲದವರೆಗೂ ಇಲ್ಲಿ ಆಡಳಿತ ನಡೆಸಿರುವುದು ಮೇಲಿನ ದಾಖಲೆಗಳಿಂದ ದೃಢವಾಗುತ್ತದೆ. ಚಾಳುಕ್ಯ ಆಡಳಿತ ಕಾಲದಲ್ಲಿ ಪಲ್ಲವ ವಂಶದ ಒಂದು ಶಾಖೆ 'ನೊಳಂಬ' ಎಂಬ ಮೂಲ ವಂಶದ ಹೆಸರಿನೊಂದಿಗೆ ಚಾಳುಕ್ಯರ ಸಾಮಂತರಾಗಿ ಈ ನಾಡಿನ ಆಡಳಿತದ ಚುಕ್ಕಾಣಿ ಹಿಡಿದರು. ಕದಂಬ ವಂಶದ ಬೇರೆ ಬೇರೆ ಶಾಖೆಯಲ್ಲಿದ್ದ ಕದಂಬರು ನೊಳಂಬ ಪಲ್ಲವರ ಮನ್ನೆಯ ಸಾಮಂತರಾಗಿ, ಮಹಾಮಂಡಳೇಶ್ವರರಾಗಿ ಮುಂದುವರಿದರು. ಅವರ ನಂತರ ಉಚ್ಚಂಗಿ ಪಾಂಡ್ಯರು ನೊಳಂಬವಾಡಿ–೩೨೦೦೦ದ ಅಧಿಕಾರವನ್ನು ವಹಿಸಿಕೊಂಡಾಗ ಈ ಕದಂಬ ಶಾಖೆಗಳು ಹೊಯ್ಸಳ ಮತ್ತು ಯಾದವರ ಕಾಲದವರೆಗೂ ಕೋಗಳಿ-೫೦೦ನ್ನು ಕೊಟ್ಟೂರು ಪಟ್ಟಣದಿಂದ ಸಾಮಂತರಾಗಿ ಆಳಿದರು. ಇವರು ಕದಂಬ ವಂಶದ ಉಚ್ಚಂಗಿ ಶಾಖೆಗೆ ಸೇರಿರಬೇಕು. ಆರಂಭದಲ್ಲಿ ನೊಳಂಬಳಿಗೆ-೧೦೦೦ ಎಂದು ಕ್ರಿ.ಶ. ೯೫೦ರ ವೇಳೆಗೆ ನೊಳಂಬವಾಡಿ-೩೨೦೦೦ ಹಳ್ಳಿಗಳನ್ನೊಳಗೊಂಡ ಆಡಳಿತ ವಿಭಾಗವಾಗಿ ಶಾಸನಗಳಲ್ಲಿ ನೊಳಂಬವಾಡಿ-೩೨೦೦೦ವೆಂದು ದಾಖಲಾಗಲು ಆರಂಭಿಸಿತ್ತು.

ನೊಳಂಬ ಪಲ್ಲವ ವಂಶದ ಮೂಲ ಪುರುಷ ತ್ರಿನಯನು ಚಾಳುಕ್ಯ ವಿಜಯಾದಿತ್ಯನ ಸಮಕಾಲೀನನಾಗಿದ್ದಾನೆ. ಹೇಮಾವತಿಯ ಶಾಸನದ ಪ್ರಕಾರ ತ್ರಿನಯನ ವಂಶದಲ್ಲಿ ಹುಟ್ಟಿದವನು ಮಂಗಳ ನೊಳಂಬಾಧಿರಾಜ. ಇವನು ಕಿರಾತರನ್ನು ಜಯಿಸಿ ಕರ್ನಾಟಕರಿಂದ ಪ್ರಶಂಸೆ ಗಳಿಸಿದ. ಈ ಕರ್ನಾಟಕರು ಬಾದಾಮಿ ಚಾಳುಕ್ಯರೆಂದೂ, ಇದರಿಂದ ಮಂಗಳ ನೊಳಂಬಾಧಿ ರಾಜನು ಬಹುಶಃ ಚಾಲುಕ್ಯರ ಕೈಕೆಳಗೆ ಸಾಮಂತನಾಗಿ ಅಥವಾ ಅಧೀನನಾಗಿ ಆಳ್ವಿಕೆ ನಡೆಸುತ್ತಿದ್ದನೆಂದು ಎಂ.ಎಸ್. ಕೃಷ್ಣಮೂರ್ತಿ ಅಭಿಪ್ರಾಯಪಟ್ಟಿದ್ದಾರೆ.[೧೭] ನೊಳಂಬ ಪಲ್ಲವರು ಬಾದಾಮಿ ಚಾಳುಕ್ಯ ಅರಸರ ವಿಶ್ವಾಸಕ್ಕೆ ಪಾತ್ರರಾಗಿ ಅವರ ಅಧೀನತೆಯಲ್ಲಿ ಅಧಿಕಾರ ಪಡೆದರೆಂಬುದು ಸ್ಪಷ್ಟವಾಗುತ್ತದೆ.

ನೊಳಂಬ ಪಲ್ಲವರು ತಮ್ಮ ಆಡಳಿತ ಪ್ರದೇಶವನ್ನು ತಮ್ಮ ಮೂಲ ಹೆಸರಿನೊಂದಿಗೆ ಸೇರಿಸಿಕೊಂಡು ಆಳ್ವಿಕೆ ನಡೆಸಿದರು. ಕ್ರಿ.ಶ. ೭೩೫ರಲ್ಲಿ 'ನೊಳಂಬಳಿಗೆ ಸಾಸಿರ' ಎಂಬ ಸಣ್ಣ ಪ್ರಾಂತ್ಯದ ಆಡಳಿತವನ್ನು ವಹಿಸಿಕೊಂಡ ಇವರು ಕ್ರಿ.ಶ. ೯೦೦ ಹೊತ್ತಿಗೆ ನೊಳಂಬವಾಡಿ-೩೨೦೦೦ ಎಂಬ ವಿಸ್ತಾರವಾದ ಸಾಮ್ರಾಜ್ಯಕ್ಕೆ ಅಧಿಪತಿಗಳಾದರು. ಆಡಳಿತದ ಆರಂಭ ಕ್ರಿ.ಶ. ೭೩೫ರಿಂದ ಕ್ರಿ.ಶ. ೧೦೫೫ರವರೆಗೆ; ಇವರು ಗಂಗ, ರಾಷ್ಟ್ರಕೂಟ, ಬಾದಾಮಿ ಚಾಳುಕ್ಯ

ಮತ್ತು ಕಲ್ಯಾಣದ ಚಾಳುಕ್ಯ ಅರಸು ಮನೆತನಗಳ ಸಾಮಂತರಾಗಿ ಅವರ ಪದಪದ್ಮೋಪ ಜೀವಿಗಳಾಗಿ ಒಮ್ಮೊಮ್ಮೆ ಸ್ವತಂತ್ರರಾಗಿ ನೊಳಂಬವಾಡಿ ಪ್ರದೇಶವನ್ನು ಆಳಿದರು.

ತಾವು ಈಶ್ವರ ವಂಶಜನಾದ ಕಾಂಚೀಪತಿ ತ್ರಿಣಯ ಪಲ್ಲವನ ಸಂತತಿಯವರೆಂದು ಹೇಳಿಕೊಂಡಿದ್ದಾರೆ. ಈ ರಾಜವಂಶವು ಬಾದಾಮಿ ಚಾಳುಕ್ಯ ಮತ್ತು ಕಂಚಿಯ ಪಲ್ಲವರ ಆಳ್ವಿಕೆಯ ಪ್ರದೇಶಗಳ ಗಡಿ ಭಾಗಗಳಲ್ಲಿ ಆಳ್ವಿಕೆ ಪ್ರಾರಂಭಿಸಿದರು. ಚಾಳುಕ್ಯರ ಆಶ್ರಯದಲ್ಲಿ ಪಲ್ಲವರ ವಿರುದ್ಧ ಪ್ರತಿಭಟಿಸಿ ನಿಂತು ಕರ್ನಾಟಕ ಪ್ರವೇಶಿಸಿ ಇಲ್ಲಿನ ಚಕ್ರವರ್ತಿಗಳ ಮನಗೆದ್ದು ಮೂರು ಶತಮಾನಗಳ ಕಾಲ ಮಧ್ಯ ಕರ್ನಾಟಕದ ನೊಳಂಬವಾಡಿ ಪ್ರದೇಶದ ಆಡಳಿತವನ್ನು ಮುನ್ನಡೆಸಿದರು.[೧೯] 'ಹೆಂಜೇರು' ಇವರ ಮೊದಲ ರಾಜಧಾನಿ ಪ್ರದೇಶವಾಗಿತ್ತು. ಹನ್ನೊಂದನೇ ಶತಮಾನದಲ್ಲಿ ಈ ಆಡಳಿತ ಬಳ್ಳಾರಿ ಜಿಲ್ಲೆಯ ಕಂಪ್ಲಿಗೆ ಸ್ಥಳಾಂತರಗೊಂಡಿತು. ಹಾಗಾಗಿ ಕಂಪ್ಲಿ ಇವರ ಎರಡನೇ ರಾಜಧಾನಿಯಾಯಿತು. ನಂತರ ಕಲ್ಯಾಣ ಚಾಳುಕ್ಯ ವಂಶದ ಯುವರಾಜರು ನೊಳಂಬವಾಡಿ-೩೨೦೦೦ದ ಆಡಳಿತ ವಹಿಸಿಕೊಂಡಿರುವುದು ಶಾಸನಗಳಿಂದ ತಿಳಿದುಬರುತ್ತದೆ. ದೀರ್ಘಕಾಲ ಅಧಿಕಾರ ನಡೆಸಿದ ಇವರು ಗಂಗ, ರಾಷ್ಟ್ರಕೂಟ, ಪೂರ್ವ ಚಾಳುಕ್ಯ ಮತ್ತು ಪಶ್ಚಿಮ ಚಾಳುಕ್ಯರ ಸಾಮಂತರಾಗಿ ಈ ನೆಲವನ್ನು ಆಳಿದರು.

ಸಿಂಹಪೋತ ನೊಳಂಬರಲ್ಲಿ ಅಧಿಕೃತವಾಗಿ ಕಾಣಿಸಿಕೊಳ್ಳುವ ಮೊದಲ ಅರಸ. ಇವನು ಗಂಗ ಶ್ರೀಪುರುಷನ ಸಾಮಂತನಾಗಿದ್ದ. ಇವನಿಗೆ ಕಲನೊಳಂಬಾದಿ ರಾಜ ಎಂಬ ಬಿರುದು ಇತ್ತು. ಇವನು ಶ್ರೀಪುರುಷನ ಆಜ್ಞೆಯ ಮೇರೆಗೆ ದಂಗೆಯೆಬ್ಬಿಸಿದ್ದ ದುಗ್ಗಮಾರ ಎರೆಯಪ್ಪನ ಮೇಲೆ ದಂಡೆತ್ತಿ ಹೋದನೆಂದು ದೊಡ್ಡ ಉಳ್ಳಾರ್ತಿಯ ಶಾಸನ ತಿಳಿಸುತ್ತದೆ.[೨೦]

ಗಂಗ ಅರಸ ಶ್ರೀಪುರುಷನ ಕಾಲದಲ್ಲಿ ೧ನೇ ಕೃಷ್ಣನು ಕ್ರಿ.ಶ. ೭೬೮ರಲ್ಲಿ ಮಣ್ಣೆಯ ಮೇಲೆ ಸೈನ್ಯದೊಂದಿಗೆ ಬಂದು ಮಣ್ಣೆಯ ಉತ್ತರಕ್ಕಿದ್ದ ಗಂಗ ರಾಜ್ಯವನ್ನೆಲ್ಲ ಆಕ್ರಮಿಸಿಕೊಂಡು ನೊಳಂಬರನು ತನ್ನ ಸಾಮಂತರನ್ನಾಗಿ ಮಾಡಿಕೊಂಡಿರಬೇಕು.[೨೧] ೧ನೇ ಕೃಷ್ಣನ ದಾಳಿಯಿಂದ ನೊಳಂಬರು ಗಂಗರ ಅಧೀನತೆಯಿಂದ ರಾಷ್ಟ್ರಕೂಟರ ಅಧೀನತೆಗೆ ಬಂದರು. ಆಗ ನೊಳಂಬಳಿಕೆ-೧೦೦೦ವು ತುಮಕೂರು, ಚಿತ್ರದುರ್ಗ, ಅನಂತಪುರ ಜಿಲ್ಲೆಗಳ ಭಾಗಗಳನ್ನು ಆಗ್ನೇಯ ದಿಕ್ಕಿನಲ್ಲಿ ಇರಿಗಲ್ವಾಡಿ-೩೦೦ ಇತ್ತೆಂದು ಮಧುಗಿರಿ ತಾಲೂಕಿನ ಶ್ರವಣಗುಡಿ ಶಾಸನದಿಂದ ಊಹಿಸಬಹುದು.[೨೨]

ಸಿಂಹಪೋತನ ನಂತರ ಚಾರುಪೊನ್ನೇರ (ಕ್ರಿ.ಶ. ೭೭೪-೮೦೦) ಆಡಳಿತ ನಡೆಸಿದ. ಇವನು ರಾಷ್ಟ್ರಕೂಟ ವಿನಯ ಮತ್ತು ಗೋವಿಂದರಾಜನ ಮಾಂಡಲೀಕನಾಗಿ ನೊಳಂಬಳಿಗೆ-೧೦೦೦, ನಿರ್ಗುಂದನಾಡು-೩೦೦ ಇರಿಗಲ್ವಾಡಿ-೩೦೦, ಗಂಗವೂರು-೩೦, ನೆಲ್ಲಗುಂಡಿ-೧೨ ನಾಡಗಳನ್ನು ಆಳುತ್ತಿದ್ದನೆಂದು ಚಿಕ್ಕ ಮಧುರೆ ಶಾಸನ ತಿಳಿಸುತ್ತದೆ. ಇವನಿಗೆ ಪಲ್ಲವಾಧಿರಾಜ ಎಂಬ ಬಿರುದು ಇತ್ತು. ಹೆಂಡತಿ ಗವಗಣಬ್ಬೆ ಮದರಿಕಲ್ಲುನ್ನಾಳುತ್ತಿದ್ದಳೆಂದು ಶಾಸನ ತಿಳಿಸುತ್ತದೆ. ಗಂಗ ಅರಸ ಶ್ರೀಪುರುಷನು ಕಳೆದುಹೋಗಿದ್ದ ರಾಜ್ಯವನ್ನು ಕ್ರಿ.ಶ. ೭೮೮ರೊಳಗಾಗಿ ರಾಷ್ಟ್ರಕೂಟರಿಂದ ಪುನಃ ಕಿತ್ತುಕೊಂಡ.[೨೩] ಹಾಗಾಗಿ ಪಲ್ಲವರು ಮತ್ತೆ ಗಂಗರಾಜರ ಸಾಮಂತರಾಗಿ ಉಳಿದರು.

ಚಾರುಪೊನ್ನೆರನ ತರುವಾಯ ಅವನ ಮಗನಾದ ಪೊಳಲ್ಚೋರನು ಪಟ್ಟಕ್ಕೆ ಬಂದನು. ನೊಳಂಭಾಧಿರಾಜ ಎಂಬ ಬಿರುದು ಹೊಂದಿದ್ದ ಈತ ಗಂಗ ಅರಸ ೨ನೇ ರಾಜಮಲ್ಲನ ಸಾಮಂತನಾಗಿ ಆಳುತ್ತಿದ್ದನು ಎಂದು ಅಲ್ಲೂರು ಶಾಸನ ತಿಳಿಸುತ್ತದೆ.

ಗಂಗ ಅರಸ ೧ನೇ ರಾಜಮಲ್ಲನು ಕಾಂಚಿಯ ಮೇಲೆ ದಾಳಿ ಮಾಡಿದಾಗ ಈತನು ಪ್ರಭುವಿನ ಸಹಾಯಕ್ಕೆ ಹೋಗಿರುವಾಗ ಮಾರ್ಗದಲ್ಲಿದ್ದ ಬಾಣರ ಮೇಲೆ ದಾಳಿ ಮಾಡಿ ಬಾಣ ವಿದ್ಯಾಧರನನ್ನು ಸೋಲಿಸಿ ಪುಲಿನಾಡನ್ನು ವಶಪಡಿಸಿಕೊಂಡನು. ನೊಳಂಬ ಮಹೇಂದ್ರನು ಬಾಣಕುಲ ಧ್ವಂಸ ಮಾಡಿ "ಮಹಾಬಲಿಕುಲ ವಿಧ್ವಂಸಕ"ನೆಂದು ಪ್ರಸಿದ್ಧನಾದನು.[೨೪] ಇವನು ಗಂಗ ದೊರೆ ನೀತಿಮಾರ್ಗನ ಕೈಕೆಳಗೆ ಗಂಗ-೬೦೦೦ ಪ್ರಾಂತ್ಯವನ್ನು ಆಳುತ್ತಿದ್ದ ಇವನ ಆಳ್ವಿಕೆಯ ಕಾಲಕ್ಕೆ ನೊಳಂಬ ರಾಜ್ಯವು ಆಗ್ನೇಯಕ್ಕೆ ಶ್ರೀನಿವಾಸಪುರದವರೆಗೂ ದಕ್ಷಿಣಕ್ಕೆ ಧರ್ಮಪುರಿಯವರೆಗೂ ವಿಸ್ತರಿಸಿತ್ತು. ಬಾಣಾವರ ಶಾಸನ ಮಹೇಂದ್ರನನ್ನು-೯೬೦೦ ಗಂಗಮಂಡಲ ಭೂವನಿತೆಯ ಅಧಿಪತಿಯೆಂದು ವರ್ಣಿತನಾಗಿದ್ದಾನೆ. ಗಂಗರಾಜ ಭೂತುಗನು ಮಹೇಂದ್ರನೊಡನೆ ಹೋರಾಡಿದ್ದನ್ನು ಅವನ ಮಗ ಎರೆಯಪ್ಪನು ಮಹೇಂದ್ರನನ್ನು ಕೊಂದು 'ಮಹೇಂದ್ರಾಂತಕ' ಎಂಬ ಬಿರುದನ್ನು ಪಡೆದುಕೊಂಡನು.[೨೫]

ಮಹೇಂದ್ರನ ನಂತರ ಅವನ ಸಹೋದರ ನೊಳಂಬಾಧಿರಾಜ ಇರುವನೊಳಂಬನು ಪಟ್ಟಬದ್ಧನಾದನು. ಇವನ ನಂತರ ಅಯ್ಯಪ್ಪದೇವನು ನೊಳಂಬವಾಡಿಯ ಅಧಿಪತಿಯಾದನು. ಇವನು ಗಂಗ ಮತ್ತು ರಾಷ್ಟ್ರಕೂಟರ ವೈರತ್ವವನ್ನು ಕಟ್ಟಿಕೊಂಡಿದ್ದ ರಾಷ್ಟ್ರಕೂಟ ಅರಸ ೩ನೇ ಕೃಷ್ಣನು ಕ್ರಿ.ಶ. ೯೪೦ರಲ್ಲಿ ಇವನನ್ನು ಸೋಲಿಸಿದನು.[೨೬]

ಪೂರ್ವ ಚಾಳುಕ್ಯ ೨ನೇ ಭೀಮನು ಅಯ್ಯಪ್ಪನನ್ನು ಯುದ್ಧದಲ್ಲಿ ಕೊಂದನು. ಈ ಕೊಲೆಯು ಯಾವಾಗ ಸಂಭವಿಸಿತೆಂಬುದು ಗೊತ್ತಿಲ್ಲ.[೨೭] ಇವನಿಗೆ ಗಂಗ ಮನೆತನದ ಪೊಲ್ಲಬರಸಿ ಮತ್ತು ನಾಗಿಯಬ್ಬೆ ಎಂಬ ಇಬ್ಬರು ರಾಣಿಯರಿದ್ದರು. ಅಣ್ಣಿಗ, ದಿಲೀಪ ಎಂಬ ಮಕ್ಕಳಿದ್ದರು. ಅಣ್ಣಿಗನು ಕ್ರಿ.ಶ. ೯೧೯ರಲ್ಲಿ ಅಯ್ಯಪ್ಪನ ಕೈಕೆಳಗೆ ಮಾಂಡಲೀಕನಾಗಿ ಆಳುತ್ತಿದ್ದನು. ಇವನು ಪಟ್ಟಕ್ಕೆ ಬಂದ ಮೇಲೆ ಕಚ್ಚೆಯ ಗಂಗ ೩ನೇ ರಾಚಮಲ್ಲನಿಗೂ ಇವನಿಗೂ ಕೊತ್ತಮಂಗಲದಲ್ಲಿ ಯುದ್ಧವಾಗಿ ನೊಳಂಬ ಅಣ್ಣಿಗನು ಪರಾಜಿತನಾಗಿ ಮೊರೆಹೊಕ್ಕನೆಂದು ಕೂಡಲೂರು ತಾಮ್ರಶಾಸನ ತಿಳಿಸುತ್ತದೆ.

ರಾಷ್ಟ್ರಕೂಟ ಅರಸ ೩ನೇ ಕೃಷ್ಣನು ಅಣ್ಣಿಗನನ್ನು ಸೋಲಿಸಿ ರಾಜಮಲ್ಲನನ್ನು ಕೊಂದು ಭೂತುಗನಿಗೆ ಗಂಗ ಮನೆತನದ ಪಟ್ಟವನ್ನು ಕಟ್ಟಿದನು. ೩ನೇ ಕೃಷ್ಣನು ಅಣ್ಣಿಗನನ್ನು ವಿಪತ್ತಿಗೀಡು ಮಾಡಿ, ಅವನ ತಮ್ಮನಾದ ದಿಲೀಪನನ್ನು ನೊಳಂಬ ಸಿಂಹಾಸನದ ಮೇಲೆ ಕೂಡಿಸಿ ತನ್ನ ಸಾಮಂತನಾಗಿ ಮಾಡಿಕೊಂಡ ಸಾಧ್ಯತೆಯಿದೆ. ಅಣ್ಣಿಗನು ಚಾಲುಕ್ಯ ಕುಲದ ಅತ್ತಿಯಬ್ಬರಸಿಯನ್ನು ವರಿಸಿ 'ಪಲ್ಲವ ಕುಲರತ್ನನಾದ 'ಇರುಳ'ನನ್ನು ಮಗನಾಗಿ ಪಡೆದನು.[೨೮] ಇರುಳನ ವಿಚಾರವಾಗಿ ತಿಳಿದುಬಂದಿಲ್ಲ.

ಇರುಳನ ನಂತರ ಅವನ ಸಹೋದರನ ಮಗ ದಿಲೀಪ ಇಮ್ಮಡಿ ನೊಳಂಬಧಿರಾಜ ಕ್ರಿ.ಶ. ೯೪೩ರಲ್ಲಿ ಅಧಿಕಾರಕ್ಕೆ ಬಂದನು. ಇವನಿಗೆ 'ಇರಿವನೊಳಂಬ ಏಕವಾಕ್ಯ' ಎಂಬ ಬಿರುದುಗಳಿದ್ದವು. ರಾಷ್ಟ್ರಕೂಟ ೩ನೇ ಕೃಷ್ಣರಾಜನ ಪಕ್ಷವಹಿಸಿ ಚೋಳರೊಡನೆ ಹೋರಾಡಿದನು. ಇಪಿಲಿ ಗಜಾಂಕುಶ ಚೋಳನೊಡನೆ ಹೋರಾಡಿದನೆಂದು ಅತಿಸರ್ಮಥರಾದ ಕೆಲವರು ಬಲ್ಲಾಳುಗಳು 'ಬಲ್ಲಹ'ರು ರಾಜನ ಆಜ್ಞಾನುಸಾರವಾಗಿ ದಿಲೀಪನ ಸೈನ್ಯದಲ್ಲಿ ಸೇವೆ ಸಲ್ಲಿಸಿದರೆಂದು ಮಡಕಶಿರ ಶಾಸನದಲ್ಲಿ ಹೇಳಿದೆ.

ದಿಲೀಪನ ನಂತರ ನನ್ನಿನೊಳಂಬ, ಇರುವನೊಳಂಬ ನೊಳಿಪಯ್ಯರಿಬ್ಬರು ಏಕಕಾಲದಲ್ಲಿ ರಾಜ್ಯವನ್ನಾಳುತ್ತಿದ್ದರು. ಕ್ರಿ.ಶ. ೯೭೧-೭೨ರ ಶಾಸನ ನೊಳಂಬ ಕುಲಾಂತಕ ಮಾರಸಿಂಹ ಆಳುತ್ತಿದ್ದಾಗ ನೊಳಂಬರನ್ನು ಕಾದಿ ಗೆದ್ದು ರಣರಂಗದಲ್ಲಿ ಮಡಿದ ಅಣ್ಣವಸಯ್ಯನ ಮಗನಾದ ಬೂತುಗನಿಗೆ ಕಲ್ನಾಡು ಕೊಟ್ಟ ಉಲ್ಲೇಖವಿದೆ.[೨೯]

ಕ್ರಿ.ಶ. ೯೭೧ರ ನೇರಲಿಗೆ, ಮಾಡಲಗೆರೆ ಮತ್ತು ಮಸಗನಹಳ್ಳಿ ಮುಂತಾದ ಶಾಸನಗಳು ಗಂಗ ಮಾರಸಿಂಹನನ್ನು ನೊಳಂಬ ಕುಲಾಂತಕ ಎಂಬ ಬಿರುದನ್ನು ಧಕ್ಕಿಸಿದಂತೆ ಹೇಳಿವೆ. ಗಂಗ ಮಾರಸಿಂಹನ ಕಾಲದಲ್ಲಿ ಚೋಳರು ಬಜಯತಿ(ಬನವಾಸಿ) ಮಂಗಲ ತಲುಪಿ ನೊಳಂಬ ಸೇನೆಯನ್ನು ಸೋಲಿಸಿದರು.[೩೦] ಗಂಗ ಮಾರಸಿಂಹ ಮತ್ತು ಚೋಳರ ದಾಳಿಗಳಿಂದ ನೊಳಂಬರು ಹೇಮಾವತಿಯ ಮೇಲಿನ ಹಿಡಿತವನ್ನು ಕಳೆದುಕೊಂಡು ಬಳ್ಳಾರಿ ಜಿಲ್ಲೆಯ ಕಂಪ್ಲಿಯ ಕಡೆ ಮುಖ ಮಾಡಿದರು.[೩೧] ನನ್ನಿನೊಳಂಬನ ನಂತರ ಅವನ ಮಗ ಪೊಳಲ್ಚೋರ ಅಧಿಕಾರಕ್ಕೆ ಬಂದ ಅನಂತರ ಎರಡನೇ ಮಹೇಂದ್ರ ಅಧಿಕಾರಕ್ಕೆ ಬಂದ. ಅವನು ಉತ್ತರ ಆರ್ಕಾಟ್ ಜಿಲ್ಲೆಯ ಒಂದು ಭಾಗದಲ್ಲಿ ಇದ್ದನೆಂದು ಊಹಿಸಬಹುದು. ಗಂಗ ಮಾರಸಿಂಹನು ಸಾಯುವವರೆಗೂ ನೊಳಂಬರು ನಿರುಪಾಯರಾಗಿ ಸುಮ್ಮನಿದ್ದರು. ಕರ್ಷಣ ಪಲ್ಲೆಯ ಒಂದು ಶಾಸನದಲ್ಲಿ ವೀರ ಮಹೇಂದ್ರನು ಚಾಳುಕ್ಯ ೨ನೇ ತೈಲನೊಂದಿಗೆ ಚೋಳ ನಾಡ ಮೇಲೆ ದಂಡೆತ್ತಿ ಹೋಗಿ ಅದನ್ನು ಗೆದ್ದು ತಿರುಗಿ ಬರುವಾಗ ನೊಳಂಬವಾಡಿಯನ್ನು ಹೊಕ್ಕು ಗಂಗ-೬೦೦೦ದಲ್ಲಿದ್ದ ಕೋಲಾರದಲ್ಲಿ ಬೀಡುಬಿಟ್ಟಿದ್ದು, ಪುಲಿನಾಡಲ್ಲಿದ್ದ ಕಿರಿಯ ಬೆಳಗಟೂರನ್ನು ಕೀರ್ತಿ ಗಾವುಂಡನಿಗೆ ಕೊಟ್ಟನೆಂದು ದಾಖಲಿಸಲಾಗಿದೆ.[೩೨]

ನೀತಿಜ್ಞನಾದ ೨ನೇ ತೈಲಪನು ಗಂಗ ರಾಜ್ಯವನ್ನು ಕೈವಶಪಡಿಸಿಕೊಳ್ಳಲು ಅವರ ವೈರಿಗಳಾದ ನೊಳಂಬರ ಸಖ್ಯವನ್ನು ಬೆಳೆಸಿರುವುದು ಇದರಿಂದ ಸ್ಪಷ್ಟವಾಗುತ್ತದೆ. ವೀರ ಮಹೇಂದ್ರನು ಚಾಲುಕ್ಯ ೨ನೇ ತೈಲನ ಸಂಬಂಧವನ್ನು ಬೆಳೆಸಿಕೊಂಡು ಗಂಗಮಾರಸಿಂಹನನ್ನು ವಶಪಡಿಸಿಕೊಂಡಿದ್ದ ನೊಳಂಬವಾಡಿ-೩೨೦೦೦ವನ್ನು ಹಿಂತೆಗೆದುಕೊಂಡು ಚಾಲುಕ್ಯ ಅರಸರ ಸಾಮಂತರಾಗಿ ಮುಂದುವರಿದರು. ಬಳ್ಳಾರಿ ಜಿಲ್ಲೆಯಲ್ಲಿ ವೀರ ಮಹೇಂದ್ರನ ಶಕ ೮೯೯ರ ಶಾಸನವಿರುವುದರಿಂದ ಆ ವರ್ಷಕ್ಕೆ ಮೊದಲು ಮಹೇಂದ್ರನು ಚಾಳುಕ್ಯ ತೈಲನ ಸಾಮಂತನಾಗಿದ್ದನೆಂಬುದು ದೃಢವಾಗುತ್ತದೆ.

ಚಾಳುಕ್ಯರ ಸಂಬಂಧ ಮತ್ತು ಚೋಳರ ದಾಳಿ ಕರ್ನಾಟಕಕ್ಕೆ ಹೆಚ್ಚಾಗತೊಡಗಿದ ಮೇಲೆ ಈ ಅರಸರು ತಮ್ಮ ರಾಜಧಾನಿಯನ್ನು ಬಳ್ಳಾರಿ ಜಿಲ್ಲೆಯ ಕಂಪ್ಲಿಯ ಕಡೆಗೆ ಬದಲಾಯಿಸಿದರು.[೩೩]

ವೀರ ಮಹೇಂದ್ರನ ನಂತರ ಇರಿವನೊಳಂಬ ಘಟೆಯಂಕಕಾರ ಪಟ್ಟಕ್ಕೆ ಬಂದನು. ಇವನು ಪಟ್ಟಕ್ಕೆ ಬರುವ ವೇಳೆಗೆ ದಕ್ಷಿಣದ ಎರಡು ಬಲಿಷ್ಠ ರಾಜ್ಯಗಳಾದ ಗಂಗ ಮತ್ತು ರಾಷ್ಟ್ರಕೂಟ ರಾಜ್ಯಗಳು ಅಸ್ತಂಗತವಾಗಿದ್ದವು. ಗಂಗವಾಡಿ ಪ್ರಾಂತ್ಯದಲ್ಲಿದ್ದ ಚೋಳರು ಪ್ರಾಬಲ್ಯ ಮೆರೆದಿದ್ದರು. ರಾಷ್ಟ್ರಕೂಟರನ್ನು ಮೂಲೆಗೆ ತಳ್ಳಿ ಕಲ್ಯಾಣದ ಚಾಲುಕ್ಯರು ಪ್ರಭುತ್ವವನ್ನು ಸ್ಥಾಪಿಸಿದರು.

ಇರಿವನೊಳಂಬ ಘಟೆಯಂಕಕಾರನು ಚಾಲುಕ್ಯ ೫ನೇ ವಿಕ್ರಮಾದಿತ್ಯನ ಮಾಂಡಲೀಕನಾಗಿ ರಾಜ್ಯದ ದಕ್ಷಿಣ ಭಾಗವನ್ನು ಉಳಿಸಿಕೊಳ್ಳಲು ಪ್ರಯತ್ನಿಸಿದ್ದಲ್ಲದೆ ಉತ್ತರ ದಿಕ್ಕಿನ ಕಡೆಗೆ ರಾಜ್ಯ ಸಂಪಾದನೆಗೆ ತೊಡಗುತ್ತಾನೆ. ಆಲೂರು ಶಾಸನದಲ್ಲಿ ಈತನು ನೊಳಂಬವಾಡಿ-೩೨೦೦೦, ಕೋಗಳಿ-೫೦೦, ಬಲ್ಲಕುಂದೆ-೩೦೦, ಕುಕ್ಕನೂರು-೩೦ ಗ್ರಾಮಗಳನ್ನು ಆಳುತ್ತಿದ್ದನೆಂದು ಬರೆದಿದೆ. ಈತನು ಚಾಳುಕ್ಯ ಅರಸ ಸತ್ಯಾಶ್ರಯ ಇರಿವ ಬೆಡಂಗನ ಮಗಳಾದ ಮಹಾದೇವಿಯನ್ನು ಮದುವೆಯಾಗುವುದರ ಮೂಲಕ ಚಾಳುಕ್ಯ ನೊಳಂಬರ ಸಂಬಂಧವನ್ನು ಸ್ಥಿರಗೊಳಿಸಿದನು.

ಪೆರ್ಮಾಡಿ ಉದಯಾದಿತ್ಯದೇವ ಚಾಳುಕ್ಯ ಜಯಸಿಂಹನ ಮಾಂಡಲೀಕನಾಗಿ ಅವನ ಹೆಸರಿನೊಂದಿಗೆ ತನ್ನ ಹೆಸರನ್ನು ಸೇರಿಸಿಕೊಂಡು ಪಟ್ಟಕ್ಕೆ ಬಂದನು. ಜಗದೇಕಮಲ್ಲ ಪೆರ್ಮಾಡಿ ಉದಯಾದಿತ್ಯನೆಂದು ಶಾಸನಗಳು ಕರೆದಿವೆ. ಇವನು ನೊಳಂಬವಾಡಿ-೩೨೦೦೦, ಕಂದಬಳಿಗೆ-೧೦೦೦, ಕೋಗಳಿ-೫೦೦, ಬಲ್ಲಕುಂದೆ-೩೦೦, ಕುದಿಯಪರವಿ-೭೦, ಕರಿವಿಡಿ-೩೦೦ನ್ನು ಆಳುತ್ತಿದ್ದನು. ಈತನ ಕಾಲಕ್ಕೆ ದದಿರ್ವಾಳಿಗೆ-೧೦೦೦ ಮತ್ತೆ ಕೊನಡಿಯೂರು ಕೈ ತಪ್ಪಿದಂತೆ ತಿಳಿಯುತ್ತದೆ.[೩೪]

ಉದಯಾದಿತ್ಯನ ನಂತರ ಇರ್ಮಡಿ ನೊಳಂಬ ಅಧಿಕಾರಕ್ಕೆ ಬಂದನು. ಕದಂಬಳಿಗೆ-೫೦೦ರ ಅರಸನಾಗಿದ್ದ. ಅವನು ಮರಣ ನಂತರ ನೊಳಂಬ ನರಸಿಂಹನು ಅಧಿಕಾರಕ್ಕೆ ಬಂದ. ಇವನು ತ್ರೈಲೋಕಮಲ್ಲನ ಆಶ್ರಯದಲ್ಲಿ ಕದಂಬಳಿಗೆ ಮತ್ತು ಬೇರೆ ಕೆಲವು ಪ್ರಾಂತ್ಯಗಳಲ್ಲಿ ಆಡಳಿತ ನಡೆಸಿದನು. ಅವನ ಮಗ ಚೋರಯ್ಯನು ಉಚ್ಚಂಗಿಯಲ್ಲಿ ಮಾಂಡಲೀಕನಾಗಿದ್ದನು. ಬದನೇಹಾಳು ಗ್ರಾಮದ ಕ್ರಿ.ಶ. ೧೦೫೫ರ ಶಾಸನದಲ್ಲಿ ಚಾಳುಕ್ಯ ತ್ರೈಲೋಕ್ಯಮಲ್ಲದೇವನು ರಾಜ್ಯವಾಳುತ್ತಿದ್ದಾಗ ವೀರನೊಳಂಬ ಪಲ್ಲವ ಪೆರ್ಮಾಡಿಯು ಸಿಂದವಾಡಿ-೧೦೦೦ವನ್ನು ಆಳುತ್ತಿದ್ದಂತೆ ಹೇಳಿದೆ. ತ್ರೈಲೋಕಮಲ್ಲ ನೊಳಂಬಪಲ್ಲವ ಪೆರ್ಮಾಡಿ ತ್ರೈಲೋಕ್ಯಮಲ್ಲ ಇರಿವನೊಳಂಬ ನಾರಸಿಂಘದೇವ ಅಥವಾ ನರಸಿಂಹ ಗಟ್ಟಿದೇವ ಮುಂತಾದ ಹೆಸರುಗಳಿಂದ ಈತನನ್ನು ಕರೆಯಲಾಗಿದೆ ಎಂದು ಜಮಯ್ಯ ಕರಿಯಣ್ಣ ಅವರು ಗುರುತಿಸಿದ್ದಾರೆ.

ಕ್ರಿ.ಶ. ೧೦೫೪ರಿಂದ ೧೦೬೮ರವರೆಗೆ ಈ ಪ್ರದೇಶದಲ್ಲಿ ನೊಳಂಬರ ಶಾಸನಗಳು ಲಭ್ಯವಿಲ್ಲ. ಈ ಅವಧಿಯಲ್ಲಿ ನೊಳಂಬವಾಡಿ-೩೨೦೦೦ ಹಾಗೂ ಗಂಗವಾಡಿ-೯೬೦೦೦ ಸೇರಿದಂತೆ

ಕೆಲವು ಪ್ರಾಂತ್ಯಗಳು ಚಾಲುಕ್ಯ ಅರಸರ ನೇರ ಆಡಳಿತಕ್ಕೆ ಬಂದವು. ತ್ರೈಲೋಕ್ಯಮಲ್ಲ ೧ನೇ ಸೋಮೇಶ್ವರ ಚಾಳುಕ್ಯ ಚಕ್ರವರ್ತಿಯಾಗಿ ಆಳುತ್ತಿರುವಾಗ ಅವನ ಮಕ್ಕಳಾದ ವಿಕ್ರಮಾದಿತ್ಯ, ವಿಷ್ಣುವರ್ಧನ ವಿಜಯಾದಿತ್ಯ, ಜಯಸಿಂಹರು ಕುಮಾರ ವೃತ್ತಿಯಿಂದ ನೊಳಂಬವಾಡಿ-೩೨೦೦೦ ಪ್ರಾಂತ್ಯವನ್ನು ಆಳಿರುವುದು ಇಲ್ಲಿನ ಶಾಸನಗಳಿಂದ ತಿಳಿಯುತ್ತದೆ.

ಕ್ರಿ.ಶ. ೧೦೫೭ರ ಹಿರೇಹಡಗಲಿ ಶಾಸನ ೬ನೇ ವಿಕ್ರಮಾದಿತ್ಯ ನೊಳಂಬವಾಡಿ-೩೨೦೦೦ವನ್ನು ಕುಮಾರ ವೃತ್ತಿಯಿಂದ ಆಳುತ್ತಿದ್ದ ವಿಷಯವನ್ನು ತಿಳಿಸುತ್ತದೆ. ಕ್ರಿ.ಶ. ೧೦೫೮ರ ಶಿಕಾರಿಪುರ ತಾಲೂಕಿನ ಅಡಗಂಟೆಯ ಶಾಸನ ವಿಕ್ರಮಾದಿತ್ಯನು ಬನವಾಸಿ-೧೨೦೦೦, ಸಾಂತಳಿಗೆ-೧೦೦೦, ನೊಳಂಬವಾಡಿ-೩೨೦೦೦, ಗಂಗಮಂಡಳ-೯೬೦೦೦ ಈತನ ಆಡಳಿತಕ್ಕೆ ಒಳಪಟ್ಟಿರುವುದನ್ನು ದೃಢಪಡಿಸುತ್ತವೆ. ಕ್ರಿ.ಶ. ೧೦೬೪ರ ವೇಳೆಗೆ ನೊಳಂಬವಾಡಿ-೩೨೦೦೦ದ ಅಧಿಕಾರವನ್ನು ವಿಕ್ರಮಾದಿತ್ಯ ತನ್ನ ಸಹೋದರ ವಿಷ್ಣುವರ್ಧನ ಮಹಾರಾಜ ವಿಜಯಾದಿತ್ಯನನ್ನು ಆಚಳವೃತ್ತಿಯಾಗಿ ಪಡೆದು ಆಡಳಿತ ನಡೆಸಿದ್ದನ್ನು ಈ ಪ್ರದೇಶದ ಶಾಸನಗಳು ತಿಳಿಸುತ್ತವೆ. ಈತನನ್ನು ವೆಂಗಿಯ ಚಾಳುಕ್ಯ ವಂಶದವನೆಂದು ಹಾಗೂ ದಕ್ಷಿಣಕ್ಕೆ ದಿಗ್ವಿಜಯಾರ್ಥವಾಗಿ ಬಂದನೆಂದು ಹೇಳಲಾಗಿದೆ. ಕ್ರಿ.ಶ. ೨೬-೧೨-೧೦೬೪ರ ಮೋರಗೇರಿಯ ಶಾಸನ ಸಮಸ್ತಬುಧ ಜನಾಶ್ರಯನಾಹವ ಮಲ್ಲನಂಕಕಾರಂ ಪರಮಂಡಳ ಸೋರೆಕಾರಂ ವೈರಿಮದಮರ್ದ್ದನ, ಪ್ರತಾಪನಾರ್ದ್ದನನಚಳಿತವಾಕ್ಯಂ ವಿಪಕ್ಷಕುಳಕಾಳ ದಂಡಂ, ವೀರಮಾರ್ತಂಡ ದೀನಾನಾಥ ಚಿಂತಾಮಣಿ ಮಂಡಳಿಕ ಮುಕುಟ ಚೂಡಾಮಣಿ ವೆಂಗಿ ಮಂಡಳೇಶ್ವರ ಶ್ರೀ ವಿಷ್ಣುವರ್ಧನ ಮಹಾರಾಜಾಧಿರಾಜ ವಿಜಯಾದಿತ್ಯ ದೇವರು ನೊಳಂಬವಾಡಿ-೩೨೦೦೦ನ್ನು ಆಳುತ್ತಿದ್ದಾಗ ದಕ್ಷಿಣ ದಿಕ್ಕಿನ ದಿಗ್ವಿಜಯಾರ್ಥವಾಗಿ ಬಂದಾಗ ಮೋರಗೇರಿಯ ನೊಳಂಬೇಶ್ವರ ದೇವರಿಗೆ ಪಂಡಿತರ ಕಾಲನ್ನು ತೊಳೆದು ಪರಮೇಶ್ವರ ದತ್ತಿಯಾಗಿ ಭೂದಾನ ನೀಡಿದ. ತಂತ್ರ ಪಾಳ ಮೈಲಯ್ಯನು ರಾಜನ ಆಣತಿಯಂತೆ ದಾನ ನೀಡಿರುವ ಕುರಿತು ಉಲ್ಲೇಖಿಸುತ್ತದೆ.[೩೫]

ಹೂವಿನಹಡಗಲಿಯ ಕ್ರಿ.ಶ. ೧೦೬೭ರ ಶಾಸನ ಕಲ್ಯಾಣದಲ್ಲಿ ತ್ರೈಲೋಕ್ಯಮಲ್ಲದೇವನ್ನು ಆಳುತ್ತಿರುವಾಗ ಆತನ ಮಗ ವಿಜಯಾದಿತ್ಯನು ನೊಳಂಬವಾಡಿ-೩೨೦೦೦ವನ್ನು ಕಂಪ್ಲಿಯಿಂದ ಆಳುತ್ತಿದ್ದನು. ಆತನ ಮಾಂಡಲೀಕ ಘಟ್ಟಿಯರಸ ಮತ್ತು ಮಲ್ಲಪರಸನ್ನು ಪೂಲಿಕೆರೆಯ ಮನ್ನೆಯನ್ನು ಕಲ್ಲಿದೇವರಿಗೆ ಬಿಟ್ಟುಕೊಟ್ಟಿದ್ದನ್ನು ಹೇಳುತ್ತದೆ.[೩೬] ಹೂವಿನಹಡಗಲಿ,[೩೭] ಉಚ್ಚಂಗಿದುರ್ಗ,[೩೮] ಹಾರಕನಾಳು,[೩೯] ಕೆರೆಗುಡಿಹಳ್ಳಿ[೪೦] ಶಾಸನಗಳು ವಿಷ್ಣುವರ್ಧನ ವಿಜಯಾದಿತ್ಯನ ಆಡಳಿತದ ಮೇಲೆ ಬೆಳಕು ಚೆಲ್ಲುತ್ತವೆ. ಕ್ರಿ.ಶ. ೧೦೬೬ರ ನಂತರ ವಿಷ್ಣುವರ್ಧನ ವಿಜಯಾದಿತ್ಯನ ಶಾಸನಗಳು ಈ ಪ್ರದೇಶದಲ್ಲಿ ಕಾಣುವುದಿಲ್ಲ.

ವಿಷ್ಣುವರ್ಧನ ವಿಜಯಾದಿತ್ಯನ ನಂತರ ಜಯಸಿಂಹ ನೊಳಂಬವಾಡಿ-೩೨೦೦೦ದ ಅಧಿಕಾರವನ್ನು ಪಡೆದುಕೊಳ್ಳುತ್ತಾನೆ. ನೊಳಂಬರ ಪಾರಂಪರಿಕ ಬಿರುದುಗಳೊಂದಿಗೆ ಈತನು

ಕಾಣಿಸಿಕೊಳ್ಳುವುದು ವಿಶೇಷ. ಈತನ ತಾಯಿ ನೊಳಂಬ ಪಲ್ಲವ ಮನೆತನಕ್ಕೆ ಸೇರಿದ್ದಳೆಂದು ಹೇಳಲಾಗುತ್ತಿದೆ. ಭುವನೈಕಮಲ್ಲನ ತಮ್ಮನೆಂದು ಕುಣ್ಣೋಜಿಯ ಶಾಸನದಲ್ಲಿ ಕರೆದಿದೆ. ನೊಳಂಬ ಘಟೆಯಂಕಾರನಿಗೆ(ನನ್ನಿ ನೊಳಂಬ) ಗಂಡು ಸಂತಾನವಿಲ್ಲದೆ ತನ್ನ ಸಹೋದರಿಯ ಮಗ ಅಥವಾ ತನ್ನ ಸೋದರಳಿಯ ಒಂದನೆಯ ಸೋಮೇಶ್ವರನ ೩ನೇ ಮಗನಾದ ಜಯಸಿಂಹನನ್ನು ದತ್ತು ಪಡೆದಿರಬಹುದು. ಇಲ್ಲವೆ ಅಪುತ್ರಕನಾಗಿದ್ದ ಅವನ ಸಾಮ್ರಾಜ್ಯಕ್ಕೆ ಎರಡನೇ ಸೋಮೇಶ್ವರನ ಕಾಲದಲ್ಲಿ ಮೂರನೇ ಸಹೋದರನಾದ ಜಯಸಿಂಹನು ನೊಳಂಬ ಪ್ರಾಂತ್ಯದ ಪಟ್ಟಾಭಿಷಕ್ತನಾಗಿರಬೇಕು.[೪೧] ಇದೇ ಕಾರಣಕ್ಕೆ ಜಯಸಿಂಹ ನೊಳಂಬರ ಪಾರಂಪರಿಕ ಬಿರುದುಗಳನ್ನು ಧರಿಸಿರುವುದು.

ಪಾಂಡ್ಯ ವಂಶದ ತ್ರಿಭುವನಮಲ್ಲ ಪಾಂಡ್ಯನು ನೊಳಂಬರ ಪಾರಂಪರಿಕ ಬಿರುದು ಹೊಂದಿರುವುದನ್ನು ಗಂಗಾವತಿ ತಾಲ್ಲೂಕಿನ ವಿಪ್ರ ಶಾಸನ ಹೇಳುತ್ತದೆ. ಈತನನ್ನು ಜಯಸಿಂಹನ ಸಹೋದರನೆಂದು ಹೇಳಲಾಗಿದೆ. ಚಾಳುಕ್ಯ ಭುವನೈಕಮಲ್ಲ ಆಳುತ್ತಿರುವಾಗ ಅವನ ಮಾಂಡಲೀಕ ತ್ರೈಲೋಕ್ಯಮಲ್ಲ ನೊಳಂಬ ಪಲ್ಲವ ಪೆರ್ಮಾಡಿ ಜಯಸಿಂಹದೇವನು ಕೋಗಳಿ-೫೦೦, ಕದಂಬಳಿಗೆ-೧೦೦೦, ಬಲಕುಂದೆ-೩೦೦ನ್ನು ಆಳುತ್ತಿರುವುದನ್ನು ಬಾಗಳಿಯ ಕ್ರಿ.ಶ. ೧೦೬೮ರ ಶಾಸನ ತಿಳಿಸುತ್ತದೆ.[೪೨] ರೋಣ ತಾಲೂಕಿನ ಸೂಡಿ ಗ್ರಾಮದ, ಉಚ್ಚಂಗಿದುರ್ಗ, ಪಟ್ಟದಕಲ್ಲು, ಹೂವಿನಹಡಗಲಿ ಶಾಸನಗಳು ಜಯಸಿಂಹನನ್ನು ೨ನೇ ಸೋಮೇಶ್ವರನ ಆಳ್ವಿಕೆಯ ಕಾಲದಲ್ಲಿ ನೊಳಂಬವಾಡಿ-೩೨೦೦೦ ಪ್ರಾಂತ್ಯದ ಆಡಳಿತ ನಡೆಸಿರುವುದನ್ನು ಹೇಳುತ್ತವೆ.

ಕ್ರಿ.ಶ. ೧೦೭೧ರ ವೇಳೆಗೆ ಚಾಳುಕ್ಯ ಸಿಂಹಾಸನಕ್ಕಾಗಿ ಎರಡನೇ ಸೋಮೇಶ್ವರ ಮತ್ತು ಸಹೋದರ ೬ನೇ ವಿಕ್ರಮಾದಿತ್ಯನ ನಡುವೆ ದಾಯಾದಿ ಕಲಹ ಆರಂಭವಾಗಿತ್ತು. ೧ನೇ ಸೋಮೇಶ್ವರ ೧೦೬೮ರಲ್ಲಿ ಕುರುವತ್ತಿಯ ಸಮೀಪ ತುಂಗಭದ್ರಾ ನದಿಯಲ್ಲಿ ಜಲಸಮಾಧಿ ಮೂಲಕ ನಿಧನ ಹೊಂದಿದ.[೪೩] ಆನಂತರ ಈತನ ಮೊದಲನೇ ಮಗ ೨ನೇ ಸೋಮೇಶ್ವರ ಚಾಲುಕ್ಯ ಸಿಂಹಾಸನಕ್ಕೆ ಬಂದ. ಆರಂಭದಲ್ಲಿ ಇವರಿಬ್ಬರ ಸಂಬಂಧಗಳು ಉತ್ತಮವಾಗಿದ್ದ ಬಗ್ಗೆ ಬಿಲ್ಹಣ ಉಲ್ಲೇಖಿಸುತ್ತಾನೆ. ಸ್ವಲ್ಪ ದಿನಗಳ ನಂತರ ವಿಕ್ರಮಾದಿತ್ಯನ ಶೌರ್ಯ ಗುಣಗಳನ್ನು ಸಹಿಸದೆ ಅವನನ್ನು ದ್ವೇಷಿಸಲು ಆರಂಭಿಸಿದ. ಹಾಗಾಗಿ ಅಧಿಕಾರಕ್ಕೆ ಬಂದ ಕೆಲವು ದಿನಗಳಲ್ಲಿ ವಿಕ್ರಮಾದಿತ್ಯನಿಗೆ ತಂದೆಯ ಕಾಲದಲ್ಲಿ ನೀಡಲಾಗಿದ್ದ ಅಧಿಕಾರಗಳನ್ನು ಕಸಿದುಕೊಂಡು ಬನವಾಸಿ-೧೨೦೦೦ದ ಒಡೆತನವನ್ನು ಬಿಡಿಸಿ ತನ್ನ ನೆಚ್ಚಿನ ವ್ಯಕ್ತಿ ಪಸಾಯಿತ ಲಕ್ಷ್ಮಣನಿಗೆ ಕೊಡುತ್ತಾನೆ. ಈ ವಿಷಯ ಬಳ್ಳಿಗಾವೆಯ ಕ್ರಿ.ಶ. ೧೦೬೮ರ ಶಾಸನದಲ್ಲಿ ಬರುತ್ತದೆ. ಹಾಗೆಯೇ ಮಹಾಸಾಮಂತಾಧಿಪತಿ, ಮಹಾಪ್ರಚಂಡ ದಂಡನಾಯಕ ಉದಯಾದಿತ್ಯನಿಗೆ ನೊಳಂಬವಾಡಿ-೩೨೦೦೦, ಹಾನಗಲ್ಲು-೫೦೦, ಬನವಾಸಿ-೧೨೦೦೦ಗಳ ಒಡೆತನಗಳನ್ನು ಶಾಸನವಾಗಿ ಬರೆದುಕೊಟ್ಟು ದಕ್ಷಿಣ ಭಾಗವನ್ನು ಗೆಲ್ಲಲು ಹೇಳುತ್ತಾನೆ.[೪೪]

ಇದರಿಂದ ವಿಕ್ರಮಾದಿತ್ಯ ಒಡೆತನಕ್ಕೆ ಕೇವಲ ಸಿಂದವಾಡಿ-೧೦೦೦ ವಿಭಾಗ ಮಾತ್ರ ಉಳಿಯುತ್ತದೆ. ನೊಳಂಬವಾಡಿ – ೩೨೦೦೦ ಆಳುತ್ತಿದ್ದ ಜಯಸಿಂಹ ವಿಕ್ರಮಾದಿತ್ಯನ

ಪರವಹಿಸಿದ್ದರಿಂದ ಅವನ ಆಡಳಿತವು ಕೊನೆಗೊಂಡಿತು. ಕ್ರಿ.ಶ. ೧೦೭೩ರ ದೊಡ್ಡಬಾಣಗೆರೆಯ ಶಾಸನ ಉದಯಾದಿತ್ಯದೇವ ವೀರರಾಜೇಂದ್ರ ವೀರನೊಳಂಬ ಪೆರ್ಮಾಡಿಯು ನೊಳಂವಾಡಿ-೩೨೦೦೦ ಆಳುತ್ತಿರುವುದನ್ನು ತಿಳಿಸುತ್ತದೆ. ಮತ್ತೆ ನೊಳಂಬ ಉದಯಾದಿತ್ಯ ಈ ಪ್ರದೇಶದ ಅಧಿಕಾರವನ್ನು ಪುನಃ ಪಡೆದಿರುವುದು ಸ್ಪಷ್ಟವಾಗುತ್ತದೆ. ಆದರೆ ಇದು ಕ್ಷಣಿಕವಾಗಿತ್ತು. ಈ ವೇಳೆಗೆ ಚಾಲುಕ್ಯ ಸಹೋದರರ ಕಲಹ ಮತ್ತಷ್ಟು ದ್ವಿಗುಣಗೊಂಡಿತು. ಈ ಸಹೋದರ ಕಲಹವನ್ನು ಬಿಲ್ಹಣನು ತನ್ನ “ವಿಕ್ರಮಾಂಕದೇವಚರಿತಂ”ದಲ್ಲಿ ಹಾಗೂ ಕೆಲವು ಶಾಸನಗಳು ಇದರ ವಿವರಣೆಯನ್ನು ನೀಡುತ್ತವೆ.

ವಿಕ್ರಮಾದಿತ್ಯನು ತನ್ನ ತಂದೆ ಅಹವಮಲ್ಲ ಸೋಮೇಶ್ವರನ ಆಜ್ಞೆಯ ಮೇರೆಗೆ ದಂಡೆಯಾತ್ರೆ ಕೈಕೊಂಡು ಶತ್ರುಗಳ ಮೇಲೆ ವಿಜಯ ಸಾಧಿಸಿ ಕೃಷ್ಣ ನದಿಯ ದಂಡೆಯ ಮೇಲೆ ಬೀಡುಬಿಟ್ಟಿರುತ್ತಾನೆ. ಕಲ್ಯಾಣ ನಗರದಿಂದ ದೂತನು ಬಂದು ಆಹವಮಲ್ಲ ಒಂದನೇ ಸೋಮೇಶ್ವರನು ಜ್ವರದಿಂದ ಬಳಲುತ್ತಿದ್ದು ಕುರುವತ್ತಿಯ ಸಮೀಪ ತುಂಗಭದ್ರಾ ನದಿಯಲ್ಲಿ ಸ್ನಾನ ಮಾಡಿ ಶಿವನನ್ನು ಆರಾಧಿಸಿ ಸಾಕಷ್ಟು ಬಂಗಾರವನ್ನು ದಾನ ಮಾಡಿ, ಆನಂತರ ತುಂಗಭದ್ರೆಯಲ್ಲಿ ಮುಳುಗಿ ಸಾವನ್ನಪ್ಪಿದ. ತಂದೆ ದೈವಾಧೀನನಾದ ಮೇಲೆ ಹಿರಿಯ ಮಗ ಎರಡನೇ ಸೋಮೇಶ್ವರನು ಕಲ್ಯಾಣದ ಅಧಿಪತ್ಯವನ್ನು ಅಲಂಕರಿಸುತ್ತಾನೆ. ಕ್ರಿ.ಶ. ೧೦೬೮ರ ಶಿಕಾರಿಪುರ ಶಾಸನ, ಬಳ್ಳಿಗಾವೆ ಶಾಸನಗಳು ಈ ಅಂಶವನ್ನು ದಾಖಲಿಸಿವೆ.

ತಂದೆಯ ಜೀವಿತ ಕಾಲದಲ್ಲಿ ವಿಕ್ರಮಾದಿತ್ಯ ಅನೇಕ ಯುದ್ಧಗಳಲ್ಲಿ ಜಯಗಳಿಸಿ ಶೌರ್ಯ ಗುಣಗಳಿಂದ ಸಾಮ್ರಾಜ್ಯದಲ್ಲಿ ಗೌರವಿಸಲ್ಪಟ್ಟಿದ್ದ; ಈ ಗುಣಗಳನ್ನು ನೋಡಿ ಸಹಿಸದೇ ಅವನನ್ನು ನಿರ್ನಾಮ ಮಾಡಲು ಯೋಚಿಸಿದ. ಈ ಅಪಾಯದ ಮುನ್ಸೂಚನೆಯನ್ನು ಕಂಡುಕೊಂಡ ವಿಕ್ರಮಾದಿತ್ಯ ತಮ್ಮ ಜಯಸಿಂಹನನ್ನು ಕರೆದುಕೊಂಡು ಕಲ್ಯಾಣ ನಗರವನ್ನು ಬಿಟ್ಟು ಹೋಗುತ್ತಾನೆ. ಸೋಮೇಶ್ವರನಿಗೆ ಈ ವಿಷಯ ಗೊತ್ತಾಗಿ ಇವರನ್ನು ಸೆರೆಹಿಡಿಯಲು ಸೈನ್ಯವನ್ನು ಕಳುಹಿಸುತ್ತಾನೆ. ಆದರೆ ದೊಡ್ಡ ಆನೆ ಬಲವುಳ್ಳ ಸೈನ್ಯವನ್ನು ವಿಕ್ರಮಾದಿತ್ಯ ಸೋಲಿಸಿ ಕಳುಹಿಸುತ್ತಾನೆ. ಈ ವಿಜಯಿಯಾದ ವಿಕ್ರಮಾದಿತ್ಯನು ಮುಂದೆ ಚೋಳನ ಮೇಲೇರಿ ಹೋಗಬೇಕೆಂದು ನಿರ್ಧರಿಸಿ, ಕೊನೆಯ ಘಳಿಗೆಯಲ್ಲಿ ಮನಸ್ಸನ್ನು ಬದಲಾಯಿಸಿ ಕೆಲವು ದಿನಗಳನ್ನು ಹಾಯಾಗಿ ಕಳೆಯಬೇಕೆಂದು ವನವಾಸ(ಬನವಾಸಿ) ಮಂಡಲದ ಕಡೆಗೆ ಹೋಗುತ್ತಾನೆ. ಈ ಸಹೋದರರ ಜಗಳದ ವಿಷಯ ತಿಳಿದು ಆಳುಪರು,(ಕದಂಬ ಜಯಕೇಶಿ) ಬನವಾಸಿ ಕದಂಬರು, ಹಾನಗಲ್ಲು ಕದಂಬರು, ಉಚ್ಚಂಗಿ ಪಾಂಡ್ಯರು ಮೊದಲಾದ ಕೆಲವು ಚಾಳುಕ್ಯ ಸಾಮಂತರು ವಿಕ್ರಮಾದಿತ್ಯನ ಬೆನ್ನು ಕಟ್ಟುತ್ತಾರೆ ಎಂದು ಬಿಲ್ಹಣ ನಿರೂಪಿಸಿದ್ದಾನೆ. ಹೂವಿನಹಡಗಲಿಯ ಶಾಸನ ಕ್ರಿ.ಶ. ೧೦೭೧ರಲ್ಲಿ ವಿಕ್ರಮಾದಿತ್ಯನು ಗೋವಿಂದವಾಡಿಯಿಂದ ಆಳುತ್ತಿದ್ದಾಗ ದಂಡನಾಯಕ ಚಿದ್ದಯ್ಯನು ಗೆಲುವಿನ ಉತ್ಸಾಹದಲ್ಲಿದ್ದನೆಂದು ತಿಳಿಸುತ್ತದೆ ಹಾಗೂ ಇಲ್ಲಿ ೨ನೇ ಸೋಮೇಶ್ವರ ಚಕ್ರವರ್ತಿಯಾಗಿರುವಾಗಲೇ ವಿಕ್ರಮಾದಿತ್ಯ ತನ್ನನ್ನು ಚಕ್ರವರ್ತಿ ಎಂದು ಕರೆದುಕೊಂಡಿರುವುದನ್ನು ಈ ಶಾಸನ ಹೇಳುತ್ತದೆ.

ಮುಂದೆ ವಿಕ್ರಮಾದಿತ್ಯ ಬನವಾಸಿ ಕೋಟೆಯಲ್ಲಿದ್ದಾಗ ೨ನೇ ಸೋಮೇಶ್ವರ ೧೨ ಜನ ಸಾಮಂತರು ಮತ್ತಿತರ ಅಧಿಕಾರಿಗಳನ್ನು ಬನವಾಸಿ ಕೋಟೆಯನ್ನು ಮುತ್ತಲು ಕಳುಹಿಸುತ್ತಾನೆ.[೪೫]

ಈ ಸಮಯದಲ್ಲಿ ಸೋಮೇಶ್ವರ ವಿಕ್ರಮಾದಿತ್ಯ ಮತ್ತು ಜಯಸಿಂಹರ ಅಧೀನತೆಯಲ್ಲಿದ್ದ ನೊಳಂಬವಾಡಿ-೩೨೦೦೦, ಹಾನಗಲ್ಲು-೫೦೦, ಬನವಾಸಿ-೧೨೦೦೦ಗಳ ಒಡೆತನವನ್ನು ಮಹಾಸಾಮಂತಾಧಿಪತಿ ಮಹಾಪ್ರಚಂಡ ದಂಡನಾಯಕ ಉದಯಾದಿತ್ಯನಿಗೆ ಶಾಸನವಾಗಿ ಬರೆದುಕೊಟ್ಟು ದಕ್ಷಿಣ ಭಾಗವನ್ನು ಗೆಲ್ಲಲು ಹೇಳುತ್ತಾನೆ. ಇದರಂತೆ ಉದಯಾದಿತ್ಯ ಬನವಾಸಿ ಕೋಟೆಯನ್ನು ಮುತ್ತಿದ ವಿವರಣೆಯನ್ನು ಹಾನಗಲ್ಲು ತಾಲೂಕಿನ ಕಲಕೇರಿ ಶಾಸನ ಹಾಗೂ ಬಿಲ್ಹಣನ ವಿಕ್ರಮಾಂಕದೇವಚರಿತಂದಲ್ಲಿ ಹೇಳಲಾಗಿದೆ. ಈ ಯುದ್ಧದಲ್ಲಿ ಯಾರು ಗೆದ್ದರೆಂಬುದು ಸ್ಪಷ್ಟವಾಗಿಲ್ಲ. ಬಹುಶಃ ಬನವಾಸಿ ಕದಂಬರೇ ಜಯಗಳಿಸಿರಬೇಕು. ಹಾಗೆಯೇ ಶಾಸನಗಳು ಈ ಕದನದಲ್ಲಿ ಉಚ್ಚಂಗಿ ಪಾಂಡ್ಯರು ಭಾಗವಹಿಸಿದ್ದರು ಎಂಬುದನ್ನು ದೃಢಪಡಿಸುತ್ತವೆ.

ಮುಂದೆ ಬಿಲ್ಹಣನು ಹೇಳುವಂತೆ ಅಪಾಯದ ಸೂಚನೆಯನ್ನು ಅರಿತ ವಿಕ್ರಮಾದಿತ್ಯ ಅನೇಕ ಮಹಾಮಂಡಳೇಶ್ವರನ್ನು ತನ್ನೆಡೆಗೆ ಸೆಳೆದುಕೊಂಡು ವೀರರಾಜೇಂದ್ರಚೋಳನ ಮೇಲೆ ಯುದ್ಧಕ್ಕೆ ಹೋಗುತ್ತಾನೆ. ಇದನ್ನು ತಿಳಿದ ವೀರರಾಜೇಂದ್ರಚೋಳ ತನ್ನ ಮಗಳನ್ನು ವಿಕ್ರಮಾದಿತ್ಯನಿಗೆ ಧಾರೆಯೆರೆದು ಶಾಂತಿ ಒಪ್ಪಂದವನ್ನು ಮಾಡಿಕೊಳ್ಳುತ್ತಾನೆ. ವೀರರಾಜೇಂದ್ರನ ಮರಣದ ನಂತರ ಚೋಳ ಸಾಮ್ರಾಜ್ಯದ ವಾರಸುದಾರಿಕೆಗಾಗಿ ತನ್ನ ಅಳಿಯನಾದ ಅಧಿರಾಜೇಂದ್ರನಿಗೆ ಪಟ್ಟ ಕಟ್ಟುತ್ತಾರೆ. ಮುಂದೆ ಸ್ವಲ್ಪ ದಿನಗಳಲ್ಲಿಯೇ ವೆಂಗಿ ದೇಶದ ಅಧಿಪತಿಯಾಗಿದ್ದ ರಾಜಿಗನು(ರಾಜೇಂದ್ರ ಚೋಳ-II, ಕುಲೋತ್ತುಂಗ-I) ಅಧಿರಾಜೇಂದ್ರನನ್ನು ಕೊಂದು ತಾನೇ ಪಟ್ಟಕ್ಕೆ ಬರುತ್ತಾನೆ. ಈ ರಾಜಿಗನು ಎರಡನೇ ಸೋಮೇಶ್ವರನೊಂದಿಗೆ ಒಪ್ಪಂದ ಮಾಡಿಕೊಂಡು ವಿಕ್ರಮಾದಿತ್ಯನ ವಿರುದ್ಧ ಯುದ್ಧಕ್ಕೆ ಬರುತ್ತಾನೆ. ವಿಕ್ರಮಾದಿತ್ಯ ಧೃತಿಗೆಡದೇ ಎರಡೂ ಕಡೆಯ ಸೈನ್ಯದೊಂದಿಗೆ ಯುದ್ಧ ಮಾಡಲು ಸರಿಯಾದ ಕ್ರಮಕೈಗೊಳ್ಳುತ್ತಾನೆ. ವಿಕ್ರಮಾದಿತ್ಯನ ಹೊಡೆತಕ್ಕೆ ರಾಜಿಗನು ರಣರಂಗ ಬಿಟ್ಟು ಓಡಿ ಹೋಗುತ್ತಾನೆ. ಈ ನಿರ್ಣಾಯಕ ಯುದ್ಧದಲ್ಲಿ ವಿಕ್ರಮಾದಿತ್ಯ ಜಯದೊಂದಿಗೆ ಅಣ್ಣ ಸೋಮೇಶ್ವರನನ್ನು ಸೆರೆ ಹಿಡಿದು ಕಾರಾಗೃಹದಲ್ಲಿರಿಸುತ್ತಾನೆ. ಈ ಯುದ್ಧವು ಕ್ರಿ.ಶ. ೧೦೭೫ರ ಅಂತ್ಯ ೧೦೭೬ರ ಮಾರ್ಚ್ ೧೨ರ ಮಧ್ಯದಲ್ಲಿ ನಡೆದಿರಬೇಕು. ಕ್ರಿ.ಶ. ೧೦೭೬ ಮಾರ್ಚ್ ೧೨ರ ಹೊನ್ನಾಳಿ ತಾಲೂಕಿನ ಕುರುವ ಗ್ರಾಮದ ಶಾಸನದಲ್ಲಿ ವಿಕ್ರಮಾದಿತ್ಯನು ಪಟ್ಟಾಭಿಷೇಕದಂದು ಪ್ರಾರಂಭಿಸಿದ್ದ 'ವಿಕ್ರಮ ವರ್ಷದ' ಉಲ್ಲೇಖ ಬರುತ್ತದೆ.

ಈ ಸಹೋದರರ ಕದನದಲ್ಲಿ ಉಚ್ಚಂಗಿ ಪಾಂಡ್ಯರು ವಿಕ್ರಮಾದಿತ್ಯನ ಪರವಹಿಸಿದ್ದರು ಎಂಬುದನ್ನು ಅರಸೀಕೆರೆ ತಾಲೂಕಿನ ಕಾಟಕೆರೆಯ ಕ್ರಿ.ಶ. ೧೧೦೦ ಹೊಯ್ಸಳ ಎರೆಯಂಗನ ಶಾಸನ[೪೬]

"ಭೂವನೈಕಮಲ್ಲನಂ ಭೂಭವನವ
ಸಂಗೊಳೆ ಮರಳ್ಚಿ ರಾಜ್ಯ ಮನಧಿಕೋತ್ಸ
ವದಿಂ ತ್ರಿಭುವನ ಮಲ್ಲಂ ಗವದಿಂ ಕೊಣ್ಬು
ಕೊಟ್ಟ ಗಂಡ" ಎಂದು ಹೇಳಿದೆ.

ಭುವನೈಕಮಲ್ಲ (೨ನೇ ಸೋಮೇಶ್ವರ) ಮತ್ತು ಸಹೋದರ ತ್ರಿಭುವನಮಲ್ಲ (ವಿಕ್ರಮಾದಿತ್ಯನಿಗೆ)ರ ನಡುವೆ ಚಾಳುಕ್ಯ ಸಾಮ್ರಾಜ್ಯದ ಅಧಿಪತ್ಯಕ್ಕಾಗಿ ನಡೆದ ಕದನದಲ್ಲಿ ಪಲಮಾಂಧ್ಯ ಪಾಂಡ್ಯ ಭುವನೈಕಮಲ್ಲ(ಸೋಮೇಶ್ವರ)ನಿಂದ ಚಾಳುಕ್ಯ ಸಾಮ್ರಾಜ್ಯವನ್ನು ತ್ರಿಭುವನಮಲ್ಲನಿಗೆ ಗೆದ್ದು ಕೊಟ್ಟನೆಂದು ಹೇಳುತ್ತದೆ. ಚಾಳುಕ್ಯ ಚೋಳನರಪಾಳಕಯೋಸ್ಸ್ವರಾಜ್ಯ ಸ್ವಾರಾಜ್ಯದಂ ವಿಜಯತೇಯಸ್ಯ ಶೌರ್ಯಂಃ ಚಾಳುಕ್ಯ ಚೋಳರಾಜರ ನಡುವಿನ ಯುದ್ಧದಲ್ಲಿ ಚೋಳ ರಾಜ್ಯವನ್ನು ಚಾಳುಕ್ಯರಿಗೆ ತಂದು ಕೊಡುವಲ್ಲಿ ಅವನು ಉತ್ಕೃಷ್ಟ ಶೌರ್ಯ ಹೊಂದಿದ್ದನು(ಅವನು ಎಲ್ಲ ಕಾಲದಲ್ಲೂ ಜಯಶಾಲಿಯಾಗಿ ಬರುತ್ತಿದ್ದನೆಂದು ಭಾವ) ಉಚ್ಚಂಗಿ ಪಾಂಡ್ಯ ವಂಶದ ಮೊದಲ ಸ್ವತಂತ್ರ ಅರಸನಾದ ಪ್ರಚಂಡ ಪಾಂಡ್ಯ/ಪಲಮಾಂದಪಾಂಡ್ಯನ ಈ ಬಿರುದುಗಳು ವಿಕ್ರಮಾದಿತ್ಯನೊಂದಿಗೆ ಇವನು ಹೊಂದಿದ ಸಂಬಂಧವನ್ನು ಸ್ಪಷ್ಟಪಡಿಸುತ್ತವೆ.

ಆರನೇ ವಿಕ್ರಮಾದಿತ್ಯ ತನ್ನ ಕಷ್ಟಕಾಲದಲ್ಲಿ ಚಾಳುಕ್ಯ ಸಿಂಹಾಸನದ ಸಂಪಾದನೆಗಾಗಿ ಕೈಜೋಡಿಸಿದ ಎಲ್ಲಾ ಸಾಮಂತರಿಗೂ ಅಧಿಕಾರ ನೀಡಿ ತನ್ನ ಋಣ ತೀರಿಸುವ ಕೆಲಸ ಮಾಡಿದ. ಹಾಗಾಗಿ ಸೋಮೇಶ್ವರನ ಪರವಹಿಸಿದ್ದ ಸಾಮಂತರು ನಿರ್ವಹಿಸುತ್ತಿದ್ದ ಪ್ರದೇಶಗಳ ಆಡಳಿತವನ್ನು ಕಸಿದುಕೊಂಡು ತನ್ನ ನಿಷ್ಠೆಯ ಸಾಮಂತರಿಗೆ ಅವುಗಳ ಅಧಿಕಾರವನ್ನು ನೀಡಿದ. ನೊಳಂಬವಾಡಿ-೩೨೦೦೦ದ ಅಧಿಕಾರವನ್ನು ನೊಳಂಬ ಉದಯಾದಿತ್ಯನಿಂದ ಕಸಿದುಕೊಂಡು ತನಗೆ ಸಹಾಯ ಮಾಡಿದ ಉಚ್ಚಂಗಿ ಪಾಂಡ್ಯರಿಗೆ ನೀಡಿದ. ಗಂಗ ಅರಸರ ಕಾಲದಿಂದ ಇಲ್ಲಿಯವರೆಗೂ ಸುದೀರ್ಘ ಕಾಲ ಈ ನಾಡಿನ ಆಡಳಿತ ನಡೆಸಿದ ನೊಳಂಬ ಪಲ್ಲವರು ಸಹೋದರ ಕದನದಿಂದಾಗಿ ತಮ್ಮ ಅಸ್ತಿತ್ವವನ್ನು ಕಳೆದುಕೊಂಡರು. ತ್ರಿಭುವನಮಲ್ಲ ಪಾಂಡ್ಯ ವಿಕ್ರಮಾದಿತ್ಯನಿಂದ ತ್ರಿಭುವನಮಲ್ಲ ಎಂಬ ಬಿರುದನ್ನು ಪಡೆದು, ಕಂಚಿಪುರವರಧೀಶ್ವರ, ಯಧುವಂಶಾಂಭರದ್ವಿಮಣಿ, ಪಾಂಡ್ಯಕುಳಕಮಳಮಾರ್ತಂಡ, ಪರಿಚ್ಛೇದಿಗಂಡ, ರಾಜಿಗಚೋಳ ಮನೋಭಂಗ, ಮಹಾಮಂಡಳೇಶ್ವರ ತ್ರಿಭುವನಮಲ್ಲ ಪಾಂಡ್ಯ ನೊಳಂಬವಾಡಿ-೩೨೦೦೦ವನ್ನು ಉಳವಿ ನೆಲೆವೀಡಿನಿಂದ ಆಳುತ್ತಿರುವುದಾಗಿ ಕ್ರಿ.ಶ. ೧೦೭೯ರ ನೀಲಗುಂದ,[೬೭] ಬಾಗಳಿ[೬೮] ಶಾಸನಗಳು ಈ ಮನೆತನದ ಆರಂಭದ ಆಳ್ವಿಕೆಯ ಮಾಹಿತಿಯನ್ನು ಹೇಳುತ್ತವೆ.

ಈ ವೇಳೆಗೆ ನೊಳಂಬವಾಡಿ-೩೨೦೦೦ ಪ್ರದೇಶದ ವ್ಯಾಪ್ತಿ ನೊಳಂಬ ಪಲ್ಲವರ ಕಾಲಕ್ಕೆ ಇದ್ದಂತೆ ವಿಸ್ತಾರವಾಗಿರಲಿಲ್ಲ. ಕರ್ನಾಟಕದ ದಕ್ಷಿಣದಲ್ಲಿ ಚೋಳರ ಆಕ್ರಮಣ, ಚಾಳುಕ್ಯ ಸಹೋದರ ಅಂತಃಕಲಹದ ನಂತರ ಉಂಟಾದ ರಾಜಕೀಯ ಸಂಘರ್ಷದಿಂದ ಈ ಪ್ರಾಂತ್ಯದ ವ್ಯಾಪ್ತಿ ಈಗಿನ ಕರ್ನಾಟಕದ ಚಿತ್ರದುರ್ಗ, ದಾವಣಗೆರೆ, ಬಳ್ಳಾರಿ, ತುಮಕೂರು ಜಿಲ್ಲೆಯ ಶಿರಾ ತಾಲೂಕು, ನೊಳಂಬವಾಡಿ ಪ್ರದೇಶ ವ್ಯಾಪ್ತಿಯಾಗಿತ್ತು.

ಪಾಂಡ್ಯರ ಕಾಲದಲ್ಲಿ ನೊಳಂಬವಾಡಿ-೩೨೦೦೦ ಪ್ರಾಂತ್ಯದ ಆಡಳಿತ ವ್ಯಾಪ್ತಿಯ ಪೂರ್ವದಲ್ಲಿ ಹೊಯ್ಸಳರು ಗಂಗವಾಡಿ-೯೬೦೦೦, ನಿಡುಗಲ್ಲು ಚೋಳರು ರೊದ್ದ-೩೦೦, ಕರೆಕಲ್ಲು-೩೦೦, ಬಾಣರು ಅಳಂದ-೧೦೦೦, ಪುಲಿನಾಡು-೬೦ ಆಳುತ್ತಿದ್ದರು. ಪಶ್ಚಿಮಕ್ಕೆ ತುಂಗಭದ್ರಾ ನದಿ ನೊಳಂಬವಾಡಿಯ ಮೇರೆಯಾಗಿತ್ತು. ಅದರಾಚೆಗೆ ಸೇವುಣರು ಸೇಗುಣ ದೇಶ, ಪಳಿಯಂಡ-೮೦೦೦, ಹೊನ್ನವರ್ತಿ-೧೨, ಬೆಳಹುಗೆ'-೭೦, ಬೆಣ್ಣೆವೊರು-೧೨, ಗುತ್ತರು ಗುತ್ತವೊಳಲ್, ರಟರು, ಗೋವೆಯ ಕದಂಬರು, ಉತ್ತರಕ್ಕೆ ಕುರುಗೋಡಿನ ಸಿಂದರು, ಸಿಂದವಾಡಿ-೧೦೦೦ ಯಲಬುರ್ಗಿ ಸಿಂದರು ಕಿಸುಕಾಡು-೭೦ ಬೆಳಗುತ್ತಿ ಸಿಂದರು ಎಡನಾಡು-೭೦ನ್ನು ತರ್ದವಾಡಿ-೧೦೦೦ವನ್ನು ದಕ್ಷಿಣಕ್ಕೆ ಬನವಾಸಿ ಕದಂಬರು ಬನವಾಸಿ-೧೨೦೦೦, ಹಾನಗಲ್ಲು ಕದಂಬರು ಹಾನಗಲ್ಲು-೫೦೦ ಕೊನ್ತಕುಳಿ-೩೦, ಎಡೆನಾಡು-೭೦, ಏಲಂಬಿ-೭೦ ಅಳುಪರು ಕರ್ನಾಟಕದ ಕರಾವಳಿ ಮತ್ತು ಮಲೆನಾಡಿನ ಪ್ರದೇಶವನ್ನು ಸಾಂತರರು ಸಾಂತಳಿಗೆ-೧೦೦೦ ಮೊದಲಾದ ಪ್ರಾಚೀನ ಆಡಳಿತ ವಿಭಾಗಗಳ ಆಡಳಿತವನ್ನು ಚಾಳುಕ್ಯರ ಪಾದಪದ್ಮೋಪಜೀವಿಗಳಾಗಿ ತಮ್ಮ ತಮ್ಮ ಕ್ಷೇತ್ರಗಳಲ್ಲಿ ಇರುವಷ್ಟು ಕಾಲ ರಾಜ್ಯ ಪ್ರತಿನಿಧಿಗಳಾಗಿ ಅವರವರ ಆಡಳಿತ ಕ್ಷೇತ್ರದ ಸಾಂಸ್ಕೃತಿಕ ಚರಿತ್ರೆಗೆ ಮುನ್ನುಡಿ ಬರೆದರು.

**ಟಿಪ್ಪಣಿಗಳು**

೧. ಕ.ವಿ.ವಿ. ಶಾ.ಸಂ. ೧, ಶಾ.ಸಂ. ೩೪, ರಾಗಿಮಸಲವಾಡ, ಹರಪನಹಳ್ಳಿ, ಪು. ೪೮೯.

೨. EC=XI, ಶಾ.ಸಂ. ೫೬, ಹಿರೇಯಮ್ಮಿಗನೂರು, ಹೊಳಲಕೆರೆ, ಪು. ೩೪೯.

೩. ಅದೇ., ಶಾ.ಸಂ. ೨೪, ಕೃಷ್ಣಾಪುರ, ಜಗಳೂರು, ಪು. ೨೩೧.

೪. ಕ.ವಿ.ವಿ. ಶಾ.ಸಂ. ೨, ಶಾ.ಸಂ. ೧, ವಿಪ್ರ, ಗಂಗಾವತಿ, ಪು. ೩೧೩.

೫. ಸೋಮಶೇಖರ್ ಎಸ್.ವೈ., ಕರ್ನಾಟಕದ ದೇವಾಲಯ ಕೋಶ: ಚಿತ್ರದುರ್ಗ ಜಿಲ್ಲೆ, ಪು. ೧೮.

೬. ವಾಸುದೇವ ಬಡಿಗೇರ, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ, ಭಾಗ-೧, ಪು. ೪.

೭. ಅದೇ, ಪು. ೪.

೮. ನಾಯಕ ಹಾ.ಮಾ. (ಪ್ರ.ಸಂ.), ಕನ್ನಡ ವಿಷಯ ವಿಶ್ವಕೋಶ, ಪು. ೮೬೫-೯೭.

೯. ಕರ್ನಾಟಕ ರಾಜ್ಯ ಗ್ಯಾಜೆಟಿಯರ್, ಬಳ್ಳಾರಿ ಜಿಲ್ಲೆ, ಪು. ೫ - ೧೩.

೧೦. ವಾಸುದೇವ ಬಡಿಗೇರ, ಪೂರ್ವೋಕ್ತ, ಪು. ೪.

೧೧. ಸದಾಶಿವಪ್ಪ ಶ್ಯಾಗಲೆ (ಪ್ರ.ಸಂ.), ದಾವಣಗೆರೆ ಜಿಲ್ಲೆಯ ಒಂದು ಪಕ್ಷಿನೋಟ, ಪು. ೬.

೧೨. ವಾಸುದೇವ ಬಡಿಗೇರ, ಪೂರ್ವೋಕ್ತ, ಪು. ೪೬.

೧೩. ಸಾಮಕ್ ಎಸ್.ಜಿ., ಜಗದೀಶ, ರಮೇಶ ಜೋಯಿಸ್ ಎಂ.ವಿ., ೨೦೦೮, ಕದಂಬರ ಅರತಲಗದ್ದೆಯ ಅಪೂರ್ವ ತಾಮ್ರಶಾಸನಗಳ ಭಂಡಾರ, ಪು. ೩೬.

೧೪. ಅದೇ, ಪು. ೩೬

೧೫. ಅದೇ, ಪು. ೩೬

೧೬. ಅದೇ, ಪು. ೩೧.

೧೭. ಅದೇ, ಪು. ೩೩.

೧೮. ಜಯಮ್ಮ ಕರಿಯಣ್ಣ ಎಚ್., ನೊಳಂಬರ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೧೬.

೧೯. ಲಕ್ಷ್ಮಣ್ ತೆಲಗಾವಿ, ಹರತಿಸಿರಿ, ಪು. ೩೬೫.

೨೦. ನೆಲಮಂಗಲ ಲಕ್ಷ್ಮೀನಾರಾಯಣರಾಯರು, ಕರ್ನಾಟಕದ ಅರಸುಮನೆತನಗಳು, ಸಂಪುಟ-೧, ಪು. ೧೯೪.

೨೧. ಅದೇ, ೧೯೪.

೨೨. ಅದೇ, ೧೯೪

೨೩. ಅದೇ., ಪು. ೧೯೬

೨೪. ವಾಸುದೇವ ಬಡಿಗೇರ, ಪೂರ್ವೋಕ್ತ, ಪು. ೭೨.

೨೫. ಅದೇ, ೭೨.

೨೬. ಅದೇ, ೭೨.

೨೭. ನೆಲಮಂಗಲ ಲಕ್ಷ್ಮೀನಾರಾಯಣರಾಯರು, ಪೂರ್ವೋಕ್ತ, ಪು. ೨೦೧.

೨೮. ಕೇಶವಭಟ್ಟ, ಕರ್ನಾಟಕ ಇತಿಹಾಸ ದರ್ಶನ, ಪು. ೧೫೫.

೨೯. ನೆಲಮಂಗಲ ಲಕ್ಷ್ಮೀನಾರಾಯಣರಾಯರು, ಪೂರ್ವೋಕ್ತ, ಪು. ೨೦೩.

೩೦. ವಾಸುದೇವ ಬಡಿಗೇರ, ಪೂರ್ವೋಕ್ತ, ಪು. ೩೩.

೩೧. ಅದೇ, ೩೩.

೩೨. ನೆಲಮಂಗಲ ಲಕ್ಷ್ಮೀನಾರಾಯಣರಾಯರು, ಪೂರ್ವೋಕ್ತ, ಪು. ೨೦೫.

೩೩. ಕೇಶವಭಟ್ಟ, ಪೂರ್ವೋಕ್ತ, ಪು. ೧೫೬.

೩೪. ಜಯಮ್ಮ ಕರಿಯಣ್ಣ ಎಚ್., ಪೂರ್ವೋಕ್ತ, ಪು. ೪೫.

೩೫. ಕ.ವಿ.ವಿ. ಶಾ.ಸಂ. ೧, ಶಾ.ಸಂ. ೨೫, ಮೋರಗೆರೆ, ಹಗರಿಬೊಮ್ಮನಹಳ್ಳಿ.

೩೬. ಪೂರ್ವೋಕ್ತ, ಶಾ.ಸಂ. ೮೬, ಹೂವಿನಹಡಗಲಿ, ಹೂವಿನಹಡಗಲಿ.

೩೭. ಪೂರ್ವೋಕ್ತ, ಶಾ.ಸಂ. ೮೭, ಹೂವಿನಹಡಗಲಿ, ಹೂವಿನಹಡಗಲಿ.

೩೮. ಪೂರ್ವೋಕ್ತ, ಶಾ.ಸಂ. ೦೬, ಉಚ್ಚಂಗಿದುರ್ಗ, ಹರಪನಹಳ್ಳಿ.

೩೯. ಪೂರ್ವೋಕ್ತ, ಶಾ.ಸಂ. ೯೦, ಹಾರಕನಾಳು, ಹರಪನಹಳ್ಳಿ.

೪೦. ಪೂರ್ವೋಕ್ತ, ಶಾ.ಸಂ. ೨೦೯, ಕೆರೆಗುಡಿಹಳ್ಳಿ, ಹರಪನಹಳ್ಳಿ.

೪೧. ಜಯಮ್ಮ ಕರಿಯಣ್ಣ ಎಚ್., ಪೂರ್ವೋಕ್ತ, ಪು. ೫೪.

೪೨. ಕ.ವಿ.ವಿ. ಶಾ.ಸಂ. ೧, ಶಾ.ಸಂ. ೧೩೨, ಬಾಗಳಿ, ಹರಪನಹಳ್ಳಿ.

೪೩. ನಾಗಯ್ಯ ಜೆ.ಎಂ., ಪೂರ್ವೋಕ್ತ, ಪು. ೧೦.

೪೪. ಅದೇ, ಪು. ೧೨.

೪೫. ಅದೇ, ಪು. ೧೩.

೪೬. ಎ.ಕ. ಸಂ-೧೦, ಶಾ.ಸಂ. ೩೨೧, ಕಾಟಿಕೆರೆ, ಅರಸೀಕೆರೆ.

೪೭. ಕ.ವಿ.ವಿ. ಶಾ.ಸಂ. ೧, ಶಾ.ಸಂ. ೮೮, ನೀಲಗುಂದ, ಹರಪನಹಳ್ಳಿ.

೪೮. ಪೂರ್ವೋಕ್ತ, ಶಾ.ಸಂ. ೧೨೨, ಬಾಗಳಿ, ಹರಪನಹಳ್ಳಿ.



ಅಧ್ಯಾಯ : ಮೂರು

# ರಾಜಕೀಯ ಇತಿಹಾಸ

೩.೧. ಪಾಂಡ್ಯ ಅರಸರ ಮೂಲ ಮತ್ತು ವಂಶಾವಳಿ

೩.೨. ಅರಸರ ಜೀವನ ಮತ್ತು ಸಾಧನೆಗಳು

೩.೩. ಆಡಳಿತ ವ್ಯವಸ್ಥೆ

## ಅಧ್ಯಾಯ : ಮೂರು

# ರಾಜಕೀಯ ಇತಿಹಾಸ

### ೩.೧. ಪಾಂಡ್ಯರ ಮೂಲ ಮತ್ತು ವಂಶಾವಳಿ

ದಕ್ಷಿಣ ಭಾರತದ ಪ್ರಾಚೀನ ತಮಿಳು ರಾಜವಂಶಗಳಲ್ಲಿ ಪಾಂಡ್ಯ ವಂಶವೂ ಒಂದು. ದಕ್ಷಿಣ ಭಾರತದ ಒಂದು ಭಾಗದಲ್ಲಿ ಶಾತವಾಹನರು ಅಧಿಕಾರರೂಢರಾಗಿದ್ದಾಗ ಚೇರ, ಚೋಳ, ಪಲ್ಲವ ಮತ್ತು ಪಾಂಡ್ಯ ಅರಸು ಮನೆತನಗಳು ದಕ್ಷಿಣದ ಇತರ ಭಾಗಗಳಲ್ಲಿ ಆಳುತ್ತಿದ್ದರು. ಕ್ರಿಪೂ. ೪ನೇ ಶತಮಾನದಿಂದ ಕ್ರಿ.ಶ. ೧೬ನೇ ಶತಮಾನದ ಮೊದಲಾರ್ಧದವರೆಗೂ ಚರಿತ್ರೆಯ ಪುಟಗಳಲ್ಲಿ ಕಾಣಿಸಿಕೊಳ್ಳುತ್ತಾರೆ. ದಕ್ಷಿಣ ಭಾರತದ ತಮಿಳು ಪ್ರದೇಶದಲ್ಲಿದ್ದ ಈ ವಂಶಗಳ ಮೂಲಕ್ಕೆ ಸೇರಿದ್ದ ಕೆಲವು ಶಾಖೆಗಳು ಕರ್ನಾಟಕದ ಚರಿತ್ರೆಯಲ್ಲಿ ಕ್ರಿ.ಶ. ೧೦ನೇ ಶತಮಾನದ ನಂತರ ವಿವಿಧ ಆಡಳಿತ ವಿಭಾಗಗಳಲ್ಲಿ ಮಹಾಮಂಡಳೇಶ್ವರರಾಗಿ, ಸಾಮಂತರಾಗಿ ಆಡಳಿತ ನಡೆಸಿರುವುದು ಕಂಡುಬರುತ್ತದೆ. ಪಾಂಡ್ಯರು ಆರಂಭದಲ್ಲಿ ಇಂಡಿಯನ್ ಪೆನಿನ್ಸುಲಾದ ದಕ್ಷಿಣ ತುದಿಯಲ್ಲಿರುವ ಕೊರ್ಕೈ ಎಂಬ ಕಡಲತಡಿಯಿಂದ ಪಾಂಡ್ಯನಾಡನ್ನು ಆಳಿದರು.[೧] ನಂತರದ ದಿನಗಳಲ್ಲಿ ಮಧುರೈ ಇವರ ಆಡಳಿತ ಕೇಂದ್ರವಾಯಿತು. ಮತ್ಸ್ಯ (ಮೀನು) ಅವರ ರಾಜಲಾಂಛನ; ಪಾಂಡ್ಯರು ನೀರಿನ ನಿರ್ವಹಣೆ, ಕೃಷಿ ಮತ್ತು ಮೀನುಗಾರಿಕೆಯಲ್ಲಿ ಪರಿಣಿತರಾಗಿದ್ದರು. ಇವರು ಶ್ರೇಷ್ಠ ನಾವಿಕರು ಮತ್ತು ಸಮುದ್ರ ವ್ಯಾಪಾರಿಗಳಾಗಿದ್ದರು. ಪ್ರಾಚೀನ ಕಾಲದಿಂದಲೂ ಪಾಂಡ್ಯರು ರೋಮನ್ ಸಾಮ್ರಾಜ್ಯದೊಂದಿಗೆ ಸಂಪರ್ಕ ಹೊಂದಿ ಪ್ರಸಿದ್ಧರಾಗಿದ್ದರು.[೨] ಪಾಂಡ್ಯ ರಾಜರನ್ನು ಜಾತವರ್ಮನ್ ಅಥವಾ ಮರವರ್ಮನ್ ಎಂದು ಕರೆಯಲಾಗುತ್ತಿತ್ತು. ಅವರು ಆರಂಭದಲ್ಲಿ ಜೈನರಾಗಿದ್ದರು. ಆದರೆ ನಂತರ ಶೈವರಾದರು.

ಪ್ರಾಚೀನ ಸಾಹಿತ್ಯ ಕೃತಿಗಳು, ಸಂಗಮ್ ಸಾಹಿತ್ಯ, ಕೆಲವು ತಾಮ್ರ ಮತ್ತು ಶಿಲಾಶಾಸನಗಳು ಹಾಗೂ ವಿದೇಶಿ ಯಾತ್ರಿಕರ ಬರವಣಿಗೆಗಳು ಪಾಂಡ್ಯ ರಾಜವಂಶದ ಮೇಲೆ ಬೆಳಕು ಚೆಲ್ಲುತ್ತವೆ. ಸಾಹಿತ್ಯವನ್ನು ಸೃಷ್ಟಿಸುವ ಒಂದು ಸಂಸ್ಥೆಯಾಗಿದ್ದ ಸಂಗಮ್ ಪಾಂಡ್ಯರಾಜರ ಪೋಷಣೆಗೆ ಒಳಪಟ್ಟಿತ್ತೆಂದು ತಿಳಿದುಬರುತ್ತದೆ.[೩] ನೆಡುಂಚಳಿಯನ್ ಎಂಬ ಪ್ರಸಿದ್ಧ ಪಾಂಡ್ಯ ದೊರೆ, ಚೇರ, ಚೋಳ ರಾಜರನ್ನು ತಲಾಯಲಂಗನಮ್ ಎಂಬಲ್ಲಿ ಸೋಲಿಸಿದನೆಂದು ಸಂಗಮ್ ಕೃತಿ

ತಿಳಿಸುತ್ತದೆ. ಈತ ಸು. ೨೧೦ರಲ್ಲಿ ಆಳುತ್ತಿದ್ದನೆಂದು ಇತಿಹಾಸಕಾರರ ಅಭಿಪ್ರಾಯ. ಇವನು ಕವಿಗಳಿಗೆ ಉದಾರಾಶ್ರಯ ನೀಡಿದ್ದ ಇವನಿಂದ ಹಿಂದೂ ಧರ್ಮಕ್ಕೆ ಪ್ರೋತ್ಸಾಹ ದೊರಕಿತು. ಇವನ ಕಾಲದಲ್ಲಿ ಹೊರದೇಶಗಳೊಡನೆ ವ್ಯಾಪಾರ ಸಾಗುತ್ತಿತ್ತು.[೪]

ಮೌರ್ಯ ಚಕ್ರವರ್ತಿ ಅಶೋಕನ ಸ್ತಂಭ ಶಾಸನಗಳಲ್ಲಿ ಮತ್ತು ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಪಾಂಡ್ಯರ ಉಲ್ಲೇಖವಿದೆ.[೫](ದಕ್ಷಿಣ ಭಾರತದ ಜನರಾದ ಚೋಳರು, ಚೇರರು, ಪಾಂಡ್ಯರು ಮತ್ತು ಸತಿಪುತ್ರರು ಬೌದ್ಧ ಧರ್ಮ ಪ್ರಚಾರಕವನ್ನು ಸ್ವೀಕರಿಸಿದರು ಎಂದು ಉಲ್ಲೇಖಿಸಲಾಗಿದೆ) ಕ್ರಿಪೂ. ೧ ಮತ್ತು ೨ನೇ ಶತಮಾನದವರೆಗೆ ಬ್ರಾಹ್ಮಿಮಂಗಲಂ ಶಾಸನದಲ್ಲಿ ಕಾಣಿಸಿಕೊಂಡಿರುವ ನೆಡುಂಜಲಿಯನ್ ಪ್ರಾಚೀನ ಪಾಂಡ್ಯರಾಜ ಜೈನ ಸನ್ಯಾಸಿಗೆ ರಾಕ್‌ಕಟ ಹಾಸಿಗೆಗಳನ್ನು ಉಡುಗೊರೆಯಾಗಿ ನೀಡಿರುವುದು ಶಾಸನಗಳಿಂದ ತಿಳಿಯುತ್ತದೆ. ಅದೇ ಸಮಯದಲ್ಲಿ ಪಾಂಡ್ಯ ದೇಶದಲ್ಲಿರುವ ಮೀನು ಚಿಹ್ನೆಯ ಸಿಲ್ವರ ನಾಣ್ಯಗಳು ಸಹ ಕಂಡು ಬಂದಿವೆ.[೬]

ಕ್ರಿಪೂ. ೩ನೇ ಶತಮಾನದಲ್ಲಿ ಆಡಳಿತ ನಡೆಸಿದ ಕಳಿಂಗ ರಾಜನು ತನ್ನ 'ಹತಿಗುಂಪಾ' ಶಿಲಾಶಾಸನದಲ್ಲಿ ೧೩೨ ವರ್ಷಗಳ ಕಾಲ ನಡೆದ ತಮಿಳು ರಾಜ್ಯಗಳ ಒಕ್ಕೂಟಗಳನ್ನು ನಾಶಪಡಿಸಿದ್ದಾರೆ ಮತ್ತು ಪಾಂಡ್ಯರ ದೊಡ್ಡ ಪ್ರಮಾಣದ ಮುತ್ತುಗಳನ್ನು ಸ್ವಾಧೀನಪಡಿಸಿ ಕೊಂಡಿರುವುದಾಗಿ ಹೇಳಿಕೊಳ್ಳುತ್ತಾನೆ.[೭]

ಕ್ರಿಪೂ. ೩೦೦ರಲ್ಲಿ ಮೆಗಾಸ್ತನೀಸ್ ತನ್ನ ಇಂಡಿಕಾ ಗ್ರಂಥದಲ್ಲಿ ಪಾಂಡ್ಯರು ದಕ್ಷಿಣ ಭಾರತದಲ್ಲಿ ನೆಲಸಿ ಸಮುದ್ರಕ್ಕೆ ವಿಸ್ತರಿಸಿರುವ ಭಾರತದ ಭಾಗವನ್ನು ಆಕ್ರಮಿಸಿಕೊಂಡಿದ್ದಾರೆ. ಆ ಸಮಯದಲ್ಲಿ ಪಾಂಡ್ಯ ರಾಣಿಯನ್ನು ಹೆರಾಕಲ್ಸ್ನ ಪುತ್ರಿ ಎಂದು ವರ್ಣಿಸಿದ್ದಾರೆ. ೧೩ನೇ ಶತಮಾನದ ನಂತರ ವೆನಿಸ್‌ನ ಪ್ರವಾಸಿಗ ಮಾರ್ಕೊ ಪೊಲೋ, ಪಾಂಡ್ಯ ಸಾಮ್ರಾಜ್ಯಕ್ಕೆ ಭೇಟಿ ನೀಡಿ ಅಲ್ಲಿನ ಭೂಮಿ ಮತ್ತು ಅದರ ಜನರ ಬಗ್ಗೆ ಸ್ಪಷ್ಟವಾಗಿ ವಿವರಣೆಯನ್ನು ದಾಖಲಿಸಿದ್ದಾನೆ.[೮]

೬ನೆಯ ಶತಮಾನದಲ್ಲಿ ದಕ್ಷಿಣ ಭಾರತಕ್ಕೆ ಭೇಟಿ ನೀಡಿದ ಚೀನಿ ಯಾತ್ರಿಕ ಯುವಾನ್‌ಚಾಂಗ್ ಪಾಂಡ್ಯರ ಪ್ರದೇಶವನ್ನು ಮೂಲಕೂಟವೆಂದೂ, ಇಲ್ಲಿನ ಜನರು ವ್ಯಾಪಾರದಲ್ಲಿ ಆಸಕ್ತಿಯುಳ್ಳ ವರಾಗಿದ್ದರೆಂದೂ ತಿಳಿಸಿದ್ದಾನೆ. ಬೌದ್ಧ ಧರ್ಮ ಪಾಂಡ್ಯರ ರಾಜ್ಯದಲ್ಲಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿತ್ತೆಂದೂ ಹೇಳಿದ್ದಾನೆ. ಈ ಹೇಳಿಕೆಯಿಂದ ಪಾಂಡ್ಯ ರಾಜ್ಯದಲ್ಲಿ ಜೈನ ದಿಗಂಬರ ಪಂಥವರು ಹೆಚ್ಚು ಸಂಖ್ಯೆಯಲ್ಲಿದ್ದರೆಂದು ತಿಳಿದು ಬರುತ್ತದೆ.[೯]

ಬೈಜಾಂಟಿಯನ್ ಚಕ್ರವರ್ತಿ ಜೂಲಿಯನ್ ಪಾಂಡ್ಯರ ರಾಯಭಾರಿಗೆ ಆದರಾತಿಥ್ಯ ನೀಡಿ ೩೬೧ ಬಗೆಯ ರಾಯಭಾರವನ್ನು ಪಡೆದನೆಂದು ತಿಳಿದುಬರುತ್ತದೆ. ಹೀಗೆ ಚರಿತ್ರೆಯ ಆಕರಗಳಲ್ಲಿ ಕಾಣಿಸಿಕೊಳ್ಳುವ ಪಾಂಡ್ಯರು ಸಂಗಮ್ ಯುಗದ ನಂತರ ಕಳಭರರ ಆಕ್ರಮಣದಿಂದಾಗಿ ಮರೆಯಾದರು. ಪುನಃ ೬ನೇ ಶತಮಾನದ ಆರಂಭದಲ್ಲಿ ಕಂಡುಂಗಾನ್ ಕಾಲದಲ್ಲಿ ಪುನರುಜ್ಜೀವನ ಗೊಂಡ ಪಾಂಡ್ಯ ಮನೆತನವು ಕಳಭರನ್ನು ತಮಿಳು ದೇಶದಿಂದ ಹೊರಹಾಕಿ ಮತ್ತೆ ಮಧುರೈನಿಂದ ಆಳಲ್ಪಟ್ಟಿತು.

ಕ್ರಿ.ಶ. ೯೧೫ರಲ್ಲಿ ನಡೆದ ವೆಲ್ಲೂರಿನ ಯುದ್ಧದಲ್ಲಿ ಪಾಂಡ್ಯ ಅರಸ ೨ನೆಯ ಮಾರವರ್ಮನ್ ರಾಜಸಿಂಹ ಚೋಳರ ದೊರೆ ೧ನೆಯ ಪರಾಂತಕನಿಂದ ಸೋತು ಸಿಂಹಳಕ್ಕೆ ಓಡಿಹೋದ. ಪರಾಂತಕ ಮಧುರೈಕೊಂಡ ಎಂಬ ಬಿರುದನ್ನು ಧರಿಸಿದನು. ವೆಲ್ಲೂರು ಯುದ್ಧದ ನಂತರ ಸುಮಾರು ೩೦ ವರ್ಷಗಳ ಕಾಲ ಪಾಂಡ್ಯರು ಚೋಳರ ಸಾರ್ವಭೌಮತ್ವವನ್ನು ಒಪ್ಪಿಕೊಂಡರು. ಚೋಳರಿಗೂ ಪಾಂಡ್ಯರಿಗೂ ಆಗಾಗ್ಗೆ ಯುದ್ಧಗಳು ನಡೆಯುತ್ತಲೇ ಇದ್ದವು. ೧೧ನೆಯ ಶತಮಾನದ ಅಂತ್ಯ ಭಾಗದಲ್ಲಿ ಪಾಂಡ್ಯರು ಮತ್ತೆ ಪ್ರಬಲರಾಗಲು ಪ್ರಯತ್ನಿಸಿದರು. ಆದರೆ ಚೋಳ ದೊರೆ ೧ನೇ ಕುಲೋತ್ತುಂಗ ಅವರ ಪ್ರಯತ್ನವನ್ನು ಭಂಗಗೊಳಿಸಿದ. ಪ್ರಾಯಶಃ ಕೆಲವು ಪಾಂಡ್ಯರು ಇಂತಹ ಸಂದಿಗ್ಧ ಸಂದರ್ಭದಲ್ಲಿ ನೆಲೆ ಕಳೆದುಕೊಂಡು ತಮ್ಮ ರಾಜಕೀಯ ನೆಲೆಯನ್ನು ಕಂಡುಕೊಳ್ಳಲು ಕರ್ನಾಟಕದ ಪಶ್ಚಿಮ ಕರಾವಳಿ ಭಾಗಕ್ಕೆ ವಲಸೆ ಬಂದಿರುವ ಸಾಧ್ಯತೆ ಇದೆ.

ಕ್ರಿ.ಶ. ೧೨೧೬ರ ನಂತರ ಮಾರವರ್ಮನ್ ಸುಂದರಪಾಂಡ್ಯ, ಜಟಾವರ್ಮನ್ ಸುಂದರ ಪಾಂಡ್ಯನ ಕಾಲದಲ್ಲಿ ಪಾಂಡ್ಯರು ಪುನಃ ತಮ್ಮ ಯುಗವನ್ನು ಆರಂಭಿಸಿ ಸಾಮ್ರಾಜ್ಯವನ್ನು ತೆಲುಗು ದೇಶಕ್ಕೆ ವಿಸ್ತರಿಸಿದರು. ಈ ಅವಧಿಯಲ್ಲಿ ಪಾಂಡ್ಯರು ಚೋಳರು, ಸಿಂಹಳಿಯರು, ಹೊಯ್ಸಳರು ಮತ್ತು ದೆಹಲಿ ಸುಲ್ತಾನರನ್ನು ವಿರೋಧಿಸುತ್ತಿದ್ದರು. ಘಿಯಾಸುದ್ದೀನ್ ತೊಗಲಕ್ ದಕ್ಷಿಣದ ರಾಜ್ಯಗಳನ್ನು ನಾಶಗೊಳಿಸಲು ತನ್ನ ಮಗನಾದ ಉಲಘ್‌ಖಾನನನ್ನು ಕಳುಹಿಸಿಕೊಟ್ಟ. ಇವನು ಪಾಂಡ್ಯ ರಾಜ್ಯದ ಮೇಲೆ ದಾಳಿ ನಡೆಸಿ ಪರಾಕ್ರಮದೇವನನ್ನು ಸೆರೆಹಿಡಿದ. ಈ ಘಟನೆಯೊಂದಿಗೆ ಪಾಂಡ್ಯರ ರಾಜ್ಯ ಆಳ್ವಿಕೆ ನಿರ್ನಾಮವಾಯಿತು.[೧೦]

ದಕ್ಷಿಣ ಭಾರತದ ಪ್ರಾಚೀನ ಪಾಂಡ್ಯ ರಾಜಮನೆತನದ ಮೂಲಕ್ಕೆ ಸೇರಿದ ಉಚ್ಚಂಗಿ ಪಾಂಡ್ಯರು, ಶಿಸುಗಲಿ ಪಾಂಡ್ಯರು, ನೂರಂಬಡದ ಪಾಂಡ್ಯರು, ಅಳುಪರು ಎಂಬ ಶಾಖೆಗಳು ಕರ್ನಾಟಕ ಚರಿತ್ರೆಯಲ್ಲಿ ಕಲ್ಯಾಣದ ಚಾಳುಕ್ಯರ ಸಾಮಂತ ಮಹಾಮಂಡಳೇಶ್ವರರಾಗಿ ಆಡಳಿತ ನಡೆಸಿರುವುದು ಕಂಡುಬರುತ್ತದೆ. ಚಾಳುಕ್ಯ ನಂತರ ಹೊಯ್ಸಳ, ಯಾದವರ ಆಡಳಿತದಲ್ಲಿ ಸಾಮಂತರಾಗಿ ಆಳಿದರು.

### ಉಚ್ಚಂಗಿ ಪಾಂಡ್ಯರ ಮೂಲ

ದಕ್ಷಿಣ ಕರ್ನಾಟಕದ ರಾಜಕೀಯ ಇತಿಹಾಸದಲ್ಲಿ ಕಲ್ಯಾಣ ಚಾಳುಕ್ಯರ ಆಡಳಿತದಲ್ಲಿ ಸಾಮಂತ ಮಹಾಮಂಡಳೇಶ್ವರರಾಗಿ ಉಚ್ಚಂಗಿ ಪಾಂಡ್ಯರು ಮತ್ತು ಇತರ ಪಾಂಡ್ಯ ಮನೆತನಗಳು ಕಾಣಿಸಿಕೊಳ್ಳುತ್ತವೆ. ದಿನಕರ ದೇಸಾಯಿಯವರು "ಮಹಾಮಂಡಳೇಶ್ವರ ಅಂಡರ್ ದಿ ಚಾಳುಕ್ಯಾಸ್ ಆಫ್ ಕಲ್ಯಾಣ" ಎಂಬ ತಮ್ಮ ಸಂಶೋಧನ ಕೃತಿಯ ಅಧ್ಯಾಯ-೫ ಮತ್ತು ೬ರಲ್ಲಿ ಕರ್ನಾಟಕದಲ್ಲಿ ಆಡಳಿತ ನಡೆಸಿದ ಮೂರು ಪಾಂಡ್ಯ ಮನೆತನಗಳನ್ನು ಗುರುತಿಸಿದ್ದಾರೆ. ೧. ಉಚ್ಚಂಗಿ ಪಾಂಡ್ಯರು, ೨. ನೊಳಂಬವಾಡಿ ಪಾಂಡ್ಯರು, ೩. ಹೈಹಯ ಪಾಂಡರು. ಬಿ.ಎಲ್. ರೈಸರು ೧. ಉಚ್ಚಂಗಿ ಪಾಂಡ್ಯರು, ೨. ಹೈವೆ ಅಥವಾ ಶಿಸುಗಲಿ ಪಾಂಡ್ಯರು ಎಂಬ ಎರಡು ಮನೆತನಗಳನ್ನು ಗುರುತಿಸಿದ್ದಾರೆ.

ಗಣಪತಿಗೌಡ ಅವರ ಶಿಸುಗಲಿ ಪಾಂಡ್ಯರು ಮತ್ತು ಚಂದಾವರ ಕದಂಬರು ಎಂಬ ಕೃತಿಯಲ್ಲಿ ೧. ಉಚ್ಚಂಗಿ ಪಾಂಡ್ಯರು ೨. ಹೈವೆಯ ಅಥವಾ ಶಿಸುಗಲಿ ಪಾಂಡ್ಯರು ೩. ನೂರುಂಬಾಡದ ಪಾಂಡ್ಯರು ಎಂಬ ಮೂರು ಶಾಖೆಗಳನ್ನು ಗುರುತಿಸಿದ್ದಾರೆ. ದಿನಕರ ದೇಸಾಯಿ ಅವರು ಗುರುತಿಸುವ ಉಚ್ಚಂಗಿ ಪಾಂಡ್ಯರು ಮತ್ತು ನೊಳಂಬವಾಡಿ ಪಾಂಡ್ಯರು ಎರಡು ಶಾಖೆಗಳ ಮಧ್ಯೆ ಯಾವುದೇ ಭಿನ್ನತೆಗಳು ಇಲ್ಲ. ಎರಡು ಶಾಖೆಗಳು ಒಂದೇ ಮನೆತನಕ್ಕೆ ಸೇರಿವೆ. ಈ ಎರಡು ಶಾಖೆಗಳನ್ನು ಕ್ರೋಢೀಕರಿಸಿ ಉಚ್ಚಂಗಿ ಪಾಂಡ್ಯರೆಂದು ಇವರು ನೊಳಂಬವಾಡಿ–೩೨೦೦೦ ಆಡಳಿತ ಘಟಕದ ಮಹಾಮಂಡಳೇಶ್ವರರಾಗಿ ಆಡಳಿತ ನಡೆಸಿದರು ಎಂಬುದರಲ್ಲಿ ಯಾವುದೇ ಭಿನ್ನತೆಗಳು ಇಲ್ಲ. ನೂರುಂಬಾಡದ ಪಾಂಡ್ಯರನ್ನು ನೂರುಂಬಾಡದ ಕದಂಬರು ಎಂದು ಕದಂಬ ಶಾಸನಗಳಲ್ಲಿ ಗುರುತಿಸಲಾಗಿದೆ. ಅಳುಪರು ಮತ್ತು ಕಳಸದ ಭೈರರಸ ತಮ್ಮನ್ನು ಪಾಂಡ್ಯರೆಂದು ಕರೆದುಕೊಂಡಿದ್ದಾರೆ. ಉಚ್ಚಂಗಿ ಪಾಂಡ್ಯರು, ನೊಳಂಬವಾಡಿ–೩೨೦೦೦ ಪ್ರದೇಶ ಚಿತ್ರದುರ್ಗ, ದಾವಣಗೆರೆ, ಬಳ್ಳಾರಿ, ತುಮಕೂರು ಜಿಲ್ಲೆಗಳಲ್ಲಿ, ಹೈಹ ಪಾಂಡ್ಯರು ಅಥವಾ ಶಿಸುಗಲಿ ಪಾಂಡ್ಯರು ಉತ್ತರ ಕನ್ನಡ, ದಕ್ಷಿಣ ಕನ್ನಡ, ಶಿವಮೊಗ್ಗ ಮತ್ತು ಕರಾವಳಿ ಭಾಗದಲ್ಲಿ ನೂರುಂಬಾಡದ ಪಾಂಡ್ಯರು, ಹಾವೇರಿ, ಧಾರವಾಡ ಭಾಗದಲ್ಲಿ ಕಲ್ಯಾಣದ ಚಾಳುಕ್ಯ ಅರಸರ ಸಾಮಂತ ಮಹಾಮಂಡಳೇಶ್ವರರಾಗಿ ಆಡಳಿತ ನಡೆಸಿರುವುದನ್ನು ಈ ಭಾಗದಲ್ಲಿ ದೊರೆತ ಶಾಸನಗಳು ಹಾಗೂ ಪಾಂಡ್ಯರನ್ನು ಕುರಿತು ಪ್ರಕಟಗೊಂಡ ಸಂಶೋಧನ ಬರಹಗಳು ದಾಖಲಿಸಿವೆ.

ಕ್ರಿ.ಶ. ೧೦ನೇ ಶತಮಾನದಿಂದ ೧೨ನೇ ಶತಮಾನದವರೆಗೆ ಆಡಳಿತ ನಡೆಸಿದ ಈ ಪಾಂಡ್ಯ ಮನೆತನದವರು. ಇವರು ಯಾರು? ಎಲ್ಲಿಂದ? ಮತ್ತು ಯಾವಾಗ ಕರ್ನಾಟಕಕ್ಕೆ ಬಂದರೆನ್ನುವುದಕ್ಕೆ ಎಲ್ಲಿಯೂ ನಿಖರವಾದ ಮಾಹಿತಿಗಳಿಲ್ಲ. ಈವರೆಗೂ ನಡೆದ ಅಧ್ಯಯನಗಳು ಉಚ್ಚಂಗಿ ಪಾಂಡ್ಯರು, ದಕ್ಷಿಣ ಭಾರತದ ತಮಿಳುನಾಡಿನ ಪ್ರಾಚೀನ ಅರಸು ಮನೆತನವಾದ "ಪಾಂಡ್ಯ"(ಮಧುರೆಯ ಪಾಂಡ್ಯ) ಮನೆತನಕ್ಕೆ ಸೇರಿದವರೆಂದು ದಾಖಲಿಸಿವೆ. ಈ ಪಾಂಡ್ಯ ವಂಶಿಯರು ತಮಿಳುನಾಡಿನಿಂದ ವಲಸೆ ಹೊರಟು ಸಪ್ತಕೊಂಕಣದಲ್ಲಿ ಒಂದಾದ ಹೈಹ ಪ್ರದೇಶಕ್ಕೆ ಬಂದು ನೆಲೆಸಿದರು. ಪಶ್ಚಿಮ ಚಾಳುಕ್ಯ ಅರಸ ಜಯಸಿಂಹನು ಸಪ್ತಕೊಂಕಣಗಳನ್ನು ಜಯಸಿದಾಗ ಹೈಹೆಯಲ್ಲಿದ್ದ ಉಚ್ಚಂಗಿ ಪಾಂಡ್ಯರು ಕದಂಬಳಿಗೆ–೧೦೦೦ ಪ್ರಾಂತ್ಯವಾದ ಉಚ್ಚಂಗಿಗೆ ತೆರಳಿದರು.[೧೧] ನಂತರ ೬ನೇ ವಿಕ್ರಮಾದಿತ್ಯನ ಆಡಳಿತದಲ್ಲಿ ಅಧಿಕಾರಕ್ಕೆ ಬಂದು ನೊಳಂಬವಾಡಿ–೩೨೦೦೦ ಪ್ರಾಂತ್ಯದ ಮಹಾಮಂಡಳೇಶ್ವರರಾಗಿ ಹೊಯ್ಸಳರ ಆಡಳಿತದಲ್ಲಿ ಮುಂದುವರೆದರು.

ತಮ್ಮ ಮೂಲ ನೆಲೆಯಾದ ತಮಿಳುನಾಡಿನಿಂದ ವಲಸೆ ಬರಲು ಎರಡು ಕಾರಣಗಳಿವೆ: ೧. ರಾಜಕೀಯ, ೨. ವ್ಯಾಪಾರ.

**೧. ರಾಜಕೀಯ:** ದಕ್ಷಿಣ ಭಾರತದ ಸಾರ್ವಭೌಮತ್ವಕ್ಕಾಗಿ ಪಲ್ಲವ, ಚೋಳ ಮತ್ತು ಪಾಂಡ್ಯರ ಮಧ್ಯೆ ನಡೆದಂತಹ ರಾಜಕೀಯ ಹೋರಾಟದಲ್ಲಿ ನೆಲೆ ಕಳೆದುಕೊಂಡವರು ರಾಜಕೀಯ

ನೆಲೆಯನ್ನು ಹುಡುಕುತ್ತಾ ಕರ್ನಾಟಕಕ್ಕೆ ಬಂದಿರುವ ಸಾಧ್ಯತೆ ಇದೆ. ಈ ಮೂರು ಮನೆತನಗಳು ಕರ್ನಾಟಕದಲ್ಲಿ ನೆಲೆ ಕಂಡುಕೊಂಡಿವೆ. ಪಲ್ಲವ ಶಾಖೆಯಿಂದ ನೊಳಂಬ ಪಲ್ಲವರು, ಚೋಳ ಶಾಖೆಯಿಂದ ನಿಡುಗಲ್ ಚೋಳರು. ಪಾಂಡ್ಯ ಶಾಖೆಯಿಂದ ಉಚ್ಚಂಗಿ ಪಾಂಡ್ಯರು, ಶಿಸುಗಲಿ ಪಾಂಡ್ಯರು, ಆಳುಪರು, ಸಾಂತರರು.

ಸಾಮ್ರಾಜ್ಯದ ವಿಸ್ತರಣೆಗಾಗಿ ಮತ್ತು ಅರಸನ ಪ್ರತಿಷ್ಠೆಗಾಗಿ ಕೈಗೊಂಡ ವಿಜಯಯಾತ್ರೆಗಳಲ್ಲಿ ತಾವು ಜಯ ಸಾಧಿಸಿದ ಪ್ರದೇಶದ ಸಂಪತ್ತು ಮತ್ತು ಸೈನಿಕರು ಪ್ರಜೆಗಳನ್ನು ಸೆರೆಹಿಡಿದು ತರುವ ಕ್ರಮ ನಿರಂತರವಾಗಿ ನಡೆದಿದೆ. ಸೆರೆಹಿಡಿದು ತಂದ ಸೈನಿಕರು ತಮ್ಮ ಶಕ್ತಿ ಸಾಮರ್ಥ್ಯ ಹಾಗೂ ಸ್ವಾಮಿನಿಷ್ಠೆಯಿಂದ ಪ್ರಭುತ್ವದ ನೆಲೆ ಕಂಡುಕೊಂಡಿರುವ ಉದಾಹರಣೆಗಳು ರಾಜಕೀಯ ಚರಿತ್ರೆಯಲ್ಲಿವೆ.

ಬಾದಾಮಿ ಚಾಳುಕ್ಯರು ಆರಂಭದಿಂದಲೂ ಪಾಂಡ್ಯ ರಾಜ್ಯದ ಮೇಲೆ ದಾಳಿ ಮಾಡಿ ವಿಜಯ ಸಾಧಿಸಿರುವುದನ್ನು ಶಾಸನಗಳು ತಿಳಿಸುತ್ತವೆ. ಮಹಾಕೂಟದ ಶಾಸನವು ವಂಗ, ಅಂಗ, ಕಳಿಂಗ ಮತ್ತು ಮಗಧ, ಮದ್ರಕ, ಕೇರಳ, ಗಂಗ, ಮುಸುಕ, ಪಾಂಡ್ಯ ದ್ರಾಮಿಳ, ಚೋಳಿಯ, ಅಲುಕ ಮತ್ತು ವೈಜಯಂತಿ ರಾಜರನ್ನು ಜಯಿಸಿದ ಬಗ್ಗೆ ಮಾಹಿತಿ ನೀಡುತ್ತದೆ.[೧೨] ಇಮ್ಮಡಿ ಪುಲಕೇಶಿ ಕಾವೇರಿ ನದಿಯನ್ನು ದಾಟಿ ಚೋಳ ರಾಜ್ಯಕ್ಕೆ ದಾಳಿಯಿಟ್ಟನು. ಚೋಳರು, ಕೇರಳರು, ಪಾಂಡ್ಯರು ಪುಲಿಕೇಶಿಯ ಗರಿಮೆಯನ್ನು ಒಪ್ಪಿ ಅವನ ಮಿತ್ರರಾದರು.[೧೩] ವಿಕ್ರಮಾದಿತ್ಯನು ಶಾಸನಗಳಲ್ಲಿ ಹೀಗೆ ವರ್ಣಿತನಾಗಿದ್ದಾನೆ. ಕುಲ ಗೌರವಕ್ಕೂ, ಘನತೆಗೂ ಭಂಗ ತಂದ, ವಂಶ ನಾಶಕ್ಕೆ ಕಾರಣನಾದ ಪಲ್ಲವಾಧಿಪನ ಜಯಿಸಿ ಕಾಂಚಿ ಪಟ್ಟವನ್ನು ಸ್ವೀಕರಿಸಿದಂಥವನಿತ ಚೋಳ, ಪಾಂಡ್ಯ, ಕೇರಳ ಈ ಮೂವರು ರಾಜರ ಗರ್ವಭಂಗಗೊಳಿಸಿದವನೀತ ಇನ್ನಾರಿಗೂ ತಲೆಭಾಗದ ಕಾಂಚೀರಾಜನಿಂದ ಸಾಷ್ಟಾಂಗ ಹಾಕಿಕೊಂಡವನೀತ.[೧೪] ವಿಕ್ರಮಾದಿತ್ಯನ ಮಗ ವಿನಯಾದಿತ್ಯನು ಚೋಳ, ಪಾಂಡ್ಯ, ಕೇರಳ. ಈ ರಾಜರ ಬಲವನ್ನು ಬಗ್ಗುಬಡಿದಿದ್ದೇ ಅಲ್ಲದೆ ಪಲ್ಲವರನ್ನು ಮಣಿಸಿ ರಾಜ್ಯದಲ್ಲಿ ಶಾಂತಿಯನ್ನು ನೆಲೆಗೊಳಿಸಿ ತನ್ನ ತಂದೆಗೆ ಸಂಪ್ರೀತಿ ಉಂಟುಮಾಡಿದನು. ಕಳಭ್ರರು, ಕೇರಳರು, ಹೈಹಯರು, ವೀಲರು, ಮಾಳವರು, ಚೋಳರು, ಪಾಂಡ್ಯ ಹಾಗೂ ಇನ್ನಿತರರನ್ನು ಜಯಿಸಿದನು ಹಾಗೂ ಕಾವೇರರು, ಪಾರಸಿಕರು, ಸಿಂಹಳರು ಮೊದಲಾದವರ ರಾಜರುಗಳಿಂದ ಕಪ್ಪಕಾಣಿಕೆಗಳನ್ನು ಪಡೆಯುತ್ತಿದ್ದನು.[೧೫] ಹೀಗೆ ಬಾದಾಮಿ ಚಾಳುಕ್ಯರಾದಿಯಾಗಿ ಕಲ್ಯಾಣದ ಚಾಳುಕ್ಯರ ಕಾಲದವರೆಗೂ ತಮಿಳುನಾಡಿನ ಅಥವಾ ದಕ್ಷಿಣ ಭಾರತದ ಅರಸುಮನೆತನಗಳ ಮಧ್ಯೆ ನಿರಂತರ ಕದನಗಳು ನಡೆದಿವೆ. ಈ ಮೊದಲು ತಿಳಿಸಿದಂತೆ ಪಶ್ಚಿಮ ಚಾಳುಕ್ಯ ಜಯಸಿಂಹನು ಸಪ್ತಕೊಂಕಣಗಳನ್ನು ಜಯಸಿದಾಗ ಪಾಂಡ್ಯರು ಇವರೊಂದಿಗೆ ಬಂದು ಅವರ ಅಧೀನತೆಯಲ್ಲಿ ತಮ್ಮ ನೆಲೆಯನ್ನು ಕಂಡುಕೊಂಡಿದ್ದಾರೆ.

ಕೊಂಕಣದ ವಿಚಾರವು ಮೊಟ್ಟಮೊದಲ ಬಾರಿಗೆ ಸಹ್ಯಾದ್ರಿ ಖಂಡದಲ್ಲಿ ಉಲ್ಲೇಖಿತವಾಗಿದೆ. ಈ ಸಪ್ತಕೊಂಕಣದಲ್ಲಿ ಕೇರಳ, ತುಲುಂಗ ಸೌರಾಷ್ಟ್ರ, ಕೊಂಕಣ, ಕರಹಾಟ ಮತ್ತು ಕರ್ನಾಟಕ

ಎಂಬ ಪ್ರದೇಶಗಳು ಸೇರಿದ್ದವು.[೧೬] ಹೈಹೆಗೆ ಸಂಬಂಧಿಸಿದಂತೆ ಶ್ರೀಮಾನ್ ಗೋವಿಂದ ಪೈ ಅವರು ಪ್ರಪಂಚ ಹೃದಯ ಎಂಬ ಗ್ರಂಥದಲ್ಲಿ ಉಲ್ಲೇಖಿತ ಕೂಪಕ, ಕೇರಳ, ಮೂಷಿಕ, ಅಲೂಪ, ಪಶು, ಕೊಂಕಣ ಮತ್ತು ಪರ ಕೊಂಕಣವೆಂಬ ಸಪ್ತ ಕೊಂಕಣದ ವಿವರಣೆಯನ್ನು ಆಧಾರವಾಗಿಟ್ಟುಕೊಂಡು ಅದರ ಮೂಲವನ್ನು ಹುಡುಕಲು ಪ್ರಯತ್ನಿಸಿದ್ದಾರೆ. ಈ ಗ್ರಂಥದಲ್ಲಿ ಹೇಳಲ್ಪಟ್ಟ 'ಪಶು' ಎಂಬುದೇ ಮುಂದೆ ಪಶುಕ-ಪಯಿಕ-ಪಯಿಗ-ಹೈಗ(ಹೈಹ) ಎಂದಾಯಿತು ಎನ್ನುವುದು ವಿದ್ವಾಂಸರ ಅಭಿಪ್ರಾಯ.[೧೭] ಇಂದಿಗೂ ಉತ್ತರ ಕನ್ನಡ ಜಿಲ್ಲೆಯಲ್ಲಿ ಕೆಲವು ಹಿಂದುಳಿದ ಒಕ್ಕಲು ವರ್ಗದವರಿಗೆ ಹಳೆಪೈಕರೆಂದು ಕರೆಯುವ ರೂಢಿಯಿದೆ. ಇಂದಿನ ಕಾರವಾರದಿಂದ ಭಟ್ಕಳದವರೆಗಿನ ತೀರ ಪ್ರದೇಶವನ್ನು ಕೊಂಕಣ ೯೦೦ ಎಂದು ಪರಿಗಣಿಸುವಲ್ಲಿ ಯಾವುದೇ ಅಭ್ಯಂತರವಿಲ್ಲ.

ಪಂಜೆ ಮಂಗೇಶರಾಯ 'ಬಿಲಿಗಿಯ ಕೆಲವು ಶಾಸನಗಳು' ಎಂಬ ರಾಷ್ಟ್ರಬಂಧು ಯುಗಾದಿ ಸಂಚಿಕೆಯಲ್ಲಿ ಈಗಿನ ಉತ್ತರ ಕನ್ನಡ ಜಿಲ್ಲೆಯೇ ಹಿಂದಿನ ಹೈವೆ ಅಥವಾ ಹೈಹಗ ನಾಡಾಗಿತ್ತೆಂಬುದರಲ್ಲಿ ಸಂದೇಹವಿಲ್ಲ. ಹೈಹ ಪ್ರದೇಶವು ಉತ್ತರದಲ್ಲಿ ಕುಮಟಾ ತಾಲೂಕಿನ ಅಘನಾಶಿನಿ ನದಿಯಿಂದ ದಕ್ಷಿಣದಲ್ಲಿ ಭಟ್ಕಳ ತಾಲ್ಲೂಕು, ಪೂರ್ವದಲ್ಲಿ ಪಶ್ಚಿಮ ಘಟ್ಟದಿಂದ ಪಶ್ಚಿಮದಲ್ಲಿ ಅರಬ್ಬಿ ಸಮುದ್ರದವರೆಗೆ ಹಬ್ಬಿತು.[೧೮]

ಉಚ್ಚಂಗಿ ಪಾಂಡ್ಯರು ಹೈಹ ಪ್ರದೇಶದವರು ಎನ್ನುವುದನ್ನು ಶಾಸನಗಳು ತಿಳಿಸುತ್ತವೆ.

> ದೃಪ್ಯದ್ದಾನವಲುಪ್ಯಮಾನವಿಭವ ಸ್ವಾರಾಜ್ಯನಿಸ್ತಾರಕಾಃ ಸಮ್ರಾಜಃ ಕಲೆ ನಾಮ ಹೈಹಯ
> ಮುಖಾಸ್ತಸ್ಮಿನ ಭೂವಂನವಾ|
> ಕಂಸಧ್ವಂಸನಕೇಳಿಕೌತುಕವಶಾದ್ದೇವೋಪಿ ಲಕ್ಷ್ಮೀಪತಿಃ
> ವ್ವಿಶ್ಯಾಮ್ನಾಯನಿಮೃಗ್ಯಮಾಣವರಣೋ ಯತ್ರಾವತೀರ್ಣಸ್ವಮಂ||[೧೯]

ದರ್ಪ ಹೊಂದಿ ದಾನವರ ಮಾನ ಐಶ್ವರ್ಯ, ರಾಜ್ಯಗಳನ್ನು ನಾಶಗೊಳಿಸಿದ ಹೈಹಯ ಮೊದಲಾದ ರಾಜರು ಆ ವಂಶದಲ್ಲಿ ಹುಟ್ಟಲಿಲ್ಲವೇ? ಸಕಲವೇದ ಪ್ರತಿಪಾದ್ಯನಾದ ಲಕ್ಷ್ಮೀಪತಿಯೇ ಕಂಸನನ್ನು ಧ್ವಂಸ ಮಾಡುವ ಕೇಳಿ(ಆಟ)ಯಲಿ ಕುತೂಹಲ ಹೊಂದಿ ಆ ಕುಲದಲ್ಲಿ ಅವತಾರ ಮಾಡಿದನೆಂದ ಮೇಲೆ ಆ ವಂಶದ ಪ್ರಶಸ್ತಿಯನ್ನು ಕುರಿತು ಹೇಳತಕ್ಕದೇನಿದೆ? ಹೈಹ ಪ್ರದೇಶದಲ್ಲಿ ಆಡಳಿತ ನಡೆಸಿದ ರಾಜಮನೆತನಗಳಲ್ಲಿ ಯಾದವ ರಾಜ ಗೋತ್ರದಲ್ಲಿ ಹುಟ್ಟಿದ ನಾವೇ ಶ್ರೇಷ್ಠರೆಂದು ಕರೆದುಕೊಂಡಿದ್ದಾರೆ. ಪಾಂಡ್ಯರ ವಂಶಾವಳಿಯನ್ನು ತಿಳಿಸುವ ಎಲ್ಲಾ ಶಾಸನಗಳಲ್ಲು ಈ ವಾಕ್ಯವನ್ನು ಉಲ್ಲೇಖಿಸುತ್ತವೆ. ಇದರಿಂದಾಗಿ ಉಚ್ಚಂಗಿ ಪಾಂಡ್ಯರು ಹೈಹ ಅಥವಾ ಹೈವೆ ಪ್ರದೇಶದವರು ಎಂಬುದರಲ್ಲಿ ಯಾವುದೇ ಅನುಮಾನಗಳು ಇಲ್ಲ.

ಈ ಮನೆತನದ ಮೊದಲ ರಾಜಧಾನಿ 'ಉಳವಿ' ನೀಲಗುಂದ ಗ್ರಾಮದ ಮುಕ್ತೇಶ್ವರ ದೇವಾಲಯದ ಶಾಸನ ತ್ರಿಭುವನಮಲ್ಲ ಪಾಂಡ್ಯನು ನೊಳಂಬವಾಡಿ-೩೨೦೦೦, ಕಣೆಯಕಲ್ಲು-೩೦೦ನ್ನು ಉಳವಿ ನೆಲವೀಡಿನಿಂದ ಆಳಿರುವುದಾಗಿ ತಿಳಿಸುತ್ತದೆ.[೨೦]

ಹೈಹ ನಾಡಾದ ಉತ್ತರ ಕನ್ನಡ ಜಿಲ್ಲೆಯ ಜೋಯಿಡ ತಾಲ್ಲೂಕಿನ ಉಳುವಿ ಗ್ರಾಮವೇ ಇವರ ಆರಂಭಿಕ ರಾಜಧಾನಿ ಆಗಿತ್ತು. ಆನಂತರ ತಮ್ಮ ಆಡಳಿತ ಕೇಂದ್ರವನ್ನು ಬೆಳತ್ತೂರು, ಉಚ್ಚಂಗಿಗೆ ವರ್ಗಾಯಿಸಿಕೊಂಡಿದ್ದಾರೆ. ಕಾಳಿ ನದಿಯು ಸೂಪಾ ಮತ್ತು ಯಲ್ಲಾಪುರ ತಾಲೂಕುಗಳನ್ನು ಬೇರ್ಪಡಿಸುವ ರಾಕ್ಷಸ ಘಟ್ಟದ ತುದಿಯ ಮೇಲೆ ಈ ಹಳ್ಳಿ ಇದೆ. ಹಿಂದೆ ಇದಕ್ಕೆ ವೃಷಭಪುರ ಅನ್ನುತ್ತಿದ್ದರು. ಗಣಪತಿಗೌಡ, ಗೋವಿಂದ ಪೈ, ಪಂಜೆ ಮಂಗೇಶರಾಯರು ಗುರುತಿಸಿರುವ ಹೈಹ ನಾಡಿನಲ್ಲಿ 'ಉಳುವಿ' ಪ್ರದೇಶ ಇರುವುದರಿಂದ ಉಚ್ಚಂಗಿ ಪಾಂಡ್ಯರು ಹೈಹ ನಾಡಿನಲ್ಲಿದ್ದರೆಂಬುದು ಶಾಸನಗಳಿಂದ ಸ್ಪಷ್ಟವಾಗುತ್ತದೆ.

೨. **ವ್ಯಾಪಾರ:** ಪುರಾತನ ಕಾಲದಿಂದಲೂ ನಮ್ಮ ದೇಶದ ಪೂರ್ವ ತೀರದಲ್ಲಿ ಸಮುದ್ರ ವ್ಯಾಪಾರ ವಿಪುಲವಾಗಿ ನಡೆಯುತ್ತಿತ್ತೆಂಬುದು ಇತಿಹಾಸ ಪ್ರಸಿದ್ಧವಾದ ಸಂಗತಿ. ಸಂಸ್ಕೃತ ಹಾಗೂ ಸಾಹಿತ್ಯದಲ್ಲಿ ಇದರ ಉಲ್ಲೇಖಗಳಿವೆ. ಪೂರ್ವ ತೀರದಲ್ಲಿ ದ್ವೀಪಾಂತರ ವ್ಯಾಪಾರದ ಮುಖ್ಯ ಪ್ರದೇಶಗಳೆಂದರೆ ಕಳಿಂಗ ಮತ್ತು ತಮಿಳುನಾಡು ಅಥವಾ ಪಾಂಡ್ಯ. ಅನಾದಿಕಾಲದಿಂದಲೂ ಪಾಂಡ್ಯ ದೇಶದ ಸಮುದ್ರ ತೀರವು ಮುತ್ತುಗಳ ಆಗರವೆಂಬುದು ಸುಪ್ರಸಿದ್ಧ.[೨೧]

ಪಾಂಡ್ಯ ರಾಜ್ಯಕ್ಕೂ ಮತ್ತು ಕರ್ನಾಟಕದ ಪಶ್ಚಿಮ ಕರಾವಳಿಯಲ್ಲಿ ವ್ಯಾಪಾರ ಚಟುವಟಿಕೆಗಳು ಪ್ರಾಚೀನ ಕಾಲದಿಂದಲೂ ನಿರಂತರವಾಗಿ ನಡೆಯುತ್ತಿದ್ದವು. ದಕ್ಷಿಣ ಕನ್ನಡ ಜಿಲ್ಲೆಯ ಭೂತಾಳ ಪಾಂಡ್ಯರಾಯನ ಚರಿತ್ರೆ ಈ ಕುರಿತು ಮಾಹಿತಿ ನೀಡುತ್ತದೆ. ಗಣಪತಿರಾವ್ ಐಗಳ್ ಅವರು ಭೂತಾಳಪಾಂಡ್ಯನು ಕ್ರಿ.ಶ. ೭೮ರಲ್ಲಿ ಪಟ್ಟಕ್ಕೆ ಬಂದನೆಂದೂ ಇವನು ಮಧುರೆ ಪಾಂಡ್ಯ ವಂಶದ ದೇವ ಪಾಂಡ್ಯನೆಂಬ ವ್ಯಾಪಾರಿಯ ಅಳಿಯನೆಂದೂ, ದೇವಪಾಂಡ್ಯನು ಪಶ್ಚಿಮ ಕರಾವಳಿಯ ಬಾರಕೂರಿನಲ್ಲಿ ನೆಲೆಸಿ ವ್ಯಾಪಾರ ಮಾಡುತ್ತಿದ್ದನೆಂದೂ ಹೇಳಿರುತ್ತಾರೆ. ಈ ಹೇಳಿಕೆಯಲ್ಲಿ ಐತಿಹಾಸಿಕತೆ ಇರಬಹುದೆಂಬ ಅಭಿಪ್ರಾಯವನ್ನು ಡಾ. ಕೆ.ವಿ. ರಮೇಶರು ವ್ಯಕ್ತಪಡಿಸಿದ್ದಾರೆ.

ಅರಸರ ಹಿರಿಯ ಮಗನಿಗೆ ರಾಜ್ಯಾಧಿಕಾರ ಬರುವುದು ಪರಂಪರೆಯಾದುದರಿಂದ ಕಿರಿಯ ಮಕ್ಕಳು ರಾಜ್ಯವನ್ನು ತೊರೆದು ಹೋಗುವುದು ಸಹಜವೆಂದು ಹೇಳಿ ರಮೇಶರು ಬಹುಶಃ ಪಾಂಡ್ಯ ದೇಶವನ್ನು ತ್ಯಜಿಸಿ ಪಶ್ಚಿಮ ಕರಾವಳಿಗೆ ದೇಶಾಂತರಗೊಂಡ ದೇವಪಾಂಡ್ಯನು ಆ ವಂಶದ ತೀರಿಹೋದ ಅರಸನ ಕಿರಿಯ ಮಗನಿದ್ದಿರಬೇಕು. ಸ್ವದೇಶದಲ್ಲಿ ತನಗೇನೂ ದೊರೆಯದೆಂದು ತಿಳಿದು ದೇವಪಾಂಡ್ಯನು ಕರಾವಳಿಯ ಮಾರ್ಗವಾಗಿಯೇ ಕರ್ನಾಟಕದ ಪಶ್ಚಿಮ ಕರಾವಳಿಯನ್ನು ಸೇರಿ ವ್ಯಾಪಾರದಲ್ಲೂ ತೊಡಗಿಸಿಕೊಂಡಿರಬೇಕು. ಹೀಗೆನ್ನಲು ನಮಗೆ ಸಾಕಷ್ಟು ಐತಿಹಾಸಿಕ ಸಾದೃಶ್ಯಗಳು ಭಾರತದಲ್ಲಿಯೂ ಆಗ್ನೇಯ ಏಷ್ಯದಲ್ಲಿ ದೊರೆಯುತ್ತವೆ.[೨೨] ಭೂತಾಳ ಪಾಂಡ್ಯನು ಕರಾವಳಿ ಭಾಗದಲ್ಲಿ ಅಳಿಯ ಸಂತಾನ ಕಟ್ಟನ್ನು ಜಾರಿ ಮಾಡಿರುವ ಬಗ್ಗೆ ಭೂತಾಳ ಪಾಂಡ್ಯನ ಐತಿಹ್ಯ ತಿಳಿಸುತ್ತದೆ.

ಈ ಮೇಲಿನ ಎರಡು ಚರ್ಚೆಗಳ ಹಿನ್ನೆಲೆಯಲ್ಲಿ ಉಚ್ಚಂಗಿ ಪಾಂಡ್ಯರು ಸಪ್ತಕೊಂಕಣಗಳಲ್ಲಿ ಒಂದಾದ ಹೈಹ ಅಥವಾ ಹೈವ ನಾಡಿನವರು ಎಂಬುದು ಸ್ಪಷ್ಟವಾಗುತ್ತದೆ. ಆದರೆ ಇವರು

ಹೈಹ ನಾಡಿನ ಮೂಲನಿವಾಸಿಗಳೇ ಅಥವಾ ಪಾಂಡ್ಯ ದೇಶದಿಂದ ವಲಸೆ ಬಂದವರೇ, ಪಾಂಡ್ಯ ದೇಶದಿಂದ ಯಾವಾಗ ವಲಸೆ ಬಂದರು ಎಂಬುದು ಸ್ಪಷ್ಟವಾಗುವುದಿಲ್ಲ. ಪಾದೇಕಲ್ಲು ವಿಷ್ಣುಭಟ್ಟರು ಇವರು ಪಾಂಡ್ಯ ದೇಶದಿಂದ ಬಂದವರಲ್ಲ, ಪಶ್ಚಿಮ ಕರಾವಳಿಯ ತುಳುನಾಡಿನವರು ಎಂದು ಹೇಳುತ್ತಾರೆ.

ಉಚ್ಚಂಗಿ ಪಾಂಡ್ಯರು ಪ್ರಾಚೀನ ತಮಿಳು ಅಥವಾ ಪಾಂಡ್ಯ ದೇಶದ ಮೂಲದವರು ಎಂಬುದನ್ನು ಸ್ಪಷ್ಟಪಡಿಸಲು ಅವರ ಆಳ್ವಿಕೆಯ ಕಾಲದ ಶಾಸನಗಳು ಮಾಹಿತಿಯನ್ನು ಒದಗಿಸುತ್ತವೆ.

ಉಚ್ಚಂಗಿ ಪಾಂಡ್ಯರ ಎಲ್ಲಾ ಅರಸರ ಶಾಸನಗಳು ದೇವಸ್ತುತಿಯಿಂದ ಆರಂಭವಾಗಿ ತಮ್ಮ ಪ್ರಭುವಿನ ವರ್ಣನೆಯ ಸ್ಮರಣೆಯ ನಂತರ ಪಂಚ ಮಹಾಶಬ್ಧ ಮಹಾಮಂಡಳೇಶ್ವರಂ 'ಕಾಂಚೀಪುರವರಾಧೀಶ್ವರಂ' ಎಂದು ಪ್ರಾರಂಭವಾಗುತ್ತವೆ. 'ಕಾಂಚೀಪುರವರಾಧೀಶ್ವರ' ಎಂದರೆ 'ಕಾಂಚಿಪುರದ ಅಧಿಪತಿ' ಎಂದರ್ಥ.[೨೩] ಇದು ತಮಿಳುನಾಡಿನ ಕಾಂಚಿಪುರವೇ ಆಗಿದೆ. ಚಾಳುಕ್ಯ ಅರಸ ತ್ರಿಭುವನಮಲ್ಲದೇವನಿಗೂ ಈ ಬಿರುದಿತ್ತು. ಅರಸನಿಂದ ಮಹಾಮಂಡಳೇಶ್ವರ ಅಥವಾ ಅಧೀನ ಸಾಮಂತರಿಗೆ ಕೆಲವು ಬಿರುದುಗಳು ಬಳುವಳಿಯಾಗಿ ಬಂದಿರುವ ಸಾಧ್ಯತೆ ಇದ್ದರೂ ಸಮಕಾಲೀನ ಸಾಮಂತರಿಗೆ ಈ ಬಿರುದು ಇರುವುದಿಲ್ಲ ಹಾಗೂ ಪಾಂಡ್ಯ ಅರಸರು ಈ ಬಿರುದನ್ನು ಸಾಂಪ್ರದಾಯಿಕವಾಗಿ ಮುಂದುವರಿಸಿಕೊಂಡು ಬಂದಿದ್ದಾರೆ. ಈ ಸಾಂಪ್ರದಾಯಿಕ ಮುನ್ನಡೆಯು ಅವರ ಮೂಲವನ್ನು ಉಳಿಸಿಕೊಳ್ಳುವ ಪ್ರಯತ್ನವಾಗಿದೆ.

"ಕನಕನಗ ಶಿಲಾತಳ ಸ್ಥಾಪಿತ ಪಾಠೀನಲಾಂಛನ ಜಯಸ್ತಂಭಂ"[೨೪](ತಳದಲ್ಲಿ ಮೀನಿನ ಗುರುತುಳ್ಳ ಜಯಸ್ತಂಭವನ್ನು ಸ್ಥಾಪಿಸಿದವನು) ಮಧುರೆಯ ಪಾಂಡ್ಯರ ರಾಜಲಾಂಛನ ಮೀನು, ಪಾಂಡ್ಯ ದೇಶದ ಮೂಲದವರೇ ಆದ ಅಳುಪರು ಮತ್ತು ಶಿಸುಗಲಿಯ ಪಾಂಡ್ಯರ ರಾಜಲಾಂಛನ 'ಮೀನು'. ಹಾಗಾಗಿ ಉಚ್ಚಂಗಿ ಪಾಂಡ್ಯರು ತಮಿಳು ಪಾಂಡ್ಯ ಮನೆತನಕ್ಕೆ ಸೇರಿದವರು ಎಂದು ಹೇಳಬಹುದು. ಅವರು ತಮ್ಮ ಪ್ರಾಚೀನ ರಾಜ್ಯ ಚಿಹ್ನೆ ಮತ್ತು ಬಿರುದುಗಳನ್ನು ಮುಂದುವರೆಸಿ ಕೊಂಡಿದ್ದಾರೆ.

ತಾಂಬ್ರಪರ್ಣ್ಣೀ ನಿರ್ಣ್ನಿಕ್ತ ಮೌಕ್ತಿಕ ಯುಕ್ತಾನೇಕ ರತ್ನಾಕರಾ ಮುದ್ರ ಮುದ್ರಿತ ಸರೋದ್ರ ಭಂಡಾಗಾರಂ (ತಾಂಬ್ರಪರ್ಣೀ ನದಿಯು ಸೆಳೆದೊಯ್ದು ಮುತ್ತಗಳನ್ನು ಸಮುದ್ರದ ಪ್ರಶಸ್ತ ರತ್ನಗಳನ್ನು ಭಂಡಾರದಲ್ಲಿ ಉಳ್ಳವನು) ಮಳಯಗಿರಿ ಕಂದರ; ಚಂದನ ನನ್ದನ ಮಧ್ಯದೇಶ ನಿವೇಶಿತ ಶ್ರೀಂಗಾರಾಗಾರಂ[೨೫] (ಮಲಯ ಪರ್ವತದ ಕಣಿಮೆಯ ಶ್ರೀಗಂಧದ ತೋಪುಗಳ ಮಧ್ಯೆ ನೆಲೆಗೊಂಡ ಶೃಂಗಾರ ಸ್ಥಾನವುಳ್ಳವನು)

ತಾಮ್ರಪರ್ಣೀ ನದಿ ತಮಿಳುನಾಡಿನ ತಿರುನೆಲ್ವೇಲಿ ಜಿಲ್ಲೆಯಲ್ಲಿ ಹರಿಯುತ್ತದೆ. ಪೊತಿಗೆ ಬೆಟ್ಟಗಳ ಅಗಸ್ತ್ಯ ಮಲೈ ತಾಮ್ರಪರ್ಣೀ ನದಿಯ ಮೂಲ. ಅಗಸ್ತ್ಯ ಮಲೈ ಪರ್ವತದ ಪೂರ್ವ ಭಾಗದಿಂದ ತಿರುನೆಲ್ವೇಲಿ ಮತ್ತು ಪಶ್ಚಿಮ ಶ್ರೀಲಂಕದ ಪುಟ್ಟಾಲಮ್ಗೆ ಹತ್ತಿರವಿದೆ. ಮಧುರೈ ಪಾಂಡ್ಯ ಸಾಮ್ರಾಜ್ಯದ ಮೊದಲ ತಮಿಳು ಸಂಘದ ಅಧ್ಯಕ್ಷರಾಗಿದ್ದ ಅಗಸ್ತ್ಯರ ಪುರಾತನ

ದೇವಾಲಯಗಳು ಮತ್ತು ಪಾಂಡ್ಯ ಸಾಮ್ರಾಜ್ಯದ ಕುಟುಂಬದ ಪಾದ್ರಿಗಳನ್ನು ಇಂಡೋನೇಶಿಯಾದ ಜಾವಾ ಮತ್ತು ಶ್ರೀಲಂಕಾದಾದ್ಯಂತ ತಿರುನೆಲ್ವೇಲಿಯಲ್ಲಿ ತಾಮ್ರಪರ್ಣೀ ನದಿಯ ಮೂಲದಲ್ಲಿ ಪೂಜಿಸಲಾಗುತ್ತದೆ.[೨೬]

ಮಧುರೈ ಪಾಂಡ್ಯರ ಮೊದಲ ರಾಜಧಾನಿಗಳಲ್ಲಿ ಒಂದಾದ ಕೊರ್ಕಾಯ್ ಮುತ್ತು ವ್ಯಾಪಾರದ ಅಧಿಕೇಂದ್ರವು ನದಿಯ ಬಾಯಿಯಲ್ಲಿ ನೆಲೆಗೊಂಡಿದೆ. ಕೌಟಿಲ್ಯ ತನ್ನ ಅರ್ಥಶಾಸ್ತ್ರದಲ್ಲಿ ತಾಮ್ರಪರ್ಣೀಯಲ್ಲಿ ಉತ್ಪತ್ತಿಯಾದ 'ಥಾಮ್ರಪರ್‌ನಿಕ' ಮತ್ತು ಪಾಂಡ್ಯಕವಡಾಕ(ಕವಡಪುರಂನ)ಗಳ ಬಗ್ಗೆ ಹಾಗೂ ಪಾಂಡ್ಯ ದೇಶವು ಮುತ್ತು ರತ್ನಗಳಿಗೆ ಪ್ರಸಿದ್ಧವಾಗಿದೆ. ತಾಮ್ರಪರ್ಣೀ ದೊಡ್ಡ ನದಿ ಎಂದು ವಿವರಿಸಿದ್ದಾನೆ. ವರಾಹಿಮಿಹರ ತನ್ನ ಬೃಹತ್ ಸಂಹಿತೆಯಲ್ಲಿ ತಾಮ್ರಪರ್ಣಿ ನದಿಯ ಮುತ್ತುಗಳು ಸ್ವಲ್ಪ ತಾಮ್ರ ಬಣ್ಣ ಬಿಳಿ ಪ್ರಕಾಶಮಾನವೆಂದು ಹೇಳಲಾಗಿದೆ. ಇಕ್ಷವಾಕ ರಾಜನು ನದಿಯ ಬಾಯಿಯವರೆಗೆ ಯಶಸ್ವಿ ಶಸ್ತ್ರಾಸ್ತ್ರಗಳನ್ನು ಹೊತ್ತುಕೊಂಡು ಪಾಂಡ್ಯರನ್ನು ವಶಪಡಿಸಿಕೊಂಡಿದ್ದಾನೆ.[೨೭]

ಪುರಾಣಗಳ ಪ್ರಕಾರ ಭಾರತದ ಉಪಖಂಡದ ಒಂಬತ್ತು ವಿಭಾಗಗಳಲ್ಲೊಂದಾದ ತಾಮ್ರಪರ್ಣೀ ದ್ರಾವಿಡದ ಪಾಂಡ್ಯನ್ ದೇಶದಲ್ಲಿನ ಮಲಯ ಪರ್ವತಗಳ ಕುಲಕಲ ಬೆಟ್ಟದಿಂದ ಮೂಲದ ನದಿಯಾಗಿ ಶ್ರೀಗಂಧದ ಪ್ರದೇಶಗಳ ಮೂಲಕ ಹರಿಯುವ ಬಲರಾಮದಿಂದ ಭೇಟಿ ನೀಡಿ ದಕ್ಷಿಣ ಸಾಗರದ ಕಡೆಗೆ ಹರಿಯುತ್ತದೆ. ಸಮುದ್ರದೊಂದಿಗೆ ಸಂಗಮದಲ್ಲಿ ಇದು ಕಪ್ಪೆ ಚಿಪ್ಪುಗಳು ಮತ್ತು ಮುತ್ತುಗಳನ್ನು ಉತ್ಪಾದಿಸುತ್ತದೆ.[೨೮]

ಉಚ್ಚಂಗಿ ಪಾಂಡ್ಯ ಅರಸರು ಈ ಮೇಲಿನ ವಾಕ್ಯವನ್ನು ತಮ್ಮ ಮೂಲದ ಪ್ರತೀಕವಾಗಿ ಮತ್ತು ಪ್ರತಿಷ್ಠೆಯ ಸಂಕೇತವಾಗಿ ತಮ್ಮ ಬಿರುದುಗಳಲ್ಲಿ ಸೇರಿಸಿಕೊಂಡಿದ್ದಾರೆ.

ಪಾಂಡ್ಯ ಅರಸರ ಹೆಸರುಗಳು ತಮಿಳು ಭಾಷಾ ಶೈಲಿಯಲ್ಲಿವೆ. ಪ್ರಚಣ್ಡ ಪಾಂಡ್ಯ, ಪಲಮಾಂದ ಪಾಂಡ್ಯ, ಪಲಿತಪಾಂಡ್ಯ, ಇರುಕ್ಕವೆಳ್, ಪೊಂಡಿ ಪಾಂಡ್ಯ, ನೊಳೆಯ ಪಾಂಡ್ಯ, ಪಂಡಿತಪಾಂಡ್ಯ.[೨೮] ಕರ್ನಾಟಕದಲ್ಲಿ ಆಡಳಿತ ನಡೆಸಿದ ಅಳುಪರು, ಕಳಶದ ಭೈರರಸರು, ನಿಡುಗಲ್ ಚೋಳರಲ್ಲಿ ಕೆಲವರನ್ನು ತಮ್ಮ ಹೆಸರಿನ ಮುಂದೆ ಪಾಂಡ್ಯರೆಂದು ಕರೆಯಲಾಗಿದೆ. ಆದರೆ ಇವರು ವಂಶಪಾರಂಪರ್ಯವಾಗಿ ಮುಂದುವರಿಸಿಲ್ಲ. ಆದರೆ ಉಚ್ಚಂಗಿ ಪಾಂಡ್ಯರು ಆರಂಭದಿಂದ ಕೊನೆಯವರೆಗೂ ಪಾಂಡ್ಯ ಹೆಸರನ್ನು ಉಳಿಸಿಕೊಂಡು ಬಂದಿದ್ದಾರೆ. ಗೋವಿಂದ ಪೈಗಳು ಪಾಂಡ್ಯ ಎಂಬ ಹೆಸರುಳ್ಳ ತುಳುನಾಡಿನ ರಾಜರಿಗೆಲ್ಲ ತಮಿಳುನಾಡಿನ ಪಾಂಡ್ಯ ರಾಜ ಸಂಬಂಧವನ್ನು ಸಂಭಾವಿಸಿದ್ದಾರೆ. ತಮಿಳುನಾಡಿನ ಪಾಂಡ್ಯರಾಜರಿಗೂ ತುಳುನಾಡಿನ ಪಾಂಡ್ಯ ಚಕ್ರವರ್ತಿಗಳಿಗೂ ಶರೀರ ಸಂಬಂಧವಿದ್ದಿರಬಹುದು ಅಥವಾ ತುಳುನಾಡಿನ ರಾಜರು ತಮಿಳುನಾಡಿನ ಪಾಂಡ್ಯ ಚಕ್ರವರ್ತಿಗಳ ಸಾಮಂತರಾಗಿದ್ದಿರಬಹುದು. ಆದುದರಿಂದ ಅಧಿರಾಜರ ಗೌರವಾರ್ಥವಾಗಿ ಅವರ ಹೆಸರನ್ನೇ ತಮಗಿಟ್ಟುಕೊಂಡಿರಬಹುದು ಎಂಬ ಊಹೆಗಳನ್ನು ಮಾಡಿದ್ದಾರೆ.[೨೯]

ಉಚ್ಚಂಗಿ ಪಾಂಡ್ಯರು ತಮಿಳುನಾಡು ಅಥವಾ ಪಾಂಡ್ಯ ದೇಶದಿಂದ ಕರ್ನಾಟಕಕ್ಕೆ ಯಾವ ಕಾಲಘಟ್ಟದಲ್ಲಿ ಮತ್ತು ಯಾವ ಕಾರಣಕ್ಕೆ ಬಂದರೆಂಬ ಬಗ್ಗೆ ನಿಖರತೆ ಇಲ್ಲ. ಆದರೆ

ಪಾಂಡ್ಯರು ತಮಿಳುನಾಡು ಅಥವಾ ಪಾಂಡ್ಯ ದೇಶದಿಂದ ಸಪ್ತಕೊಂಕಣದ ಭಾಗವಾದ ಹೈಹ ಅಥವಾ ಹೈವ ಪ್ರದೇಶಕ್ಕೆ ಬಂದು ನೆಲೆಸಿ ಕಲ್ಯಾಣ ಚಾಳುಕ್ಯರ ಅವಧಿಯಲ್ಲಿ ರಾಜಕೀಯ ಲಾಭ ಪಡೆದಿರುವುದು ಈ ಮೇಲಿನ ಚರ್ಚೆಯಿಂದ ದೃಢವಾಗುತ್ತದೆ. ಉಚ್ಚಂಗಿ ಪಾಂಡ್ಯರು ಪ್ರಾಚೀನ ತಮಿಳು ಮೂಲದವರು ಎಂಬುದನ್ನು ಒಪ್ಪಿಕೊಳ್ಳಬಹುದು.

ಪಾದೇಕಲ್ಲು ವಿಷ್ಣುಭಟ್ಟರು ಶಬ್ದಾರ್ಥಶೋಧ ಎಂಬ ಕೃತಿಯಲ್ಲಿ “ಪಾಂಡಿ ಮತ್ತು ಪಾಂಡ್ಯ” ಎಂಬ ಲೇಖನದಲ್ಲಿ ಪಾಂಡಿ-ಪಾಂಡ್ಯ ಶಬ್ದದ ಭಾಷಿಕ ನೆಲೆಯಲ್ಲಿ ವಿರ್ಮಶಿಸಿ, ಪಾಂಡ್ಯರು ತಮಿಳು ಮೂಲದವರಲ್ಲ ತುಳು ಮೂಲದವರು ಎಂದು ಅರ್ಥೈಸಿದ್ದಾರೆ.

ಪಂಚಮುಖಿಯವರು ಶಿಸುಗಲಿ ಪಾಂಡ್ಯರನ್ನು ಕದಂಬ ಶಾಖೆ ಎಂದು ಕರೆದಿದ್ದಾರೆ.[೩೦] ನೂರಾಂಬಡದ ಪಾಂಡ್ಯರನ್ನು ನೂರಾಂಬಾಡರ ಕದಂಬರು ಎಂದು ಕದಂಬ ಶಾಖೆಗಳಲ್ಲಿ ಗುರುತಿಸಲಾಗುತ್ತದೆ. ಈ ಎರಡು ಮನೆತನಗಳ ಅರಸರು ಕದಂಬರ ಕೆಲವು ಬಿರುದುಗಳನ್ನು ಹೊಂದಿದ್ದಾರೆ. ಆದರೆ ಕದಂಬರ ಯಾವ ಬಿರುದುಗಳು ಉಚ್ಚಂಗಿ ಪಾಂಡ್ಯರಲ್ಲಿ ಕಾಣಿಸಿ ಕೊಳ್ಳುವುದಿಲ್ಲ. ಆದರೆ ಕೊಟ್ಟೂರಿನ ಕದಂಬರು ಇವರ ಮಾಂಡಲೀಕರಾಗಿ ಕೋಗಳಿ–೫೦೦ನ್ನು ಆಳುತ್ತಿದ್ದರು. ಈ ಮನೆತನದ ಕೊನೆಯ ಅರಸ ಜಗದಳ ಪಾಂಡ್ಯನು ಕದಂಬ ಬಿರುದುಗಳಲ್ಲಿ ಕಾಣಿಸಿಕೊಳ್ಳುತ್ತಾನೆ. ಇವನಿಗೂ ಮತ್ತು ಕದಂಬರಿಗೂ ಇರುವ ಸಂಬಂಧ ಏನೆಂಬುದು ತಿಳಿಯುವುದಿಲ್ಲ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರಚಲಿತವಿರುವ ಭೂತಳಪಾಂಡ್ಯನ ಐತಿಹ್ಯ ತಿಳಿಸುವಂತೆ ಅಳಿಯ ಸಂತಾನ ಕಟ್ಟಿನ ಹಿನ್ನೆಲೆಯಲ್ಲಿ ಕದಂಬ ಕುಲದವರು ಪಾಂಡ್ಯ ಎಂಬ ಹೆಸರನ್ನು ಜ್ಞಾಪಕಾರ್ಥವಾಗಿ ರೂಢಿಸಿಕೊಂಡಿರಬೇಕು.

ಉಚ್ಚಂಗಿ ಪಾಂಡ್ಯರು ಕದಂಬ ಮನೆತನದ ಆಡಳಿತ ಪ್ರದೇಶವಾದ ಬನವಾಸಿ-೧೨೦೦೦ ಪ್ರಾಂತ್ಯದ ಉಪವಿಭಾಗವಾದ ಕದಂಬಳಿಗೆ-೧೦೦೦ ಭಾಗದಲ್ಲಿ ರಾಜಕೀಯ ಏಳಿಗೆ ಪಡೆದು ಆಡಳಿತ ನಡೆಸಿದರು. ಅಲ್ಲದೆ ಪಾಂಡ್ಯರ ರಾಜಧಾನಿಯಾದ ಉಚ್ಚಂಗಿದುರ್ಗ ಕ್ರಿ.ಶ. ೫ನೇ ಶತಮಾನದಲ್ಲಿ ಕದಂಬರ ರಾಜಧಾನಿ ಪ್ರದೇಶವಾಗಿತ್ತು. ಕದಂಬ ಮನೆತನ ಈ ಪ್ರದೇಶದಲ್ಲಿ ಹೊಯ್ಸಳ ಅರಸರ ಕಾಲದವರೆಗೂ ಸಾಮಂತರಾಗಿ ಆಡಳಿತ ನಡೆಸಿದ ಉಲ್ಲೇಖಗಳಿವೆ. ಇದುವರೆಗಿನ ಚರ್ಚೆಗಳ ಹಿನ್ನೆಲೆಯಲ್ಲಿ ಉಚ್ಚಂಗಿ ಪಾಂಡ್ಯರು ಕದಂಬರ ಮೂಲ ಮತ್ತು ಕರ್ನಾಟಕ ಮೂಲಕ್ಕೆ ಸಂಬಂಧಿಸಿದಂತೆ ಸಾಹಿತ್ಯ ಕೃತಿಗಳು, ಶಾಸನಗಳಲ್ಲಿ ಸ್ಪಷ್ಟವಾದ ಉಲ್ಲೇಖಗಳು ಕಾಣುವುದಿಲ್ಲ.

**ಉಚ್ಚಂಗಿ ಪಾಂಡ್ಯರ ವಂಶಾವಳಿ**

ಪಾಂಡ್ಯರ ವಂಶಾವಳಿಗೆ ಸಂಬಂಧಿಸಿದಂತೆ ಈವರೆಗೆ ನಡೆದಿರುವ ಅಧ್ಯಯನಗಳಲ್ಲಿ ಭಿನ್ನ ಭಿನ್ನ ನೆಲೆಯಲ್ಲಿ ಅವರ ವಂಶಾವಳಿಯನ್ನು ಗುರುತಿಸುವ ಪ್ರಯತ್ನ ನಡೆದಿದೆ. ಉಚ್ಚಂಗಿ

ಪಾಂಡ್ಯರ ಒಟ್ಟು ಶಾಸನಗಳ ಸಮಗ್ರ ಅಧ್ಯಯನ ನಡೆದಿಲ್ಲ. ಏಕಕಾಲದಲ್ಲಿ ಇಬ್ಬರು, ಮೂರು ಜನ ಅರಸರು ಆಡಳಿತ ನಡೆಸಿದ್ದಾರೆ. ಆರಂಭದ ಅರಸರ ಸಮಕಾಲೀನ ಶಾಸನಗಳು ದೊರೆಯುವುದಿಲ್ಲ. ಚಾಳುಕ್ಯ ೧ನೇ ಸೋಮೇಶ್ವರನ ಕಾಲದಲ್ಲಿ ಅವರ ಸೈನ್ಯದಲ್ಲಿ ಇದ್ದರೂ ತ್ರಿಭುವನಮಲ್ಲ ಪಾಂಡ್ಯನ ಆಡಳಿತ ಕಾಲದವರೆಗಿನ ಮನೆತನದ ಶಾಸನಗಳು ಕಾಣಿಸುವುದಿಲ್ಲ. ಆ ಅವಧಿಯಲ್ಲಿ ಪಾಂಡ್ಯರು ಸಾಮಾನ್ಯ ಅಧಿಕಾರಿಗಳಾಗಿದ್ದರಿಂದ ಶಾಸನ ಬರೆಸಲು ಸಾಧ್ಯವಾಗಿಲ್ಲವೆನಿಸುತ್ತದೆ ಹಾಗೂ ಪಾಂಡ್ಯರ ವಂಶಾವಳಿ ವಿವರ ನೀಡುವ ಕೆಲವು ಶಾಸನಗಳು ತ್ರುಟಿತವಾಗಿವೆ. ಇಂತಹ ಕಾರಣಗಳಿಂದ ಉಚ್ಚಂಗಿ ಪಾಂಡ್ಯರ ವಂಶಾವಳಿಯ ಸ್ಪಷ್ಟ ಚಿತ್ರಣವನ್ನು ಗುರುತಿಸಲು ಸಾಧ್ಯವಾಗಿಲ್ಲ.

ಅರಸೀಕೆರೆ ತಾಲೂಕಿನ ಕಾಟಿಕೆರೆಯ ಕ್ರಿ.ಶ. ೧೧೦೦ ಹೊಯ್ಸಳ ಯರೆಯಂಗನ ಶಾಸನ ಪಾಂಡ್ಯರ ವಂಶಾವಳಿಯನ್ನು ಹೇಳುವ ಮೊದಲ ಶಾಸನ; ಆನಂತರ ಹರಿಹರ, ಬನ್ನಿಕೋಡ, ಹಿರೇಯಮ್ಮಿಗನೂರ, ಬಾಗಳಿ, ಹಿರೇಮ್ಯಾಗಳಗೇರಿ, ಚಟ್ನಿನಿಹಳ್ಳಿ, ಕೊಟ್ನಿಕಲ್ಲು, ಲೋಕಿಕೆರೆ ಶಾಸನಗಳು ಉಚ್ಚಂಗಿ ಪಾಂಡ್ಯರ ವಂಶಾವಳಿಯ ಬಗ್ಗೆ ಮಾಹಿತಿ ನೀಡುತ್ತವೆ. ಈ ಶಾಸನಗಳ ಹಿನ್ನೆಲೆಯಲ್ಲಿ ಪಾಂಡ್ಯರ ವಂಶಾವಳಿಯನ್ನು ಕ್ರಮಾನುಗತವಾಗಿ ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಉಚ್ಚಂಗಿ ಪಾಂಡ್ಯರು ತಮ್ಮ ವಂಶದ ಮೂಲವನ್ನು ಪುರಾಣ ಇತಿಹಾಸದೊಂದಿಗೆ ಹೇಳಿಕೊಂಡಿದ್ದಾರೆ. ತಾವು ಚಂದ್ರ ವಂಶದ ಯದುವಂಶದವರೆಂದು ಹೇಳಿಕೊಂಡು ತಮ್ಮ ವಂಶದ ಮೂಲಕ್ಕೆ ಪುರಾಣವನ್ನು ಮೊರೆಹೊಕ್ಕಿದ್ದಾರೆ. ಉಚ್ಚಂಗಿ ಪಾಂಡ್ಯರ ವಂಶಾವಳಿಗೆ ಸಂಬಂಧಿಸಿದಂತೆ ಈವರೆಗೂ ನಡೆದಿರುವ ಅಧ್ಯಯನಗಳ ಮಾಹಿತಿ ಈ ಕೆಳಕಂಡಂತೆ ತೋರಿಸಲಾಗಿದೆ.

**೧. ದಿನಕರ ದೇಸಾಯಿ: "ಮಹಾಮಂಡಲೇಶ್ವರ ಅಂಡರ್ ದಿ ಚಾಳುಕ್ಯಸ್ ಆಫ್ ದಿ ಕಲ್ಯಾಣ" ಕೃತಿಯಲ್ಲಿ**






೨. ಝಡ್.ಕೆ. ಅನ್ಸಾರಿ : "ಸಮ್ ಫ್ಯುಡಿಟರಿ ಫ್ಯಾಮಿಲೀಸ್ ಆಫ್ ಮಿಡಿವೆಲ್ ಕರ್ನಾಟಕ" ಕೃತಿಯಲ್ಲಿ

ಆದಿತ್ಯದೇವ
↓
ಚೇದಿರಾಜ
↓
ಪಲಮಾಂದಪಾಂಡ್ಯ-I
↓
ಇರುಕ್ಕವೆಲ್
↓
ರಾಯಪಾಂಡ್ಯ
ಸೋಮಲದೇವಿ(ರಾಣಿ)
↓

ಪಂಡಿತಪಾಂಡ್ಯ → ತೈಲಪ

ವೀರಪಾಂಡ್ಯ → ಗಂಗದೇವಿ, ವಿಜಯದೇವಿ

ಪಲಮಾಂದಪಾಂಡ್ಯ-II

ವಿಜಯಪಾಂಡ್ಯ (ಕಾಮದೇವ) → ಉದಯ; ಪಂಡಿತಪಾಂಡ್ಯ → ವಿಜಯಪಾಂಡ್ಯ-II

೩. ವೆಂಕಟೇಶ : ಸೌತ್ ಇಂಡಿಯನ್ ಫ್ಯುಡಿಟರಿ ಡೈನಾಸ್ಟಿಸ್ ಕೃತಿಯಲ್ಲಿ.




೪. ನಾಗಯ್ಯ ಜೆ.ಎಂ. ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ ಮತ್ತು ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ ಹಾಗೂ ವಾಸುದೇವ ಬಡಿಗೇರ : ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ ಈ ಕೃತಿಯಲ್ಲಿ

ತ್ರಿಭುವನಮಲ್ಲರಾಯ ಪಾಂಡ್ಯ-I

ತ್ರಿಭುವನಮಲ್ಲ ಪಾಂಡ್ಯ

ತ್ರಿಭುವನಮಲ್ಲ ರಾಯ ಪಾಂಡ್ಯ-II

ಮಹಾಮಂಡಳೇಶ್ವರ ವೀರಪಾಂಡ್ಯ

ಮಹಾಮಂಡಳೇಶ್ವರ ವಿಜಯ ಪಾಂಡ್ಯ

೫. ಲಕ್ಷ್ಮಣ್ ತೆಲಗಾವಿ ಎಂ.ವಿ. ಶ್ರೀನಿವಾಸ(ಸಂ), ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನ ಲೇಖನಗಳು : ಕೃತಿಯಲ್ಲಿ ಹುಲ್ಲೂರು ಶ್ರೀನಿವಾಸ ಜೋಯಿಸರು ನೀಡಿರುವ ಪಾಂಡ್ಯರ ವಂಶಾವಳಿ



೬. ಲಲಿತಾಂಬ ಎನ್.ಆರ್. "ಉಚ್ಚಂಗಿ ಪಾಂಡ್ಯರು ಮತ್ತು ಕರ್ಕಡ ಮಾರಾಯ ವಂಶಗಳ ಮೇಲೆ ಹೊಸ ಬೆಳಕು" ಎಂಬ ಲೇಖನದಲ್ಲಿ ೨ನೇ ರಾಯ ಪಾಂಡ್ಯನವರೆಗಿನ ವಂಶಾವಳಿಯನ್ನು ಗುರುತಿಸಿದ್ದಾರೆ.




೭. ಸದಾಶಿವಪ್ಪ ಕುಂ.ಬಾ. : "ಹರಪನಹಳ್ಳಿ ತಾಲೂಕು ಪರಿಚಯ" ಕೃತಿಯಲ್ಲಿ



೮. ಪಿ. ರತ್ನಾವತಿ "ದಿ ಪಾಂಡ್ಯಸ್ ಆಫ್ ಉಚ್ಚಂಗಿ" ಎಂಬ ಎಂ.ಫಿಲ್. ಸಂಪ್ರಬಂಧದಲ್ಲಿ

ಮಂಗಯ್ಯ (ಕ್ರಿ.ಶ.೧೦೦೦-೧೦೨೦)



ಪಾಂಡ್ಯ-ತೇಜರಾಜ (ಕ್ರಿ.ಶ.೧೦೨೦-೧೦೪೦)





ತೇಜರಾಜಪಾಂಡ್ಯ (ಕ್ರಿ.ಶ.೧೦೪೦-೧೦೬೦)



ಪಲಮಾಂದಪಾಂಡ್ಯ (ಕ್ರಿ.ಶ.೧೦೭೫-೧೦೮೨)



ಇರ್ುಕವೆಲ್ ತ್ರಿಭುವನಮಲ್ಲಪಾಂಡ್ಯ (ಕ್ರಿ.ಶ.೧೦೮೨-೧೧೨೪)



ತ್ರಿಭುವನಮಲ್ಲ ರಾಯಪಾಂಡ್ಯ (ಕ್ರಿ.ಶ.೧೧೨೪-೧೧೪೦)





ಪಂಡಿತಪಾಂಡ್ಯ (ಕ್ರಿ.ಶ.೧೧೪೦-೧೧೪೧)



ತೈಲಪ

ವೀರಪಾಂಡ್ಯ (ಕ್ರಿ.ಶ.೧೧೪೧-೧೧೫೩)



ಗಂಗಾದೇವಿ-ವಿಜಯದೇವಿ

ವಿಜಯಪಾಂಡ್ಯ (ಕ್ರಿ.ಶ.೧೧೫೩-೧೧೮೭)



ಒಡೆಯ/ ಉದಯಾದಿತ್ಯ (ಕ್ರಿ.ಶ.೧೧೮೭-೧೧೯೫)

ಇರುಕುಪಾಲ (ಕ್ರಿ.ಶ.೧೦೬೦-೧೦೭೫)

↓

ಮಹಾದೇವಿ

ಉಚ್ಚಂಗಿ ಪಾಂಡ್ಯರ ೧೫೦ ಶಾಸನಗಳಲ್ಲಿ ೧೩ ಶಾಸನಗಳು ಪಾಂಡ್ಯರ ವಂಶಾವಳಿಯ ಬಗ್ಗೆ ಮಾಹಿತಿ ನೀಡುತ್ತವೆ. ಕಾಟಿಕೆರೆಯ ಶಾಸನ ಮೊದಲ ಶಾಸನವಾದರೆ ಹಿರೇಯಮ್ಮಿಗನೂರ ಹೊಯ್ಸಳ ವೀರಬಲ್ಲಾಳನ ಶಾಸನ ಕೊನೆಯ ಶಾಸನವಾಗಿದೆ. ಈ ಎಲ್ಲಾ ಶಾಸನಗಳು ಮತ್ತು ಈವರೆಗೂ ನಡೆದ ಅಧ್ಯಯನಗಳ ನೆಲೆಯಲ್ಲಿ ಉಚ್ಚಂಗಿ ಪಾಂಡ್ಯರ ವಂಶಾವಳಿಯನ್ನು ಗುರುತಿಸಲಾಗಿದೆ.


ವಿಷ್ಣು
ಬ್ರಹ್ಮ
ಅತ್ರಿ
ಸೋಮ
ಯದುರಾಜ
ಬಲರಾಮ
ಕೃಷ್ಣ
(ಈ ಯದುವಂಶದಲ್ಲಿ ಹುಟ್ಟಿದವನು)
ಮಂಗಯ್ಯ/ಆದಿತ್ಯದೇವ
ಪಾಂಡ್ಯನೃಪಾಲ[೩೧]
ಚೇದಿರಾಜ/ತೇಜರಾಜ[೩೨] - (ಕ್ರಿ.ಶ.೧೦೪೭–೬೮)
ಪಲಮಾಂದಪಾಂಡ್ಯ[೩೩]/ಪ್ರಚಂಡಪಾಂಡ್ಯ - (ಕ್ರಿ.ಶ.೧೦೬೮–೭೯)
ಪಲತ್ತ[೩೪]/ಪಳಂತ/ಪಲಿತಪಾಂಡ್ಯ[೩೫]
(ತ್ರಿಭುಮಲಮಲ್ಲಪಾಂಡ್ಯ)
ಕ್ರಿ.ಶ.೧೦೭೯-೧೧೨೫
ಇರುಕ್ಕವೇಳ್[೩೬]
(ಮಹಾದೇವಿ)
ರಾಜಪಾಂಡ್ಯ/ರಾಯಪಾಂಡ್ಯ[೩೭]
(ತ್ರಿಭುವನಮಲ್ಲ ರಾಯಪಾಂಡ್ಯ)
ಕ್ರಿ.ಶ.೧೧೨೫-೪೨
ಪೊಂಡಿಪಾಂಡ್ಯ[೩೮]
ನೊಳೆಯಪಾಂಡ್ಯ[೩೯]
ಪಂಡಿತಪಾಂಡ್ಯ[೪೦]
ತೈಲಪ
ವೀರಪಾಂಡ್ಯ[೪೧]
(ಕ್ರಿ.ಶ.೧೧೪೨-೧೧೬೩)
ರಾಣಿಯರು=ಗಂಗದೇವಿ
ವಿಜಯದೇವಿ
ಜಗದಳಪಾಂಡ್ಯ[೪೫]
(ಕ್ರಿ.ಶ.೧೨೦೬)
ಪಲಮಾಂದ
ಪಾಂಡ್ಯ-II[೪೨]
ವಿಜಯಪಾಂಡ್ಯ[೪೩]
(ಕಾಮದೇವ)
(ಕ್ರಿ.ಶ.೧೧೬೨-೧೧೯೩)
ಪಾಳಿಪಪಾಂಡ್ಯ[೪೪]
ಉದಯ

ಈ ಅಧ್ಯಯನದ ಹಿನ್ನೆಲೆಯಲ್ಲಿ ಪಳತ್ತ/ ಪಲಿತ/ಪಳಂತಪಾಂಡ್ಯ, ಪೊಂಡಿಪಾಂಡ್ಯ, ನೊಳೆಯ ಪಾಂಡ್ಯ, ಪಲಮಾಂದಪಾಂಡ್ಯ-II ಪಾಳಿಪಪಾಂಡ್ಯರನ್ನು ಉಚ್ಚಂಗಿ ಪಾಂಡ್ಯರ ವಂಶಾವಳಿಯಲ್ಲಿ ಮೊದಲ ಬಾರಿಗೆ ಸೇರಿಸಲಾಗಿದೆ.

ಈ ಹಿಂದಿನ ಅಧ್ಯಯನಗಳು ಮತ್ತು ಪ್ರಸ್ತುತ ಅಧ್ಯಯನದ ಮಧ್ಯೆ ಇರುವ ಭಿನ್ನತೆಗಳಿಗೆ ಸ್ಪಷ್ಟೀಕರಣ ಈ ಕಂಡಂತಿದೆ :

೧. ತೇಜರಾಯ ಯಾರು? ಮತ್ತು ಚೇದಿರಾಜನಿಗೂ ಈತನಿಗೂ ಇರುವ ಸಂಬಂಧ

೨. ಇರುಕ್ಕಪಾಲ ಮತ್ತು ಇರುಕ್ಕವೇಳ್‌ರ ಇಬ್ಬರ ನಡುವಿನ ಸಂಬಂಧ

೩. ತ್ರಿಭುವನಮಲ್ಲ ಪಾಂಡ್ಯ ಯಾರು?

೪. ರಾಯ ಪಾಂಡ್ಯನ ತಂದೆ ಯಾರು?

೫. ವಿಜಯ ಪಾಂಡ್ಯ-I ಮತ್ತು ವಿಜಯ ಪಾಂಡ್ಯ-IIರ ನಡುವಿನ ಸಂಬಂಧ

**೧. ತೇಜರಾಯ ಯಾರು? ಮತ್ತು ಚೇದಿರಾಜನಿಗೂ ಈತನಿಗೂ ಇರುವ ಸಂಬಂಧ**

ಹಾಸನ ಜಿಲ್ಲೆಯ ಅರಸೀಕೆರೆ ತಾಲೂಕಿನ ಕಾಟಿಕೆರೆ ಶಾಸನದಲ್ಲಿ ಮಾತ್ರ ತೇಜರಾಯನ ಉಲ್ಲೇಖವಿದೆ. ಉಳಿದ ಯಾವ ಶಾಸನಗಳಲ್ಲಿ ಈ ಹೆಸರು ಕಾಣಿಸುವುದಿಲ್ಲ. ಈ ಜಾಗದಲ್ಲಿ ಚೇದಿರಾಜನ ಉಲ್ಲೇಖ ಬರುತ್ತದೆ. ಎಂ.ವಿ. ಶ್ರೀನಿವಾಸ ಅವರು "ದಿ ಚಾಲುಕ್ಯಸ್ ಆಫ್ ಕಲ್ಯಾಣ" ಕೃತಿಯಲ್ಲಿ "ತೇಜರಾಜ ಒಬ್ಬ ಶೂರ, ಇವನ ಆಡಳಿತ ಅವಧಿಯಲ್ಲಿಯೇ ಪಾಂಡ್ಯರು ಚಾಳುಕ್ಯರೊಂದಿಗೆ ನಿಕಟಪೂರ್ವ ಸಂಬಂಧವನ್ನು ಹೊಂದಿದ್ದರು. ಈತನು ೧ನೇ ಸೋಮೇಶ್ವರನ ಸಮಕಾಲೀನ; ಈ ಮನೆತನದ ನಿಜವಾದ ಸ್ಥಾಪಕ. ಇವನು ಚೇದಿ ಅರಸರ ಮೇಲೆ ದಾಳಿ ಮಾಡಿ ಅರಸರನ್ನು ಗೆದ್ದುಕೊಂಡು ಚೇದಿರಾಜನೆಂಬ ಹೆಸರನ್ನು ಪಡೆದುಕೊಂಡನು"[೪೬] ಎಂದು ಹೇಳುತ್ತಾರೆ. ಬಿ.ಎಲ್. ರೈಸ್ ಮತ್ತು ದಿನಕರ ದೇಸಾಯಿ ಅವರು ಕಾಟಿಕೆರೆ ಶಾಸನ ಚೇದಿ ದೇಶದ ಮೇಲಿನ ದಾಳಿಯನ್ನು ವಿವರಿಸುತ್ತಾ ಈತನಿಂದಾಗಿ ಈ ಮನೆತನಕ್ಕೆ ಪಾಂಡ್ಯ ಕುಲದ ಹೆಸರು ಬಂತು ಎಂದು ತಿಳಿಸುತ್ತಾರೆ. ಪಾಂಡ್ಯರ ವಂಶಾವಳಿಯನ್ನು ತಿಳಿಸುವ ಇತರ ಶಾಸನಗಳಲ್ಲಿ ಚೇದಿರಾಜನ ಬಗೆಗಿನ ವಿವರಣೆ ಮತ್ತು ಕಾಟಿಕೆರೆ ಶಾಸನ ತೇಜರಾಜನ ಕುರಿತು ನೀಡುವ ಹೇಳಿಕೆಗಳು ಪರಸ್ಪರ ಸಾಮ್ಯತೆ ಪಡೆದುಕೊಂಡಿರುವುದರಿಂದ ವಿದ್ವಾಂಸರ ಹೇಳಿಕೆ ಸತ್ಯವೆಂಬುದು ಸ್ಪಷ್ಟವಾಗುತ್ತದೆ.

ಪಾಂಡ್ಯ ಅರಸರು ತಮ್ಮ ಬಿರುದುಗಳಲ್ಲಿ ಚೋಳ, ಚೇದಿ ಅರಸರನ್ನು ಗೆದ್ದಿರುವುದಾಗಿ ಹಾಕಿಸಿಕೊಂಡಿರುವುದು ಈ ಹೇಳಿಕೆಗೆ ಮತ್ತಷ್ಟು ಪುಷ್ಟಿ ಕೊಡುತ್ತದೆ. ಬಾಗಳಿ, ಹರಿಹರ ಶಾಸನಗಳು ಮಂಗಯ್ಯ ಪಾಂಡ್ಯ ವಂಶದ ಮೂಲ ಪುರುಷನಾಗಿದ್ದಾನೆ. ಆದರೆ ಚೇದಿರಾಜ ಪಾಂಡ್ಯ ವಂಶದ ನಿಜವಾದ ಸ್ಥಾಪಕನಾಗಿ ಈ ವಂಶಕ್ಕೆ ಅಲಂಕಾರಪ್ರಾಯನೆನಿಸಿದ ಎಂದು

ವರ್ಣಿಸುತ್ತವೆ. ಹಾಗಾಗಿ ಕಾಟಿಕೆರೆ ಶಾಸನದಲ್ಲಿ ಕಾಣಿಸಿಕೊಳ್ಳುವ ತೇಜರಾಜ ಮತ್ತು ಪಾಂಡ್ಯರ ಇತರ ಶಾಸನಗಳಲ್ಲಿ ಕಾಣಿಸಿಕೊಳ್ಳುವ ಚೇದಿರಾಜ ಇಬ್ಬರು ಒಬ್ಬರೇ ಎಂಬುದು ಸ್ಪಷ್ಟವಾಗುತ್ತದೆ. ತೇಜರಾಜ ಚೇದಿ ಭೂಮಿಯ ಮೇಲಿನ ಒಲವಿನ ಕಾರಣಕ್ಕೆ ಆ ನಾಡನ್ನು ಗೆದ್ದು ಚೇದಿರಾಜನೆಂಬ ಹೆಸರು ಪಡೆದು ಪಾಂಡ್ಯರ ಆನಂತರದ ಎಲ್ಲಾ ಶಾಸನಗಳಲ್ಲಿ ಚೇದಿರಾಜನೆಂದೇ ಕರೆಸಿಕೊಂಡಿದ್ದಾನೆ.

**೨. ಇರುಕ್ಕಪಾಲ ಮತ್ತು ಇರುಕ್ಕವೇಳ್‌ರ ಇಬ್ಬರ ನಡುವಿನ ಸಂಬಂಧ**

ದಿನಕರ ದೇಸಾಯಿ, ವೆಂಕಟೇಶ್, ಝೆಡ್.ಕೆ. ಆನ್ಸಾರಿ, ಶ್ರೀನಿವಾಸ ಜೋಯಿಸ, ಲಲಿತಾಂಬ ಇವರು ಇರುಕ್ಕಪಾಲ ಚೇದಿರಾಜನ ಸಹೋದರನೆಂದು ಇರುಕ್ಕವೇಳ್ ತ್ರಿಭುವನಮಲ್ಲ ಪಾಂಡ್ಯನೆಂದು ಗುರುತಿಸಿದ್ದಾರೆ. ಇದಕ್ಕೆ ಕಾಟಿಕೆರೆ ಶಾಸನವನ್ನೇ ಆಕರವಾಗಿ ಗುರುತಿಸಿದ್ದಾರೆ. ಕಾಟಿಕೆರೆ ಶಾಸನವಾಗಲಿ ಪಾಂಡ್ಯರ ಇತರೆ ಯಾವುದೇ ಶಾಸನಗಳು ಈ ಭಿನ್ನತೆಯನ್ನು ಹೇಳುವುದಿಲ್ಲ. ಇವು ಇರುಕ್ಕವೇಳ್‌ನನ್ನು ಮಾತ್ರ ಹೆಸರಿಸಿವೆ. ಇರುಕ್ಕವೇಳ್ ರಾಯಪಾಂಡ್ಯ ತಂದೆ ಎಂದು ಕೆಲವು ಶಾಸನಗಳು ತಿಳಿಸುತ್ತವೆ. ವಿದ್ವಾಂಸರು ಗುರುತಿಸಿರುವ ಇರುಕ್ಕವೇಳ್ ಮತ್ತು ಇರುಕ್ಕಪಾಲರು ಬೇರೆ ಬೇರೆ ಎಂಬುದಕ್ಕೆ ಯಾವುದೇ ನಿಖರ ಆಕರಗಳಿಲ್ಲ. ಕಾಟಿಕೆರೆ ಶಾಸನ ತಿಳಿಸುವಂತೆ ಪ್ರಚಂಡ ಪಾಂಡ್ಯನ ಮಗ ಇರುಕ್ಕವೇಳ್ ಈತನು ಕರ್ಕ್ಕಡ ಮಹಾರಾಯ ಮನೆತನಕ್ಕೆ ಸೇರಿದ ಸ್ತ್ರೀಯನ್ನು ಮದುವೆಯಾಗಿದ್ದ ಮತ್ತು ತನ್ನ ಮಗಳನ್ನು ಆ ಮನೆತನಕ್ಕೆ ಕೊಟ್ಟಿದ್ದ. ಇವರು ಚೋಳರ ಸಾಮಂತರಾಗಿದ್ದರು. ಇರುಕ್ಕವೇಳ್ ಈ ವೇಳೆ ತನ್ನ ಮಗಳ ಮಗಳಾದ ಮಹಾದೇವಿಯನ್ನು ಹೊಯ್ಸಳ ಎರೆಯಂಗನಿಗೆ ಕೊಟ್ಟು ಮದುವೆ ಮಾಡಿದ; ಈ ಮಹಾದೇವಿ ಇರುಕ್ಕವೇಳ್ ಪಾಂಡ್ಯ ಕುಲದವಳು ಎಂದು ಹೇಳುತ್ತದೆ.[೪೭] ಇಲ್ಲಿ ಇರುಕ್ಕಪಾಲನ ಪ್ರಸ್ತಾಪವೇ ಬರುವುದಿಲ್ಲ. ಹಾಗಾಗಿ ಪಾಂಡ್ಯ ವಂಶದಲ್ಲಿ ಇರುಕ್ಕಪಾಲ ಮತ್ತು ಇರುಕ್ಕವೇಳ್ ಇಬ್ಬರಿಲ್ಲ; ಅದು ಒಬ್ಬನೇ ಇರುಕ್ಕುವೇಳ್; ಇವನನ್ನೇ ಇರುಕ್ಕಪಾಲನೆಂದು ಕರೆಯಲಾಗಿದೆ.

**೩. ತ್ರಿಭುವನಮಲ್ಲ ಪಾಂಡ್ಯ ಯಾರು?**

ಪಾಂಡ್ಯರನ್ನು ಕುರಿತು ನಡೆದ ಈವರೆಗಿನ ಎಲ್ಲಾ ಅಧ್ಯಯನಗಳು ಇರುಕ್ಕವೇಳ್ ಪಾಂಡ್ಯನನ್ನೆ ತ್ರಿಭುವನಮಲ್ಲ ಪಾಂಡ್ಯನೆಂದು ಕರೆದಿವೆ ಹಾಗೂ ಇರುಕ್ಕವೇಳ್ ರಾಯ ಪಾಂಡ್ಯನ ತಂದೆ ಎಂದು ಶಾಸನಗಳು ಹೇಳುತ್ತವೆ. ಆದರೆ ವಾಸ್ತವವಾಗಿ ಪಲತ/ಪಳಿತ್ತಪಾಂಡ್ಯನೇ ತ್ರಿಭುವನಮಲ್ಲ ಪಾಂಡ್ಯ ಎಂಬುದು ಸತ್ಯ. ಪಲತ ಪಾಂಡ್ಯನನ್ನು ಪಾಂಡ್ಯರ ವಂಶಾವಳಿಯ ಶಾಸನದಿಂದಲೇ ಕೈ ಬಿಡಲಾಗಿದೆ. ಬಾಗಳಿ, ಹರಿಹರ ಲೋಕಿಕೆರೆ ಶಾಸನಗಳು ಪಳತ್ತ ಮತ್ತು ಇರುಕ್ಕವೇಳ್ ಪಲಮಾಂದಪಾಂಡ್ಯನ ಮಕ್ಕಳು ಎಂದು ಹೇಳುತ್ತವೆ. ಹಾಗಾಗಿ ಇವರು ಸಹೋದರರೆಂಬುದು ಸ್ಪಷ್ಟವಾಗುತ್ತದೆ. ಕ್ರಿ.ಶ. ೧೧೨೪ರ ಗೋರೆಹಟ್ಟಿ ಶಾಸನದ ಪ್ರಕಾರ ಇರುಕ್ಕವೇಳ್ ತ್ರಿಭುವನಮಲ್ಲ ಪಾಂಡ್ಯನ ಸಾಮಂತನಾಗಿದ್ದನೆಂದು ತಿಳಿಸುತ್ತದೆ.[೪೮] ಇರುಕ್ಕವೇಳ್‌ನನ್ನು ಶೌಚಗಾಂಗೆಯಮ್, ಕಾಯ್ವರಭೀಮಮ್, ಸಂಗ್ರಮ್‌ರಾಮಮ್, ರಣಮೂರ್ಖ ಕುಳಪ್ರದೀಪಂ ಇತ್ಯಾದಿ ಹೆಸರುಗಳಿಂದ ಕರೆಯಲಾಗಿದೆ. ತ್ರಿಭುವನಮಲ್ಲ ಪಾಂಡ್ಯ ಉಳವಿ ನೆಲೆವೀಡಿನಿಂದ ಆಳುತ್ತಿರುವಾಗ ಇರಕ್ಕವೇಳ್ ಬೇತೂರು ನೆಲೆವೀಡಿನಿಂದ ಆಳುತ್ತಿದ್ದನೆಂದು ಡಿ.ಎಂ. ನಾಗರಾಜ ಬರೆಯುತ್ತಾರೆ.

ಕ್ರಿ.ಶ. ೧೧೮೩ರ ನೀಲಗುಂದ ಶಾಸನ ತ್ರಿಭುವನಮಲ್ಲ ಕಲ್ಯಾಣದಿಂದ ಆಳುತ್ತಿರುವಾಗ ಆತನ ಸರ್ವಾಧ್ಯಕ್ಷ ರಾಯಪಾಂಡ್ಯನ ಕೋರಿಕೆಯಂತೆ ರಾಯಪಾಂಡ್ಯನ ತಂದೆ ಪಳತ್ತ ಪಾಂಡ್ಯ ಬ್ರಾಹ್ಮಣರಿಗೆ ಕೃಷ್ಣಪಲಿಕೆಯನ್ನು ದಾನ ನೀಡಿರುವುದನ್ನು ತಿಳಿಸುತ್ತದೆ.[೯] ರಾಯಪಾಂಡ್ಯನ ತಂದೆ ಇರುಕ್ಕವೇಳ್ ಅಲ್ಲ ಪಳತ್ತ ಪಾಂಡ್ಯ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಈ ಅವಧಿಯಲ್ಲಿ ಹೊಯ್ಸಳ ವೀರಬಲ್ಲಾಳನ ಹಿರೇಯಮ್ಮಿಗನೂರ ಶಾಸನ ನೊಳಂಬವಾಡಿ-೩೨೦೦೦ವನ್ನು ಮೊದಲು ಚಾಳುಕ್ಯರು, ಕಳಚೂರಿಗಳು ಅನಂತರ ಪಳತ್ತ ಪಾಂಡ್ಯ ಈ ವಂಶದ ರಾಯಪಾಂಡ್ಯ, ಮಕ್ಕಳಾದ ವೀರಪಾಂಡ್ಯ, ವಿಜಯಪಾಂಡ್ಯರು ಆಳಿದ ನೊಳಂಬವಾಡಿ-೩೨೦೦೦ ಪ್ರದೇಶವನ್ನು ಜಯಿಸಿ ರುವುದಾಗಿ ಹೇಳುತ್ತದೆ.[೨೦] ನೊಳಂಬವಾಡಿ-೩೨೦೦೦ದ ಆಡಳಿತದ ಮೊದಲು ಅಧಿಕಾರ ಹಿಡಿದವನು ಪಳತ್ತ ಪಾಂಡ್ಯನೆಂಬುದು ಈ ಶಾಸನದಿಂದ ಸ್ಪಷ್ಟವಾಗುತ್ತದೆ. ಕ್ರಿ.ಶ. ೧೦೭೯ರ ನೀಲಗುಂದ ಶಾಸನವೇ ಪಾಂಡ್ಯರ ಆಡಳಿತದ ಮೊದಲ ಉಲ್ಲೇಖವಾಗಿದೆ. ಇಲ್ಲಿ ಬರುವ ತ್ರಿಭುವನಮಲ್ಲ ಪಾಂಡ್ಯ ಪಳತ್ತ ಪಾಂಡ್ಯನೆಂಬುದು ಈ ಎರಡು ಶಾಸನಗಳಿಂದ ದೃಢವಾಗುತ್ತದೆ.

ತ್ರಿಭುವನಮಲ್ಲ ಪಾಂಡ್ಯನ ಕಾಲಕ್ಕೆ ಚೋಳರು ಮತ್ತು ಹೊಯ್ಸಳರು ಪಾಂಡ್ಯ ವಂಶದ ಶತ್ರುಗಳಾಗಿದ್ದರು. ಪಾಂಡ್ಯ ವಂಶದ ಮೂಲ ಪುರುಷರಾದಿಯಾಗಿ ಚೋಳರೊಂದಿಗೆ ಕಾದಾಡಿ ರುವುದು ಶಾಸನಗಳಲ್ಲಿ ಅವರು ಹೊಂದಿರುವ ಬಿರುದುಗಳಿಂದ ಸ್ಪಷ್ಟವಾಗುತ್ತದೆ. ಹೊಯ್ಸಳರು ಸ್ವತಂತ್ರರಾಗಲು ಪಾಂಡ್ಯ ರಾಜ್ಯದ ಮೇಲೆ ದಾಳಿ ಮಾಡಿರುವುದು ಶಾಸನಗಳಿಂದ ತಿಳಿಯುತ್ತದೆ. ಕಾಟಿಕೆರೆ ಶಾಸನ ತಿಳಿಸುವಂತೆ ಇರುಕ್ಕವೇಳ್-ಚೋಳರೊಂದಿಗೆ ಮತ್ತು ಹೊಯ್ಸಳರೊಂದಿಗೆ ಸಂಬಂಧ ಬೆಳೆಸಿರುವುದು ಅಧಿಕೃತವಾಗಿದೆ. ಈ ವೇಳೆಗೆ ಚೋಳ ಮತ್ತು ಹೊಯ್ಸಳರು ಪಾಂಡ್ಯರಿಗೆ ಮಾತ್ರ ಶತ್ರುಗಳಾಗಿರಲಿಲ್ಲ. ಅವರು ಚಾಳುಕ್ಯ ಅರಸರಿಗೂ ಶತ್ರುಗಳಾಗಿದ್ದರು. ತ್ರಿಭುವನಮಲ್ಲ ಕಣೆಕಲ್ಲು ಕದನದಲ್ಲಿ ಹೊಯ್ಸಳರನ್ನು ಸೋಲಿಸಿ ಸಾಮಂತರನ್ನಾಗಿ ಮಾಡಿಕೊಂಡಿರುವುದು ಶಾಸನದಿಂದ ತಿಳಿಯುತ್ತದೆ. ಹಾಗಾಗಿ ಇರುಕ್ಕವೇಳ್‌ನ ತ್ರಿಭುವನಮಲ್ಲ ಪಾಂಡ್ಯನಾಗಿದ್ದರೆ ಚಾಳುಕ್ಯ ಶತ್ರುಗಳೊಂದಿಗೆ ಸಂಬಂಧ ಬೆಳೆಸಿದ ಇರುಕ್ಕವೇಳ್‌ನಿಗೆ ನೊಳಂಬ ವಾಡಿಯ ಅಧಿಕಾರ ದೊರೆಯುತ್ತಿರಲಿಲ್ಲ. ಪಾಂಡ್ಯರು ಚಾಳುಕ್ಯರ ಸಂಬಂಧ ಉಳಿಸಿಕೊಳ್ಳಲು ಇರುಕ್ಕವೇಳ್‌ನನ್ನು ಅಧಿಕಾರದಿಂದ ದೂರವಿರಿಸಿದ್ದರು. ಇರುಕ್ಕವೇಳ್‌ನಿಗೆ ಸಂಬಂಧಿಸಿದ ಒಂದು ಶಾಸನವೂ ದೊರೆಯುವುದಿಲ್ಲ. ಆದ್ದರಿಂದ ಇರುಕ್ಕವೇಳ್‌ನ ಸಹೋದರ ಪಳತ್ತ ಪಾಂಡ್ಯನೇ ತ್ರಿಭುವನಮಲ್ಲ ಪಾಂಡ್ಯ ಎಂಬುದು ಸ್ಪಷ್ಟ. ವಿಕ್ರಮಾದಿತ್ಯನಿಂದ ತ್ರಿಭುವನಮಲ್ಲ ಪಾಂಡ್ಯನೆಂಬ ಬಿರುದು ಪಡೆದ ಪಳತ್ತ ಪಾಂಡ್ಯ ಆ ಹೆಸರಿನಲ್ಲೇ ತ್ರಿಭುವನಮಲ್ಲನ ವಿಶ್ವಾಸಕ್ಕೆ ಪಾತ್ರನಾಗಿ ಪಾಂಡ್ಯ ವಂಶದ ಆಡಳಿತಕ್ಕೆ ಭದ್ರಬುನಾದಿ ಹಾಕಿದ.

ನಾಗಯ್ಯ ಜೆ.ಎಂ., ವಾಸುದೇವ ಬಡಿಗೇರ ಇವರು ತ್ರಿಭುವನಮಲ್ಲ ರಾಯಪಾಂಡ್ಯ-I, ತ್ರಿಭುವನಮಲ್ಲರಾಯಪಾಂಡ್ಯ-II ಎಂದು ಈತ ತ್ರಿಭುವನಮಲ್ಲ ರಾಯಪಾಂಡ್ಯ-Iನ ಮಗನೆಂದು ಹೇಳುತ್ತಾರೆ. ಕ್ರಿ.ಶ. ೧೦೭೯ರ ನೀಲಗುಂದ ಶಾಸನ ರಾಯಪಾಂಡ್ಯನನ್ನು ಹೆಸರಿಸುತ್ತದೆ.

ಆನಂತರ ರಾಯಪಾಂಡ್ಯನ ಹೆಸರು ಶಾಸನಗಳಲ್ಲಿ ಕಾಣಿಸುವುದಿಲ್ಲ. ಹಾಗಾಗಿ ಈ ಊಹೆ ಮಾಡಿದಂತೆ ಕಾಣುತ್ತದೆ. ಕ್ರಿ.ಶ. ೧೦೮೭ರ ಶಾಸನ ರಾಯಪಾಂಡ್ಯ ಮತ್ತು ತ್ರಿಭುವನಮಲ್ಲ ಪಾಂಡ್ಯ ಒಟ್ಟಿಗೆ ಆಡಳಿತ ನಡೆಸಿರುವುದನ್ನು ಹೇಳುತ್ತದೆ. ರಾಯಪಾಂಡ್ಯ ಕುಮಾರ ವೃತ್ತಿಯಿಂದ ಆಡಳಿತ ನಡೆಸುತ್ತಿದ್ದ. ಕ್ರಿ.ಶ. ೧೧೧೭ರಲ್ಲಿ ಹೊಯ್ಸಳರು ಮತ್ತು ಪಾಂಡ್ಯರ ನಡುವೆ ನಡೆದ ದುಮ್ಮಿ ಕಾಳಗದಲ್ಲಿ ಮೊದಲನೇ ರಾಯಪಾಂಡ್ಯ ತನ್ನ ತಂದೆಯ ಕಾಲದಲ್ಲಿ ಮಡಿದನೆಂದು ಲಲಿತಾಂಬ ಮತ್ತು ಬಾ.ರ. ಗೋಪಾಲರು ಊಹಿಸಿದ್ದಾರೆ. ಆದರೆ ಈ ಕದನದಲ್ಲಿ ಯಾರಿಗೆ ಜಯವಾಯಿತು ಮತ್ತು ಮಡಿದ ಉಲ್ಲೇಖಗಳು ಇಲ್ಲ. ಒಂದುವೇಳೆ ರಾಯಪಾಂಡ್ಯ-I, ಕದನದಲ್ಲಿ ಮಡಿದಿದ್ದರೆ ಆನಂತರದ ಶಾಸನದಲ್ಲಿ ಇದರ ಉಲ್ಲೇಖ ಬರುತ್ತಿತ್ತು. ಅಲ್ಲದೆ ರಾಯಪಾಂಡ್ಯನ ಮಗ ರಾಯಪಾಂಡ್ಯ ಎಂದು ಯಾವ ಶಾಸನಗಳು ಹೇಳುವುದಿಲ್ಲ. ಕ್ರಿ.ಶ. ೧೧೨೫ರ ನಂತರ ರಾಯಪಾಂಡ್ಯನ ಆಡಳಿತದ ಕಾಲದಲ್ಲಿ ಕೆಲವು ಶಾಸನಗಳಲ್ಲಿ ತ್ರಿಭುವನಮಲ್ಲ ಪಾಂಡ್ಯನೆಂದು ಹೇಳುತ್ತವೆ. ಬಹುಶಃ ರಾಯಪಾಂಡ್ಯ ತನ್ನ ತಂದೆಯ ಮೇಲಿನ ಪ್ರೀತಿ ಗೌರವದ ಕಾರಣಕ್ಕೆ ಈ ಹೆಸರನ್ನು ಮುಂದುವರಿಸಿದಂತೆ ಕಾಣುತ್ತದೆ. ಆನೆಕೊಂಡದಲ್ಲಿ ತನ್ನ ತಂದೆ ತ್ರಿಭುವನಮಲ್ಲ ಪಾಂಡ್ಯನ ಹೆಸರಿನಲ್ಲಿ ತ್ರಿಭುವನಮಲ್ಲ ಪಾಂಡೇಶ್ವರ ದೇವಸ್ಥಾನ ನಿರ್ಮಿಸಿ ದೇವರಿಗೆ ದಾನ ನೀಡುತ್ತಾನೆ. ತಂದೆಯ ಮೇಲಿನ ಗೌರವ ಎಷ್ಟಿತ್ತು ಎಂಬುದು ಇದರಿಂದ ತಿಳಿಯುತ್ತದೆ. ತ್ರಿಭುವನಮಲ್ಲ ಪಾಂಡ್ಯ ಮತ್ತು ಮಗ ರಾಯಪಾಂಡ್ಯ ಇಬ್ಬರು ಒಟ್ಟಿಗೆ ಆಡಳಿತ ನಡೆಸಿದ್ದರು. ಈ ಅವಧಿಯಲ್ಲಿ ಹೊಯ್ಸಳ ವಿಷ್ಣುವರ್ಧನ ಸ್ವತಂತ್ರನಾಗಲು ಪ್ರಯತ್ನಿಸುತ್ತಿದ್ದ. ಈ ಪ್ರಯತ್ನವನ್ನು ತಡೆಯಲು ಚಾಳುಕ್ಯ ವಿಕ್ರಮಾದಿತ್ಯನಿಂದ ತ್ರಿಭುವನಮಲ್ಲ ಪಾಂಡ್ಯ ನೇಮಕವಾಗಿದ್ದ. ಜೊತೆಗೆ ಚಾಳುಕ್ಯ ಅರಸನ ದಂಡಯಾತ್ರೆಗಳಲ್ಲಿ ಈತ ಭಾಗವಹಿಸಿದ್ದ ಎಂಬುದು ಶಾಸನಗಳಿಂದ ತಿಳಿಯುತ್ತದೆ. ಅರಸನ ಕರ್ತವ್ಯದಲ್ಲಿ ತ್ರಿಭುವನಮಲ್ಲ ಪಾಂಡ್ಯ ಭಾಗವಹಿಸಿದ್ದರಿಂದ ಆತನ ಪ್ರತಿನಿಧಿಯಾಗಿ ರಾಯಪಾಂಡ್ಯ ನೊಳಂಬವಾಡಿ ನಾಡಿನ ಆಡಳಿತವನ್ನು ತಂದೆಯ ಹೆಸರಿನಲ್ಲಿ ನಿರ್ವಹಿಸಿದ್ದಾನೆ. ತಂದೆಯ ಮರಣದ ನಂತರವೂ ಅದೇ ಪ್ರೀತಿ ವಿಶ್ವಾಸವನ್ನು ಮುಂದುವರಿಸಿದ್ದಾನೆ. ತ್ರಿಭುವನಮಲ್ಲ ಸತ್ತ ನಂತರವೂ ಆತನ ಹೆಸರಿನಲ್ಲಿ ಮಹಾಮಂಡಳೇಶ್ವರರು ಶಾಸನ ಹಾಕಿಸಿರುವುದು ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಕಂಡುಬರುತ್ತದೆ. ಅದೇ ರೀತಿ ರಾಯಪಾಂಡ್ಯನು ಪಿತೃ ಗೌರವವನ್ನು ಕಾಪಾಡಿಕೊಂಡಿದ್ದಾನೆ. ಒಟ್ಟಿನಲ್ಲಿ ಪಳತ್ತ ಪಾಂಡ್ಯನ ಇನ್ನೊಂದು ಹೆಸರು ತ್ರಿಭುವನಮಲ್ಲ ಪಾಂಡ್ಯನೆಂದು ಇವನ ಮಗ ರಾಯಪಾಂಡ್ಯ ಒಬ್ಬನೆ ಹೊರತು ರಾಯಪಾಂಡ್ಯ–೧ ಮತ್ತು ರಾಯಪಾಂಡ್ಯ–೨ ಎನ್ನುವ ಯಾವ ಭಿನ್ನತೆಯೂ ಇಲ್ಲ ಎಂಬುದು ಸ್ಪಷ್ಟವಾಗುತ್ತದೆ.

**೫. ವಿಜಯ ಪಾಂಡ್ಯ-I ಮತ್ತು ವಿಜಯ ಪಾಂಡ್ಯ-IIರ ನಡುವಿನ ಸಂಬಂಧ**

ಬುರುಡೇಕಟ್ಟೆ ಮಂಜಪ್ಪ, ಕುಂ.ಬ. ಸದಾಶಿವಪ್ಪ ಅವರು ಪಾಂಡ್ಯ ವಂಶದಲ್ಲಿ ಕ್ರಿ.ಶ. ೧೧೨೩ರ ವೇಳೆಯಲ್ಲಿ ವಿಜಯಪಾಂಡ್ಯ-I ಕ್ರಿ.ಶ. ೧೧೬೩ರಲ್ಲಿ ವಿಜಯಪಾಂಡ್ಯ-II ಇಬ್ಬರು ಆಡಳಿತ ನಡೆಸಿದ್ದಾರೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಬೆತ್ತೂರಿನ ಅಪ್ರಕಟಿತ

ಶಾಸನವನ್ನು ಪರಿಚಯಿಸುವಾಗ ಈ ರೀತಿ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಕ್ರಿಶ. ೧೧೧೧ರ ಈ ಶಾಸನ ಜಗದೇಕಮಲ್ಲ ವಿಜಯಪಾಂಡ್ಯನು ಆಳುತ್ತಿರುವುದಾಗಿ ಹೇಳಿದೆ. ಬಾಗಳಿ ಒಂದು ಶಾಸನ ಈ ರೀತಿಯ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತದೆ. ಈ ವೇಳೆಯಲ್ಲಿ ತ್ರಿಭುವನಮಲ್ಲ ಪಾಂಡ್ಯ ತ್ರಿಭುವನಮಲ್ಲನ ಸಾಮಂತನಾಗಿ ಆಳುತ್ತಿದ್ದ. ಆದರೆ ಈ ಶಾಸನಗಳು ಜಗದೇಕಮಲ್ಲನನ್ನು ಹೆಸರಿಸುತ್ತವೆ. ಹಾಗಾಗಿ ವಿಜಯಪಾಂಡ್ಯ-I ಮತ್ತು ವಿಜಯಪಾಂಡ್ಯ-II ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಚಾಳುಕ್ಯ ವಿಕ್ರಮಾದಿತ್ಯ ತ್ರಿಭುವನಮಲ್ಲದೇವನ ಕಾಲದಲ್ಲಿ ಆತನ ಸಹೋದರ ಜಯಸಿಂಹ ಜಗದೇಕಮಲ್ಲ ಅವನೊಂದಿಗೆ ಆಡಳಿತದಲ್ಲಿರುವುದು ಶಾಸನಗಳಿಂದ ತಿಳಿಯುತ್ತದೆ. ಕ್ರಿಶ. ೧೧೦೮ರ ಬಾಗಳಿ ಶಾಸನ ತ್ರಿಭುನಮಲ್ಲದೇವನು ಕಲ್ಯಾಣದಿಂದ ಆಳುತ್ತಿರುವಾಗ ವೀರಪಾಂಡ್ಯ ನೊಳಂಬವಾಡಿ-೩೨೦೦೦ ಆಳುತ್ತಿದ್ದ. ಈತನ ಸಾಮಂತ ವಿಜಯಪಾಂಡ್ಯದೇವ ಅವನ ಪಸಾಯಿತ ಸರ್ವಾಧ್ಯಕ್ಷ ವಿಜಯಹೆಮ್ಮಾಡಿ ದಂಡನಾಯಕನು ವಿಜಯಪಾಂಡ್ಯದೇವನ ರಾಜನ ಕರ್ತವ್ಯಗಳನ್ನು ಪರಿಪಾಲಿಸುತ್ತಿದ್ದ ಎಂಬ ವಿಷಯವನ್ನು ತಿಳಿಸುತ್ತದೆ.[೫೧] ತ್ರಿಭುವನಮಲ್ಲ ಪಾಂಡ್ಯ ದೇವನ ಕಾಲದಲ್ಲಿ ಮಗ ರಾಯಪಾಂಡ್ಯನ ಮಕ್ಕಳಾದ ವೀರಪಾಂಡ್ಯ, ವಿಜಯಪಾಂಡ್ಯರು ಆಡಳಿತದಲ್ಲಿ ಇದ್ದ ವಿಷಯವನ್ನು ಬಾಗಳಿ, ಅಂಬಳಿ, ಚಿತ್ರದುರ್ಗ, ಬೇತೂರು ಶಾಸನಗಳು ಹೇಳುತ್ತವೆ. ವಿಜಯಪಾಂಡ್ಯ ತನ್ನ ಸ್ವತಂತ್ರ ಆಡಳಿತ ಸಂದರ್ಭದಲ್ಲಿ ತ್ರಿಭುವನಮಲ್ಲ ೪ನೇ ಸೋಮೇಶ್ವರನ ಅಧಿಕಾರವಿದ್ದರೂ ಜಗದೇಕಮಲ್ಲದೇವನ ಹೆಸರಿನಲ್ಲಿ ಶಾಸನ ಹಾಕಿಸಲಾಗಿದೆ. ವಿಜಯಪಾಂಡ್ಯ ತ್ರಿಭುವನಮಲ್ಲ ವಿಜಯಪಾಂಡ್ಯ ಮತ್ತು ಜಗದೇಕಮಲ್ಲ ವಿಜಯಪಾಂಡ್ಯ ಎಂಬ ಎರಡು ಹೆಸರಿನ ಶಾಸನಗಳು ದೊರೆತಿವೆ. ವಿಜಯಪಾಂಡ್ಯನ ಆಡಳಿತದ ವೇಳೆಗೆ ಚಾಳುಕ್ಯರು ಅಧಿಕಾರ ಕಳೆದುಕೊಂಡು ಕಳಚೂರಿಗಳು ಅಧಿಕಾರಕ್ಕೆ ಬಂದಿದ್ದರು. ವಿಜಯಪಾಂಡ್ಯ ಕಳಚೂರಿ ರಾಯಮುರಾರಿಯ ಅಧೀನತೆಯನ್ನು ಒಪ್ಪದೆ, ಚಾಳುಕ್ಯರ ನಿಷ್ಠೆ ಉಳಿಸಿಕೊಳ್ಳಲು ಜಗದೇಕಮಲ್ಲನ ಹೆಸರಿನಲ್ಲಿ ಸ್ವತಂತ್ರವಾಗಿ ಆಡಳಿತ ನಡೆಸಿದ. ಕ್ರಿಶ. ೧೧೮೩ರ ಪುನಃ ಚಾಳುಕ್ಯರು ಅಧಿಕಾರ ಬಂದಾಗ ತ್ರಿಭುವನಮಲ್ಲ ಮತ್ತು ಜಗದೇಕಮಲ್ಲ ಇಬ್ಬರ ಹೆಸರನ್ನು ಶಾಸನಗಳಲ್ಲಿ ಸ್ಮರಿಸಿಕೊಂಡಿದ್ದಾನೆ. ಉಚ್ಚಂಗಿ ಪಾಂಡ್ಯರ ವಂಶಾವಳಿಯನ್ನು ತಿಳಿಸುವ ಯಾವ ಶಾಸನಗಳಲ್ಲಿ ಮತ್ತು ವಿದ್ವಾಂಸರು ಗುರುತಿಸಿರುವ ವಂಶಾವಳಿಗಳಲ್ಲಿ ವಿಜಯಪಾಂಡ್ಯ-೧ ಮತ್ತು ೨ ಎಂಬ ಭಿನ್ನತೆಗಳು ಇಲ್ಲ. ವಿಜಯಪಾಂಡ್ಯನ ಆಡಳಿತ ಕ್ರಿಶ. ೧೧೬೩ರಿಂದ ಆರಂಭವಾಗುತ್ತದೆ. ಬಾಗಳಿ ಶಾಸನ-೧೧೦೮, ಬೇತೂರು ಶಾಸನ-೧೧೧೧ ಕಾಲದಲ್ಲಿ ಇವೆ. ರಾಯಪಾಂಡ್ಯ ತನ್ನ ೪ನೇ ಅಥವಾ ಕೊನೆಯ ಮಗನಾದ ವಿಜಯಪಾಂಡ್ಯ ಹುಟ್ಟಿದ ಸಂತೋಷಕ್ಕೆ ಅವನ ಹೆಸರಿನಲ್ಲಿ ಶಾಸನಗಳನ್ನು ಹಾಕಿಸಿರಬಹುದು. ವೀರಪಾಂಡ್ಯ ಸಹೋದರನ ಸಂತೋಷಕ್ಕಾಗಿ ತನ್ನ ಶಾಸನದಲ್ಲಿ ವಿಜಯ ಪಾಂಡ್ಯನನ್ನು ಹೆಸರಿಸಿಕೊಂಡಿರಬೇಕು.

ಬೇತೂರು ಮತ್ತು ಬಾಗಳಿ ಶಾಸನದಲ್ಲಿ ಕಾಣಿಸಿಕೊಳ್ಳುವ ವಿಜಯಪಾಂಡ್ಯನ ಅಧಿಕಾರಿಗಳಾದ ಉದಯಾದಿತ್ಯ ದಂಡನಾಯಕ, ಬಮ್ಮಯ್ಯ ವಿಜಯ ಪೆರ್ಮಾಡಿಗಳ ಉಲ್ಲೇಖ ವಿಜಯಪಾಂಡ್ಯನ

ಸ್ವತಂತ್ರ ಆಡಳಿತದ ಶಾಸನಗಳಲ್ಲಿ ಕಾಣಿಸಿಕೊಳ್ಳುತ್ತಾರೆ. ವಿಜಯ ಪೆರ್ಮಾಡಿ ವಿಜಯಪಾಂಡ್ಯನ ಆರಂಭದಿಂದ ಹಿಡಿದು ಕೊನೆಯ ಕಾಲದವರೆಗೂ ದಂಡನಾಯಕ, ಸಂಧಿವಿಗ್ರಹಿ, ಸರ್ವಾಧ್ಯಕ್ಷ ಮಹಾ ಪಸಾಯತ ಮೊದಲಾದ ಹುದ್ದೆಗಳಲ್ಲಿ ಆಡಳಿತ ನಡೆಸಿರುವುದು ಶಾಸನಗಳಿಂದ ಸ್ಪಷ್ಟವಾಗುತ್ತದೆ.

ಕುಂ.ಬಾ ಸದಾಶಿವಪ್ಪ ಅವರು ವಿಜಯಪಾಂಡ್ಯನ ಮರಣಾನಂತರ ಆತನ ಮಗ ಇಮ್ಮಡಿ ವಿಜಯಪಾಂಡ್ಯ ಆಡಳಿತ ನಡೆಸಿದ ಎಂದು ಹೇಳಿದ್ದಾರೆ. ತಂದೆಯ ನಂತರ ಮಗ ಅಥವಾ ಮೊಮ್ಮಕ್ಕಳು ಇಮ್ಮಡಿ ಅಥವಾ ವಿಜಯಪಾಂಡ್ಯ-II ಎಂಬ ಹೆಸರಿನಲ್ಲಿ ಆಡಳಿತ ನಡೆಸಲು ಅವಕಾಶವಿದೆ. ಈವರೆಗೂ ದೊರೆತಿರುವ ಶಾಸನಗಳಲ್ಲಿ ಇಮ್ಮಡಿ ವಿಜಯಪಾಂಡ್ಯನ ಉಲ್ಲೇಖ ದೊರೆತಿಲ್ಲ. ಹಾಗಾಗಿ ಇದು ಅವರ ಊಹೆಯಾಗಿದೆ.

ಉಚ್ಚಂಗಿ ಪಾಂಡ್ಯರ ಒಟ್ಟು ಶಾಸನಗಳು, ಈವರೆಗೆ ನಡೆದ ಅಧ್ಯಯನಗಳ ಪರಿಶೀಲನೆಯಿಂದ ಉಚ್ಚಂಗಿ ಪಾಂಡ್ಯರ ಮೂಲ ಮತ್ತು ವಂಶಾವಳಿಯನ್ನು ಕಟ್ಟಿಕೊಡುವ ಪ್ರಯತ್ನವನ್ನು ಇಲ್ಲಿ ಮಾಡಿದೆ. ಅದರೊಂದಿಗೆ ವಂಶಾವಳಿ ಹಾಗೂ ಮೂಲ ವಿಚಾರಕ್ಕೆ ಸಂಬಂಧಿಸಿದಂತೆ ಎತ್ತಿದ ಪ್ರಶ್ನೆಗಳಿಗೆ ಉತ್ತರ ನೀಡುವ ಪ್ರಯತ್ನವಿದು.



## ೩.೨. ಅರಸರ ಜೀವನ ಮತ್ತು ಸಾಧನೆಗಳು

ಉಚ್ಚಂಗಿ ಪಾಂಡ್ಯ ವಂಶದ ಆರಂಭದ ಅರಸರ ಕುರಿತು ಅರಸೀಕೆರೆ ತಾಲೂಕಿನ ಕಾಟಿಕೆರೆ ಶಾಸನ ಮಾಹಿತಿ ನೀಡುತ್ತದೆ. ಆನಂತರದ ಅರಸರ ಕುರಿತು ಬಳ್ಳಾರಿ, ದಾವಣಗೆರೆ, ಚಿತ್ರದುರ್ಗ, ತುಮಕೂರು ಜಿಲ್ಲೆಯ ಸುಮಾರು ೧೫೦ ಶಾಸನಗಳು ಪಾಂಡ್ಯ ಮಹಾಮಂಡಳೇಶ್ವರರ ಸಾಂಸ್ಕೃತಿಕ ಚರಿತ್ರೆಯ ಮೇಲೆ ಬೆಳಕು ಚೆಲ್ಲುತ್ತವೆ.

ಕ್ರಿ.ಶ. ೧೧ನೇ ಶತಮಾನದ ಮಧ್ಯಭಾಗದಲ್ಲಿ ನೊಳಂಬವಾಡಿಯ-೩೨೦೦೦ ಆಡಳಿತ ವಿಭಾಗದ ಅಧಿಕಾರವನ್ನು ನೊಳಂಬ ಪಲ್ಲವರಿಂದ ಚಾಳುಕ್ಯ ಅರಸರು ಪಡೆದುಕೊಂಡರು. ಸ್ವಲ್ಪ ಸಮಯದ ನಂತರ ವಿಕ್ರಮಾದಿತ್ಯನ ಕಾಲಕ್ಕೆ ಈ ಭೂಪ್ರದೇಶದ ಅಧಿಕಾರವನ್ನು ಉಚ್ಚಂಗಿ ಪಾಂಡ್ಯರಿಗೆ ವಹಿಸಿಕೊಟ್ಟರು. ಕುಂತಳದೇಶ ಚರಿತ್ರೆಯಲ್ಲಿ ಚಾಳುಕ್ಯ ವಿಕ್ರಮಾದಿತ್ಯನ ೫೦ ವರ್ಷಗಳ ದೀರ್ಘ ಆಡಳಿತ ಅದ್ವಿತೀಯವಾಗಿದೆ.

ಕಲ್ಯಾಣ ಚಾಳುಕ್ಯ ವಂಶದ ವರ್ಣನೆಯನ್ನು ಕ್ರಿ.ಶ. ೧೧೪೮ರ ಕೊಟ್ಟಿಕಲ್ ಶಿಲಾಶಾಸನ ಚಾಳುಕ್ಯರು ಕುಂತಳ ದೇಶವನ್ನು ಆಳಿದರು. ಈ ವಂಶದ ಸೋಮೇಶ್ವರನ ಸಹೋದರನೇ ವಿಕ್ರಮಾದಿತ್ಯ ನೃಪ ಇವನು ಶತ್ರುಗಳಿಗೆ ಮದಗಜದಂತಿದ್ದವನು[೨] ಎಂದು ವರ್ಣಿಸುತ್ತದೆ.

ವಿಜ್ಞಾನೇಶ್ವರ ತನ್ನ ಮಿತಾಕ್ಷರ ಹೆಸರಿನ ಧರ್ಮಗ್ರಂಥದಲ್ಲಿ ಭೂಮಿಯ ಮೇಲೆ ಕಲ್ಯಾಣದಂಥ ಮತ್ತೊಂದು ನಗರ ಈ ಹಿಂದೆ ಇರಲಿಲ್ಲ ಇಂದೂ ಇಲ್ಲ ಮುಂದೆಯೂ ಹುಟ್ಟುವುದಿಲ್ಲ.

ಹಾಗೆಯೇ ಈ ವಂಶದ ವಿಕ್ರಮಾದಿತ್ಯನಂಥ ಚಕ್ರವರ್ತಿ ಪ್ರಪಂಚದಲ್ಲಿ ಬೇರೆ ಯಾರೂ ಇಲ್ಲ ಎಂದು ವರ್ಣಿಸಿದ್ದಾನೆ.[೫೩] ಇಂಥ ವಂಶದ ಮಹಾಚಕ್ರವರ್ತಿಯ ಆಡಳಿತ ಪೂರ್ವ ಪಶ್ಚಿಮಕ್ಕೆ ಸಮುದ್ರದವರೆಗೂ, ಉತ್ತರಕ್ಕೆ ಇಂದಿನ ಮಧ್ಯ ಪ್ರದೇಶವನ್ನು ದಾಟಿ ಉತ್ತರ ಪ್ರದೇಶದವರೆಗೂ, ದಕ್ಷಿಣಕ್ಕೆ ಕಾವೇರಿ ನದಿ ದಾಟಿ ಕೆಲವೊಮ್ಮೆ ಚೋಳಮಂಡಲವನ್ನು ಆಕ್ರಮಿಸಿದ್ದಿತು. ಈ ವಿಸ್ತಾರವಾದ ಸಾಮ್ರಾಜ್ಯವನ್ನು ಅನೇಕ ವಿಭಾಗಗಳಾಗಿ ವಿಂಗಡಿಸಿ ಸಹೋದರ ಇಮ್ಮಡಿ ಸೋಮೇಶ್ವರನ ಬೆಂಬಲಕ್ಕೆ ಇದ್ದಂಥ ಸಾಮಂತರ ಅಧಿಕಾರವನ್ನು ಹಿಂದಕ್ಕೆ ಪಡೆದು ತನ್ನ ನಿಷ್ಠಾವಂತ ಸಾಮಂತರಿಗೆ ನೀಡಿದನು. ಈ ಅವಧಿಯಲ್ಲಿ ಮನ್ನೆಯ, ದಂಡನಾಯಕರಾಗಿದ್ದವರು ಮಹಾಮಂಡಳೇಶ್ವರ ಪದವಿಯ ಅಧಿಕಾರವನ್ನು ವಹಿಸಿಕೊಂಡರು. ಮನ್ನೆಯರಾಗಿದ್ದ ಕದಂಬರು, ಕೋಗಳಿನಾಡಿನ ಮಹಾಮಂಡಳೇಶ್ವರರಾದರು. ಸೈನ್ಯದಲ್ಲಿದ್ದ ಉಚ್ಚಂಗಿ ಪಾಂಡ್ಯರು ನೊಳಂಬವಾಡಿ-೩೨೦೦೦ ಪ್ರಾಂತ್ಯದ ಮಹಾಮಂಡಳೇಶ್ವರಾಗಿ ಕ್ರಿಶ. ೧೦೭೬ರಲ್ಲಿ ಪದಗ್ರಹಣ ಮಾಡಿದರು.

ಈ ಮನೆತನದ ಮೂಲಪುರುಷ ಮಂಗಯ್ಯ/ಆದಿತ್ಯದೇವ ಚೇದಿರಾಜ ಅಥವಾ ತೇಜರಾಜ ಕಾಲಕ್ಕೆ ಈ ವಂಶದ ಹೆಸರು 'ಪಾಂಡ್ಯ' ಎಂದು ಕರೆಯಲ್ಪಟ್ಟಿತು. ಪಲಮಾಂದ ಪಾಂಡ್ಯ ಈ ಮನೆತನದ ಮೊದಲ ಮಹಾಮಂಡಳೇಶ್ವರನಾದ. ಪಳತಪಾಂಡ್ಯ ತ್ರಿಭುವನಮಲ್ಲ ಪಾಂಡ್ಯನೆಂಬ ಹೆಸರಿನಲ್ಲಿ ವಿಕ್ರಮಾದಿತ್ಯನ ಅವಧಿಯವರೆಗೂ ಕಾಣಿಸಿಕೊಳ್ಳುತ್ತಾನೆ. ಇವನು ನೊಳಂಬವಾಡಿ ಪ್ರದೇಶದ ಜೊತೆಗೆ ಗಂಗವಾಡಿ-೯೬೦೦೦, ಬನವಾಸಿ-೧೨೦೦೦, ಸಾನ್ತಳಿಗೆ-೧೦೦೦, ಸಿಂದವಾಡಿ-೧೦೦೦, ಕಣೆಕಲ್ಲು ವಿಭಾಗಗಳ ಮೇಲೆ ಹಿಡಿತ ಸಾಧಿಸಿರುವುದು ಈತನ ಶಾಸನಗಳಿಂದ ತಿಳಿಯುತ್ತದೆ. ಉಳವಿ, ಕೇಸವುರು, ಬೇತೂರು, ಪಟ್ಟಣಗಳಿಂದ ತನ್ನ ಆಡಳಿತವನ್ನು ನಡೆಸಿದನು. ರಾಯಪಾಂಡ್ಯ ತ್ರಿಭುವನಮಲ್ಲ ರಾಯಪಾಂಡ್ಯ ಮತ್ತು ಜಗದೇಕಮಲ್ಲ ಎಂಬ ಹೆಸರಿನಿಂದ ತಂದೆಯ ಅವಧಿಯಲ್ಲಿ ಕುಮಾರ ವೃತ್ತಿಯಿಂದ ಆಡಳಿತ ಆರಂಭಿಸಿದ. ಗುತ್ತಿ ವಂಶದ ಸೋಮಲದೇವಿಯನ್ನು ವಿವಾಹವಾದ. ಈ ದಂಪತಿಯ ಮಕ್ಕಳಾದ ವೀರಪಾಂಡ್ಯ ವಿಜಯಪಾಂಡ್ಯರ ಆಡಳಿತ ಈ ವಂಶದ ಕೀರ್ತಿಯನ್ನು ಇಮ್ಮಡಿಗೊಳಿಸಿತ್ತು. ಹೊಯ್ಸಳ ಅರಸರು ತಮ್ಮ ಮನೆತನದ ಶಾಸನದುದ್ದಕ್ಕೂ ಇವರನ್ನು ಜಯಿಸಿರುವುದಾಗಿ ಹೇಳಿಕೊಂಡಿದ್ದಾರೆ. ಆದರೆ ಪಾಂಡ್ಯರು ವೀರಬಲ್ಲಾಳನ ಕಾಲಕ್ಕೆ ವಿಜಯಪಾಂಡ್ಯ ಹೊಯ್ಸಳರಿಗೆ ಶರಣಾದ. ಆನಂತರ ಜಗದಳ ಪಾಂಡ್ಯ ಹೊಯ್ಸಳರ ಸಾಮಂತನಾಗಿ ಕದಂಬ ಮನೆತನದ ಪಾರಂಪರಿಕ ಬಿರುದುಗಳೊಂದಿಗೆ ಕಾಣಿಸಿಕೊಳ್ಳುತ್ತಾನೆ. ಕ್ರಿಶ. ೧೨೦೬ರ ನಂತರ ಈ ಮನೆತನದ ಯಾವುದೇ ಕುರುಹು ಲಭ್ಯವಾಗಿಲ್ಲ. ನೊಳಂಬವಾಡಿ ಹೊಯ್ಸಳರ ಆಡಳಿತದಲ್ಲಿ ನೊಳಂಬವಾಡಿ–೩೨೦೦೦ ಆಡಳಿತ ವಿಭಾಗದ ಹೆಸರು 'ಪಾಂಡ್ಯನಾಡು' ಎಂದು ಬದಲಾಯಿತು. ವಿಜಯನಗರ ಕಾಲಕ್ಕೂ ಈ ಹೆಸರು ಮುಂದುವರಿಯಿತು.

ಸಮಧಿಗತಪಂಚಮಹಾಶಬ್ದ ಮಹಾಮಂಡಳೇಶ್ವರ ಕಾಂಚೀಪುರವರಾಧೀಶ್ವಂ. ಯದುವಂ ಶಾಂಬರದ್ಯುಮಣಿ, ಸುಭುಟಚೂಡಾಮಣಿ, ಪಾಂಡ್ಯಕುಲಕಮಲಮಾರ್ತಂಡ ಪರಿಚ್ಛೇದಿಗಂಡ;

ರಾಜಿಗಚೋಳ ಮನೋಭಂಗ ಮೊದಲಾದ ಬಿರುದುಗಳನ್ನು ಪಾಂಡ್ಯ ಅರಸರು ಪಾರಂಪರಿಕವಾಗಿ ಧರಿಸಿಕೊಂಡರು. 'ಪರಿಚ್ಛೇದಿಗಂಡ' ಎಂಬುದರ ಅರ್ಥ ಉಚ್ಚಂಗಿ ಪಾಂಡ್ಯರು ಯಾವ ಯುದ್ಧರಂಗದಲ್ಲಿಯೂ ಸೋಲನ್ನು ಕಂಡವರಲ್ಲ ಎಂದು ದಿನಕರ ದೇಸಾಯಿ ಅವರು ಅರ್ಥೈಸಿದ್ದಾರೆ. ಪರುಶುವಿನ ಆಯುಧದ ಎರಡು ಮುಖಗಳಂತೆ ಎಂದು ಇನ್ನೊಂದು ಅರ್ಥವನ್ನು ಕಲ್ಪಿಸಲಾಗಿದೆ. ಅಂದರೆ ಅವರು ಎರಡು (War & Peace) ಕಾಲಗಳಲ್ಲಿ ಪ್ರಸಿದ್ಧ ಯೋಧರಾಗಿದ್ದರು ಎಂದು ಅರ್ಥವಾಗುತ್ತದೆ.[೨೪] ಇಂತಹ ಪಾರಂಪರಿಕ ಬಿರುದುಗಳೊಂದಿಗೆ ಚಾಳುಕ್ಯ ವಂಶದ ನಿಷ್ಠಾವಂತ ಮಹಾಮಂಡಳೇಶ್ವರರಾಗಿ ಕುಂತಳದೇಶದ ಮಧ್ಯಭಾಗದಲ್ಲಿರುವ ನೊಳಂಬವಾಡಿ-೩೨೦೦೦ ಆಡಳಿತ ವಿಭಾಗವನ್ನು ಸುಮಾರು ೧೩೦ ವರ್ಷಗಳ ಕಾಲ ಆಳಿದ ಉಚ್ಚಂಗಿ ಪಾಂಡ್ಯ ವಂಶದ ಅರಸರ ಜೀವನ ಮತ್ತು ಅವರ ಆಳ್ವಿಕೆಯಲ್ಲಿ ಉಂಟಾದ ರಾಜಕೀಯ ಬದಲಾವಣೆಗಳನ್ನು ಕ್ರಮಾನುಗತವಾಗಿ ಇಲ್ಲಿ ಗುರುತಿಸಲಾಗಿದೆ.

### ಮಂಗಯ್ಯ/ಆದಿತ್ಯದೇವ

ಉಚ್ಚಂಗಿ ಪಾಂಡ್ಯ ವಂಶದ ಮೂಲಪುರುಷ ಮಂಗಯ್ಯ. ಈತನ ಇನ್ನೊಂದು ಹೆಸರು ಆದಿತ್ಯದೇವ. ಪಾಂಡ್ಯರ ವಂಶಾವಳಿಯನ್ನು ಪರಿಚಯಿಸುವ ಹರಿಹರ, ಬಾಗಳಿ, ನೀಲಗುಂದ, ಕಾಟಿಕೆರೆ ಮೊದಲಾದ ಶಾಸನಗಳು ಈ ಎರಡು ಹೆಸರನ್ನು ಉಲ್ಲೇಖಿಸುತ್ತವೆ. ಈತನ ಆಡಳಿತ ಕಾಲದ ಬಗ್ಗೆ ಶಾಸನಗಳಲ್ಲಿ ಸ್ಪಷ್ಟವಾದ ಮಾಹಿತಿಯಿಲ್ಲ. ಪಾಂಡ್ಯರನ್ನು ಕುರಿತು ನಡೆದ ಅಧ್ಯಯನಗಳಲ್ಲಿ ದಿನಕರ ದೇಸಾಯಿ, ಝೆಡ್.ಕೆ. ಅನ್ಸಾರಿ ಮೊದಲಾದವರು ಕ್ರಿ.ಶ. ೯೭೫ರಿಂದ ೧೦೦೦ರ ಅವಧಿಯನ್ನು ಈತನ ಆಡಳಿತ ಕಾಲವೆಂದು ಅಂದಾಜಿಸಿದ್ದಾರೆ. ಕ್ರಿ.ಶ. ೧೧೪೮ರ ಹರಿಹರದ ಶಾಸನ ಸಮಸ್ತ ದೇವತೆಗಳ ಚೂಡಾಮಣಿಯಾದ ಈಶ್ವರನ ಶಿರಸ್ಸಿನ ಸಂಗತಿಯಿಂದ ಔನ್ನತ್ಯವನ್ನು ಹೊಂದಿ ಸೊಗಯಿಸುವ ಚಂದ್ರವಂಶ ಎಲ್ಲರ ಗೌರವಕ್ಕೂ ಅರ್ಹವಾದದ್ದು; ಅಲ್ಲದೆ ಅದು ಯಾವಾಗಲೂ ಕಳಂಕರಹಿತವಾದದ್ದು. ಕಮಲೋದರನಾದ ಮಹಾವಿಷ್ಣುವಿನ ನಾಭಿಕಮಲದಲ್ಲಿ ಹುಟ್ಟಿದ ಬ್ರಹ್ಮನ ಮನಸ್ಸೆಂಬ ಕಮಲದಲ್ಲಿ ದೇವಋಷಿಗಳಿಗೆ ಒಡೆಯನೂ ಆಲಸ್ಯರಹಿತನೂ ಆದ ಅತ್ರಿಮುನಿ ಹುಟ್ಟಿದನು. ಆ ಮುನಿಪತಿಯ ಕಣ್ಣೆಂಬ ಅಮೃತದ ಮನೆಯಿಂದ ಅಮೃತಮಯನೂ ಸಕಲ ಕಲೆಗಳಿಂದ ಕೂಡಿದ ಕೋಮಲವಾದ ಶರೀರವುಳ್ಳವನೂ ರಾಜಕುಲವೆಂಬ ಲಕ್ಷ್ಮೀಯ ಹಣೆಗೆ ತಿಲಕದಂತಿರುವ ಚಂದ್ರನು ಹುಟ್ಟಿದನು. ಸೋಮ(ಚಂದ್ರ)ನು ತ್ರಿಜಾತ, ಏಕೆಂದರೆ ಅವನು ಅತ್ರಿಯಿಂದ ಹುಟ್ಟಿದವನು; ಸಮುದ್ರದಲ್ಲಿ ಅತ್ರಿಯಿಂದ ಹುಟ್ಟಿದವನೆನ್ನುವುದು ಆಶ್ಚರ್ಯವಲ್ಲವೆ?

ಚಂದ್ರವಂಶದಲ್ಲಿ ಯದುರಾಜನು ಹುಟ್ಟಿದನು. ಆತನಿಂದ ಯದುವಂಶ ಲೋಕದಲ್ಲಿ ಶೋಭಿಸಿ ಯಾದವರೆಂಬ ಕ್ಷತ್ರಿಯರಿಗೆ ನೆಲೆವೀಡಾಗಿ ಕೀರ್ತಿಯ ಆಗರವಾಯಿತು. ವೃಷ್ಣಿವಂಶ ಸಂಭೂತರಾದ ಬಲರಾಮ ಶ್ರೀಕೃಷ್ಣರ ಅವತಾರದಿಂದ ಮಂಗಳಕ್ಕೆ ಮನೆಯೆನಿಸಿದ ಆ ವಂಶದಲ್ಲಿ "ಮಂಗಯ್ಯ"ನೆಂಬ ರಾಜನು ಜನ್ಮವೆತ್ತಿದನು. ಯಾದವ ಕುಲತಿಲಕನಾದ 'ಆದಿತ್ಯ'ನಿಂದ ಪಾಂಡ್ಯ

ವಂಶೋದಯವಾಯಿತು[೫೫] ಎಂದು ಉಲ್ಲೇಖಿಸುತ್ತದೆ. ಮಂಗಯ್ಯನಿಗೆ ಆದಿತ್ಯದೇವನೆಂಬ ಇನ್ನೊಂದು ಹೆಸರಿರುವುದು ಮತ್ತು ಈತನೇ ಈ ಮನೆತನದ ಮೂಲಪುರುಷ ಎನ್ನುವುದು ಪಾಂಡ್ಯರ ವಂಶಾವಳಿಯನ್ನು ತಿಳಿಸುವ ಶಾಸನಗಳಿಂದ ಸ್ಪಷ್ಟವಾಗುತ್ತದೆ.

ಆದಿತ್ಯದೇವನಿಗೆ ಪಾಂಡ್ಯನೃಪಾಲನೆಂಬ ಮಗನು ಜನಿಸಿದನೆಂದು ಕೆಲವು ಶಾಸನಗಳು ಹೇಳುತ್ತವೆ. ಕ್ರಿ.ಶ. ೧೧೪೮ರ ಹರಿಹರದ ಶಾಸನ ಆದಿತ್ಯದೇವನಿಗೆ ಪಾಂಡ್ಯನೃಪಾಲನು ಹುಟ್ಟಿದನು. ಈ ಪಾಂಡ್ಯ ರಾಜನಿಗೆ ಚೇದಿರಾಜನೆಂಬ ಮಗನಾದನು ಎಂದು ಹೇಳುತ್ತದೆ.[೫೬] ಆದರೆ ಕೆಲವು ಶಾಸನಗಳು ಪಾಂಡ್ಯನೃಪಲಾನನ್ನು ಉಲ್ಲೇಖಿಸದೆ ಆದಿತ್ಯದೇವನಿಗೆ ಚೇದಿರಾಜ ಹುಟ್ಟಿದನು ಎಂದು ಹೇಳುತ್ತವೆ. ಪಾಂಡ್ಯನೃಪಾಲನ ಕುರಿತು ಹೆಚ್ಚಿನ ಮಾಹಿತಿ ತಿಳಿಯುವುದಿಲ್ಲ. ಪಾಂಡ್ಯನೃಪಾಲನ ಮಗನಾದ ಚೇದಿರಾಜ ಆದಿತ್ಯದೇವನ ನಂತರ ಪಾಂಡ್ಯ ವಂಶಕ್ಕೆ ಅಲಂಕಾರಪ್ರಾಯನೆನಿಸಿದ.

**ಚೇದಿರಾಜ (ಕ್ರಿ.ಶ. ೧೦೪೨ ರಿಂದ ೧೦೬೭)**

ಉಚ್ಚಂಗಿ ಪಾಂಡ್ಯ ವಂಶದ ನಿಜವಾದ ಸ್ಥಾಪಕನೆಂದು ಈತನಿಂದಲೇ ಈ ವಂಶಕ್ಕೆ ಪಾಂಡ್ಯ ಎಂಬು ಮೂಲವಂಶದ ಹೆಸರು ಬಂದಿತು ಎಂದು ಚೇದಿರಾಜನನ್ನು ಶಾಸನಗಳು ವರ್ಣಿಸುತ್ತವೆ. ಈತನ ಮೂಲ ಹೆಸರು 'ತೇಜರಾಜ'. ಚೇದಿ ಅರಸನನ್ನು ಮತ್ತು ಚೇದಿ ಪ್ರದೇಶವನ್ನು ಸೋಲಿಸಿ ವಿಜಯ ಪಡೆದ ಸಂಕೇತವಾಗಿ 'ಚೇದಿರಾಜ'ನೆಂದು ಶಾಸನಗಳು ಉಲ್ಲೇಖಿಸಿವೆ. ಹಾಸನ ಜಿಲ್ಲೆಯ ಕಾಟಿಕೆರೆ ಶಾಸನ ಈತನನ್ನು ತೇಜರಾಜನೆಂದು ಕರೆದರೆ, ನಂತರದ ಪಾಂಡ್ಯರ ಶಾಸನಗಳು ಚೇದಿರಾಜ ಎಂದು ದಾಖಲಿಸಿವೆ.

ಕ್ರಿ.ಶ. ೧೧೦೦-೧೧೧೧ರ ಕಾಟಿಕೆರೆ ಶಾಸನ ಸೂರ್ಯ್ಯ ವಂಶದಿಕ್ಷ್ವಾಕುಚಕ್ರವರ್ತಿ ಯಿಂದಮವ್ಯವಚ್ಚಿಂನ್ನಮಾಗೆ ಬಂದ ಚೋಳ ಚಕ್ರವರ್ತಿಗಳ ಕಟಕ ವಜ್ರವೆನಿಸಿದನ್ವಯದೊಳೇಳುಂ ಸಿಂಹಾಸನಮುಮಂ ತನ್ನ ಬಾಹುಬಳದೊಳೆ ಪ್ರತಿಪಾಳಿಸಿದ ತೇಜರಾಯನ ಪ್ರತಾಪಾರ್ವಷ್ಟಂಭ ಮೆಂತೆಂದಡೆ ಧರಣೀರಕ್ಷಣದದಕ್ಷದಕ್ಷಿಣಬುಜಂ ವೈರೀಭಕಂಣ್ಣೀರವಂಸರಸಾ ಯಾತನ್ರಿಪಾಲವಜ್ರಸದನಂ ವೀರಾಂಗನಾವಲ್ಲಭಂ ಹರಪಾದಾಂಬುರುಹಪ್ರಮತ್ತ ವಿಲುಠದ್ಭ್ರಿಂಗ(ಂ) ಸಮಸ್ತಾರಿಸಂಹರಣಂ ತಾನೆನೆ ತೇಜರಾಯನೆಸೆದಂ ತೇಜೋದಿಕಂ ಧಾತ್ರಿಯೋಳು ‖ ಓಡಿದವರಿಲ್ಲ ಭೂಪರು ಬೇಡದ ಜನವಿಲ್ಲ ಪೋಗದವರಿಲ್ಲ ತೆರಳ್ದಳ್ಳದಡ ಪರಧರೆಯಿಲ್ಲೆನಲಾಡಂಬರವಾಯ್ತು ತೇಜರಾಯನ ತೇಜಂ[೫೭] ಎಂದು ತೇಜರಾಜನ ವ್ಯಕ್ತಿತ್ವವನ್ನು ವರ್ಣಿಸುತ್ತದೆ. ಕ್ರಿ.ಶ. ೧೧೪೮ರ ಹರಿಹರನ ಶಾಸನ ಪಾಂಡ್ಯರಾಜನಾದ ಚೇದಿರಾಜನು ಚೇದಿರಾಜನನ್ನು ನಿಗ್ರಹಿಸಿ ಯಾದವ ಕುಲಕ್ಕೆ ಅಲಂಕಾರ ಪ್ರಾಯನೆನಿಸಿದನು.[೫೮] ಕ್ರಿ.ಶ. ೧೧೬೮ರ ಹರಿಹರದ ಶಾಸನ ಯಾದವರಾಜ ಗೋತ್ರ ಹುಟ್ಟಿತು. ದರ್ಪ ಹೊಂದಿದ ದಾನವರ ಮಾನ ಐಶ್ವರ್ಯ, ರಾಜ್ಯಗಳನ್ನು ನಾಶಗೊಳಿಸಿದ ಹೈಹಯ ಮೊದಲಾದ ರಾಜರು ಆ ವಂಶದಲ್ಲಿ ಹುಟ್ಟಲಿಲ್ಲವೇ? ಸಕಲದೇವ ಪ್ರತಿಪಾದ್ಯನಾದ ಲಕ್ಷ್ಮೀಪತಿಯೇ ಕಂಸನನ್ನು ಧ್ವಂಸ ಮಾಡುವ ಕೇಳಿ(ಆಟ)ಯಲ್ಲಿ ಕುತೂಹಲ ಹೊಂದಿ ಆ ಕುಲದಲ್ಲಿ ಅವತಾರ ಮಾಡಿದನೆಂದ ಮೇಲೆ ಆ ವಂಶದ ಪ್ರಶಸ್ತಿಯನ್ನು ಕುರಿತು ಹೇಳತಕ್ಕದೇನಿದೆ? ಈ ತೆರನಾದ ಪ್ರಸಿದ್ಧವಾದ ವಂಶದಲ್ಲಿ ಚೇದಿರಾಜನು ಬಹುಕಾಲ ರಾಜ್ಯವಾಳಿ ಶೋಭಿಸಿದನು. ಇವನು

ಸಮಸ್ತಭೂಮಂಡಲಕ್ಕೆ ಒಡೆಯನಾಗಿದ್ದರೂ, ಪಾಂಡ್ಯಭೂಮಿಯ ಮೇಲಿನ ಸ್ಥಿರವಾದ ಪಕ್ಷಪಾತ ಪ್ರೀತಿಗಳಿಂದ ಪಾಂಡ್ಯನೆಂಬ ಹೆಸರಿನಿಂದ ಇಲ್ಲೆ ನೆಲಸಿದನು.[೫೯]

ಚೇದಿರಾಜನಿಂದಾಗಿ ಈ ವಂಶಕ್ಕೆ ಪಾಂಡ್ಯವಂಶ ಎಂದು ಕರೆಯಲಾಯಿತು ಎಂದು ಶಾಸನಗಳು ಸ್ಪಷ್ಟಪಡಿಸುತ್ತವೆ. ಆದರೆ ಇದು ಚೇದಿರಾಜನ ಕಾಲಕ್ಕೆ ಜಾರಿಯಲ್ಲಿ ಇರಲಿಲ್ಲ. ಅವನ ನಂತರದ ಕಾಲದಲ್ಲಿ ಪಾಂಡ್ಯ ಶಬ್ದದ ಬಳಕೆ ಬಂದಂತೆ ಇದೆ. ಚೇದಿರಾಜನನ್ನು ಉಲ್ಲೇಖಿಸುವ ಯಾವ ಶಾಸನಗಳು ಆತನ ಹೆಸರನ್ನು ಮತ್ತು ತನ್ನ ವಂಶವನ್ನು ಪಾಂಡ್ಯ ಶಬ್ದದೊಂದಿಗೆ ಹೆಸರಿಸಿಲ್ಲ. ಆನಂತರ ಅಧಿಕಾರಕ್ಕೆ ಬಂದ ಅವನ ಮಗ ಪಲಮಾಂದನನ್ನು ಪಲಮಾಂದಪಾಂಡ್ಯನೆಂದು ಕರೆಯಲಾಗಿದೆ. ಇವನ ನಂತರದ ಈ ವಂಶದ ಅರಸರನ್ನು ಪಾಂಡ್ಯ ಎಂದೇ ಕರೆಯಲಾಗಿದೆ.

ಚೇದಿರಾಜನ ಆಡಳಿತ ಅವಧಿಯ ಬಗ್ಗೆ ಸ್ಪಷ್ಟವಾದ ಉಲ್ಲೇಖಗಳು ದೊರೆಯುವುದಿಲ್ಲ. ಕೆಲವು ವಿದ್ವಾಂಸರು ಚೇದಿರಾಜನನ್ನು ಚಾಳುಕ್ಯ ಒಂದನೇ ಸೋಮೇಶ್ವರನ ಸಮಕಾಲೀನನೆಂದು ಹೇಳಲಾಗುತ್ತದೆ.[೬೦] ಕಾಟಿಕೆರೆ ಹರಿಹರ, ಹೊಳಲ್ಕೆರೆ, ಬಾಗಳಿ ಶಾಸನಗಳಲ್ಲಿ ಚೇದಿರಾಜನನ್ನು ಕುರಿತು ನೀಡುವ ಕೆಲವು ಮಾಹಿತಿಗಳನ್ನು ಪರಿಶೀಲಿಸಿದರೆ ಚೇದಿರಾಜನನ್ನು ೧ನೇ ಸೋಮೇಶ್ವರನ ಸಮಕಾಲೀನ ಎಂಬ ವಾದವನ್ನು ಒಪ್ಪಬಹುದಾಗಿದೆ. ಚಾಳುಕ್ಯ ೧ನೇ ಕ್ರಿ.ಶ. ೧೦೪೨ರಿಂದ ೧೦೬೮ರವರೆಗೆ ಅಧಿಕಾರದಲ್ಲಿದ್ದನು. ಇದಕ್ಕೂ ಪೂರ್ವದಲ್ಲಿ ಎರಡನೇ ಜಯಸಿಂಹನು ಚಾಳುಕ್ಯ ಸಿಂಹಾಸನದಲ್ಲಿದ್ದಾಗ ಸಪ್ತಕೊಂಕಣ ಭಾಗವನ್ನು ಆಕ್ರಮಿಸಿಕೊಂಡಾಗ ಸಪ್ತಕೊಂಕಣದ ಹೈಹ ಭಾಗದಲ್ಲಿದ್ದ ಪಾಂಡ್ಯರು ಚಾಳುಕ್ಯರ ಅಧೀನಕ್ಕೆ ಬಂದು ಅವರ ಸೈನದಲ್ಲಿ ಸ್ಥಾನ ಪಡೆದುಕೊಂಡರು. ಜಯಸಿಂಹನ ಕಾಲಕ್ಕೆ ಚಾಳುಕ್ಯರ ಅಧೀನಕ್ಕೆ ಬಂದು ೧ನೇ ಸೋಮೇಶ್ವರನ ಕಾಲಕ್ಕೆ ಅವರ ಸೈನ್ಯದಲ್ಲಿ ಮುಂಚೂಣಿಗೆ ಬಂದಂತೆ ಕಾಣುತ್ತದೆ. ಕಾಟಿಕೆರೆ ಮತ್ತು ಹರಿಹರ ಶಾಸನಗಳು ಚೇದಿರಾಜ ಮತ್ತು ಚೋಳರನ್ನು ಗೆದ್ದಿರುವುದಾಗಿ ಹೇಳುತ್ತವೆ.

ಚಾಳುಕ್ಯರಿಗೂ ಮತ್ತು ಚೋಳರಿಗೂ ಆರಂಭದಿಂದಲೂ ಕದನಗಳು ನಡೆಯುತ್ತಲೇ ಇದ್ದವು. ಆದರೆ ೧ನೇ ಸೋಮೇಶ್ವರನ ಕಾಲದಲ್ಲಿ ತನ್ನ ಮಗ ವಿಕ್ರಮಾದಿತ್ಯನ ನೆರವಿನಿಂದ ಚೋಳ ರಾಜೇಂದ್ರನು ಚಾಳುಕ್ಯರಿಗೆ ಶರಣಾದ. ಕ್ರಿ.ಶ. ೧೦೬೦ರ ವೇಳೆಯಲ್ಲಿ ಚೋಳ ರಾಜೇಂದ್ರ ಬನವಾಸಿ ಪ್ರಾಂತ್ಯದ ಊರುಗಳನ್ನು ಭಯವಿಲ್ಲದೆ ಸುಲಿದು, ತುಂಗಭದ್ರಾ ನದಿಯ ದಂಡೆ ಮೂಲಕ ಬಡಗಲಿಗೆ ಹೋಗಿ ವರದ ನದಿಯನ್ನು ದಾಟಿ ಬೆಳ್ವೊಲವನ್ನು ಹೊಕ್ಕು ಅಲ್ಲಿದ್ದ ಜೈನ ಬಸದಿಗಳನ್ನು ಸುಟ್ಟು ಆ ಪ್ರಾಂತದ ಆಡಳಿತವನ್ನು ಹೊಕ್ಕು ನಿರ್ಭಿತವಾಗಿ ಸೂರೆಗೊಳ್ಳುತ್ತಿದ್ದನು. ಸೋಮೇಶ್ವರ ಮತ್ತು ಎರಡನೇ ಮಗ ವಿಕ್ರಮಾದಿತ್ಯನು ಅಣ್ಣಿಗೇರಿ ಪ್ರದೇಶದಲ್ಲಿ ರಾಜೇಂದ್ರನ ಸೈನ್ಯವನ್ನು ಸೋಲಿಸಿ ಅವನ ತಲೆಯನ್ನು ಹಾರಿಸಿದರು.[೬೧] ಚೋಳರು ಹನ್ನೆರಡು ವರ್ಷಗಳ ಕಾಲ ಉಚ್ಚಂಗಿ ಕೋಟೆಯನ್ನು ಮುತ್ತಿದರು. ಅಭೇದ್ಯವಾದ ಆ ಕೋಟೆಯನ್ನು ಅವರ

ಜಯಿಸಲಾಗಲಿಲ್ಲವೆಂದು ಶಾಸನಗಳು ಹೇಳುತ್ತವೆ. ಚೇದಿರಾಜ ಈ ಕದನದಲ್ಲಿ ಭಾಗವಹಿಸಿದ ಎಂಬುದು ಕಾಟಿಕೆರೆ ಶಾಸನದಲ್ಲಿ ಚೋಳವರ್ತಿಗಳ ಕಟಕವಜ್ರವೆನಿಸಿದನ್ವಯದೊಳೇಳುಂ ಸಿಂಹಾಸನಮುಮಾ ತನ್ನ ಬಾಹುಬಳದೊಳೆ ಪ್ರತಿಪಾಳಿಸಿದ ಎಂಬುದು ಇದಕ್ಕೆ ಸ್ಪಷ್ಟ ಉತ್ತರವಾಗಿದೆ. ಅಂದರೆ ಚೇದಿರಾಜ ೧ನೇ ಸೋಮೇಶ್ವರ ಮತ್ತು ಚೋಳ ರಾಜೇಂದ್ರನ ಸಮಕಾಲೀನ ಎನ್ನುವುದು ದೃಢವಾಗುತ್ತದೆ.

### ಸೈನಿಕ ಸಾಧನೆಗಳು

ಕ್ರಿ.ಶ. ೧೦೪೮ರಲ್ಲಿ ಸೋಮೇಶ್ವರನು ಗೋದಾವರಿಯನ್ನು ದಾಟಿ ಬಂದಿದ್ದ ಚೇದಿ ಅರಸರ ಸೇನೆಯನ್ನು ಬೆನ್ನಟ್ಟಿ ಹೊರಟು ಮಾಳವೆಗೆ ನುಗ್ಗಿದ. ಮಾಳವೆಯ ಅರಸನಾದ ಭೋಜನು ತನ್ನ ರಾಜಧಾನಿಯಾದ ಧಾರಾನಗರವನ್ನು ಹೊಕ್ಕಿದ್ದರಿಂದ ಸೋಮೇಶ್ವರನು ಆ ನಗರವನ್ನು ಮುತ್ತಿದನು. ಕ್ರಿ.ಶ. ೧೦೫೦ರಲ್ಲಿ ದಿಕ್ಕೆಟ್ಟು ಓಡಿಹೋದ ಭೋಜನನ್ನು ಬೆನ್ನಟ್ಟಿ ಹೋಗಿ ಸೋಮೇಶ್ವರನು ಚೇದಿನಾಡನ್ನು ಪ್ರವೇಶಿಸಿದನು. ಚೇದಿನಾಡಿನ ಅರಸನೂ ಕಲಚೂರಿಯ ಮನೆತನದವನೂ ಆದ ಕರ್ಣನು ಕರ್ನಾಟಕ ಸಾರ್ವಭೌಮನ ದಾಳಿಯನ್ನು ತಡೆಯಲಾಗದೆ ತನ್ನ ರಾಜಧಾನಿಯಾದ ತ್ರಿಪುರಪುರ(ತೇವೂರು)ವನ್ನು ಹೊಕ್ಕಿದ್ದರಿಂದ ಸೋಮೇಶ್ವರನು ಅದನ್ನು ಮುತ್ತಿ ಹಿಡಿದುಕೊಂಡನು.

ಭೋಜನಂತೆ ಚೇದಿ ಕರ್ಣನು ರಾಜಧಾನಿಯನ್ನು ಕಳೆದುಕೊಂಡು ದಿಕ್ಕಟ್ಟು ಓಡಿದನು.[೭] ಕ್ರಿ.ಶ. ೧೧೪೮ರ ಹರಿಹರದ ಶಾಸನ ಚೇದಿರಾಜರನ್ನು ನಿಗ್ರಹಿಸಿ ಯಾದವ ಕುಲಕ್ಕೆ ಅಲಂಕಾರಪ್ರಾಯನೆನಿಸಿದನು ಎಂದು ವರ್ಣಿಸಿರುವುದರಿಂದ ಸೋಮೇಶ್ವರ ಮತ್ತು ಚೇದಿರಾಜನಿಗೆ ನಡೆದ ಕದನದಲ್ಲಿ ಪಾಂಡ್ಯ ವಂಶದ ಚೇದಿರಾಜ ಭಾಗವಹಿಸಿದ್ದ ಎಂದು ದೃಢವಾಗುತ್ತದೆ. ಚಾಳುಕ್ಯರ ಆರಂಭದ ಅರಸನಾದ ತೈಲಪ, ಸತ್ಯಾಶ್ರಯ, ಅಯ್ಯಣ/ಐದನೆಯ ವಿಕ್ರಮಾದಿತ್ಯ, ಎರಡನೆ ಜಯಸಿಂಹ ಇವರ ಕಾಲಕ್ಕೆ ಚೋಳ ಮತ್ತು ಚೇದಿ ಅರಸರೊಂದಿಗೆ ಕದನಗಳು ನಡೆದಿದ್ದರು. ಅವರನ್ನು ಜಯಸಿದ್ದು ೧ನೇ ಸೋಮೇಶ್ವರನ ಕಾಲಕ್ಕೆ, ಆನಂತರ ವಿಕ್ರಮಾದಿತ್ಯ ಇವುಗಳ ಮೇಲೆ ಹಿಡಿತ ಸಾಧಿಸಿದ್ದರು. ಅವನ ಕಾಲಕ್ಕಿದ್ದ ಪಾಂಡ್ಯ ಅರಸರ ಉಲ್ಲೇಖ ಶಾಸನಗಳಲ್ಲಿ ಸ್ಪಷ್ಟವಾಗಿದೆ. ಹಾಗಾಗಿ ಚೋಳ ಮತ್ತು ಚೇದಿ ಅರಸರು ಸೋಮೇಶ್ವರನ ಕಾಲಕ್ಕೆ ಅವನ ಹಿಡಿತಕ್ಕೆ ಬಂದಿದ್ದರಿಂದ ಮತ್ತು ಕಾಟಿಕೆರೆ ಮತ್ತು ಹರಿಹರ ಶಾಸನಗಳು ಚೇದಿರಾಜನು ಈ ಮನೆತನಗಳನ್ನು ಜಯಿಸಿರುವುದಾಗಿ ಹೇಳಿರುವುದರಿಂದ ಪಾಂಡ್ಯ ವಂಶದ ಚೇದಿರಾಜ ಚಾಳುಕ್ಯ ೧ನೇ ಸೋಮೇಶ್ವರ ಜೋಳ, ಚೇದಿ ಅರಸರೊಂದಿಗೆ ನಡೆಸಿದ ಹೋರಾಟದಲ್ಲಿ ಭಾಗವಹಿಸಿರುವುದು ಸ್ಪಷ್ಟವಾಗುತ್ತದೆ. ಸೋಮೇಶ್ವರನ ಕಾಲದಲ್ಲಿ ನೊಳಂಬವಾಡಿ-೩೨೦೦೦ದ ಅಧಿಕಾರ ವಿಕ್ರಮಾದಿತ್ಯನಿಗೆ ದೊರೆತಿತ್ತು. ಜಯಸಿಂಹನ ಕಾಲಕ್ಕೆ ಈ ಪ್ರದೇಶಕ್ಕೆ ವಲಸೆ ಬಂದ ಉಚ್ಚಂಗಿ ಪಾಂಡ್ಯರು ಸಹಜವಾಗಿಯೇ ಇಲ್ಲಿನ ಆಡಳಿತದಲ್ಲಿ ಭಾಗವಹಿಸಿದ್ದರು. ಚೇದಿರಾಜನ

ಕೊನೆ ದಿನಗಳು ಮತ್ತು ಆತನು ಹೊಂದಿದ ಸ್ಥಾನಮಾನಗಳ ಬಗ್ಗೆ ಮಾಹಿತಿ ಲಭ್ಯವಿಲ್ಲ. ಚೇದಿರಾಜನ ನಂತರ ಅವನ ಮಗ ಪಾಂಡ್ಯ ವಂಶದ ಹೆಸರಿನೊಂದಿಗೆ ಪಲಮಾಂದ ಪಾಂಡ್ಯ ಆಡಳಿತದಲ್ಲಿ ಮುಂದುವರಿದನು.

## ಪಲಮಾಂದ ಪಾಂಡ್ಯ (ಕ್ರಿ.ಶ. ೧೦೬೭ರಿಂದ ೧೦೭೯)

ಚೇದಿರಾಜನ ಮಗನಾದ ಪಲಮಾಂದ ಪಾಂಡ್ಯ ತನ್ನ ತಂದೆಯಂತೆ ಅತ್ಯಂತ ಪರಾಕ್ರಮಿಯಾಗಿದ್ದು ಪಾಂಡ್ಯ ವಂಶದ ತೇಜಸ್ಸನ್ನು ಇಮ್ಮಡಿಗೊಳಿಸಿದ. ಉಚ್ಚಂಗಿ ಪಾಂಡ್ಯರು ಈ ಹಿಂದೆ ಚಾಳುಕ್ಯರ ಅಧೀನದಲ್ಲಿ ಯಾವ ಹುದ್ದೆಯಲ್ಲಿದ್ದರು ಎಂಬುದು ಸ್ಪಷ್ಟವಿಲ್ಲ. ಪಲಮಾಂದ ಪಾಂಡ್ಯ ೬ನೆಯ ವಿಕ್ರಮಾದಿತ್ಯನಿಂದ ನೊಳಂಬವಾಡಿ-೩೨೦೦೦ ಪ್ರಾಂತ್ಯದ ಮಹಾಮಂಡಳೇಶ್ವರ ಪದವಿಯನ್ನು ಪಡೆದುದ್ದನ್ನು ಶಾಸನಗಳು ಸ್ಪಷ್ಟಪಡಿಸುತ್ತವೆ. ಎಂ.ವಿ. ಶ್ರೀನಿವಾಸರವರು ಪಲಮಾಂದ ಪಾಂಡ್ಯ, ನೊಳಂಬವಾಡಿ-೩೨೦೦೦ ಪ್ರಾಂತ್ಯದ ಮೊದಲ ಪಾಂಡ್ಯ ಅರಸನೆಂದು ಕರೆದಿದ್ದಾರೆ. ಈತ ಚಾಳುಕ್ಯ ಮತ್ತು ಚೋಳರೊಂದಿಗೆ ತನ್ನದೇ ಆದ ರಾಜತಾಂತ್ರಿಕ ನಡೆಯಿಂದ ರಕ್ಷಣೆಯನ್ನು ಪಡೆದು ನೊಳಂಬವಾಡಿಯ ಅಧಿಕಾರವನ್ನು ಪಡೆದುಕೊಂಡ.

ಕಾಟಿಕೆರೆ ಶಾಸನ ಪಲಮಾಂದ ಪಾಂಡ್ಯನನ್ನು ಪ್ರಚಂಡ ಪಾಂಡ್ಯ ಎಂದು ಕರೆದಿದೆ. ಪರಿಚ್ಛೇದಿಗಂಡ, ರಾಜೀಗಚೋಳ, ತಂತ್ರಬೇಧಕ, ಏಕಾಂಗವೀರ ಮೊದಲಾದ ಬಿರುದುಗಳನ್ನು ಇವನು ಹೊಂದಿದ್ದನು. ಕ್ರಿ.ಶ. ೧೧೪೮ರ ಹರಿಹರ ಶಾಸನ ಚೇದಿರಾಜರನ್ನು ನಿಗ್ರಹಿಸಿ ಯಾದವ ಕುಲಕ್ಕೆ ಅಲಂಕಾರಪ್ರಾಯನೆನಿಸಿದ್ದನು. ಇವನ ಮಗ ಪಳಮಾಂಡ್ಯ ಪಾಂಡ್ಯನು ಯಾದವ ಕುಲಕ್ಕೆ ಭೂಷಣಪ್ರಾಯನೆನಿಸಿದನು. ಕ್ರಿ.ಶ. ೧೧೬೮ರ ಇನ್ನೊಂದು ಶಾಸನ ಚೇದಿರಾಜನಿಗೆ ಕೇವಲ ಹುಬ್ಬುಗಂಟಿಕ್ಕುವುದರಿಂದ ವೈರಿಗಳ ಮನಸ್ಸಿನ ಧೈರ್ಯವನ್ನು ಭಂಗ ಮಾಡುತ್ತಿದ್ದ. ಮಗನು ಅವನಿಗಿದ್ದನು ಎಂದು ಹೇಳುತ್ತದೆ.[೬೩]

## ಸೈನಿಕ ಸಾಧನೆಗಳು

೧ನೆಯ ಸೋಮೇಶ್ವರನ ಮರಣದ ನಂತರ ಚಾಳುಕ್ಯ ಸಿಂಹಾಸನಕ್ಕಾಗಿ ವಿಕ್ರಮಾದಿತ್ಯ ಮತ್ತು ೨ನೆಯ ಸೋಮೇಶ್ವರನ ನಡುವೆ ನಡೆದ ಸಹೋದರರ ಕಲಹದಲ್ಲಿ ಪಲಮಾಂದ್ಯ ಪಾಂಡ್ಯ ವಿಕ್ರಮಾದಿತ್ಯನ ಪರವಹಿಸಿ ಅವನಿಗೆ ಚಾಳುಕ್ಯ ಸಾಮ್ರಾಜ್ಯದ ಅಧಿಕಾರವನ್ನು ಕೊಡಿಸುವಲ್ಲಿ ಮುಂಚೂಣಿಯಲ್ಲಿದ್ದ ವಿಕ್ರಮಾದಿತ್ಯನಿಗೆ ತಾನೇ ಚಾಳುಕ್ಯ ಸಾಮ್ರಾಜ್ಯದ ಅಧಿಕಾರವನ್ನು ಕೊಡಿಸಿದ್ದಾಗಿ ಶಾಸನದಲ್ಲಿ ಹೇಳಲಾಗಿದೆ. ಕ್ರಿ.ಶ. ೧೧೧೧ರ ಕಾಟಿಕೆರೆ ಶಾಸನ, ಪರಿಚ್ಛೇದ ಗಂಡ ನೆನಿಕುಂಪಾಂಡ್ಯ ॥ ಭುವನೈಕಮಲ್ಲನಂ ಭೂಭವನವಸುಂಗೊಳೆ ಮರಳ್ಚಿ ರಾಜ್ಯ ಮನಧಿಕೋತ್ಸವದಿಂ ತ್ರಿಭುವನಮಲ್ಲಂ ಗವಯವದಿಂ ಕೊಂಡುಕೊಟ್ಟ ಗಂಡ ಪಾಂಡ್ಯ ॥ ನೆಣದ ಬಳಂಬೆ ಕೋಳ್ಮಿದುಳ ತಿಂತಿಣಿ ಮೂಳೆಯ ತೋರವೆಟ್ಟು ಬಲ್ವೆಣಗಳಗುಂನ್ತಿ ನೆತ್ತರಕಡಲ್ಪರಿವಟ್ಟೆ ಕರೋಟಗಳ ಸಂದಣಿಸುವ ಭೂತಕೋಟಿಗಳಿನೊಪ್ಪಿರೆ ಪಚ್ಚಿದರೇಂದ್ರ ಸಂಗರಾಂಗಣಮದು ತಾನೆ ಪೇಳೆದೆ ವಿರಾಜಿಪ ಪಾಂಡ್ಯನ ಗಂಡಗರ್ಬ್ಬಮಂ॥.[೬೪]

ವಿಕ್ರಮಾದಿತ್ಯ ಮತ್ತು ೨ನೇ ಸೋಮೇಶ್ವರರ ನಡುವೆ ಕಲಹ ನಡೆದಿರುವುದನ್ನು ಬಿಲ್ಹಣ ಮತ್ತು ಕೆಲವು ಶಾಸನಗಳು ಹೇಳುತ್ತವೆ. ೧ನೇ ಸೋಮೇಶ್ವರನ ಕಾಲದಲ್ಲಿ ವಿಕ್ರಮಾದಿತ್ಯ ನೊಳಂಬವಾಡಿ-೩೨೦೦೦, ಬನವಾಸಿ-೧೨೦೦೦, ಸಾಂತಳಿಗೆ-೧೦೦೦, ಗಂಗಮಂಡಳಗಳನ್ನು ಕುಮಾರ ವೃತ್ತಿಯಿಂದ ಆಳುತ್ತಿದ್ದುದನ್ನು ಕ್ರಿ.ಶ. ೧೦೫೭-೫೮ರ ಹಿರೇಹಡಗಲಿ, ಶಿಕಾರಿಪುರ, ಕಲ್ಕೇರಿ ಶಾಸನಗಳು ತಿಳಿಸುತ್ತವೆ.[೬೫] ಸೋಮೇಶ್ವರನ ಮರಣದ ನಂತರ ಅಧಿಕಾರಕ್ಕೆ ಬಂದ ೨ನೇ ಸೋಮೇಶ್ವರ ಈ ಪ್ರದೇಶಗಳ ಒಡೆತನವನ್ನು ತನ್ನ ನೆಚ್ಚಿನ ಪಸಾಯಿತ ಲಕ್ಷ್ಮಣ ಮತ್ತು ದಂಡನಾಯಕ ಉದಯಾದಿತ್ಯನಿಗೆ ಶಾಸನವಾಗಿ ಬರೆದುಕೊಟ್ಟು ದಕ್ಷಿಣ ಭಾಗವನ್ನು ಗೆಲ್ಲಲು ತಿಳಿಸಿದ್ದನೆಂದು ಕ್ರಿ.ಶ. ೧೦೬೮ರ ಬಳ್ಳಿಗಾವೆ ಶಾಸನ ಹೇಳುತ್ತದೆ.

ಕ್ರಿ.ಶ. ೧೦೭೩ರ ವೇಳೆಗೆ ವಿಕ್ರಮಾದಿತ್ಯ ತನ್ನ ತಂದೆಯ ಕಾಲಕ್ಕೆ ನಿರ್ವಹಿಸುತ್ತಿದ್ದ ಆಡಳಿತ ಅಧಿಕಾರವನ್ನು ಕಳೆದುಕೊಂಡ. ಇದರಿಂದಾಗಿ ಕುಪಿತನಾದ. ಇವನು ೨ನೇ ಸೋಮೇಶ್ವರನೊಂದಿಗೆ ಕಲಹ ಆರಂಭಿಸಿದ. ಈ ಕಲಹದಲ್ಲಿ ಉಚ್ಚಂಗಿ ಪಾಂಡ್ಯರು, ಹೊಯ್ಸಳ, ಸೇವುಣ, ಹಾನಗಲ್ಲು ಕಂದಬರು ವಿಕ್ರಮಾದಿತ್ಯನ ಪರ ವಹಿಸುತ್ತಾರೆ. ನೊಳಂಬ ಪಲ್ಲವರು ಮತ್ತು ಚೋಳರು ಸೋಮೇಶ್ವರನ ಪರ ವಹಿಸುತ್ತಾರೆ. ಕ್ರಿ.ಶ. ೧೦೭೫ರ ಅಂತ್ಯ ೧೦೭೬ರ ಮಾರ್ಚ್ ೧೨ರ ಮಧ್ಯದಲ್ಲಿ ನಡೆದ ಸಹೋದರರ ನಿರ್ಣಾಯಕ ಕದನದಲ್ಲಿ ವಿಕ್ರಮಾದಿತ್ಯ ಜಯ ಹೊಂದಿ ಸೋಮೇಶ್ವರನನ್ನು ಕಾರಾಗೃಹದಲ್ಲಿರಿಸಿ ಚಕ್ರವರ್ತಿ ಪಟ್ಟವೇರುತ್ತಾನೆ.[೬೬] ಕ್ರಿ.ಶ. ೧೦೭೬ ಮಾರ್ಚ್ ೧೩ರ ಕುರುವ ಗ್ರಾಮದ ಶಾಸನದಲ್ಲಿ ವಿಕ್ರಮಾದಿತ್ಯನು ಪಟ್ಟಾಭಿಷೇಕದಂದು ಆರಂಭಿಸಿದ ವಿಕ್ರಮ ವರ್ಷದ ಉಲ್ಲೇಖ ಬರುತ್ತದೆ. ಹೀಗೆ ಅಣ್ಣ-ತಮ್ಮಂದಿರೊಡನೆ ನಡೆದ ಕದನಗಳಲ್ಲಿ ವ್ಯಕ್ತಿತ್ವವನ್ನು ರೂಪಿಸಿಕೊಂಡ ವಿಕ್ರಮಾದಿತ್ಯನ ಬೆನ್ನಿಗೆ ಪಲಮಾಂದ ಪಾಂಡ್ಯ ನಿಂತಿರುವುದು ಕಾಟಿಕೆರೆ ಶಾಸನದಿಂದ ತಿಳಿಯುತ್ತದೆ. ಈ ಸ್ವಾಮಿನಿಷ್ಠೆ ಅವನನ್ನು ಮಹಾಮಂಡಳೇಶ್ವರ ಪದವಿ ಪಡೆಯಲು ಮುಖ್ಯ ಕಾರಣವಾಯಿತು. ನೊಳಂಬವಾಡಿಯ ಆಡಳಿತ ಪಲ್ಲವ ಉದಯಾದಿತ್ಯನಿಂದ ಪಾಂಡ್ಯ ವಂಶಕ್ಕೆ ಬಂದಿತು. ಪಲಮಾಂದ ಪಾಂಡ್ಯನೆ ಪಾಂಡ್ಯರ ಮೊದಲ ಮಹಾಮಂಡಳೇಶ್ವರ. ತ್ರಿಭುವನಮಲ್ಲದೇವನ ಪಾದಪದ್ಮೋಪಜೀವಿಯಾಗಿ ಪಾಂಡ್ಯ ಚರಿತ್ರೆಗೆ ಭದ್ರ ಬುನಾದಿ ಹಾಕಿದ. ಹರಿಹರ, ಬಾಗಳಿ, ಲೋಕಿಕೆರೆ, ಹೊಳಲಕೆರೆ ಶಾಸನಗಳು ಪಲಮಾಂದ್ಯ ಪಾಂಡ್ಯನಿಗೆ ಪಳತ ಪಾಂಡ್ಯ/ಪಲಿತಪಾಂಡ್ಯ ಮತ್ತು ಇರುಕ್ಕವೇಳ್ ಪಾಂಡ್ಯ ಎಂಬ ಇಬ್ಬರು ಮಕ್ಕಳು ಇದ್ದುದಾಗಿ ತಿಳಿಸುತ್ತವೆ. ಪಲಮಾಂದ ಪಾಂಡ್ಯನ ನಂತರ ಪಳತ ಪಾಂಡ್ಯ ನೊಳಂಬವಾಡಿಯ ಸಿಂಹಾಸನವನ್ನು ಅಲಂಕರಿಸಿದನು. ಪಲಮಾಂದ ಪಾಂಡ್ಯನ ವ್ಯಕ್ತಿತ್ವವನ್ನು ಪ್ರತಿನಿಧಿಸುವ ಮತ್ತು ಆತನ ಕೊನೆಯ ದಿನಗಳ ಬಗ್ಗೆ ಮಾಹಿತಿ ನೀಡುವ ಯಾವುದೇ ಶಾಸನಗಳು ಈವರೆಗೂ ದೊರೆತಿಲ್ಲ. ಹೊಸ ಶಾಸನಗಳ ಶೋಧದಿಂದ ಈತನ ವ್ಯಕ್ತಿ ಚಿತ್ರಣವನ್ನು ಕಟ್ಟಿಕೊಡಲು ಇಲ್ಲಿ ಅವಕಾಶವಿದೆ.

### ತ್ರಿಭುವನಮಲ್ಲ ಪಾಂಡ್ಯ (ಕ್ರಿ.ಶ. ೧೦೭೯ರಿಂದ ೧೧೨೬)

ಪಲಮಾಂದ ಪಾಂಡ್ಯನ ಹಿರಿಯ ಮಗನಾದ ತ್ರಿಭುವನಮಲ್ಲ ಪಾಂಡ್ಯ ಉಚ್ಚಂಗಿ ಪಾಂಡ್ಯರ ವಂಶದಲ್ಲಿಯೇ ಅತೀ ಹೆಚ್ಚು ಕಾಲ ಆಡಳಿತ ನಡೆಸಿದ ಪ್ರಚಂಡ ಮಹಾಮಂಡಳೇಶ್ವರ. ತನ್ನ

ಇಡೀ ಆಡಳಿತವನ್ನು ಆಶ್ರಿತ ಪ್ರಭುವಿನ ಹೆಸರಿನಲ್ಲಿ ನಡೆಸಿ ಚಕ್ರವರ್ತಿಯ ಕೃಪೆಗೆ ಪಾತ್ರನಾಗಿದ್ದ. ಕರ್ನಾಟಕದ ಶಾಸನಗಳ ಚರಿತ್ರೆಯಲ್ಲಿ ಅತಿ ಹೆಚ್ಚು ಶಾಸನಗಳನ್ನು ಹಾಕಿಸಿದ ಕೀರ್ತಿ ೬ನೇ ವಿಕ್ರಮಾದಿತ್ಯನಿಗೆ ಸೇರುತ್ತದೆ. ಹಾಗೆಯೇ ಆತನ ಪಾದಪದ್ಮೋಪಜೀವಿಯಾದ ತ್ರಿಭುವನಮಲ್ಲ ಪಾಂಡ್ಯನಿಗೆ ಪಾಂಡ್ಯ ವಂಶದಲ್ಲಿ ಹೆಚ್ಚು ಶಾಸನಗಳನ್ನು ಹಾಕಿಸಿದ ಕೀರ್ತಿ ಸಲ್ಲುತ್ತದೆ. ತ್ರಿಭುವನಮಲ್ಲದೇವನಂತೆ ಹೆಚ್ಚು ಕಾಲ ನೊಳಂಬವಾಡಿ-೩೨೦೦೦ದ ಆಡಳಿತ ನಿರ್ವಹಿಸಿದ ಗೌರವವು ಇವನಿಗೆ ಸೇರುತ್ತದೆ. ವಿಕ್ರಮಾದಿತ್ಯದೇವನ ನೆಚ್ಚಿನ ಮಹಾಮಂಡಳೇಶ್ವರನಾಗಿದ್ದ ಹಾಗೂ ಅವನ ಬಲಬದಿಗೆ ನಿಲ್ಲುವ ಅರ್ಹತೆಯನ್ನು ಪಡೆದುಕೊಂಡಿದ್ದನು. ಉಚ್ಚಂಗಿ ಪಾಂಡ್ಯರ ಒಟ್ಟು ೧೫೦ ಶಾಸನಗಳಲ್ಲಿ ೭೫ ಶಾಸನಗಳು ತ್ರಿಭುವನಮಲ್ಲ ಪಾಂಡ್ಯನ ಕಾಲಕ್ಕೆ ಸೇರಿವೆ. ಈ ಶಾಸನಗಳು ತ್ರಿಭುವನಮಲ್ಲದೇವರ ಪಾದಪದ್ಮೋಪಜೀವಿ ಸುಮಧಿಗತ ಪಂಚಮಹಾಶಬ್ದ ಮಹಾಮಂಡೇಶ್ವರ, ಕಾಂಚೀಪುರವರಾಧೀಶ್ವರ, ಯಾದವವಂಶಾಂಭರದ್ಯುಮಣಿ, ಸುಭಟಚೂಡಾಮಣಿ ನಿಜಕುಳಕಮಳಮಾರ್ತ್ತಂಡ, ಪರಿಚ್ಛೇದಿಗಂಡ, ರಾಜಗಚೋಳ ಮನೋಭಂಗ, ರಾಜಿಗಚೋಳದ್ವಿಪ ಮೃಗರಾಜಂ[೬೭] ಎಂಬ ಬಿರುದುಗಳನ್ನು ಧರಿಸಿದ್ದುದನ್ನು ಹೇಳುತ್ತವೆ. ಮುಂದೆ ಬಂದ ಪಾಂಡ್ಯ ವಂಶದ ಅರಸರು ಈ ಬಿರುದುಗಳನ್ನು ಪಾರಂಪರಿಕವಾಗಿ ಮುಂದುವರಿಸಿಕೊಂಡು ಬಂದರು.

ದಿನಕರ ದೇಸಾಯಿ, ಝಡ್.ಕೆ. ಅನ್ಸಾರಿ, ಬಿ.ಎಲ್. ರೈಸ್ ಮೊದಲಾದವರು ತ್ರಿಭುವನಮಲ್ಲ ಪಾಂಡ್ಯನನ್ನು ಇರುಕ್ಕವೇಳ್ ಪಾಂಡ್ಯ ಎಂದು ಗುರುತಿಸಿದ್ದಾರೆ. ಇದು ಒಪ್ಪಲು ಸಾಧ್ಯವಿಲ್ಲ. ಇವನ ಸಹೋದರನಾದ ಪಳತಪಾಂಡ್ಯ/ಪಲಿತಪಾಂಡ್ಯನೆ ತ್ರಿಭುವನಮಲ್ಲ ಪಾಂಡ್ಯ ಎಂಬುದು ಶಾಸನಗಳಿಂದ ತಿಳಿಯುತ್ತದೆ. ಈವರೆಗೂ ನಡೆದ ಅಧ್ಯಯನಗಳು ಮತ್ತು ಶಾಸನಗಳು ರಾಯಪಾಂಡ್ಯ ತ್ರಿಭುವನಮಲ್ಲಪಾಂಡ್ಯನ ಮಗ ಎಂಬುದನ್ನು ದೃಢೀಕರಿಸಿವೆ. ಕ್ರಿ.ಶ. ೧೦೮೭ರ ನೀಲಗುಂದದ ತಾಮ್ರಶಾಸನ ತ್ರಿಭುವನಮಲ್ಲ ದೇವರು ಕಲ್ಯಾಣಪುರದ ನೆಲೆವೀಡಿನಿಂದ ಆಳುತ್ತಿರುವಾಗ ಮಹಾಮಂಡಳೇಶ್ವರ ಪಲಿತ ಪಾಂಡ್ಯನ ವಿಜ್ಞಾಪನೆಯಂತೆ ಬ್ರಾಹ್ಮಣರಿಗೆ ನೀರ್ಗುಂದವನ್ನು ದಾನ ನೀಡುತ್ತಾನೆ. ರಾಜನು ಬನವಾಸಿಯಲ್ಲಿ ತಂಗಿದ್ದಾಗ ಅವನ ಶ್ರೀ ಕರ್ಣ್ಣಾಧಿಕಾರಿ ಸರ್ವಾಧ್ಯಕ್ಷನಾದ ಪಲಿತ ಪಾಂಡ್ಯನ ಮಗ ರಾಯಪಾಂಡ್ಯನ ಕೋರಿಕೆಯಂತೆ ಕೃಷ್ಣ ಪಲ್ಲಿಕೆಯನ್ನು ಬ್ರಾಹ್ಮಣರಿಗೆ ದಾನ ನೀಡಿದ ಎಂದು ಹೇಳುತ್ತದೆ.[೬೮] ರಾಯಪಾಂಡ್ಯ ಪಲಿತ ಪಾಂಡ್ಯನ ಮಗನೆಂದು ನಿಖರವಾಗಿ ಹೇಳುತ್ತದೆ. ಹಿರೇಯಮ್ಮಿಗನೂರು ಶಾಸನ ನೊಣಂಬವಾಡಿ ಮೂವತ್ತಿರ್ಚ್ಛಾ...ಯದೊಳೊ ಲವಿಂಪರಿಪಾಳಿಸಿದಂ ಪಳತ್ತ ಪಾಂಡ್ಯನ್ರಿಪಾಳಂ[೬೯] ಎಂದು ಹೇಳುತ್ತದೆ. ಹರಿಹರ ಶಾಸನಗಳು ಪಲಿತ/ಪಳತ್ತ ಪಾಂಡ್ಯನನ್ನು ಉಲ್ಲೇಖಿಸುತ್ತವೆ. ಪಳತ್ತ ಪಾಂಡ್ಯನನ್ನು ತ್ರಿಭುವನಮಲ್ಲ ಪಾಂಡ್ಯ ಎಂಬುದಾಗಿ ಕರೆದಿರುವುದು ಶಾಸನಗಳಿಂದ ಸ್ಪಷ್ಟವಾಗುತ್ತದೆ.

ಕ್ರಿ.ಶ. ೧೦೭೯ರ ನೀಲಗುಂದ ಮತ್ತು ಬಾಗಳಿಯ ಎರಡು ಶಾಸನಗಳು ತ್ರಿಭುವನಮಲ್ಲ ಪಾಂಡ್ಯನ ಆಳ್ವಿಕೆಯನ್ನು ತಿಳಿಸುವ ಮೊದಲ ಶಾಸನಗಳಾಗಿವೆ. ಉಚ್ಚಂಗಿ ಪಾಂಡ್ಯರು ನೊಳಂಬವಾಡಿ ಪ್ರಾಂತ್ಯದ ಮೇಲಿನ ಆಡಳಿತವನ್ನು ಮೊದಲ ಬಾರಿಗೆ ಉಲ್ಲೇಖಿಸುತ್ತವೆ. ಚಿತ್ರದುರ್ಗ ಜಿಲ್ಲೆಯ

ಹೊಳಲಕೆರೆ ತಾಲೂಕಿನ ಗುಂಜಿಗನೂರು ಶಾಸನ ತ್ರಿಭುವನಮಲ್ಲ ಪಾಂಡ್ಯನ ಆಡಳಿತ ಕೊನೆಯ ಶಾಸನವಾಗಿದೆ. ತ್ರಿಭುವನಮಲ್ಲ ಪಾಂಡ್ಯನು ನೊಳಂಬವಾಡಿ-೩೨೦೦೦, ಆಡಳಿತದ ವಿಭಾಗದ ಜೊತೆಗೆ ಗಂಗವಾಡಿ-೯೬೦೦೦, ಬನವಾಸಿ-೧೨೦೦೦, ಸಾಂತಳಿಗೆ-೧೦೦೦ ಬಲ್ಲಕುಂದೆ-೩೦೦, ಸಿಂದವಾಡಿ-೧೦೦೦ ಆಡಳಿತ ವಿಭಾಗಗಳನ್ನು ಕೆಲವು ಕಾಲ ಆಡಳಿತ ನಡೆಸಿರುವುದನ್ನು ಶಾಸನಗಳು ಸ್ಪಷ್ಟ ಪಡಿಸುತ್ತವೆ.

ಹೂವಿನಹಡಗಲಿಯ ಕ್ರಿ.ಶ. ೧೯೦ರ ಶಾಸನ ಕುಳಂಬಪುರವರೇಶ್ವರ ಯದುವಂ ಶಾಂಬರದುಶಮಣಿ - ಸುಭಟಚೂದಮಣಿ ಮಹಾಮಂಡಳೇಶ್ವರ ತ್ರಿಭುವನಮಲ್ಲಪಾಂಡ್ಯ ದೇವನ್ನೊೞಂಬವಾಡಿ ಮೂವತ್ತಿಚ್ಛಾಸಿರಮುಮಂ ಮಾಸವಾಡಿ ನೂರನಾಲ್ವತ್ತುಮನಾಳುತ್ತಮಿರೆ.[೨೦] ಕ್ರಿ.ಶ. ೧೦೮೬ರ ರಾಗಿಮಸಲವಾಡ ಶಾಸನ ರಾಜಿಗಚೋಳದ್ವಿಪಮೃಗರಾಜಂ ಶ್ರೀಪಾಂಡ್ಯ ರಾಜನೂರ್ಜ್ಜಿತ ತೇಜಂ ತ್ರಿಭುವನಮಲ್ಲ ಪಾಂಡ್ಯದೇವರು, ನೊಳಂಬವಾಡಿ-೩೨೦೦೦, ಗಂಗವಾಡಿ-೯೬೦೦೦ ನಿಗ್ರಹಿಸುತ್ತಿರುವುದಾಗಿ ಹೇಳುತ್ತದೆ.[೨೧] ಕ್ರಿ.ಶ. ೧೧೦೨ರ ಸಿರುಗುಪ್ಪ ಶಾಸನ ಭತ್ತಗಾವೆ, ನೊಳಂಬವಾಡಿ-೩೨೦೦೦ ಆಳುತ್ತಿರುವುದನ್ನು ಹೇಳುತ್ತದೆ.[೨೨] ಕ್ರಿ.ಶ. ೧೧೨೩ರ ಕಬ್ಬೂರು ಶಾಸನ ನೊಳಂಬವಾಡಿ-೩೨೦೦೦, ಸಾಂತಳಿಗೆ-೧೦೦೦, ಬನವಾಸಿನಾಡುಗಳನ್ನು ಆಳುತ್ತಿರುವುದಾಗಿ ಉಲ್ಲೇಖಿಸಿದೆ.[೨೩] ಪಾಂಡ್ಯರ ಸಮಕಾಲೀನರಾದ ಹೊಯ್ಸಳರು ಗಂಗವಾಡಿ-೯೬೦೦೦ದಲ್ಲಿ, ಹಾನಗಲ್ಲು ಕದಂಬರು ಬನವಾಸಿ-೧೨೦೦೦ ಪ್ರಾಂತ್ಯದಲ್ಲಿ ಚಾಳುಕ್ಯರ ಮಹಾಮಂಡಳೇಶ್ವರರಾಗಿ ಆಡಳಿತ ನಡೆಸುತ್ತಿದ್ದರು. ಹಾಗಾಗಿ ತ್ರಿಭುವನಮಲ್ಲ ಈ ಪ್ರಾಂತ್ಯಗಳ ಕೆಲವು ಪ್ರದೇಶಗಳನ್ನು ಮಾತ್ರ ಆಳುತ್ತಿರಬೇಕು.

ಹೊಯ್ಸಳ ಎರೆಯಂಗನ ನಂತರ ಅವನ ಮಕ್ಕಳಾದ ವಿಷ್ಣುವರ್ಧನ ಮತ್ತು ಬಲ್ಲಾಳರು ಸ್ವತಂತ್ರರಾಗಲು ಪ್ರಯತ್ನಿಸಿದ್ದರು. ಸ್ವತಃ ವಿಕ್ರಮಾದಿತ್ಯ ವಿಷ್ಣುವರ್ಧನನ ಮೇಲೆ ದಾಳಿ ನಡೆಸಿರುವುದು ಶಾಸನಗಳಿಂದ ತಿಳಿಯುತ್ತದೆ. ಇಂತಹ ಸಂದರ್ಭದಲ್ಲಿ ಹೊಯ್ಸರ ಮೇಲೆ ಹಿಡಿತ ಸಾಧಿಸಲು ಪಾಂಡ್ಯರಿಗೆ ಗಂಗವಾಡಿ-೯೬೦೦೦ ವಿಭಾಗದ ಆಡಳಿತ ನಿರ್ವಹಣೆಯನ್ನು ವಹಿಸಿರಬೇಕು. ಆದರೆ ಬನವಾಸಿ-೧೨೦೦೦ ಮತ್ತು ಗಂಗವಾಡಿ-೯೬೦೦೦ ವಿಭಾಗಗಳ ಮೇಲಿನ ಆಡಳಿತ ಎಷ್ಟು ಕಾಲ ಇತ್ತೆಂಬುದು ಸ್ಪಷ್ಟವಾಗುವುದಿಲ್ಲ.

ತ್ರಿಭುವನಮಲ್ಲ ಪಾಂಡ್ಯ ನೊಳಂಬವಾಡಿ-೩೨೦೦೦ ಮತ್ತು ಇನ್ನಿತರ ವಿಭಾಗಗಳ ಆಡಳಿತವನ್ನು ಕೇಸವುರು, ಉಳುವಿ, ಬೇತೂರು, ಉಚ್ಚಂಗಿ ನೆಲೆವೀಡು ಅಥವಾ ರಾಜಧಾನಿಗಳಿಂದ ಸುಖಸಂಕಥಾವಿನೋದದಿಂದ ಆಳಿದನು. ಕ್ರಿ.ಶ. ೧೦೮೩ರ ಅಂಬಳಿ ಶಾಸನ ಕೇಸವುರ ನೆಲೆವೀಡಿನಿಂದ[೨೪] ನಿಗ್ರಹಿಸಿರುವುದಾಗಿ ತಿಳಿಸುತ್ತದೆ.

ಕ್ರಿ.ಶ. ೧೧೧೦ರ ನೀಲಗುಂದ ಶಾಸನ ನೊಳಂಬವಾಡಿ-೩೨೦೦೦ ಮತ್ತು ಕಣಿಯಕಲ್ಲು-೩೦೦ನ್ನು 'ಉಳವಿ' ನೆಲವೀಡಿನಿಂದ.[೨೫] ಕ್ರಿ.ಶ. ೧೧೦೦ರ ಉಚ್ಚಂಗಿದುರ್ಗ ಕ್ರಿ.ಶ. ೧೧೨೬ರ ದುಗ್ಗವತಿಯ ಶಾಸನ ಬೇತೂರು ರಾಜಧಾನಿಯಿಂದ ಆಳುತ್ತಿರುವುದಾಗಿ ತಿಳಿಸುತ್ತವೆ.

ಪಾಂಡ್ಯ ವಂಶದ ಪಾರಂಪರಿಕ ಬಿರುದುಗಳ ಜೊತೆಗೆ ನೊಳಂಬರ ಪಾರಂಪರಿಕ ಬಿರುದುಗಳು ಇವನಿಗೆ ಇದ್ದವು. ನೊಳಂಬವಾಡಿ-೩೨೦೦೦ ಪ್ರಾಂತ್ಯದ ಪಶ್ಚಿಮದ ಗಡಿಭಾಗವನ್ನು ತುಂಗಭದ್ರಾ ನದಿಯ ಉತ್ತರಕ್ಕೆ ವಿಸ್ತರಿಸಿದ್ದನು. ಕ್ರಿ.ಶ. ೧೦೯೪ರ ಗಂಗಾವತಿ ತಾಲೂಕಿನ ವಿಪ್ರದ ಶಾಸನ ಚಾಳುಕ್ಯ ತ್ರಿಭುವನಮಲ್ಲನು ಕಲ್ಯಾಣದಲ್ಲಿ ಆಳುತ್ತಿರುವಾಗ ಆತನ ತತ್ಪಾದಪದ್ಮೋಪಜೀವಿ ತ್ರಿಭುವನಮಲ್ಲ ಪಾಂಡ್ಯ ವೀರನೊಳಂಬ ಪಲ್ಲವಪೆರ್ಮಾಡಿ ದೇವರು ನೊಳಂಬವಾಡಿ-೩೨೦೦೦ವನ್ನು ಆಳುತ್ತಿದ್ದು ಮಲಯಾಳಿಪಂಡಿತ ದೇವರಿಗೆ ಬಲ್ಲಕುಂದೆ ಮೂನ್ನೂರರ ಕಂಪಣದ ಬಳಿಯ ಬಾಡವಾದ ಇಕುಪವನ್ನು ಕಂಪಿಲೆಯ ಗವರೇಶ್ವರದ ಸಿದ್ದೇಶ್ವರ ದೇವರಿಗೆ ಸರ್ವ್ವಮಾನ್ಯವಾಗಿ ಬಿಡುತ್ತಾನೆ.[೭೬] ತುಂಗಭದ್ರ ನದಿಯ ದಕ್ಷಿಣ ದಂಡೆ ನೊಳಂಬವಾಡಿ-ಪ್ರಾಂತ್ಯದ ಗಡಿ ಪ್ರದೇಶವಾಗಿತ್ತು. ಈತನ ಆಡಳಿತ ನದಿಯಾಚೆಗೆ ವಿಸ್ತರಿಸಿದ್ದು ಇದರಿಂದ ಸ್ಪಷ್ಟವಾಗುತ್ತದೆ.

ಕುರುಗೋಡು ಸಿಂದರು ಬಲ್ಲಕುಂದೆ-೩೦೦ ವಿಭಾಗವನ್ನು ಪಾಂಡ್ಯ ಅರಸರ ಪಾದಪದ್ಮೋಪಜೀವಿಗಳಾಗಿ ಈ ವಂಶದ ನಾಚಿದೇವನ ಕಾಲದವರೆಗೂ ಇದ್ದುದನ್ನು ಶಾಸನಗಳು ತಿಳಿಸುತ್ತವೆ. ಕಳಚೂರಿಗಳ ಕಾಲಕ್ಕೆ ಈ ಪ್ರದೇಶ ಪಾಂಡ್ಯರಿಂದ ಕೈಜಾರಿದೆ. ಚಾಳುಕ್ಯ ಜಯಸಿಂಹನನ್ನು ಇದೇ ರೀತಿ ನೊಳಂಬರ ಬಿರುದುಗಳನ್ನು ಹೊಂದಿದ್ದನು. ಕಬ್ಬೂರು ಶಾಸನ ತ್ರಿಭುವನಮಲ್ಲ ಪಾಂಡ್ಯದೇವನನ್ನು ತ್ರಿಭುವನಮಲ್ಲ ನೊಳಂಬ ಪಲ್ಲವ ಪೆರ್ಮ್ಮಾಡಿ ದೇವನ ಕಿರಿಯ ಸಹೋದರನೆಂದು ಹೇಳುತ್ತದೆ.[೭೭] ತ್ರಿಭುವನಮಲ್ಲ ಪಾಂಡ್ಯನು ನಿಜವಾಗಿಯೂ ಅವನಿಗೆ ಸಂಬಂಧಿಕನಾಗಿದ್ದನೆ? ಅಥವಾ ಇದು ಕೇವಲ ಒಂದು ಪರಿಚಯಪೂರ್ವಕ ಪ್ರಸ್ತಾಪವೇ ಎಂಬುದು ಸ್ಪಷ್ಟವಾಗುವುದಿಲ್ಲ. ಇವರಿಬ್ಬರು ವಿಕ್ರಮಾದಿತ್ಯನ ಸಹೋದರಿಯರನ್ನು ವಿವಾಹ ವಾಗಿದ್ದರೆಂದು ಬಿ.ಎಲ್. ರೈಸ್ ಹೇಳುತ್ತಾರೆ.[೭೮] ಈ ಶಾಸನಗಳು ಪಾಂಡ್ಯ ಮತ್ತು ನೊಳಂಬರ ನಡುವೆ ಸಂಬಂಧ ಕಲ್ಪಿಸುವುದರಿಂದ ಎರಡು ಅಭಿಪ್ರಾಯವನ್ನು ಮಂಡಿಸಬಹುದು. ಒಂದು ಚಾಳುಕ್ಯ ಜಯಸಿಂಹ ಈ ರೀತಿಯ ಬಿರುದುಗಳನ್ನು ಹೊಂದಿರುವುದು ಶಾಸನಗಳಿಂದ ತಿಳಿಯುತ್ತದೆ. ತ್ರಿಭುವನಮಲ್ಲ ಪಾಂಡ್ಯನಿಗೂ ಪೂರ್ವದಲ್ಲಿ ನೊಳಂಬವಾಡಿ ಆಡಳಿತವನ್ನು ಜಯಸಿಂಹ ನೋಡಿಕೊಳ್ಳುತ್ತಿದ್ದ. ವಿಕ್ರಮಾದಿತ್ಯ ಚಾಳುಕ್ಯ ಸಿಂಹಾಸನದ ಅಧಿಪತ್ಯ ಪಡೆದಾಗಲೂ ಅವನ ಜೊತೆಯಲ್ಲಿ ಕುಮಾರ ವೃತ್ತಿಯಿಂದ ಕೆಲವು ಪ್ರದೇಶಗಳ ಆಡಳಿತವನ್ನು ನೋಡಿಕೊಳ್ಳುತ್ತಿದ್ದ. ಪಾಂಡ್ಯರಿಗೆ ನೊಳಂಬವಾಡಿ ಪ್ರಾಂತ್ಯದ ಆಡಳಿತ ದೊರೆತ ನಂತರ ಈ ವಂಶದವರು ತ್ರಿಭುವನಮಲ್ಲನ ಬಿರುದುಗಳನ್ನು ತಮ್ಮ ಬಿರುದುಗಳಲ್ಲಿ ಸೇರಿಸಿಕೊಂಡಂತೆ ಈ ಭಾಗದಲ್ಲಿ ಕುಮಾರವೃತ್ತಿಯಿಂದ ಆಳುತ್ತಿದ್ದ ಜಯಸಿಂಹನು ನೊಳಂಬರ ಪಾರಂಪರಿಕ ಬಿರುದುಗಳನ್ನು ತ್ರಿಭುವನಮಲ್ಲ ಪಾಂಡ್ಯ ಹೊಂದಿರಬೇಕು. ಸ್ವಲ್ಪ ಸಮಯದ ನಂತರ ವಿಕ್ರಮಾದಿತ್ಯ ಜಯಸಿಂಹನ ಆಡಳಿತವನ್ನು ಮೊಟುಕುಗೊಳಿಸಿದ. ಆದ್ದರಿಂದ ಕ್ರಿ.ಶ. ೧೧೧೧ರ ನಂತರ ಯಾವ ಶಾಸನದಲ್ಲೂ ನೊಳಂಬರ ಹೆಸರು ಪಾಂಡ್ಯ ಅರಸರೊಂದಿಗೆ ಕಾಣಿಸುವುದಿಲ್ಲ. ಹಾಗಾಗಿ ಜಯಸಿಂಹನಿಂದಾಗಿ

ಈ ಬಿರುದುಗಳು ಬಂದಿರಬೇಕು. ಎರಡನೆಯದು ಬಿ.ಎಲ್. ರೈಸ್ ಅಭಿಪ್ರಾಯದಂತೆ ನೊಳಂಬ ಪಲ್ಲವರು, ಚಾಳುಕ್ಯರು ಮತ್ತು ಪಾಂಡ್ಯ ವಂಶಗಳೊಂದಿಗೆ ವೈವಾಹಿಕ ಸಂಬಂಧಗಳು ಏರ್ಪಟ್ಟ ಕಾರಣಕ್ಕೆ ಈತನನ್ನು ಈ ರೀತಿ ಕರೆದಿರಬಹುದು.

**ಸೈನಿಕ ಸಾಧನೆಗಳು**

ತ್ರಿಭುವನಮಲ್ಲದೇವನ ನಿಷ್ಠಾವಂತ ಮಹಾಮಂಡಳೇಶ್ವರನಾದ ಈತ ನೊಳಂಬವಾಡಿ ಮತ್ತು ಇತರ ಪ್ರಾಂತ್ಯಗಳಿಗೆ ಆಡಳಿತ ನಿರ್ವಹಣೆಯ ಜೊತೆಗೆ ವಿಕ್ರಮಾದಿತ್ಯನ ದಂಡಯಾತ್ರೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದನು. ವಿಕ್ರಮಾದಿತ್ಯನಿಗೆ ಚೋಳ, ಆಂಧ್ರ, ಕಳಿಂಗ, ಅಂಗ, ವಂಗ, ಮಗಧ, ಗುರ್ಜರ ದೊರೆಗಳನ್ನು ಮಣಿಸಲು ಇವನೊಬ್ಬನೇ ಸಾಕೆಂದು ಹೆಮ್ಮೆಯಿಂದ ಶಾಸನಗಳು ವರ್ಣಿಸುತ್ತವೆ. ಕದನದಲ್ಲಿ ವಿಜಯ ಪಡೆದ ಪ್ರತೀಕವಾಗಿ ಸೋತ ರಾಜವಂಶಗಳನ್ನು ತನ್ನ ಬಿರುದಾಗಿಸಿಕೊಂಡಿರುವುದು ಆತನ ಶಾಸನಗಳಿಂದ ತಿಳಿಯುತ್ತದೆ.

**ಚೋಳರೊಡನೆ ಯುದ್ಧ**

ರಾಗಿಮಸಲವಾಡದ ಕ್ರಿ.ಶ. ೧೦೮೫-೮೬ರ ಶಾಸನ "ತ್ರಿಭುವನಮಲ್ಲ ಪಾಂಡ್ಯನನ್ನು ರಾಜಿಗಚೋಳದ್ವಿಪಮೃಗರಾಜಂ" ರಾಜಿಗಚೋಳ ಮನೋಭಂಗ ಎಂದು ಈತನ ೫೦ಕ್ಕೂ ಹೆಚ್ಚು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ತ್ರಿಭುವನಮಲ್ಲ ಪಾಂಡ್ಯನು ನೊಳಂಬವಾಡಿ ಪ್ರಾಂತ್ಯದ ಭೌಗೋಳಿಕ ಮೇರೆಯ ವಿಸ್ತರಣೆಗಾಗಿ ಚೋಳರೊಂದಿಗೆ ಕದನಕ್ಕೆ ಇಳಿದಿಲ್ಲ. ಸ್ವಾಮಿನಿಷ್ಠೆಯ ಕಾರಣಕ್ಕೆ ಚಾಳುಕ್ಯ ಮತ್ತು ಚೋಳರ ನಡುವೆ ನಡೆದ ಕದನದಲ್ಲಿ ಚಾಳುಕ್ಯ ಸೈನ್ಯದ ಪ್ರತಿನಿಧಿಯಾಗಿ ಹೋರಾಟ ನಡೆಸಿದ್ದಾರೆ. ಹಾಗಾಗಿ ಆಶ್ರಿತ ಚಕ್ರವರ್ತಿ ಮತ್ತು ಇವರು ಈ ಬಿರುದುಗಳನ್ನು ಒಟ್ಟಿಗೆ ಧರಿಸಿರುವುದರಿಂದ ಇದು ಸ್ಪಷ್ಟವಾಗುತ್ತದೆ. ಪಾಂಡ್ಯ ವಂಶದ ಪೂರ್ವ ಅರಸನಾದ ಚೇದಿರಾಜ ಮತ್ತು ಪಲಮಾಂದ ಪಾಂಡ್ಯರು ಚಾಳುಕ್ಯ ಸೈನ್ಯದೊಂದಿಗೆ ಚೋಳ ಮತ್ತು ಚೇದಿ ಅರಸರೊಂದಿಗೆ ಕಾದಿರುವುದು ತಿಳಿಯುತ್ತದೆ. ಆದರೆ ಅವರಿಗೆ ಈ ಬಿರುದುಗಳು ಇದ್ದಿರುವ ಬಗ್ಗೆ ಮಾಹಿತಿ ಲಭ್ಯವಿಲ್ಲ. ಹಾಗಾಗಿ ಈ ಬಿರುದುಗಳು ಈತನಿಗೆ ವಂಶಪರಂಪರಿಕವಾಗಿ ಬಂದಿಲ್ಲ. ತನ್ನ ಶೌರ್ಯದಿಂದಾಗಿ ಅರಸನಿಂದ ಬಂದಿದ್ದಾಗಿದೆ. ವಿಕ್ರಮಾದಿತ್ಯ ಮತ್ತು ಚೋಳರೊಂದಿಗೆ ನಡೆದ ಕದನಗಳ ಮಾಹಿತಿಯನ್ನು ಕನ್ನಡ ನಾಡಿನ ಶಾಸನಗಳು ಹೇಳುತ್ತವೆ. ಬಾಗಳಿಯ ವೀರಗಲ್ಲು, ನೀಲಗುಂದ ಶಾಸನಗಳೂ ಚೋಳ ಆಕ್ರಮಣದ ವಿಷಯವನ್ನು ಉಲ್ಲೇಖಿಸುತ್ತವೆ.

೧ನೆಯ ಸೋಮೇಶ್ವರ ಅಧಿಕಾರದಲ್ಲಿದ್ದಾಗ ವಿಕ್ರಮಾದಿತ್ಯ ಮತ್ತು ಜಯಸಿಂಹರು ತಂದೆಯ ಮಾರ್ಗದರ್ಶನದಲ್ಲಿ ತಮ್ಮ ಸಾಮಂತರೊಂದಿಗೆ ಸೇರಿ ಚೋಳರೊಡನೆ ಯುದ್ಧಕ್ಕೆ ನಿಂತಿದ್ದರು. ವಿಕ್ರಮಾದಿತ್ಯನ ಅಣ್ಣ ಸೋಮೇಶ್ವರ ಚಕ್ರವರ್ತಿಯಾದಾಗ ಅವನಿಂದ ಅಪಾಯದ ಸೂಚನೆಯನ್ನು ಅರಿತ ವಿಕ್ರಮಾದಿತ್ಯ ಅಲ್ಲಿಂದ ತಪ್ಪಿಸಿಕೊಂಡು ಅನೇಕ ಮಹಾಮಂಡಳೇಶ್ವರರನ್ನು ತನ್ನಡೆಗೆ ಸೆಳೆದುಕೊಂಡನು.

ನಂತರ ಅವನು ವೀರರಾಜೇಂದ್ರನ ಮೇಲೆ ಯುದ್ಧಕ್ಕೆ ಹೋಗುತ್ತಾನೆ. ಇದನ್ನು ತಿಳಿದ ಚೋಳ ವೀರರಾಜೇಂದ್ರ ವಿಕ್ರಮಾದಿತ್ಯನಿಗೆ ತನ್ನ ಮಗಳನ್ನು ಧಾರೆಯೆರೆದು ಅವನೊಂದಿಗೆ ಶಾಂತಿ ಒಪ್ಪಂದ ಮಾಡಿಕೊಂಡ. ಈ ವಿಷಯವನ್ನು ಬಿಲ್ಹಣನು ಹೇಳುತ್ತಾನೆ.[೮೦] ವೀರರಾಜೇಂದ್ರನ ಮರಣದ ನಂತರ ಚೋಳದ ಸಾಮ್ರಾಜ್ಯದ ವಾರಸುದಾರಿಕೆಯನ್ನು ಅಳಿಯ ಅಧಿರಾಜೇಂದ್ರನಿಗೆ ವಹಿಸಿ ಕೆಲವು ದಿನಗಳು ಕಂಚಿಯಲ್ಲಿ ಮತ್ತು ಗಂಗೈಕೊಂಡದಲ್ಲಿ ಕಳೆಯುತ್ತಾನೆ. ಮುಂದೆ ಸ್ವಲ್ಪ ದಿನಗಳ ನಂತರ ವೆಂಗಿ ದೇಶದ ಅಧಿಪತಿಯಾಗಿದ್ದ ಇಮ್ಮಡಿ ರಾಜೇಂದ್ರ ಚೋಳ(ಕುಲೋತ್ತುಂಗ)ನು ಅಧಿರಾಜೇಂದ್ರನನ್ನು ಕೊಂದು ಚೋಳ ಸಾಮ್ರಾಜ್ಯದ ಪಟ್ಟಕ್ಕೆ ಬರುತ್ತಾನೆ.[೮೧] ಈ ವೇಳೆಯಲ್ಲಿ ಚಾಳುಕ್ಯ ಸಿಂಹಾಸನಕ್ಕೆ ೨ನೇ ಸೋಮೇಶ್ವರ ಮತ್ತು ವಿಕ್ರಮಾದಿತ್ಯದ ನಡುವೆ ದಾಯಾದಿ ಕಲಹ ತಾರಕಕ್ಕೆ ಏರಿತು. ಹಾಗಾಗಿ ಸೋಮೇಶ್ವರ ಈ ಇಮ್ಮಡಿ ರಾಜೇಂದ್ರನೊಂದಿಗೆ ಸೇರಿಕೊಂಡಿದ್ದನು. ವಿಕ್ರಮಾದಿತ್ಯ ಸೈನ್ಯದೊಂದಿಗೆ ಕಂಚಿಯನ್ನು ಮುತ್ತುತ್ತಾನೆ. ಈ ಯುದ್ಧದಲ್ಲಿ ಚೋಳನ ದರ್ಪವನ್ನು ಅಡಗಿಸಿ ಕಂಚಿಯ ನಗರವನ್ನು ವಶಪಡಿಸಿಕೊಂಡಿರುವುದನ್ನು ಬಿಲ್ಹಣ ಮತ್ತು ಆತನ ಕೆಲವು ಶಾಸನಗಳು ಹೇಳುತ್ತವೆ. ಜೋಳ ಮತ್ತು ಚಾಳುಕ್ಯರಿಗೆ ನಡೆದ ಕದನಗಳಲ್ಲಿ ವಿಕ್ರಮಾದಿತ್ಯನೊಂದಿಗೆ ಭಾಗವಹಿಸಿದ ಮಹಾಮಂಡಳೇಶ್ವರರು ಈ ವಂಶದ ಬಿರುದುಗಳನ್ನು ಹೊಂದಿದ್ದಾರೆ. ಸೈನ್ಯಾಧಿಕಾರಿ ಕೊಪ್ಪದಂಡನಾಥನನ್ನು "ಚೋಳಕಟಕ ಸೂರೆಕಾರನಂ ಚಾಳುಕ್ಯಕಟಕರಕ್ಷಾಪಾಳನಂ"[೮೨] ಎಂದು ಕರೆಯಲಾಗಿದೆ. ರಾಜಾದಿತ್ಯರಸನನ್ನು ಚೋಳಕಟಕಸೂರೆಕಾರಂ ಕಾಂಚೀಪುರ ಪ್ರಬಳಒಳಪನ್ನಗವೈನತೇಯಂ" ಎಂದು, ಮಲ್ಲರಸನನ್ನು ಚೋಳಕಟಕ ಕರಿತುರಗಪಟು ಸುಭಟನಿಚಯ ನಿಚಿತ ಬಳನರರಿಬಳತಿಮಿರಬಣ್ಣನ ಪ್ರತಾಪಮಾರ್ತ್ತಂಡ ದ್ರವಿಡಮಣ್ಣಳಿಕ ಶಿರಃಖಣ್ಣನ ಪಲ್ಲಿಕೋಟಘರಟ್ಟ[೮೩] ಎಂದು, ಕರೆಯಲಾಗಿದೆ. ಹಾಗೆಯೇ ತ್ರಿಭುವನಮಲ್ಲ ಪಾಂಡ್ಯ ಕಂಚಿಪುರವರಾಧೀಶ್ವರ, ರಾಜಿಗಚೋಳದ್ವೀಪಮೃಗರಾಜಂ ರಾಜೀಗಚೋಳಮನೋಭಂಗ[೮೪] ಎಂಬ ಬಿರುದುಗಳನ್ನು ಹೊಂದಿದ್ದನು. ಚೋಳ ಅರಸರಾದ ೧ನೇ ರಾಜಾಧಿರಾಜ ಮತ್ತು ಸೋಮೇಶ್ವರನೊಂದಿಗೆ ಸೇರಿಕೊಂಡಿದ ರಾಜಿಗಚೋಳ ಮತ್ತು (೧ನೇ ಕುಲೋತ್ತುಂಗ) ವಿಕ್ರಮಾದಿತ್ಯರ ನಡುವೆ ನಡೆದ ಕದನಗಳಲ್ಲಿ ಭಾಗವಹಿಸಿರುವುದು ಇದರಿಂದ ಸ್ಪಷ್ಟವಾಗುತ್ತದೆ. ಕಾಲದ ಉಲ್ಲೇಖವಿಲ್ಲದ ಬಾಗಳಿಯ ವೀರಗಲ್ಲು ಶಾಸನ ಮಹಾಸಾಮಂತ ಮಹಾಬಲಿ ವಂಶದ ಎಚರಸನ ಮಗ ಗೂಳಿದೇವನು ಚೋಳರ ಅಶ್ವದಳವನ್ನು ಎದುರಿಸಿ ಸತ್ತಂತೆ ತಿಳಿಸುತ್ತದೆ.[೮೫]

ಶಾಸನಗಳು ಅಭೇದ್ಯವಾದ ಉಚ್ಚಂಗಿಯ ಕೋಟೆಯನ್ನು ಚೋಳ ಸೈನ್ಯ ೧೨ ವರ್ಷಗಳ ಕಾಲ ಮುತ್ತಿಗೆ ಹಾಕಿದರೂ ಅದನ್ನು ವಶಪಡಿಸಿಕೊಳ್ಳಲು ಸಾಧ್ಯವಾಗಲಿಲ್ಲ ಎಂದು ವರ್ಣಿಸುತ್ತವೆ. ತ್ರಿಭುವನಮಲ್ಲ ಪಾಂಡ್ಯ ಚೋಳ ಮನೆತನದೊಂದಿಗೆ ಕದನ ನಡೆಸಿದ ಕಾರಣಕ್ಕಾಗಿ ಅವನಿಗೆ ಕಂಚಿಪುರವರಾಧೀಶ್ವರ. ರಾಜಿಗಚೋಳ ಮನೂಭಂಗ, ರಾಜೀಗಚೋಳದ್ವಿಪಮೃಗರಾಜಂ ಎಂಬ ಬಿರುದುಗಳು ಬಂದವು. ಈತನ ನಂತರ ಅಧಿಕಾರಕ್ಕೆ ಬಂದ ಪಾಂಡ್ಯ ವಂಶದ ರಾಜಕುಮಾರರು ಈ ಬಿರುದುಗಳನ್ನು ವಂಶಪಾರಂಪರಿಕವಾಗಿ ಮುಂದುವರಿಸಿಕೊಂಡು ಬಂದರು.

**ಹೊಯ್ಸಳರೊಂದಿಗೆ**

ಉಚ್ಚಂಗಿ ಪಾಂಡ್ಯರಂತೆ ಹೊಯ್ಸಳರು ಚಾಳುಕ್ಯ ಅರಸರ ಪಾದಪದ್ಮೋಪಜೀವಿಗಳಾಗಿ ಮಹಾಮಂಡಳೇಶ್ವರ ಪದವಿಯಲ್ಲಿ ಗಂಗವಾಡಿ-೯೬೦೦೦ ಪ್ರಾಂತ್ಯದ ಆಡಳಿತವನ್ನು ನಿರ್ವಹಿಸುತ್ತಿದ್ದರು. ಹೊಯ್ಸಳ ಎರೆಯಂಗನ ನಂತರ ಅವನ ಮಕ್ಕಳಾದ ವಿಷ್ಣುವರ್ಧನ ಮತ್ತು ಇಮ್ಮಡಿ ಬಲ್ಲಾಳರು ಚಾಳುಕ್ಯರಿಂದ ದೂರವಾಗಿ ಸ್ವತಂತ್ರ ರಾಜ್ಯ ಸ್ಥಾಪನೆಯ ಪ್ರಯತ್ನಕ್ಕೆ ಕೈಹಾಕಿದರು. ಈ ವರ್ತನೆ ವಿಕ್ರಮಾದಿತ್ಯನನ್ನು ಕೆರಳಿಸಿತು. ಇವರ ಪ್ರಯತ್ನವನ್ನು ವಿಫಲಗೊಳಿಸಲು ತನ್ನ ನಿಷ್ಠಾವಂತ ಮಹಾಮಂಡಳೇಶ್ವರಾದ ಉಚ್ಚಂಗಿ ಪಾಂಡ್ಯರು ಮತ್ತು ಇತರರೊಂದಿಗೆ ಹೊಯ್ಸಳ ವಿಷ್ಣುವರ್ಧನನ ದರ್ಪವನ್ನು ಅಡಗಿಸಿರುವುದು ಶಾಸನಗಳಿಂದ ತಿಳಿಯುತ್ತದೆ. ಅಲ್ಲದೆ ಗಂಗವಾಡಿ ಪ್ರಾಂತ್ಯ ನೊಳಂಬವಾಡಿಯ ಪೂರ್ವದ ಗಡಿಯಾಗಿತ್ತು. ಹೊಯ್ಸಳ ಅರಸರ ಸ್ವತಂತ್ರ ರಾಜ್ಯ ಸ್ಥಾಪನೆ ಹಾಗೂ ವಿಸ್ತರಣೆಗೆ ನೊಳಂಬವಾಡಿ ಹೆಬ್ಬಾಗಿಲಂತೆ ಇತ್ತು. ಹಾಗಾಗಿ ಅವರ ಸಾಮ್ರಾಜ್ಯ ವಿಸ್ತರಣೆ ನೊಳಂಬವಾಡಿ ಪ್ರಾಂತ್ಯದಿಂದಲೇ ಆರಂಭವಾಗಬೇಕಿದ್ದರಿಂದ ಪಾಂಡ್ಯರಿಗೂ ಮತ್ತು ಹೊಯ್ಸಳರಿಗೂ ನಿರಂತರವಾಗಿ ಕದನಗಳು ನಡೆಯುತ್ತಲೇ ಇದ್ದವು. ತ್ರಿಭುವನಮಲ್ಲ ಪಾಂಡ್ಯ ಕೆಲವು ಕಾಲ ಗಂಗವಾಡಿ-೯೬೦೦೦ವನ್ನು ಆಳುತ್ತಿರುವುದಾಗಿ ಕ್ರಿ.ಶ. ೧೧೦೮೬ರ ರಾಗಿಮಸಲವಾಡ ಶಾಸನ ಹೇಳುತ್ತದೆ. ತ್ರಿಭುವನಮಲ್ಲ ಪಾಂಡ್ಯ ಹೊಯ್ಸಳ ವಿಷ್ಣುವರ್ಧನನೊಂದಿಗೆ ವಿಕ್ರಮಾದಿತ್ಯನ ಜೊತೆಗೆ ಹಾಗೂ ಸ್ವತಂತ್ರವಾಗಿ ಯುದ್ಧ ಕೈಗೊಂಡಿದ್ದಾನೆ. ಉಚ್ಚಂಗಿ ಪಾಂಡ್ಯರು ಹೊಯ್ಸಳರೊಂದಿಗೆ ನಡೆದ ಕದನಗಳಲ್ಲಿ ಜಯ ಪಡೆದಿರುವ ಬಗ್ಗೆ ಶಾಸನಗಳು ಮಾಹಿತಿ ನೀಡುವುದಿಲ್ಲ. ಆದರೆ ಹೊಯ್ಸಳರು ಪಾಂಡ್ಯರ ಮೇಲೆ ಜಯ ಸಾಧಿಸಿರುವುದಾಗಿ ಹೊಯ್ಸಳ ವಂಶದ ಬಹುತೇಕ ಎಲ್ಲಾ ಅರಸರು ಬಿರುದುಗಳಲ್ಲಿ ಹಾಕಿಕೊಂಡಿದ್ದಾರೆ.

**ವಿಕ್ರಮಾದಿತ್ಯನ ಜೊತೆ ಸೇರಿ:** ಕ್ರಿ.ಶ. ೧೧೦೪-೦೫ರಲ್ಲಿ ನರೇಗಲ್ ಶಾಸನ ಪಾಂಡ್ಯ ಅರಸರ ಸಾಮಂತರಾಗಿದ್ದ ಸಿಂದ ವಂಶದ ಅಚುಗಿ-II ಅವನ ಮಗ ಭೂಲೋಕಮಲ್ಲ ಪೆರ್ಮಾಡಿದೇವರು ಹೊಯ್ಸಳರನ್ನು ಸೋಲಿಸಿದ ಬಗ್ಗೆ ಉಲ್ಲೇಖಿಸುತ್ತದೆ. ಇದರಿಂದ ಸ್ವತಂತ್ರನಾಗಲು ಹವಣಿಸುತ್ತಿದ್ದ ಹೊಯ್ಸಳ ವಿಷ್ಣುವರ್ಧನನಿಗೆ ಬಲವಾದ ಏಟು ಬಿದ್ದಿರಬೇಕು. ಕ್ರಿ.ಶ. ೧೧೧೮ರಲ್ಲಿ ನಡೆದ ಕಣ್ಣೆಗಾಲ ಬಿಜಾನಕಬಿಯ ಕಾಳಗ, ಕ್ರಿ.ಶ. ೧೧೨೦ರಲ್ಲಿ ನಡೆದ ಹಲಸೂರ ಕಾಳಗದಲ್ಲಿ ತ್ರಿಭುವನಮಲ್ಲ ಪಾಂಡ್ಯ ವಿಕ್ರಮಾದಿತ್ಯನ ಸೈನ್ಯದ ಜೊತೆ ಸೇರಿಕೊಂಡಿದ್ದನು.

**ದುಮ್ಮೆಕಾಳಗ (ಕ್ರಿ.ಶ. ೧೧೧೭-೧೮)**

ಹೊಯ್ಸಳ ವಿಷ್ಣುವರ್ಧನ ತ್ರಿಭುವನಮಲ್ಲ ಪಾಂಡ್ಯನ ಮೇಲೆ ದಾಳಿ ಮಾಡಿರುವುದನ್ನು ಆಲ್ದೂರ ಶಾಸನ ತಿಳಿಸುತ್ತದೆ. ಮಹಾಮಂಡಳೇಶ್ವರ ತ್ರಿಭುವನಮಲ್ಲ ತಲಕಾಡುಗೊಂಡ, ಕೊಂಗನಂಗಲಿ ಬನವಾಸಿ ಹಲಸಂಗೆ ಹಾನಗಲ್ಲುಗೊಂಡ, ಭುಜಬಳವೀರ, ಗಂಗ ಹೊಯ್ಸಳ

ಬಿಟ್ಟಿದೇವರು ಪಾಂಡ್ಯನ ಮೇಲೆತ್ತಿ ದುಮ್ಮೆಯ ಕಾಳಗದಲು ಆನೆಯಘಟ ಕುದುರೆಯದಳೆ ಮುಮೆತ್ತಿದಲ್ಲಿ ಆರುಂದೂರ ತಿಂಕಣ ಮಾಚಂಣ ಜೀವಿತಕ್ಕೆ ಪಾವಹಪರ್ವನ ಹೊಸೆಯಕೊಟ್ಟು ಹಿಡಿದು ಕಾಹ ಹರದ ಜಾಳ ಹಳ್ಳಿ ಗ್ರಾಮಂ ಇರಿದನು ಅಂತು ಇಮ್ಮಡಿ ಜೀವಿತಕ್ಕೆ ಹಣವಿನ ಕಾಹ ಹರದ ಆತನ ಮದವಾಳಿಗೆ ಬಾಸಗೌಡಿ ಮಗಂ ಬಮ್ಮಗೌಡ ಬಾಕಣಬೀಕಣ ಮಾದಿಯಣ ಕಲ್ಲ ಸಿಕ್ಕಿಸಿದರು ಎಂದು ವೀರಗಲ್ಲು ಶಾಸನ ಹೇಳುತ್ತದೆ.[೫೬] ಈ ಕದನ ಕ್ರಿ.ಶ. ೧೧೧೭ರ ಸುಮಾರಿನಲ್ಲಿ ನಡೆದಿರಬಹುದು. ಈ ಯುದ್ಧದಲ್ಲಿ ಯಾರಿಗೆ ಜಯವಾಯಿತು ಎಂಬುದು ಸ್ಪಷ್ಟವಾಗುವುದಿಲ್ಲ. ಕೆಲವು ವಿದ್ವಾಂಸರು ಇಲ್ಲಿ ಹೊಯ್ಸಳ ವಿಷ್ಣುವರ್ಧನ ಗೆದ್ದನೆಂದು ಬರೆದಿದ್ದಾರೆ. ಬಾ.ರಾ.ಗೋಪಾಲ್‌ರವರು ಈ ಯುದ್ಧದಲ್ಲಿ ತ್ರಿಭುವನಮಲ್ಲರಾಯ ಪಾಂಡ್ಯ ಮಡಿದನೆಂದು ಹೇಳುತ್ತಾರೆ.[೫೭] ತ್ರಿಭುವನಮಲ್ಲ ಪಾಂಡ್ಯನ ಜೊತೆಗೆ ಕುಮಾರ ವೃತ್ತಿಯಿಂದ ಆಡಳಿತ ಮಾಡುತ್ತಿದ್ದ ರಾಯಪಾಂಡ್ಯ ತಂದೆಯೊಡನೆ ಈ ಯುದ್ಧದಲ್ಲಿ ಭಾಗವಹಿಸಿದ್ದ ಈ ಯುದ್ಧದಲ್ಲಿ ಮಡಿದ ಎಂಬ ಗೋಪಾಲರ ಅಭಿಪ್ರಾಯವನ್ನು ಒಪ್ಪಲು ಸಾಧ್ಯವಿಲ್ಲ. ಅಲ್ಲದೆ ಈ ದುಮ್ಮಿ ಕಾಳಗದಲ್ಲಿ ಯಾವ ಪಾಂಡ್ಯ ಅರಸರು ಮರಣ ಹೊಂದಿಲ್ಲ. ಕ್ರಿ.ಶ. ೧೧೧೭ರ ನಂತರದಲ್ಲಿ ತ್ರಿಭುವನಮಲ್ಲ ಪಾಂಡ್ಯ ಬದುಕಿದ್ದು ಕ್ರಿ.ಶ. ೧೧೨೫ರವರೆಗೂ ಆತ ಆಡಳಿತ ನಡೆಸಿರುವುದಕ್ಕೆ ಶಾಸನಗಳು ಸಾಕ್ಷಿಯಾಗಿವೆ. ಹಾಗೆಯೇ ತ್ರಿಭುವನಮಲ್ಲ ಪಾಂಡ್ಯನ ನಂತರ ಕ್ರಿ.ಶ. ೧೧೪೫ರವರೆಗೂ ರಾಯಪಾಂಡ್ಯ, ಪಾಂಡ್ಯ ವಂಶದ ಅಧಿಕಾರ ನಿರ್ವಹಿಸಿರುವುದಕ್ಕೆ ಶಾಸನಗಳು ಲಭ್ಯ ಇವೆ. ದುಮ್ಮಿ ಕದನ ನಂತರದ ಶಾಸನಗಳು ವಿಷ್ಣುವರ್ಧನ ಪಾಂಡ್ಯರನ್ನು ಜಯಿಸಿರುವುದಾಗಿ ಹೇಳುತ್ತವೆ. ಹುಣುವಿನೋಡು ಗ್ರಾಮದ ಶಾಸನದಲ್ಲಿ ಮಹಾಮಂಡಳೇಶ್ವರ ವಿಷ್ಣುವರ್ಧನ ಹೊಯ್ಸಳಣದೇವರ ಪ್ರತಾಪವೆಂತೆಂದಡೆ ಉಚ್ಚಂಗಿ ವಿರಾಟನಂ ಪೊಳಲು ಬಂಕಪುರಂಬನವಾಸೆಕೋಯತೂರ್ತಂಗ ಪರಾಯನೆಗಳ್ದ ವಿಕ್ರಮನೀಕಲಿ ವಿಷ್ಣುವರ್ಧನಂ.[೫೮] ಈ ಶಾಸನಗಳನ್ನು ಗಮನಿಸಿದರೆ ಇಲ್ಲಿ ವಿಷ್ಣುವರ್ಧನನಿಗೆ ಜಯವಾಗಿದ್ದರೂ ಇಡೀ ನೊಳಂಬವಾಡಿ ಪ್ರದೇಶವನ್ನು ವಶಪಡಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಕ್ರಿ.ಶ. ೧೧೨೦ರಲ್ಲಿ ಸ್ವತಃ ಚಾಳುಕ್ಯ ತ್ರಿಭುವನಮಲ್ಲ ದೇವರ ಆಜ್ಞೆಯಂತೆ ತ್ರಿಭುವನಮಲ್ಲ ಭುಜಗಂಗ ಪೆರ್ಮಾಡಿದೇವನು ವಿಷ್ಣುವರ್ಧನನ ಮೇಲೆ ಹಲಸೂರು ಪ್ರದೇಶದ ಮೇಲೆ ದಾಳಿ ಮಾಡಿ ವಿಷ್ಣುವರ್ಧನನನ್ನು ಸೋಲಿಸಿದ. ಈ ಸೋಲಿನಿಂದ ಕಂಗೆಟ್ಟ ಹೊಯ್ಸಳ ದೊರೆ ವಿಕ್ರಮಾದಿತ್ಯನ ಪಾದಪದ್ಮೋಪಜೀವಿಯಾಗಿ ಮುಂದುವರಿದಿರುವುದು ಶಾಸನಗಳಿಂದ ತಿಳಿಯುತ್ತದೆ.[೫೯] ಚನ್ನಬಸವಯ್ಯ ಹೀರೆಮಠ ಅವರು ಹೊಯ್ಸಳ ವಿಷ್ಣುವರ್ಧನ ಶನಿವಾರದಂದು ಉಚ್ಚಂಗಿದುರ್ಗವನ್ನು ಗೆದ್ದುದ್ದರಿಂದ ಆತನಿಗೆ ಶನಿವಾರಸಿದ್ಧಿ, ಗಿರಿದುರ್ಗಮಲ್ಲ ಎಂಬ ಬಿರುದುಗಳು ಬಂದವು ಎಂದು ಹೇಳುತ್ತಾರೆ.[೬೦] ಹೊಯ್ಸಳ ಮತ್ತು ಪಾಂಡ್ಯರ ಸಮಕಾಲೀನ ಯಾವ ಶಾಸನಗಳು ಈ ವಿಷಯವನ್ನು ಹೇಳುವುದಿಲ್ಲ. ಅಲ್ಲದೆ ವಿಷ್ಣುವರ್ಧನ ಆಡಳಿತ ಕಾಲಕ್ಕೆ ಉಚ್ಚಂಗಿದುರ್ಗ ಕದಂಬಳಿಗೆ ನಾಡಿನ ಚಿಕ್ಕ ಆಡಳಿತವಾಗಿತ್ತು. ಪಾಂಡ್ಯರ ರಾಜಧಾನಿಯಾಗಿರಲಿಲ್ಲ. ತ್ರಿಭುವನ ಪಾಂಡ್ಯನ ಕಾಲದಲ್ಲಿ ಹೊಯ್ಸಳರ ದಾಳಿಗಳು ನಡೆದಿದ್ದರೂ ನೊಳಂಬವಾಡಿಯ

ಯಾವ ಭಾಗವನ್ನು ಅವರು ವಶಪಡಿಸಿಕೊಳ್ಳಲು ಸಾಧ್ಯವಾಗಲಿಲ್ಲ ಎಂಬುದಂತೂ ಸ್ಪಷ್ಟ ರಾಗಿಮಸಲವಾಡ ಶಾಸನ ತ್ರಿಭುವನಮಲ್ಲ ಪಾಂಡ್ಯ ಗಂಗವಾಡಿ-೯೬೦೦೦ ಪ್ರದೇಶಗಳನ್ನು ಆಳುತ್ತಿರುವುದಾಗಿ ಹೇಳುತ್ತದೆ. ಬಹುಶಃ ಈ ಸಮಯದಲ್ಲಿ ಹೊಯ್ಸಳರು ತಮ್ಮ ಗಂಗವಾಡಿ ಪ್ರದೇಶಗಳನ್ನು ತಮ್ಮ ತೆಕ್ಕೆಗೆ ತೆಗೆದುಕೊಂಡಂತೆ ಕಾಣುತ್ತದೆ. ಆನಂತರ ದಿನಗಳಲ್ಲಿ ಪಾಂಡ್ಯರ ಯಾವ ಶಾಸನಗಳು ಗಂಗವಾಡಿ-೯೬೦೦೦ ಪ್ರದೇಶವನ್ನು ಉಲ್ಲೇಖಿಸುವುದಿಲ್ಲ. ಹೊಯ್ಸಳರು ತಮ್ಮ ಶಾಸನಗಳಲ್ಲಿ ಪಾಂಡ್ಯರು, ಹಾನಗಲ್ಲು, ಬನವಾಸಿ ನಾಡುಗಳನ್ನು ಗೆದ್ದೆವೆಂದು ಹೇಳಿಕೊಳ್ಳುವುದು ಕೇವಲ ಪ್ರತಿಷ್ಠೆಯ ವರ್ಣನೆಗಳಾಗಿವೆಯೇ ಹೊರತು ಅದು ನೈಜವಾಗಿಲ್ಲ. ಅದು ನಿಜವಾಗಿದ್ದಲ್ಲಿ ಈ ಪ್ರದೇಶಗಳಲ್ಲಿ ಆಳುತ್ತಿರುವ ಸಾಮಂತ ಅರಸು ಹೊಯ್ಸಳರನ್ನು ಪಾದಪದ್ಮೋಪಜೀವಿಗಳೆಂದು ಕರೆದುಕೊಳ್ಳುತ್ತಿದ್ದರು. ಈ ಬಗ್ಗೆ ಆ ಮನೆತನದ ಶಾಸನಗಳಲ್ಲಿ ಮಾಹಿತಿ ದೊರೆಯುವುದಿಲ್ಲ. ಹಾಗಾಗಿ ಅದು ಶಾಸನಗಳ ಉತ್ಪ್ರೇಕ್ಷೆಯ ವರ್ಣನೆ ಎಂದೆನಿಸುತ್ತದೆ.

**ರತ್ನಪುರದ ಯುದ್ಧ (ಕ್ರಿ.ಶ. ೧೧೨೨)**

ತ್ರಿಭುವನಮಲ್ಲ ಪಾಂಡ್ಯ ತನ್ನ ಒಡೆಯನ ಆಜ್ಞೆಯಂತೆ ರತ್ನಪುರವನ್ನು ಜಯಿಸಿರುವುದಾಗಿ ಕ್ರಿ.ಶ. ೧೧೨೨ ಯರಬಾಳು ಶಾಸನ ತಿಳಿಸುತ್ತದೆ. ತ್ರಿಭುವನಮಲ್ಲ ದೇವರು ವಿಜಯರಾಜ್ಯ ಚಂದ್ರಾರ್ಕ್ಕ ತಾರಂಬರಂಸ್ತಿರಂ ಭವತಿ, ಗಂಗ, ಚೋಳ, ಲಾಳರನ್ನು ಗೆದ್ದು ಪಾಂಚಾಲರಿಂದ ಕಪ್ಪವನ್ನು ಪಡೆದ ತ್ರಿಭುವನಮಲ್ಲ ಪಾಂಡ್ಯದೇವನು ನೊಳಂಬವಾಡಿ-೩೨೦೦೦ನ್ನು ಆಳುತ್ತಿದ್ದು, ಒಡೆಯನ ಆಜ್ಞೆಯಂತೆ ರತ್ನಪುರದ ರಾಜನನ್ನು ಸದೆಬಡೆದು ಸೂರೆಗೊಂಡನೆಂದು ಹೇಳುತ್ತದೆ.[೧] ಈ ಯುದ್ಧದಿಂದ ಪಾಂಡ್ಯ ಅರಸನ ಕೀರ್ತಿ ಇಮ್ಮಡಿಗೊಂಡು ಅರಸನ ನಂಬಿಕೆ ಮತ್ತಷ್ಟು ದೃಢವಾಗುವಂತೆ ಮಾಡಿತ್ತು. ಸ್ವತಂತ್ರ ಅರಸನನ್ನು ಗೆಲ್ಲುವಷ್ಟು ಶೌರ್ಯ ಪಾಂಡ್ಯ ಅರಸನಿಗೆ ಇದ್ದುದು ಇಲ್ಲಿ ಗೊತ್ತಾಗುತ್ತದೆ.

**ಔತ್ತರೇಯ ಯುದ್ಧಗಳು**

ತ್ರಿಭುವನಮಲ್ಲ ಪಾಂಡ್ಯ ವಿಕ್ರಮಾದಿತ್ಯನ ನಂಬಿಕಸ್ಥ ಮತ್ತು ಇತರರಿಗಿಂತ ಹೆಚ್ಚು ಪರಾಕ್ರಮಿಶಾಲಿಯಾದ ಮಹಾಮಂಡಳೇಶ್ವರನಾಗಿದ್ದ. ಆ ಕಾರಣಕ್ಕೆ ಚಾಳುಕ್ಯ ಅರಸನು ಔತ್ತರೇಯ ರಾಜ್ಯಗಳನ್ನು ಗೆಲ್ಲಲು ಕೈಗೊಂಡ ದಂಡೆಯಾತ್ರೆಯಲ್ಲಿ ತನ್ನ ನಿಷ್ಠಾವಂತ ಮಹಾಮಂಡಳೇಶ್ವರರು ಭಾಗವಹಿಸಿದ್ದರು. ಅದನ್ನು ತಮ್ಮ ಶಾಸನಗಳಲ್ಲಿ ಹೇಳಿಕೊಂಡಿದ್ದಾರೆ. ತ್ರಿಭುವನಮಲ್ಲ ಪಾಂಡ್ಯ ಔತ್ತರೇಯ ದೇಶಗಳ ಯುದ್ಧಗಳಲ್ಲಿ ಭಾಗವಹಿಸಿರುವುದನ್ನು ಶಾಮನೂರ ಶಾಸನ ಹೇಳುತ್ತದೆ. ಪಾಂಡ್ಯನು ಕಳಿಂಗ, ಅಂಗ, ವಂಗ, ಮಗಧ, ನೇಪಾಳ, ಪಾಂಚಾಳ ಗುರ್ಜರ, ಗೌಳ, ದ್ರವಿಳ, ಆಂಧ್ರ, ಮಾಳವ, ಸೌರಾಷ್ಟ್ರ, ಬರ್ಬರ, ಕಾಶ್ಮೀರ ಮೊದಲಾದ ಅರಸರನ್ನು ಸೋಲಿಸಿದನೆಂದು ತಿಳಿಸುತ್ತದೆ.[೨] ಕೆಲವು ಶಾಸನಗಳು ಈ ರಾಷ್ಟ್ರಗಳನ್ನು ಗೆಲ್ಲಲು ತ್ರಿಭುವನಮಲ್ಲ ಪಾಂಡ್ಯ ಒಬ್ಬನೇ ಸಾಕು ಎಂದು ವರ್ಣಿಸುತ್ತವೆ. ಈ ಮಾತುಗಳಲ್ಲಿ ಉತ್ಪ್ರೇಕ್ಷೆಯಿರಬಹುದಾದರೂ, ವಿಕ್ರಮಾದಿತ್ಯನ

ಸೈನ್ಯ ಉತ್ತರ ಭಾರತದ ಕೆಲವು ಪ್ರಾಂತಗಳವರೆಗೆ ಹೋಗಿ ಅಲ್ಲಿಯ ಅರಸರನ್ನು ಸೋಲಿಸಿ ಕಪ್ಪಕಾಣಿಕೆಗಳನ್ನು ಪಡೆದುಕೊಂಡಿತು ಎಂಬುದನ್ನು ಒಪ್ಪಲೇಬೇಕು.

**ಆಡಳಿತ ವರ್ಗ**

ತ್ರಿಭುವನಮಲ್ಲ ಪಾಂಡ್ಯ ತನ್ನ ದೀರ್ಘ ಆಡಳಿತದಲ್ಲಿ ನಿಷ್ಠಾವಂತ ಅಧಿಕಾರಿ ವರ್ಗವನ್ನು ಸಂಘಟಿಸಿದ. ಇದರಲ್ಲಿ ಮಹಾಮಂಡಳೇಶ್ವರ, ಸಾಮಂತ, ಮನ್ನೆಯ ಗೌಡ, ಪೆರ್ಗಡಿ, ಸಂಧಿವಿಗ್ರಹಿ, ದಂಡಾಧಿಕಾರಿ ಮೊದಲಾದ ಅಧಿಕಾರಿಗಳ ಶ್ರೇಣೀಕರಣವನ್ನು ಕಾಣಬಹುದು. ಇವರು ಪಾಂಡ್ಯ ವಂಶದ ರಕ್ಷಣೆಗೆ ಕಂಕಣಬದ್ಧರಾಗಿದ್ದರು.

**ರಾಯಪಾಂಡ್ಯ :** ತ್ರಿಭುವನಮಲ್ಲ ಪಾಂಡ್ಯನ ಆಡಳಿತದಲ್ಲಿ ತನ್ನ ಮಗನಾದ ರಾಯಪಾಂಡ್ಯನಿಗೆ ಆಡಳಿತದಲ್ಲಿ ಅವಕಾಶ ನೀಡಿದ್ದನು. ಕ್ರಿ.ಶ. ೧೦೮೭ರ ನೀಲಗುಂದ ಶಾಸನ ತಂದೆಯ ಕಾಲದಲ್ಲಿ ರಾಯಪಾಂಡ್ಯ ಶ್ರೀಕರ್ಣ್ಣಾಧಿಕಾರಿ, ಸರ್ವಾಧ್ಯಕ್ಷನಾಗಿ ಆಳುತ್ತಿರುವುದನ್ನು ಉಲ್ಲೇಖಿಸುತ್ತದೆ.[೯] ಕ್ರಿ.ಶ. ೧೧೧೦ ಹಡಗಲಿ ಶಾಸನ ಕುಮಾರ ವೃತ್ತಿಯಿಂದ ಆಳುತ್ತಿರುವುದಾಗಿ ತಿಳಿಸುತ್ತದೆ. ರಾಯಪಾಂಡ್ಯ ತಂದೆಯ ಅವಧಿಯಲ್ಲಿ ಸಾಮಂತನಾಗಿ ಬೇತೂರು ನೆಲೆವೀಡಿನಿಂದ ಆಳುತ್ತಿದ್ದನು. ಮುಂದೆ ಅಧಿಕಾರಕ್ಕೆ ಬಂದಾಗ ಬೇತೂರು ಆತನ ರಾಜಧಾನಿ ಪಟ್ಟಣವಾಗಿತ್ತು. ಇದೇ ಅವಧಿಯಲ್ಲಿ ರಾಯಪಾಂಡ್ಯನ ಮಕ್ಕಳಾದ ವೀರಪಾಂಡ್ಯ ಮತ್ತು ವಿಜಯಪಾಂಡ್ಯರು ಆಳ್ವಿಕೆ ಮಾಡಿರುವುದು ಕಂಡುಬರುತ್ತದೆ. ತಂದೆಯ ಕಾಲದಲ್ಲಿ ಕುಮಾರ ವೃತ್ತಿಯಿಂದ ಅಥವಾ ಸಾಮಂತರಾಗಿ ಅವರ ಮಕ್ಕಳು ರಕ್ತಸಂಬಂಧಿಗಳು ಆಡಳಿತ ನಡೆಸುವ ಪ್ರಕ್ರಿಯೆ ಚರಿತ್ರೆಯ ಉದ್ದಕ್ಕೂ ನಿರಂತರವಾಗಿ ನಡೆದು ಬಂದಿದೆ.

**ಕದಂಬ ಘಟ್ಟಿದೇವ**

ಮೂಲ ಕದಂಬ ವಂಶದ ಶಾಖೆಗೆ ಸೇರಿದ ಕದಂಬ ಘಟ್ಟಿದೇವ ನೊಳಂಬರ ಕಾಲದಲ್ಲಿ ಕೋಗಳಿ-೫೦೦ ವಿಭಾಗದಲ್ಲಿ ಮನ್ನೆಯ ಅಧಿಕಾರಿಯಾಗಿ ಆಳುತ್ತಿದ್ದ. ತ್ರಿಭುವನಮಲ್ಲ ಪಾಂಡ್ಯದೇವನ ಕಾಲದಲ್ಲಿ ಆತನ ಪಾದಪದ್ಮೋಪಜೀವಿಯಾಗಿ ಮಹಾಮಂಡಳೇಶ್ವರ ಪದವಿ ಪಡೆದು ಕೋಗಳಿ-೫೦೦ನ್ನು ಕೊಟ್ಟೂರಿನಿಂದ ಆಳುತ್ತಿದ್ದನು. ಕೊಟ್ಟೂರು, ಹನಶಿ, ಅಂಬಳಿ, ಹೂವಿನಹಡಗಲಿ, ಸೋಗಿ ಶಾಸನಗಳು ಕದಂಬ ಘಟ್ಟಿದೇವನ ಬಗ್ಗೆ ಮಾಹಿತಿ ನೀಡುತ್ತವೆ.

**ಉದಯಾದಿತ್ಯ ನಾಯಕ**

ಮಹಾಸಾಮಂತ ಉದಯಾದಿತ್ಯ ನಾಯಕ ಬಿಳಿಚಿ-೭೦ ಮೊದಲಾದ ವಿಭಾಗಗಳಲ್ಲಿ ತ್ರಿಭುವನಮಲ್ಲ ಪಾಂಡ್ಯನ ಸಾಮಂತನಾಗಿ ಬೆಂಮತ್ತನೂರ ನೆಲೆವೀಡಿನಿಂದ ಆಳುತ್ತಿದ್ದ. ಚಿತ್ರದುರ್ಗ ಜಿಲ್ಲೆಯ ಗಾರೆಹಟ್ಟಿ, ಮದಕೆರೆಪುರ ಶಾಸನಗಳು ಈತನ ಆಡಳಿತವನ್ನು ತಿಳಿಸುತ್ತವೆ. ಉದಯಾದಿತ್ಯನ ನಂತರ ಆತನ ಮಗ ಕಾಮಯ್ಯನಾಯಕ ಮಹಾಸಾಮಂತನಾಗಿ ಈ ಪ್ರದೇಶದ ಆಡಳಿತವನ್ನು ಮುಂದುವರಿಸಿದ್ದನು.

## ಸಿಂದ ವಂಶದ ಮಲ್ಲರಸ

ಪಾಂಡ್ಯದೇವನ ಕೈಕೆಳಗೆ ಸಿಂದ ವಂಶದ ಮಲ್ಲರಸರು ಮಹಾಸಾಮಂತ ಪದವಿಯಲ್ಲಿ ನೊಳಂಬವಾಡಿ-೩೨೦೦೦ದ ಹೆಜ್ಜುಂಕವನ್ನು ಆಳುತ್ತಿರುವುದಾಗಿ ಅಸಗೋಡ ಶಾಸನ ತಿಳಿಸುತ್ತದೆ. ಮುಂದೆ ಬಲ್ಲಕುಂದೆ ಪ್ರಾಂತ್ಯದಲ್ಲಿ ಮಹಾಮಂಡಳೇಶ್ವರರಾಗಿ ಆಡಳಿತ ನಡೆಸಿದರು. ಈ ವಂಶದ ಬೀವದರಸ, ಲೋಕರಸ, ತೆಕ್ಕೆಕಲ್ಲು ಚೋಕ್ಕರಸರು ಪಾಂಡ್ಯದೇವನ ಅಪ್ಪಣೆ ಪಡೆದು ಸ್ವಯಂ ಭೂ ದೇವರಿಗೆ ದಾನ ಬಿಟ್ಟಿರುವ ವಿಷಯವನ್ನು ಸಿರುಗುಪ್ಪ ಶಾಸನ ತಿಳಿಸುತ್ತದೆ.

## ಗಂಗರಸ

ಗುಂಜಿಗನೂರ ಶಾಸನ ಗಂಗರಸನ ಬಗ್ಗೆ ಮಾಹಿತಿ ನೀಡುತ್ತದೆ. ಮಹಾಮಂಡಳೇಶ್ವರ ಗಂಗರಸರು ಕುಕ್ಕವಾಡ-೩೦೦ ಪ್ರಾಂತ್ಯದ ಆಡಳಿತವನ್ನು ನಿರ್ವಹಿಸುತ್ತಿದ್ದರು. ಗುಂಜಿಗನೂರ ಪ್ರಭುವಗಾವುಂಡ, ಕುಂಬಾರ ಬಮ್ಮಣ, ಕುಂಬೇಶ್ವರ ದೇವರಿಗೆ ದಾನ ನೀಡಿದ್ದನ್ನು ಈ ಶಾಸನ ತಿಳಿಸುತ್ತದೆ.[೯೪]

## ಸೋಮರಸ

ಬೆಳಗುತ್ತಿ ಸಿಂದ ವಂಶದವರು ಪಾಂಡ್ಯ ತ್ರಿಭುವನಮಲ್ಲನ ಸಾಮಂತರಾಗಿ ಆಳುತ್ತಿದ್ದರು. ಈ ವಂಶಕ್ಕೆ ಸೇರಿದ ಸೋಮರಸ ಬಿಳಿಚೆ-೭೦ನ್ನು ಪಾಂಡ್ಯರ ಸಾಮಂತನಾಗಿ ಆಳುತ್ತಿದ್ದ.[೯೫] ಇವನು ಉಚ್ಚಂಗಿ ಪಾಂಡ್ಯರ ಕೊನೆಯ ಕಾಲದವರೆಗೂ ಆಳ್ವಿಕೆ ನಡೆಸಿದ್ದುದನ್ನು ಶಾಸನಗಳು ಹೇಳುತ್ತವೆ. ಹರಿಹರದ ಶಾಸನ ಈ ಮನೆತನದ ವಂಶಾವಳಿಯನ್ನು ವರ್ಣಿಸುತ್ತದೆ.

## ದಂಡನಾಯಕ ರವಿಗ

ಹೂವಿನಹಡಗಲಿಯ ಶಾಸನ ರವಿಗ ದಂಡನಾಯಕನ ಕುರಿತು ವಿವರಣೆಯನ್ನು ನೀಡುತ್ತದೆ. ಚಕ್ರವರ್ತಿ ವಿಕ್ರಮಾದಿತ್ಯನಿಂದ ಸಂಧಿವಿಗ್ರಹಿ, ಶಿರೋಮಣಿ ಪದವಿಯನ್ನು ಬೆಳ್ಗೊಡೆ ಮಹಾಡಂಬರಂ ಚಾಮರ ಮಾರ್ಜ್ಜರಂ ಕುರಂಳಕೊನ್ತ ಮನೆನಿಪ್ಪ ಮಹೀಶ ಚಿಹ್ನೆಮಂ ಪಡೆದುಕೊಂಡ ಉಲ್ಲೇಖವಿದೆ. ಈತನ ಸತಿ ರಬ್ಬಲದೇವಿ ಅಥವಾ ರೆಬ್ಬಣಬ್ಬೆ ಕೇಶವ ದೇವಾಲಯವನ್ನು ಸ್ಥಾಪಿಸಿ ದಾನ ನೀಡಿದ್ದನ್ನು ಇದೇ ಶಾಸನ ಹೇಳುತ್ತದೆ.[೯೬] ಇದು ಪಾಂಡ್ಯರ ಕಾಲದಲ್ಲಿ ನಿರ್ಮಾಣವಾದ ವೈಷ್ಣವ ಪಂಥದ ಏಕೈಕ ದೇವಾಲಯ. ರವಿಗನ ಶಾಸನಗಳು ನೊಳಂಬವಾಡಿ ಪ್ರಾಂತ್ಯದ ಆಚೆಗೂ ದೊರೆಯುತ್ತವೆ. ರವಿಗ ವಿಕ್ರಮಾದಿತ್ಯನ ದಂಡನಾಯಕನಾಗಿದ್ದು ಹೂವಿನಹಡಗಲಿಯಲ್ಲಿ ಮದುವೆಯಾಗಿದ್ದ. ಈತ ಮಹಾಮಂಡಳೇಶ್ವರರ ಮೇಲೆ ನಿಗಾ ವಹಿಸಲು ನೇಮಕನಾದ ಅಧಿಕಾರಿ. ಹಾಗಾಗಿ ಈತನ ಶಾಸನಗಳು ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲೂ ಕಾಣಿಸಿಗುತ್ತವೆ.

## ಅನಂತಪಾಳಯ್ಯ ದಂಡನಾಯಕ

ರವಿಗ ದಂಡನಾಯಕನಂತೆ ಅನಂತಪಾಳಯ್ಯ ಕೂಡ ತ್ರಿಭುವನಮಲ್ಲನ ದಂಡನಾಯಕನಾಗಿದ್ದನು. ಬೇತೂರು, ಅಂಬಳಿ, ನೀಲಗುಂದ ಶಾಸನಗಳಲ್ಲಿ ಈತನ ಬಗ್ಗೆ ಉಲ್ಲೇಖಗಳಿವೆ.

ಗೋತ್ರ ಪವಿತ್ರರಾಂಗನ ಪುತ್ರ ಶ್ರೀಮನ್ಮಹಾಪ್ರಸಾದಾನಂ ಬಾಣಸವೆರ್ಗ್ಗಡೆ ದಂಡನಾಯಕ ಅನಂತಪಾಳಯ್ಯಂಗಳ ಬೆಸದಿಂ.[೬೬] ಅನಂತಪಾಳಯ್ಯನ ಶಾಸನಗಳು ಹಾವೇರಿ, ಗದಗ, ಧಾರವಾಡ ಜಿಲ್ಲೆಯಲ್ಲಿ ದೊರೆಯುತ್ತವೆ. ರವಿಗ ಮತ್ತು ಅನಂತಪಾಳಯ್ಯರು ಚಾಳುಕ್ಯ ಅರಸನ ದಂಡನಾಯಕರಾಗಿದ್ದು ಸಾಮಂತ ಅರಸರ ಮೇಲಿನ ಉಸ್ತುವಾರಿಯನ್ನು ವಹಿಸಿಕೊಂಡಿದ್ದರು.

### ಮುದ್ದರಸ

ಮುದ್ದರಸ ಪಾಂಡ್ಯ ದೇವನ ಕಾಲದಲ್ಲಿ ದಂಡನಾಯಕ, ಮಹಾಮಾತ್ಯ, ಸುಂಕಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸಿದ್ದಾನೆ. ಕ್ರಿ.ಶ. ೧೧೧೦ರ ಹೂವಿನಹಡಗಲಿ ಶಾಸನ ತ್ರಿಭುವನಮಲ್ಲ ಪಾಂಡ್ಯ ನೊಳಂಬವಾಡಿ ಆಳುತ್ತಿರುವಾಗ ಮಹಾಮಾತ್ಯ ಪದವೀವಿರಾಜಮಾನ ದಂಡನಾಯಕ ಮುದ್ದರಸರು ನೊಳಂಬವಾಡಿ-೩೨೦೦೦ದ ಪನ್ನಾಯದ ಸುಂಕವನ್ನು ನೋಡಿಕೊಳ್ಳುತ್ತಿದ್ದ ಬಗ್ಗೆ ತಿಳಿಸುತ್ತದೆ.[೬೮]

### ನೊಳಂಬನ ಗರುಡ

ಮಹಾಸಾಮಂತರಾದ ನೊಳಂಬನ ಗರುಡ ಅಹರಟ-೧೨, ಜಗಳವೂರು-೭೦, ಹಡುವಗೆರೆ-೫೦೦ನ್ನು ಬೆಮ್ಮಚನೂರಿನಿಂದ ಆಳುತ್ತಿದ್ದ. ತನ್ನನ್ನು ನೊಳಂಬನ ಗರುಡನೆಂದು ಹೇಳಿಕೊಂಡಿದ್ದಾನೆ. ಇದಕ್ಕೆ ಪೂರಕವಾದ ಕಾರಣ ತಿಳಿಯುವುದಿಲ್ಲ. ಆದರೆ ತ್ರಿಭುವನಮಲ್ಲ ಪಾಂಡ್ಯನ ಮಹಾಸಾಮಂತ ನೆಂಬುದು ಶಾಸನಗಳಿಂದ ತಿಳಿಯುತ್ತದೆ.

### ಸೂರ್ಯದಂಡನಾಯಕ

ಸೂರ್ಯದೇವ ತ್ರಿಭುವನಮಲ್ಲ ಪಾಂಡ್ಯನ ದಂಡನಾಯಕನಾಗಿದ್ದ ವಿಷಯವನ್ನು ಶಾಮನೂರು ಶಾಸನ ತಿಳಿಸುತ್ತದೆ. ಪಾಂಡ್ಯ ದೇವನಿಗೆ ಚಮೂನಾಥನಾಗಿ ಪಾಂಡ್ಯನ ಕೆಲಸ ನಿರ್ವಹಿಸಿದನೆಂದು ಶಾಸನದಲ್ಲಿ ಉಲ್ಲೇಖಿಸಿದೆ.

### ಸೋವರಸ

ಬಾಗಳಿ ಶಾಸನ ತ್ರಿಭುವನಮಲ್ಲ ಪಾಂಡ್ಯನ ಕೈಕೆಳಗೆ ಮಹಾಪ್ರಧಾನ ದಂಡನಾಯಕ ಬನ್ನಿಗೊಳದ ಸೋಮರಸ ನೊಳಂಬವಾಡಿ ವಿಭಾಗದ ವಡ್ಡರಾವುಳದ ಸುಂಕವನಾಳುತ್ತಿದ್ದ ಬಗ್ಗೆ ದಾಖಲಿಸಿದೆ.[೯೯] ದಂಡನಾಯಕ ವೃತ್ತಿಯ ಜೊತೆಗೆ ಸುಂಕ ಸಂಗ್ರಹಿಸುವ ಕೆಲಸ ಇವನಿಗೆ ಸೇರಿತ್ತು.

ಮಹಾಮಂಡಳೇಶ್ವರ, ಸಾಮಂತ, ದಂಡನಾಯಕ, ಸುಂಕಾಧಿಕಾರಿಗಳ ಜೊತೆಗೆ ಆಡಳಿತದ ಕೊನೆಯ ಹಂತದಲ್ಲಿ ಬರುವ ಅತಿ ಚಿಕ್ಕ ಘಟಕ ಗ್ರಾಮ. ಗ್ರಾಮದ ಆಡಳಿತವನ್ನು ಗೌಡ, ಹೆಗ್ಗಡೆ, ಮನ್ನೆಯ, ಶನಬೋವ, ಪೆರ್ಗ್ಗಡೆಗಳು ನೋಡಿಕೊಳ್ಳುತ್ತಿದ್ದರು.

ಅವರಲ್ಲಿ ಬಾಗಳಿಯ ಹೆಗ್ಗಡೆ ಮಾಚ್ಚಯ್ಯ, ಪೆರ್ಗಡೆ, ಕಾವರಾಜ, ಕೇತಗಾವುಂಡ, ಚೌಡಗಾವುಂಡ ಮುದ್ದಿಗಾವುಂಡ, ಹರಿಯಮಗಾವುಂಡ ಪರಿಚ್ಛೇದಿನಾಯಕ, ತಿರುಕ್ಕಣಗೌಡ, ಬೆಳತ್ತೂರು ಮೂವಪ್ಪ ಪ್ರಭುಗಾವುಂಡ, ಹಿರಿಯ ದಂಡನಾಯಕಿ ಕಾಳಿಕವ್ವ ಸಾಸಿರನಾಡ

ಮನ್ನೆಯ ಅಣ್ಣಮರಸ, ೨೪ ಬಾಡದ ಮನ್ನೆಯ ಮಾಕರಸರು, ಪೆರ್ಗಡೆ ಮಾದರಸ, ಮಹಾಪ್ರಭು ಕೋಣೆಯನಾಕಣಮಯ್ಯನ ಪುತ್ರ ಶ್ರೀಧರಯ್ಯಂಗಳು, ಕದಂಬಳಿಗೆ ಸಾಸಿರ ಹೆರ್ಜುಂಕದ ಪೆರ್ಗಡೆ ಹೆಮ್ಮಶೆಟ್ಟಿ, ರಾಜಮಯ್ಯ, ಕುಂಬಾರ ಬಮ್ಮಣ, ಸಾಮಂತ ಹೊಳ್ಳೆಯ ಸುಂಕದ ಹೆಗಡೆ ಕೇಸಿರಾಜ, ಕಾಳಿಮರಸ, ಮಹಾದೇವನಾಯಕ, ಕರಿಮಯ್ಯನಾಯಕ, ನಾಗವರ್ಮನಾಯಕ ಎರಂಬಾಳು ಸ್ವಾಮಿದೇವ ಮಾಚಬೋವ, ಸಿಂಗಬೋವ, ಕೊಚಾಪುರದ ಯಿರುಂಗರಸ, ಬ್ರಮ್ಮ ದೇವನಾಯಕ, ಮಹಾವಡ್ಡವ್ಯವಹಾರಿ, ದಂಡನಾಯಕ ಅಚ್ಚುಪಂನಾಯಕ, ಕೋಗಳಿ-೫೦೦ರ ಸುಂಕಾಧಿಕಾರಿ ಚೋದಾದರ ತಿಕಣಯ್ಯ ದಂಡನಾಯಕ, ದಾಸಯ್ಯನಾಯಕ, ನಾಗೆಕಲಯ್ಯ ಮಹಾಬಲಿವಂಶದ ಎಚರಸನ ಮಗ ಗೂಳಿದೇವ, ದಂಡನಾಯಕ ರಿಷಿಯಣ ಭಟ್ಟರು, ಪೆರ್ಗಡೆ ಕಾವರಾಜ, ಮಾಚಗಾವುಂಡ ನಾಡಪ್ರಭು, ಚಟ್ಟಗೌಡರು, ತ್ರಿಭುವನಮಲ್ಲ ಪಾಂಡ್ಯನ ಆಡಳಿತದಲ್ಲಿ ಸಾಮಂತರಾಗಿ ಹಳ್ಳಿಗಳು ಮತ್ತು ಅತ್ಯಂತ ಚಿಕ್ಕ ಚಿಕ್ಕ ವಿಭಾಗಗಳಲ್ಲಿ ಮನ್ನೆಯ, ಹೆಗ್ಗಡೆ, ಪೆರ್ಗಡೆ, ಗೌಡ, ಸುಂಕಾಧಿಕಾರಿ, ನಾಡಪ್ರಭು ಮೊದಲಾದ ಹುದ್ದೆಗಳಲ್ಲಿ ಆಡಳಿತ ನಡೆಸಿರುವುದನ್ನು ಶಾಸನಗಳು ತಿಳಿಸುತ್ತವೆ.

ತ್ರಿಭುವನಮಲ್ಲ ಪಾಂಡ್ಯದೇವ ತನ್ನದೇ ಆದ ಸೈನ್ಯ ಮಂತ್ರಿಮಂಡಳ ಮತ್ತು ಸಾಮಂತರನ್ನು ಹೊಂದಿದ್ದ. ತನ್ನ ಸಂಘಟಿತ ಅಧಿಕಾರಿ ವರ್ಗದ ಜೊತೆ ಸೇರಿ ದೇವಾಲಯಗಳ ನಿರ್ಮಾಣ ಮತ್ತು ಅವುಗಳ ಜೀರ್ಣೋದ್ಧಾರ, ಬ್ರಾಹ್ಮಣರು, ಅಗ್ರಹಾರ, ದೇವಾಲಯಗಳ ಸ್ಥಾನಾಚಾರ್ಯರಿಗೆ, ವಿದ್ಯಾರ್ಥಿಗಳ ಅಧ್ಯಾಪನ, ಆಹಾರ ಮೊದಲಾದ ಕಾರ್ಯಗಳಿಗೆ ದಾನ ಧರ್ಮ ಕಾರ್ಯವನ್ನು ಕೈಗೊಂಡಿದ್ದನು.

ಗಾರೆಹಟ್ಟಿ ಗ್ರಾಮದಲ್ಲಿ ಹೆಗ್ಗಡೆ ಮಾಚಯ್ಯನ ಮಗಳು ಗಂಗೌವೆ ಶಿವಮುಹೂರ್ತದಲ್ಲಿ ಲಿಂಗ ಪ್ರತಿಷ್ಠೆ ಮಾಡಿಸಿ ಮಹೇಶ್ವರ ದೇವರಿಗೆ, ಸೋಮರಾಶಿ ಪಂಡಿತರ ಕಾಲನ್ನು ತೊಳೆದು ದಾನ ಬಿಡುತ್ತಾಳೆ.[೧೦೦] ಅದೇ ಗ್ರಾಮದಲ್ಲಿ ಚೋಳೇಶ್ವರ ದೇವಾಲಯವನ್ನು ಮಾಡಿಸಿ, ರುದ್ರಶಕ್ತಿ ಪಂಡಿತರ ಕಾಲನ್ನು ತೊಳೆದು ದಾನ ಬಿಡಲಾಗಿದೆ. ಮೆದಕೆರೆಪುರ ಗ್ರಾಮದ ಸೋಮನಾಥ ದೇವರಿಗೆ ಪ್ರಸಾದ, ಶಿಖರ, ಕಳಸ ಮಾಡಿಸಿ ದಾನ ನೀಡಲಾಗಿದೆ.[೧೦೧] ಆನೆಕೊಂಡ ಗ್ರಾಮದಲ್ಲಿ ತ್ರಿಭುವನಮಲ್ಲ ದೇವಾಲಯವನ್ನು ನಿರ್ಮಿಸಿ, ಆ ದೇವರಿಗೆ ದಾನ ನೀಡಲಾಯಿತು.[೧೦೨] ಬೇತೂರು ಗ್ರಾಮದ ಸರ್ಪೇಶ್ವರ ದೇವರಿಗೆ, ಕದಂಬಳಿಗೆ ಸಾಸಿರದ ದೇಗುಲಕ್ಕೆ, ಜಿನಾಲಯಕ್ಕೆ, ಕೆರೆ, ಬಾವಿ, ಸತ್ರಕ್ಕೆ ನೀಲಕಂಠ ಪಂಡಿತರ ಕಾಲನ್ನು ತೊಳೆದು ದಾನ ಬಿಟ್ಟಿದೆ.[೧೦೩] ಹಿರೇತೊಗಲೇರಿ ಗ್ರಾಮದಲ್ಲಿ ಕಲ್ಲೇಶ್ವರ, ಮಾರ್ತ್ತದ್ದೇಶ್ವರ ದೇವರಿಗೆ ವಿಮಳ ಶಕ್ತಿ ಪಂಡಿತರ ಕಾಲನ್ನು ತೊಳೆದು ದಾನ ಮಾಡಲಾಗಿದೆ. ಗುಂಜಿಗನೂರ ಕುಂಬಾರ ಬಮ್ಮಣ ಕುಂಭೇಶ್ವರ ದೇವರ ಪ್ರತಿಷ್ಠಾಪಿಸಿ ದೇವರಿಗೆ ದಾನ ಬಿಟ್ಟಿದ್ದಾನೆ. ಗಂಗ ದುರ್ವಿನೀತನಿಂದ ಸನ್ಮಾನಿತನಾದ ಪಶುಪತಿಭಟ್ಟನ ವಂಶಸ್ಥನಾದ ಭೋಗದೇವನ ಮಗನಾದ ಶಿವರಾಜನು ಕಲೇಶ್ವರ ದೇವಸ್ಥಾನ ನಿರ್ಮಿಸಿ ಧವಳಶಂಕರ ದೇವರಿಗೆ ದಾನ ನೀಡುತ್ತಾರೆ.[೧೦೪] ಹೂವಿನಹಡಗಲಿಯಲ್ಲಿ ದಂಡನಾಯಕ ರವಿಗನ ಹೆಂಡತಿ

ರಬ್ಬಲದೇವಿ ನಿರ್ಮಿಸಿದ ಕೇಶವದೇವರಿಗೆ, ಸೋಮೇಶ್ವರ ದೇವರಿಗೆ ದಾನ ಬಿಡಲಾಗಿದೆ. ಸೋಗಿ ಗ್ರಾಮದಲ್ಲಿ ನಾಗವರ್ಮಯ್ಯ ನಾಯಕ ಸ್ಥಾಪಿಸಿದ ಕೇಶವದೇವ ಮತ್ತು ಕಲಿದೇವರಿಗೆ ದಾನ ಕೊಡಲಾಗಿದೆ. ಉಚ್ಚಂಗಿ ಕೋಟೆಯನ್ನು ಕಾಯುವ ಉಚ್ಚಂಗಿದೇವಿಗೆ ಕೂಡಲೂರು ಶಂಕರನಾರಾಯಣ ದೇವರ ತೀರ್ಥದಲ್ಲಿ ದಾನ ಮಾಡುತ್ತಾರೆ.[೧೦೫] ಬಾಗಳಿ ಗ್ರಾಮದಲ್ಲಿ ಶಿವಶಕ್ತಿ ಪಂಡಿತರ ಕಾಲನ್ನು ತೊಳೆದು ಕಲಿದೇವರಿಗೆ ಹಾಗೂ ಪುರಾಣ ಓದುವ ಉಪಾಧ್ಯಾಯರಿಗೆ ದಾನ ಕೊಡಲಾಗಿದೆ. ವಿಪ್ರಗ್ರಾಮದ ಕಂಪಿಲೆಯ ಗವರೇಶ್ವರದ ಸಿದ್ಧೇಶ್ವರ ದೇವರಿಗೆ ಬಾಡದ ಇಕುಪುರವನ್ನು ದಾನಬಿಟ್ಟ.[೧೦೬] ಹೊಸವಳ್ಳಿಯ ಇರುಗೇಶ್ವರ ದೇವರಿಗೆ ಶಿಖಾಶಿವಗುರುಗಳ ಸಮ್ಮುಖದಲ್ಲಿ ದಾನ ಕೊಡುತ್ತಾರೆ.[೧೦೭] ಮಾಳೇನಹಳ್ಳಿಯ ಕಲಿದೇವರು ಮತ್ತು ಮಾಚೇಶ್ವರ ದೇವರ ರಂಗಭೋಗಕ್ಕೆ ದಾನ ನೀಡಲಾಗಿದೆ.

ತ್ರಿಭುವನಮಲ್ಲ ಪಾಂಡ್ಯ ಮತ್ತು ಆತನ ಆಡಳಿತ ವರ್ಗ ಪ್ರಭುವಿನ ಆಣತಿಯಂತೆ ಇಂತಹ ಅನೇಕ ಪ್ರಜೋಪಕಾರಿ ಕಾರ್ಯವನ್ನು ಕೈಗೊಂಡಿದ್ದರು. ಪಾಂಡ್ಯ ವಂಶದ ಆಡಳಿತದಲ್ಲಿ ಈತನ ಅವಧಿ ನೊಳಂಬವಾಡಿನ ಅಭಿವೃದ್ಧಿಯ ಪರ್ವವಾಗಿತ್ತು. ಕ್ರಿ.ಶ. ೧೦೭೯ರಿಂದ ೧೧೨೬ರವರೆಗೂ ತ್ರಿಭುವನಮಲ್ಲ ಪಾಂಡ್ಯನಿಗೆ ಸಂಬಂಧಿಸಿದ ಶಾಸನಗಳು ನೊಳಂಬನಾಡಿನಲ್ಲಿ ದೊರೆಯುತ್ತವೆ. ಆನಂತರ ಆತನ ಮಗ ರಾಯಪಾಂಡ್ಯ ಅಧಿಕಾರಕ್ಕೆ ಬರುತ್ತಾನೆ. ಕ್ರಿ.ಶ. ೧೧೨೪-೨೫ ಅವಧಿಯಲ್ಲಿ ಈತನ ಶಾಸನಗಳು ಕಾಣಿಸುವುದಿಲ್ಲ. ಕ್ರಿ.ಶ. ೧೧೨೨-೨೩ರ ಮಧ್ಯ ತ್ರಿಭುವನಮಲ್ಲ ಆಡಳಿತದಿಂದ ದೂರ ಸರಿದಂತೆ ಕಾಣಿಸುತ್ತದೆ. ಕ್ರಿ.ಶ. ೧೧೨೨ ರಾಮಘಟ್ಟ ಮತ್ತು ದೊಡ್ಡ ಅಬ್ಬಿಗೆರೆ ಶಾಸನಗಳು ರಾಯಪಾಂಡ್ಯನನ್ನು ತ್ರಿಭುವನಮಲ್ಲ ದೇವನ ಪಾದಪದ್ಮೋಪಜೀವಿಯಾಗಿ ನೊಳಂಬವಾಡಿ ಆಡಳಿತವನ್ನು ಬೇತೂರು ನೆಲೆವೀಡಿನಿಂದ ಆಳುತ್ತಿರುವುದಾಗಿ ಹೇಳುತ್ತವೆ. ರಾಯಪಾಂಡ್ಯ ಈ ವೇಳೆಗೆ ಅಧಿಕಾರಕ್ಕೆ ಬಂದು ತನ್ನ ತಂದೆಯ ಹೆಸರಿನಲ್ಲಿ ಮೂರು ವರ್ಷ ಆಡಳಿತ ನಡೆಸಿರಬೇಕು ಮತ್ತು ಕ್ರಿ.ಶ. ೧೧೨೬ರಲ್ಲಿ ತ್ರಿಭುವನಮಲ್ಲ ಪಾಂಡ್ಯ ಮಡಿದಿರಬೇಕು. ನಂತರ ರಾಯಪಾಂಡ್ಯ ಕ್ರಿ.ಶ. ೧೧೪೩ರವರೆಗೂ ಆಡಳಿತ ನಡೆಸಿದ.

ಚಾಳುಕ್ಯ ತ್ರಿಭುವನಮಲ್ಲದೇವನ ಪಾದಪದ್ಮೋಪಜೀವಿಯಾಗಿ ನೊಳಂಬವಾಡಿ-೩೨೦೦೦, ಗಂಗವಾಡಿ-೯೬೦೦೦, ಬನವಾಸಿ-೧೨೦೦೦, ಕಣೆಕಲ್ಲು-೩೦೦, ಸಾಂತಳಿಗೆ-೧೦೦೦, ಸಿಂದವಾಡಿ-೧೦೦೦ ಪ್ರಾಂತ್ಯಗಳ ಆಡಳಿತವನ್ನು ಮಹಾಮಂಡಳೇಶ್ವರನಾಗಿ ಸುದೀರ್ಘ ಅವಧಿಯವರೆಗೂ ನಿರ್ವಹಿಸಿದನು. ತನ್ನ ಶಕ್ತಿ, ಶೌರ್ಯ, ಪರಾಕ್ರಮದಿಂದಾಗಿ ತ್ರಿಭುವನಮಲ್ಲ ಕಂಚಿಪುರವರಾಧೀಶ್ವರ, ಪರಿಚ್ಛೇದಿಗಂಡ, ರಾಜಿಗಚೋಳಮನೂಭಂಗಂ ಕುಳಂಬಪುರವರೇಶ್ವರ ಎಂಬ ಬಿರುದುಗಳನ್ನು ಧರಿಸಿದ್ದನು. ಈತನ ಶೌರ್ಯಕ್ಕೆ ಮೆಚ್ಚಿ ಕುರುಗೋಡಿನ ಸಿಂಧರು, ಬೆಳಗುತ್ತಿ ಸಿಂಧರು, ಕೊಟ್ಟೂರಿನ ಕದಂಬ ಮೊದಲಾದವರು ಪಾಂಡ್ಯನ ಸಾಮಂತರಾಗಿದ್ದರು. ಈ ಆಡಳಿತ

ವರ್ಗದೊಂದಿಗೆ ಸೇರಿ ನೊಳಂಬವಾಡಿ ಪ್ರಾಂತ್ಯದ ಆಡಳಿತವನ್ನು ತುಂಗಭದ್ರಾ ನದಿಯ ಆಚೆಗೂ ವಿಸ್ತರಿಸಿ ಪಾಂಡ್ಯ ವಂಶದ ಮತ್ಸ್ಯ ಲಾಂಛನದ ಜಯಸ್ತಂಭವನ್ನು ಸ್ಥಾಪಿಸಿದ. ಆಂತರಿಕ ಕಲಹಗಳಿಗೆ ಆಸ್ಪದ ನೀಡದೆ ಮಗನಿಗೆ ಆಡಳಿತದಲ್ಲಿ ತರಬೇತಿ ನೀಡಿ ಪಾಂಡ್ಯ ವಂಶದ ಜವಾಬ್ದಾರಿಯನ್ನು ರಾಯಪಾಂಡ್ಯನಿಗೆ ವಹಿಸಿದ್ದನು.

### ಇರುಕ್ಕವೇಳ್ ಪಾಂಡ್ಯ

ಉಚ್ಚಂಗಿ ಪಾಂಡ್ಯರ ವಂಶಾವಳಿಯನ್ನು ತಿಳಿಸುವ ಹರಿಹರ, ಬನ್ನಿಕೋಡು, ಹೊಳಲ್ಕೆರೆ, ದಾವಣಗೆರೆ, ಹೀರೆಯಮ್ಮಿಗನೂರು, ಹೊರಕೆರೆ, ಬಾಗಳಿ, ಹಿರೇಮ್ಯಾಗಳಗೇರಿ ಲೋಕಿಕೆರೆ ಕಾಟಿಕೆರೆ ಶಾಸನಗಳು ಇರುಕ್ಕವೇಳ್ ಪಾಂಡ್ಯನನ್ನು ಉಲ್ಲೇಖಿಸುತ್ತವೆ. ದಿನಕರ ದೇಸಾಯಿ, ಬಿ.ಎಲ್. ರೈಸ್ ಮೊದಲಾದ ವಿದ್ವಾಂಸರು ತ್ರಿಭುವನಮಲ್ಲ ಪಾಂಡ್ಯನನ್ನು ಇರುಕ್ಕವೇಳ ಪಾಂಡ್ಯ ಎಂದು ಅಭಿಪ್ರಾಯಿಸಿದ್ದಾರೆ. ಈಗಾಗಲೇ ಹಿಂದಿನ ಅಧ್ಯಾಯದಲ್ಲಿ ಈ ಬಗ್ಗೆ ಸ್ಪಷ್ಟೀಕರಣ ನೀಡಲಾಗಿದೆ. ಕ್ರಿ.ಶ. ೧೧೬೮ರ ಹರಿಹರದ ಶಾಸನ ಪಳತ ಪಾಂಡ್ಯನ ಮಗನಾದ ಇರುಕ್ಕವೇಳನು ಬಂಧಿಸಿದ ಸಕಲಶತ್ರುರಾಜರ ಸ್ತ್ರೀಯರ ಉಸಿರಿನಿಂದ ಆರಿದ ಯುದ್ಧ ಶ್ರಮದ ಬೆವರುಳ್ಳವನಾಗಿ ಮತ್ತು ಸಮುದ್ರದ ತೀರ ಬೆಟ್ಟಗಳನ್ನು ದಾಟಿದ ಕೀರ್ತಿಯುಳ್ಳವನಾಗಿ ಬಹಳ ಕಾಲ ಶೋಭಿಸಿದನು. ಇರುಕ್ಕವೇಳನ ಮಗ ರಾಯಪಾಂಡ್ಯ ಎಂದು ಹೇಳುತ್ತವೆ.[೧೦೮] ಆದರೆ ಉಳಿದ ಶಾಸನಗಳು ಇರುಕ್ಕವೇಳ್ ಮತ್ತು ಪಳತ್ತಪಾಂಡ್ಯರು ಪಲಮಾಂದ ಪಾಂಡ್ಯನ ಮಕ್ಕಳೆಂದು, ರಾಯಪಾಂಡ್ಯ ಇರುಕ್ಕವೇಳ್‌ನ ಮಗನೆಂದು ತಿಳಿಸುತ್ತವೆ. ನೀಲಗುಂದ ಶಾಸನ ರಾಯಪಾಂಡ್ಯ ಫಲಿತ ಪಾಂಡ್ಯನ ಮಗನೆಂದು ಹೇಳುತ್ತದೆ ಹಾಗೂ ಇವರಿಬ್ಬರೂ ಒಟ್ಟಿಗೆ ಆಡಳಿತ ನಡೆಸಿರುವುದಾಗಿ ಉಲ್ಲೇಖಿಸುತ್ತದೆ. ಈ ಶಾಸನಗಳು ತಿಳಿಸುವಂತೆ ಇರುಕ್ಕವೇಳ್ ಮತ್ತು ಪಳತ್ತಪಾಂಡ್ಯರು ಸಹೋದರರಾಗಿದ್ದು ಪಳಮಾಂದ ಪಾಂಡ್ಯನ ನಂತರ ಪಳತ್ತಪಾಂಡ್ಯ ಅಧಿಕಾರಕ್ಕೆ ಬಂದ. ಇರುಕ್ಕವೇಳ್ ಪಾಂಡ್ಯ ವಂಶದ ಆಡಳಿತ ನಡೆಸಿರುವ ಬಗ್ಗೆ ಯಾವುದೇ ಉಲ್ಲೇಖಗಳಿಲ್ಲ.

ಇರುಕ್ಕವೇಳ್ ಚಾಳುಕ್ಯ ಅರಸರ ಶತ್ರುಗಳಾಗಿದ್ದ ಚೋಳ ಮತ್ತು ಹೊಯ್ಸಳರೊಂದಿಗೆ ವೈವಾಹಿಕ ಸಂಬಂಧಗಳನ್ನು ಹೊಂದಿದ್ದ. ಕ್ರಿ.ಶ. ೧೧೦೦ರ ಕಾಟಿಕೆರೆ ಶಾಸನದಲ್ಲಿ ತಿಳಿಸುವಂತೆ ಇರುಕ್ಕವೇಳ್ ಚೋಳರ ಸಾಮಂತರಾಗಿದ್ದ ಕರ್ಕಡ ವಂಶದ ಮಹಾರಾಯನಿಗೆ ತನ್ನ ಮಗಳನ್ನು ಕೊಟ್ಟು ವಿವಾಹ ಮಾಡಿದ್ದ ಮತ್ತು ಕರ್ಕಡ ಮಹಾರಾಯನ ಮಗಳನ್ನು ಹೊಯ್ಸಳ ಎರೆಯಂಗನಿಗೆ ಕೊಟ್ಟು ಮದುವೆ ಮಾಡಲಾಯಿತು.[೧೦೯] ಇರುವಕ್ಕವೆಳ್‌ನ ಈ ನಡವಳಿಕೆಯಿಂದ ಚಾಳುಕ್ಯ ಮತ್ತು ಪಾಂಡ್ಯರ ಮಧ್ಯೆ ಗೊಂದಲಕ್ಕೆ ಕಾರಣವಾಗಿತ್ತು. ಅಲ್ಲದೆ ಪಾಂಡ್ಯ ವಂಶದ ಇತರರು ಕೂಡ ಇದನ್ನು ವಿರೋಧಿಸಿದಂತೆ ಕಾಣುತ್ತದೆ. ಈ ವೇಳೆಗೆ ಪಾಂಡ್ಯ ಮತ್ತು ಹೊಯ್ಸಳರ ಸಂಬಂಧಗಳು ಕೂಡ ಕೆಟ್ಟಿದ್ದವು.

ಇರುಕ್ಕವೇಳ್ ಚಾಳುಕ್ಯ ಮತ್ತು ಪಾಂಡ್ಯ ಅರಸರ ಶತ್ರುಗಳಾಗಿದ್ದ ಚೋಳರು ಮತ್ತು ಹೊಯ್ಸಳರೊಂದಿಗೆ ಸಂಬಂಧ ಬೆಳೆಸಿದ ಕಾರಣಕ್ಕೆ ಆತನನ್ನು ಆಡಳಿತದಿಂದ ದೂರವಿಟ್ಟಂತೆ

ತೋರುತ್ತದೆ. ಡಿ.ಎಂ. ನಾಗರಾಜು ಕ್ರಿ.ಶ. ೧೧೨೪ರ ಗೋರೆಹಟ್ಟಿ ಶಾಸನದ ಪ್ರಕಾರ ಇರುಕ್ಕವೇಳ್‌ನು ತ್ರಿಭುವನಮಲ್ಲ ಪಾಂಡ್ಯನ ಸಾಮಂತನಾಗಿದ್ದನೆಂದು ಮತ್ತು ಸಾಂತಳಿಗೆ-ಸಾಸಿರವನ್ನು ಆಳುತ್ತಿದ್ದನೆಂದು ಹೇಳುತ್ತಾರೆ. ಅಲ್ಲದೆ ಇರುಕ್ಕವೇಲನನ್ನು ಶೌಚಗಂಗೆಯಮ್ ಕಾಯ್ವರ ಭೀಮಮ್, ಸಂಗ್ರಾಮ ರಾಮಮ್, ಆಳಿಂಗೆ ಬಳಂಜಿಗಮ್, ನೆಲಂಬನಾಗರುಡಮ್। ಮಾರ್ತಂಡದೇವಪಾಪಾದರಾಧಕಂ।ರಣ ಮೂರ್ಖಕುಳ ಪ್ರದೀಪಂ, ಚೋಳೇಶ್ವರ ದೇವಲಬ್ಧ ವರಪ್ರಸಾದಮ್ ಇತ್ಯಾದಿ ಪ್ರಶಸ್ತಿಗಳು ಮುಖ್ಯವಾಗಿವೆ[೧೦೦] ಎಂದು ಬರೆದಿದ್ದಾರೆ. ಶಾಸನ ಪರಿಶೀಲಿಸಿದರೆ ಅವರು ಬರೆದಿರುವ ಬಿರುದುಗಳು ತ್ರಿಭುವನಮಲ್ಲ ಪಾಂಡ್ಯದೇವನ ಮಹಾಸಾಮಂತ ಉದಯಾದಿತ್ಯನಿಗೆ ಸಂಬಂಧಿಸಿವೆ. ಇಲ್ಲಿ ಇರುಕ್ಕವೇಳ್‌ನ ಉಲ್ಲೇಖವಿರುವುದಿಲ್ಲ. ಮೆದಕೆರೆಪುರ ಶಾಸನದಲ್ಲಿ ಕೂಡ ಸಾಮಂತ ಉದಯಾದಿತ್ಯನನ್ನು ಇದೇ ಬಿರುದುಗಳಿಂದ ವರ್ಣಿಸಲಾಗಿದೆ.[೧೧೧] ಮುಂದೆ ಅಧಿಕಾರಕ್ಕೆ ಬಂದ ಉದಯಾತ್ಯನ ಮಗ ಕಲಿಮಯ್ಯನಾಯಕನು ಕೂಡ ಈ ಬಿರುದುಗಳನ್ನು ಹೊಂದಿದ್ದನು. ಹಾಗಾಗಿ ಡಿ.ಎಂ. ನಾಗರಾಜು ಅವರು ಇರುಕ್ಕವೇಳ್‌ನಿಗೆ ಬಂದಿರುವ ಬಿರುದುಗಳು ಸಾಮಂತ ಉದಯಾದಿತ್ಯನಿಗೆ ಸಂಬಂಧಿಸಿದ್ದವು ಎಂಬುದು ಶಾಸನಗಳಿಂದ ಸ್ಪಷ್ಟವಾಗುತ್ತದೆ.

ಪಲಮಾಂದ ಪಾಂಡ್ಯನ ಮಕ್ಕಳಾದ ಪಳತ್ತಪಾಂಡ್ಯ ಮತ್ತು ಇರುಕ್ಕವೇಳ್‌ರಲ್ಲಿ ಪಳತ್ತಪಾಂಡ್ಯ ಆಡಳಿತ ನಡೆಸಿರುವುದು ನೀಲಗುಂದ ಮತ್ತು ಹಿರೆಯಮ್ಮಿಗನೂರ ಶಾಸನಗಳು ಸ್ಪಷ್ಟಪಡಿಸುತ್ತವೆ. ಆದರೆ ಉಚ್ಚಂಗಿ ಪಾಂಡ್ಯ ವಂಶಾವಳಿಯನ್ನು ತಿಳಿಸುವ ೧೦ ಶಾಸನಗಳಲ್ಲಿ ೮ ಶಾಸನಗಳು ಇರುಕ್ಕವೇಳ್‌ನ ಬಗ್ಗೆ ಹೇಳುತ್ತವೆ. ಅಧಿಕಾರಕ್ಕೆ ಸಂಬಂಧಿಸಿದಂತೆ ಯಾವುದೇ ಮಾಹಿತಿ ನೀಡುವುದಿಲ್ಲ.

**ರಾಯಪಾಂಡ್ಯ (ಕ್ರಿ.ಶ. ೧೧೨೬ ರಿಂದ ೧೧೪೨)**

ತ್ರಿಭುವನಮಲ್ಲ ಪಾಂಡ್ಯನ ಮರಣದ ನಂತರ ರಾಯಪಾಂಡ್ಯನು ಪಾಂಡ್ಯ ವಂಶದ ಸಾರ್ವಭೌಮನಾಗಿ ಅಧಿಕಾರ ವಹಿಸಿಕೊಂಡ. ತಂದೆಯಂತೆ ರಾಯಪಾಂಡ್ಯನು ಕೂಡ ಅತ್ಯಂತ ಪರಾಕ್ರಮಿ ಆಗಿದ್ದನು. ಇವನು ಚಾಳುಕ್ಯ ತ್ರಿಭುವನಮಲ್ಲ ಮತ್ತು ಭೂಲೋಕಮಲ್ಲ(೩ನೇ ಸೋಮೇಶ್ವರ) ದೇವರ ಪಾದಪದ್ಮೋಪಜೀವಿಯಾಗಿ ನೊಳಂಬವಾಡಿ ಪ್ರಾಂತ್ಯದ ಆಡಳಿತವನ್ನು ಬೇತೂರು ನೆಲೆವೀಡಿನಿಂದ ಆಳಿದನು.

ಕದಂಬರು, ಸಿಂಧರು ಇವನ ಮಂಡಲೀಕರಾಗಿ ಮುಂದುವರೆದರು. ಗುತ್ತವೊಳಲಿನ ವಿಕ್ರಮಾದಿತ್ಯನೊಂದಿಗೆ ವೈವಾಹಿಕ ಸಂಬಂಧವನ್ನು ಬೆಳೆಸಿ ತನ್ನ ಶಕ್ತಿಯನ್ನು ಹೆಚ್ಚಿಸಿಕೊಂಡ ರಾಯಪಾಂಡ್ಯ ಕ್ರಿ.ಶ. ೧೦೮೭ರ ವೇಳೆಗಾಗಲೇ ತನ್ನ ತಂದೆಯ ಆಡಳಿತದಲ್ಲಿ ಭಾಗವಹಿಸಿದ್ದನು. ಕ್ರಿ.ಶ. ೧೦೮೭ರ ನೀಲುಗಂದ ಶಾಸನ ವೈಜಯಂತಿ ಪುರಸಮಾವಾಸಿತ ನಿಜವಿಜಯ ಸ್ಕಂಧಾವಾರೇ ಶ್ರೀ ಕರ್ಣ್ಣಾಧಿಕಾರಿ ಸರ್ವ್ವಾಧ್ಯಕ್ಷ ದ್ರವಿಡಾದಿತ್ಯ ಪ್ರೇರಿತ ಪಲತಪಾಂಡ್ಯಪೌತ್ರ ರಾಯಪಾಂಡ್ಯ ವಿಜ್ಞಪ್ತ್ಯಾ ಶ್ರೀ ಮತ್ರಿಭುವನಮಲ್ಲದೇವನ ಸಪ(ಪೇ)ವ ಗ್ರಾಮ: ಕೃಷ್ಣಪಲ್ಲಿಕಾ ಸಮೇತಃ ತೇಭ್ಯ ಏವ ಬ್ರಾಹ್ಮಣೇಭ್ಯ : ಧಾರಾಪೂರ್ವಕಂ ಶಾಸನೀಕೃತ್ಯ ದತ್ತ.[೧೧೨] ತಂದೆಯ ಕಾಲದಲ್ಲಿ ಸರ್ವಾಧ್ಯಕ್ಷನಾಗಿರುವುದು ಇದರಿಂದ ಸ್ಪಷ್ಟವಾಗುತ್ತದೆ.

ಹಡಗಲಿಯ ಪಾಂಡುರಂಗ ದೇವಾಲಯದಲ್ಲಿರುವ ಕ್ರಿ.ಶ. ೧೧೧೦ ಮತ್ತು ೧೧೧೩ರ ಶಾಸನಗಳು ತ್ರಿಭುವನಮಲ್ಲ ಪಾಂಡ್ಯ ಕುಮಾರ ವೃತ್ತಿಯಿಂದ[೧೧೩] ಆಳುತ್ತಿರುವುದಾಗಿ ಹೇಳುತ್ತವೆ. ಈ ವೇಳೆಗಾಗಲೇ ತ್ರಿಭುವನಮಲ್ಲ ನೊಳಂಬವಾಡಿ ಪ್ರಾಂತ್ಯದ ಸಿಂಹಾಸನವನ್ನು ಸ್ವತಂತ್ರವಾಗಿ ಆಳುತ್ತಿದ್ದ. ಜೊತೆಗೆ ಗಂಗವಾಡಿ-೯೬೦೦೦, ಬನವಾಸಿನಾಡು, ಕಣೆಯಕಲ್ಲು-೩೦೦, ಸಾಂತಳಿಗೆ ಪ್ರದೇಶಗಳ ಮೇಲೂ ವಿಶೇಷ ಬಿರುದುಗಳನ್ನು ಧರಿಸಿಕೊಂಡು ಮಹಾಮಂಡಳೇಶ್ವರ ಪದವಿಯಿಂದ ಆಳುತ್ತಿರುವುದನ್ನು ಕ್ರಿ.ಶ. ೧೦೭೯ರ ಬಾಗಳಿ, ಕ್ರಿ.ಶ. ೧೦೮೫ರ ರಾಗಿಮಸಲವಾಡದ ಶಾಸನಗಳು ಉಲ್ಲೇಖಿಸುತ್ತವೆ. ಹಾಗಾಗಿ ಹಡಗಲಿ ಶಾಸನದಲ್ಲಿ ಹೇಳಿರುವಂತೆ ಕುಮಾರವೃತ್ತಿಯಿಂದ ಆಳುತ್ತಿರುವುದು ತ್ರಿಭುವನಮಲ್ಲ ಪಾಂಡ್ಯ ಅಲ್ಲ ಅವನ ಮಗ ರಾಯಪಾಂಡ್ಯ ಎಂಬುದು ಸ್ಪಷ್ಟವಾಗಿದೆ. ಕ್ರಿ.ಶ. ೧೦೮೭ರ ನೀಲಗುಂದ ಶಾಸನದಲ್ಲಿ ರಾಯಪಾಂಡ್ಯ ಸರ್ವಾಧ್ಯಕ್ಷನಾಗಿದ್ದ ಕ್ರಿ.ಶ. ೧೧೧೦ರ ವೇಳೆಗೆ ಕದಂಬಳಿಗೆ ಪ್ರಾಂತ್ಯವನ್ನು ಕುಮಾರ ವೃತ್ತಿಯಿಂದ ಬೆಳತ್ತೂರು ನೆಲೆವೀಡಿನಿಂದ ಆಳುತ್ತಿದ್ದಂತೆ ತೋರುತ್ತದೆ. ಕ್ರಿ.ಶ. ೧೧೧೯ ಬಾಗಳಿ ಶಾಸನ ಇದನ್ನು ಸ್ಪಷ್ಟಪಡಿಸುತ್ತದೆ.

ಸತ್ಯಾಶ್ರಯ ಕುಳತಿಲಕ, ಚಾಳುಕ್ಯಾಭರಣ ತ್ರಿಭುವನಮಲ್ಲ ಕಲ್ಯಾಣದಲ್ಲಿ ಆಳುತ್ತಿರುವಾಗ ಸ್ವಸ್ತಿಸಮಧಿಗತ ಪಂಚಮಹಾಶಬ್ದ ಕಾಂಚಿಪುರಾಧೀಶ್ವರ, ಯದುವಂಶ ಚೂಡಮಣಿ ನಿಜಕುಳಕಮಳ ಮಾರ್ತ್ತಂಡ, ಪರಿಚ್ಛೇದಿಗಂಡ, ರಾಜಿಗಚೋಳ ಮನೋಭಂಗ ಶ್ರೀಮನ್ಮಹಾಮಂಡಳೇಶ್ವರ ರಾಯಪಾಂಡ್ಯದೇವರು ಕದಂಬಳಿಗೆ ಮೂವತ್ತಿರ್ಚ್ಛಾಸಿರ ಮುಮಂ ಬೇತೂರು ನೆಲೆವೀಡಿನೋಳು ಸುಖಸಂಕಾಥಾ ವಿನೋದದಿಂ ರಾಜ್ಯಂಗೆಯ್ಯುತ್ತಮಿರೆ.[೧೧೪] ಈ ರಾಯಪಾಂಡ್ಯ ನೊಳಂಬವಾಡಿ ವಿಭಾಗದ ಉಪವಿಭಾಗವಾದ ಕದಂಬಳಿಗೆ ಸಾವಿರವನ್ನು ತಂದೆಯ ಸಾಮಂತನಾಗಿ ಆಳುತ್ತಿದ್ದ. ಹಾಗಾಗಿ ನೊಳಂಬವಾಡಿ-೩೨೦೦೦ ಪ್ರಾಂತ್ಯವನ್ನು ಸಮೀಕರಿಸಿ ಇಲ್ಲಿ ಕದಂಬಳಿಗೆ-೩೨೦೦೦ ಎಂದು ಕರೆದುಕೊಂಡಿದ್ದಾರೆ.

ಕ್ರಿ.ಶ. ೧೧೨೨ರ ರಾಮಘಟ್ಟ ಶಾಸನ ತ್ರಿಭುವನಮಲ್ಲ ಪಾಂಡ್ಯ ಧರಿಸಿದ್ದ ಬಿರುದುಗಳೊಂದಿಗೆ ರಾಯಪಾಂಡ್ಯ ತ್ರಿಭುವನಮಲ್ಲ ದೇವನ ಪಾದಾರಾಧಕನಾಗಿ ನೊಳಂಬವಾಡಿ-೩೨೦೦೦ವನ್ನು ಆಳುತ್ತಿದ್ದ. ಮಹಾಮಂಡಳೇಶ್ವರ ತ್ರಿಭುವನಮಲ್ಲ ರಾಯಪಾಂಡ್ಯದೇವರ್ಗ್ಗೆ ಆನೆಯ ಸಾಹಣಿ ಪಸಾಯತ್ತ ಕೆಂಗಣ್ಣ ಬಿನ್ನಪಂಗೈದು ಶ್ರೀರಾಮೇಶ್ವರ ದೇವರಿಗೆ ದಾನ ಬಿಡಿಸಿದ.[೧೧೫] ಈ ವೇಳೆಗೆ ತ್ರಿಭುವನಮಲ್ಲ ಪಾಂಡ್ಯನಿಗೆ ವಯಸ್ಸಾದ ಕಾರಣಕ್ಕೆ ಆಡಳಿತವನ್ನು ಮಗನಿಗೆ ನೀಡಿರಬೇಕು. ಕ್ರಿ.ಶ. ೧೧೨೩ರ ಹಿರೆಉಡ, ಚನ್ನಗಿರಿ ಗಾರೆಹಟ್ಟಿ, ದಾವಣಗೆರೆ, ಚಿತ್ರದುರ್ಗ, ಕಬ್ಬೂರು ಶಾಸನಗಳು, ಕ್ರಿ.ಶ. ೧೧೨೬ರ ಗಂಜಿಗನೂರ ಶಾಸನ[೧೧೬] ಕ್ರಿ.ಶ. ೧೧೨೮ ಶಾಮನೂರು[೧೧೭] ಶಾಸನಗಳು ತ್ರಿಭುವನಮಲ್ಲ ಪಾಂಡ್ಯ ನೊಳಂಬವಾಡಿ-೩೨೦೦೦ ಆಳುತ್ತಿರುವುದನ್ನು ಹೇಳುತ್ತವೆ. ಈ ಹಿಂದೆ ಚರ್ಚಿಸಿರುವಂತೆ ರಾಯಪಾಂಡ್ಯ ಕ್ರಿ.ಶ. ೧೧೨೬ರವರೆಗೂ ತನ್ನ ತಂದೆಯ ಹೆಸರಿನಲ್ಲಿಯೇ ಆಡಳಿತ ನಡೆಸಿದ್ದಾನೆ. ತ್ರಿಭುವನಮಲ್ಲದೇವ ಮರಣ ಹೊಂದಿದ್ದರೂ ಆತನ ಹೆಸರನ್ನು ಶಾಸನದಲ್ಲಿ ಪಾಂಡ್ಯರು ಸ್ಮರಿಸಿಕೊಂಡಿದ್ದಾರೆ.

ರಾಯಪಾಂಡ್ಯ ತ್ರಿಭುವನಮಲ್ಲ ಪಾಂಡ್ಯ ಹೊಂದಿದ್ದ ಬಿರುದುಗಳನ್ನು ತಾನು ಧರಿಸಿಕೊಂಡಿದ್ದನು. ಆದರೆ ಕ್ರಿ.ಶ. ೧೧೩೯ರ ದಾವಣಗೆರೆ ಶಾಸನ ತ್ರಿಭುವನಮಲ್ಲ ಪಾಂಡ್ಯನಿಗಿಂತ ವಿಶೇಷವಾದ ಬಿರುದುಗಳಿಂದ ರಾಯಪಾಂಡ್ಯನನ್ನು ವರ್ಣಿಸುತ್ತದೆ. ಈ ಶಾಸನದಲ್ಲಿ ಚಾಳುಕ್ಯ ಅರಸರ ವಿವರಣೆಗಳಿರದೇ ನೇರವಾಗಿ ರಾಯಪಾಂಡ್ಯನಿಂದಲೇ ಶಾಸನ ಆರಂಭವಾಗುತ್ತದೆ. ಮಹಾಮಂಡಳೇಶ್ವರ ಕಾಂಚೀಪುರಾವರಾಧೀಶ್ವರಂ. ಯದುವಂಶಾಭರದ್ಯುಮಣಿ ಷುಭಟಚೂಡಾಮಣಿ ಮಹೇಂದ್ರಮಣಿ ಮುಕಟಕೋಟಿ ವಿಘಟಿತ ನಿಜವಿಜಯ ಕರಕಂಣಂಲಿಳಾಮಾತ್ರ ಸಾಧಿತ ಸಪ್ತಕಾಂಕಣಂ ಕಚಕನಗ ಶಿಳಾತಳ ಪಾಠೀನಲಾಂಚ್ಛನ ಜಯಸ್ತಂಭಂ ದೂರೀಕ್ರಿತಾ(ತಳದಲ್ಲಿ ಮೀನಿನ ಗುರುತುಳ್ಳ ಜಯಸ್ತಂಭವನ್ನು ಸ್ಥಾಪಿಸಿದನು) ರಾತಿ ವೀರಾವಷ್ಟಂಭಂ ತಾಂಬ್ರಪರ್ಣ್ನೀ ನಿರ್ಣ್ನೀಕ್ತವೌಕ್ತಿಕ ಯುಕ್ತಾನೇಕ ರತ್ನಕರಾ ಮದ್ರಿತ ಸರೋದ್ರ ಭಾಂಡಾಗಾರರ(ತಾಮ್ರಪರ್ಣೀ ನದಿಯು ಸೆಳೆದೊಯ್ದ ಮುತ್ತುಗಳನ್ನು ಸಮುದ್ರದ ಪ್ರಶಸ್ತ ರತ್ನಗಳನ್ನು ಭಂಡಾರದಲ್ಲಿ ಉಳ್ಳವನು). ಮಳಯಗಿರಿಕಂದರ ಚಂದ್ರನನ್ದನ ಮಧ್ಯ ದೇಶ ನಿವೇಶಿತ ಶ್ರೀಂಗಾರಾಗಾರಂ ಕಿಂಕರೀಕ್ರಿತ (ಮಲಯ ಪರ್ವತದ ಕಣಿವೆಯ ಶ್ರೀಗಂಧದ ತೋಪುಗಳ ಮಧ್ಯೆ ನೆಲೆಗೊಂಡ ಶೃಂಗಾರ ಸ್ಥಾನವುಳ್ಳವನು). ಕಿಂಕರೀಕ್ರಿತ ಭೂತವೇತಾಳ ಮಂಡಳ(ಭೂತ ಬೇತಾಳಗಳ ಗುಂಪನ್ನು ಆಳುಗಳನ್ನಾಗಿ ಮಾಡಿಕೊಂಡವನು) ಸ್ವೀಕ್ರಿತಾನೇಕ ರಿಪುನ್ರಿಪತಿ ಮಂಡಳಂ ಹೇಳಾಗ್ರಿಹಿ ತಾಹಿತಾನೇಕ ಜಳಶೈಳ ದುರ್ಗ್ಗಂ ವಂದೀಕ್ರಿತಾರಾತಿ ವೀರಮಂಡಳಿಕ ವರ್ಗ್ಗಂ ಶ್ರೀ ಶಂಕರ ನಾರಾಯಣದೇವರ ಚರಣ ಸ್ಮರಣ ಪರಿಣತಾಂತಃ ಕರಣಂ ಯಾದವಾಭರಣಂ ಪಾಂಡ್ಯ ಕುಳಕಮಳ ಮಾರ್ತ್ತಂಡಂ ಪರಿಚ್ಛೇದಿ ಗಂಡಂ ರಾಜಿಗಚೋಳಮನೋಭಗಂ. ಸಾಹಸಾತ್ತುಂಗ ನಿತ್ಯಬಳನಾಮವಳಿ ಸಮಾಳಂಕ್ರಿತರಪ್ಪ ಶ್ರೀಮನ್ಮಹಾಮಂಡಳೇಶ್ವರಂ ರಾಯಪಾಂಡ್ಯದೇವರು ನೊಣಂಬವಾಡಿ ಮೂವತ್ತಿಚ್ಛಾಸಿರಮಂ ಶ್ರೀಮಧುರಾಜಧಾನಿ ಹಿರಿಯ ಬೆಳ್ದೂರ ಆನೆಯ ನೆಲವೀಡಿನೊಳ ರಾಜ್ಯಾಂಗೆಯ್ಯುತ್ತಮಿರೆ[೧೧೮] ಎಂದು ವರ್ಣಿಸುತ್ತದೆ. ಈ ಬಿರುದುಗಳು ರಾಯಪಾಂಡ್ಯನ ವ್ಯಕ್ತಿತ್ವವನ್ನೂ, ಅವನು ಸಂಪಾದಿಸಿದ್ದ ಸ್ಥಾನ ವರ್ಚಸ್ಸುಗಳನ್ನು ಎತ್ತಿಹಿಡಿಯುತ್ತವೆ. ರಾಯಪಾಂಡ್ಯ ಧರಿಸಿದ್ದ ಈ ವಿಶಿಷ್ಟ ಬಿರುದುಗಳನ್ನು ಮುಂದೆ ಅಧಿಕಾರಕ್ಕೆ ಬಂದ ತನ್ನ ಮಕ್ಕಳು ಧರಿಸಿಕೊಂಡಿದ್ದಾರೆ. ಈ ಶಾಸನ ರಾಯಪಾಂಡ್ಯನ ಚರಿತ್ರೆಯನ್ನು ತಿಳಿಸುವ ಕೊನೆಯ ಉಲ್ಲೇಖವಾಗಿದೆ. ನಂತರ ಕ್ರಿ.ಶ. ೧೧೪೨ರಲ್ಲಿ ವೀರಪಾಂಡ್ಯನ ಶಾಸನ ದೊರೆಯುತ್ತದೆ. ಈ ಮಧ್ಯದ ಅವಧಿಯಲ್ಲಿ ರಾಯಪಾಂಡ್ಯ ಮಡಿದಿರಬೇಕು ಅಥವಾ ಕ್ರಿ.ಶ. ೧೧೪೨ರಲ್ಲಿ ತನ್ನ ಮಗ ವೀರಪಾಂಡ್ಯನಿಗೆ ಅಧಿಕಾರ ನೀಡಿ ಆಡಳಿತದಿಂದ ದೂರ ಸರಿದಿರಬೇಕು.

ರಾಯಪಾಂಡ್ಯನ ಅಧಿಕಾರ ಕಾಲ ಶಾಂತಿಯುತವಾಗಿತ್ತೆಂದು ತೋರುತ್ತದೆ. ತಂದೆಗಿಂತ ಹೆಚ್ಚು ಪರಾಕ್ರಮಶಾಲಿಯಾಗಿದ್ದರೂ ಇವನ ಕಾಲದಲ್ಲಿ ಯಾವುದೇ ಯುದ್ಧಗಳನ್ನು, ದಂಡೆ ಯಾತ್ರೆಗಳನ್ನು ಮಾಡಿದಂತೆ ಕಾಣುವುದಿಲ್ಲ. ಈ ಅವಧಿಯಲ್ಲಿ ಚಾಳುಕ್ಯ ಸಿಂಹಾಸನವನ್ನು ೩ನೇ ಸೋಮೇಶ್ವರ ಅಲಂಕರಿಸಿದ್ದ. ವಿಕ್ರಮಾದಿತ್ಯನಂತೆ ಯುದ್ಧಪ್ರಿಯನಾಗದೇ ಶಾಂತಿಪ್ರಿಯನಾಗಿದ್ದ.

ಈತ ತನ್ನ ಸಮಯವನ್ನು ಸಾಹಿತ್ಯ ರಚನೆಗೆ ಮೀಸಲಿರಿಸಿದ. ಅವನು ಪಟ್ಟವೇರಿದ ಬಳಿಕ ಮಾನಸೋಲ್ಲಾಸ ಅಥವಾ ಅಭಿಲಾಷಿತಾರ್ಥ ಚಿಂತಾಮಣಿ ಎಂಬ ದೊಡ್ಡ ಸಂಸ್ಕೃತ ಗ್ರಂಥವನ್ನು ಬರೆದನು. ಇವನು ಓದಾಳಿಯಾದ್ದರಿಂದ ಇವನಿಗೆ ವಾಡಿಕೆಯಾಗಿ 'ಸರ್ವಜ್ಞ ಚಕ್ರವರ್ತಿ' ಎಂದು ಕರೆಯುತ್ತಿದ್ದರು.[೧೯]

ಆಶ್ರಿತ ರಾಜ ಶಾಂತಿಪ್ರಿಯನಾಗಿದ್ದರಿಂದ ಆತನ ಮಹಾಮಂಡಳೇಶ್ವರರು ಕೂಡ ಶಾಂತಿಪ್ರಿಯರಾಗಿದ್ದರು. ಆದರೆ ಕೆಲವು ಭಾಗಗಳಲ್ಲಿ ಮಹಾಮಂಡಳೇಶ್ವರರು ಸ್ವತಂತ್ರ ರಾಜ್ಯ ಸ್ಥಾಪನೆಗಾಗಿ ದಂಗೆ ಎದ್ದರು. ಅದರಲ್ಲಿ ಹೊಯ್ಸಳರು ಪ್ರಮುಖರಾಗಿದ್ದಾರೆ. ಇಂತಹ ಆಂತರಿಕ ದಂಗೆಗಳನ್ನು ಅಡಗಿಸುವಲ್ಲಿ ಸೋಮೇಶ್ವರ ಶಕ್ತನಾಗಿದ್ದ.

ರಾಯಪಾಂಡ್ಯನ ಕಾಲದಲ್ಲಿ ಯಾವುದೇ ಮಹತ್ತರವಾದ ದಂಡೆಯಾತ್ರೆಗಳು ನಡೆಯದಿದ್ದರೂ ತಂದೆಯ ಆಡಳಿತದಲ್ಲಿ ಭಾಗವಹಿಸಿದ್ದರಿಂದ ತಂದೆಯ ಕಾಲದಲ್ಲಿ ನಡೆದ ಚೋಳರು, ರತ್ನಪುರದ ಅರಸರು ಔತ್ತರೇಯ ರಾಜ್ಯಗಳ ಮೇಲಿನ ಆಕ್ರಮಣಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದ. ಹೊಯ್ಸಳ ವಿಷ್ಣುವರ್ಧನನ ನಡುವೆ ನಡೆದ ದುಮ್ಮಿ ಕಾಳಗದಲ್ಲಿ ರಾಯಪಾಂಡ್ಯನು ಭಾಗವಹಿಸಿ ತನ್ನ ಶೌರ್ಯವನ್ನು ಮೆರೆದಿದ್ದಾನೆ. ಹೊಯ್ಸಳರ ಆಕ್ರಮಣ ತ್ರಿಭುವನಮಲ್ಲ ಪಾಂಡ್ಯನ ಕಾಲಕ್ಕೆ ನಿಲ್ಲದೆ ರಾಯಪಾಂಡ್ಯನ ಕಾಲಕ್ಕೂ ಮುಂದುವರಿದಿದೆ. ಚಾಳುಕ್ಯ ವಿಕ್ರಮಾದಿತ್ಯನ ಕಾಲದಲ್ಲಿ ಚಾಳುಕ್ಯ ಸಾರ್ವಭೌಮಾಧಿಕಾರವನ್ನು ಕಿತ್ತೊಗೆಯುವ ಪ್ರಯತ್ನದಲ್ಲಿ ವಿಫಲನಾದ ವಿಷ್ಣುವರ್ಧನ ಅವನ ಮರಣದ ನಂತರ ಚಾಳುಕ್ಯರ ನಿಷ್ಠಾವಂತ ಸಾಮಂತರನ್ನೇ ಹಣಿಯಲು ಉದ್ಯುಕ್ತನಾಗಿ ಅವರ ರಾಜ್ಯ ಕ್ಷೇತ್ರಗಳನ್ನು ಒಂದೊಂದಾಗಿ ಕಬಳಿಸಲು ಪ್ರಯತ್ನ ಮಾಡಿದನು. ಕ್ರಿ.ಶ. ೧೧೩೯ರಲ್ಲಿ ವಿಷ್ಣುವರ್ಧನ ಹೊರಡಿಸಿದ ಶಾಸನವೊಂದರಲ್ಲಿ ತಲಕಾಡು, ಕೊಂಗು, ನಂಗಲಿ, ಗಂಗವಾಡಿ ಮತ್ತು ನೊಳಂಬವಾಡಿಗಳನ್ನು ತಾನು ಕೈವಶಪಡಿಸಿಕೊಂಡುದಾಗಿ ಹೇಳಿಕೊಂಡಿದ್ದಾನೆ.[೨೦] ಆದರೆ ಕ್ರಿ.ಶ. ೧೧೩೯ರ ದಾವಣಗೆರೆ ಶಾಸನ ರಾಯಪಾಂಡ್ಯನನ್ನು ವಿಶೇಷ ಬಿರುದುಗಳೊಂದಿಗೆ ನೊಳಂಬವಾಡಿಯನ್ನು ಆಳುತ್ತಿರುವುದಾಗಿ ಹೇಳುತ್ತದೆ. ಪಾಂಡ್ಯರ ಕಾಲಘಟ್ಟದಲ್ಲಿ ಚಾಳುಕ್ಯರ ಸಾಮಂತರಾಗಿದ್ದ ಹಾನಗಲ್ಲು ಕದಂಬರು ವಿಷ್ಣುವರ್ಧನನಿಂದ ಸೋತ ನಂತರ ಬಂಕಾಪುರ ಆತನ ರಾಜಧಾನಿಯಾಗಿತ್ತು ಎಂಬುದು ಅಲ್ಲಿನ ಶಾಸನಗಳಿಂದ ತಿಳಿಯುತ್ತದೆ. ಹಾಗೆಯೇ ಕುರುಗೋಡು ಸಿಂದರು ಕೂಡ ವಿಷ್ಣುವರ್ಧನನಿಗೆ ಸೋತಿರುವುದನ್ನು ಶಾಸನಗಳು ತಿಳಿಸುತ್ತವೆ. ಆದರೆ ಉಚ್ಚಂಗಿ ಪಾಂಡ್ಯರನ್ನು ಅಧಿಕೃತವಾಗಿ ಸೋಲಿಸಿ ಉಚ್ಚಂಗಿ ಕೋಟೆಯ ಮೇಲೆ ಹಿಡಿತ ಸಾಧಿಸಿರುವ ಉಲ್ಲೇಖ ಹೊಯ್ಸಳರ ಶಾಸನಗಳಲ್ಲಿ ಕಾಣಿಸುವುದಿಲ್ಲ.

ಬನವಾಸಿ, ಹಾನಗಲ್ಲು ಹೊಯ್ಸಳರ ವಶವಾದ ಸಂದರ್ಭದಲ್ಲಿ ಅದೇ ಸಾಲಿನಲ್ಲಿರುವ ನೊಳಂಬವಾಡಿ ನಾಡನ್ನು ತಮ್ಮ ಶಾಸನಗಳಲ್ಲಿ ಸಂದರ್ಭೋಚಿತವಾಗಿ ಬಳಸಿಕೊಂಡಂತೆ ಕಾಣುತ್ತದೆ. ಹೊಯ್ಸಳರು ಬನವಾಸಿ, ಹಾನಗಲ್ಲು ದಾಳಿ ಸಮಯದಲ್ಲಿ ನೊಳಂಬವಾಡಿಯ ಮೇಲಿನ

ಆಕ್ರಮಣವನ್ನು ರಾಯಪಾಂಡ್ಯ ತಡೆದ. ಇದರಿಂದ ಭಯಗೊಂಡು ಬನವಾಸಿ, ಹಾನಗಲ್ಲು, ಸಿಂಧವಾಡಿ ಪ್ರದೇಶಗಳ ಕಡೆ ಹೆಚ್ಚು ಕೇಂದ್ರೀಕರಿಸಿ ಅವುಗಳ ಮೇಲೆ ಹಿಡಿತ ಸಾಧಿಸಿದರು.

ರಾಜನೀತಿಜ್ಞನಾದ ರಾಯಪಾಂಡ್ಯ ತಂದೆಯ ಕಾಲದಲ್ಲಿ ಸಾಮಂತರಾಗಿ ಅಧಿಕಾರ ನಡೆಸುತ್ತಿದ್ದ ಎಲ್ಲಾ ಅಧಿಕಾರಿ ವರ್ಗದವರನ್ನು ಮುಂದುವರಿಸಿದ. ಕದಂಬ ಘಟ್ಟಿದೇವ, ಕುರುಗೋಡು ಸಿಂದರು, ಬೆಳಗುತ್ತಿ ಸಿಂದರು ಮೊದಲಾದ ಮಹಾಮಂಡಳೇಶ್ವರರು ಈತನ ಕಾಲದಲ್ಲಿ ವಂಶಪಾರಂಪರಿಕವಾಗಿ ಅಧಿಕಾರ ನಡೆಸಿದರು. ಜೊತೆಗೆ ಕೆಲವು ಭಾಗಗಳಲ್ಲಿ ಹೊಸಬರು ಅಧಿಕಾರವನ್ನು ಪಡೆದುಕೊಂಡರು. ಗುತ್ತ ವಂಶದ ವಿಕ್ರಮಾದಿತ್ಯ ರಾಯಪಾಂಡ್ಯನ ಸಂಬಂಧವನ್ನು ಬೆಳೆಸಿ, ಆತನ ಸಾಮಂತನಾಗಿ ಆಳಿದನು.

**ಭಟ್ಟರಸ**

ರಾಮಘಟ್ಟದ ಶಾಸನ ಭಟ್ಟರಸರು ರಾಯ್ಯಪಾಂಡ್ಯನ ಪಾದಪದ್ಮೋಪಜೀವಿಯಾಗಿ ಸಾಯಿರನಾಡ ಮನ್ನೆಯನ್ನು ಆಳುತ್ತಿರುವುದಾಗಿ ಉಲ್ಲೇಖಿಸುತ್ತದೆ.[೧೨೧] ತ್ರಿಭುವನಮಲ್ಲ ಪಾಂಡ್ಯನ ಕಾಲದಲ್ಲಿ ರಾಯಪಾಂಡ್ಯ ಸಾಯಿರನಾಡಿನ ಆಡಳಿತವನ್ನು ನೋಡಿಕೊಳ್ಳುತ್ತಿದ್ದ. ತಾನು ನೊಳಂಬವಾಡಿ ಪ್ರಾಂತ್ಯದ ಸಿಂಹಾಸನಕ್ಕೆ ಬಂದ ಮೇಲೆ ಇದರ ಆಡಳಿತವನ್ನು ಭಟ್ಟರಸನಿಗೆ ನೀಡಿರಬೇಕು.

**ಪಡವಳ ಬೊಮ್ಮಯ್ಯ**

ಕ್ರಿ.ಶ. ೧೧೨೨ರ ದೊಡ್ಡಬ್ಬಿಗೆರೆ ಶಾಸನದಲ್ಲಿ ಮಹಾಸಾಮಂತ ಪಡವಳ ಬೊಮ್ಮಯ್ಯ ರಾಯ್ಯ ಪಾಂಡ್ಯನ ಅಧೀನನಾಗಿ ಆಳುತ್ತಿರುವುದನ್ನು ಹಾಗೂ ದೊಡ್ಡ ಅಬ್ಬಿಗೆರೆಯ ದೇವರಿಗೆ ಭೂದಾನ ನೀಡಿದ್ದನ್ನು ಹೇಳುತ್ತದೆ.[೧೨೨]

**ಮದದಿಯಮರಸ**

ಜಿಗಳಿ ಶಾಸನ ಮದಡಿಯಮರಸನನ್ನು ರಾಯಪಾಂಡ್ಯ ರಾಜ್ಯ ಸಮುದ್ಧರಣ ಮೊದಲಾದ ಬಿರುದುಗಳಿಂದ ಕರೆಯಲಾಗಿದ್ದು ಈತನು ಸೋಮೇಶ್ವರ ದೇವರ ನೈವೇದ್ಯಕ್ಕೆ, ನಾರಾಯಣ ದೇವರ ನೈವೇದ್ಯ ನಂದಾದೀವಿಗೆ ಮತ್ತು ತಪೋಧನರಾಹಾರದಾನಕ್ಕೆ ದಾನ ಮಾಡಿರುವುದನ್ನು ಹೇಳುತ್ತದೆ.[೧೨೩]

**ಗುತ್ತ ವಂಶದ ವಿಕ್ರಮಾದಿತ್ಯ**

ನೊಳಂಬವಾಡಿ-೩೨೦೦೦ ಪ್ರಾಂತ್ಯದ ಪಶ್ಚಿಮ ಗಡಿ ಭಾಗದಲ್ಲಿ ತುಂಗಭದ್ರಾ ನದಿ ದಂಡೆಯ ಮೇಲಿರುವ ಗುತ್ತವೊಳಲು ಪ್ರದೇಶವನ್ನು ಆಳುತ್ತಿದ್ದ ವಿಕ್ರಮಾದಿತ್ಯನೊಂದಿಗೆ ರಾಯಪಾಂಡ್ಯನು ವೈವಾಹಿಕ ಸಂಬಂಧ ಬೆಳೆಸಿರುವುದನ್ನು ಹೊಳಲು, ಕೊಟ್ನೆಕಲ್ಲು ಶಾಸನಗಳು ಹೇಳುತ್ತವೆ. ಪಾಂಡ್ಯರ ವಂಶಾವಳಿಯನ್ನು ತಿಳಿಸುವ ಎಲ್ಲಾ ಶಾಸನಗಳನ್ನು ಗುತ್ತ ವಂಶದ ವಿಕ್ರಮಾದಿತ್ಯನ ಸಹೋದರಿಯಾದ ಸೋಮಲದೇವಿಯನ್ನು ವಿವಾಹವಾಗಿರುವುದನ್ನು ಹೇಳುತ್ತವೆ. ರಾಯಪಾಂಡ್ಯನಿಂದ ಆರಂಭವಾದ ಈ ಎರಡು ಮನೆತನಗಳ ಸಂಬಂಧ ಪಾಂಡ್ಯರ ಕೊನೆಯ ಕಾಲದವರೆಗೂ ಮುಂದುವರಿಯಿತು.

ಮಹಾಮಂಡಳೇಶ್ವರ, ಸಾಮಂತರುಗಳ ಜೊತೆಯಲ್ಲಿ ಗ್ರಾಮದ ಆಡಳಿತವನ್ನು ಗೌಡ, ಪೆರ್ಗಡೆ, ಮನ್ನೆಯರು ನೋಡಿಕೊಳ್ಳುತ್ತಿದ್ದ ವಿಷಯವನ್ನು ಶಾಸನಗಳು ತಿಳಿಸುತ್ತವೆ. ಜಿಗಳಿಯ ಕೇತಯ್ಯ, ಚಂಡಿಮಯ್ಯ ನಾಯಕ, ರಾಮಘಟ್ಟದೂರೊಡೆಯ ತೆರೆಮಯ್ಯ ಆನೆಯ ಸಾಹಣಿ ಕೆಂಗಣ ಅಥವಾ ಹಲಮರಸ ದಂಡನಾಯಕ ಕಾಳಿದಾಸ. ಆತನ ಮಗ ವಿಕ್ರಮಾದಿತ್ಯ ದಾವಣಗೆರೆಯ ಪರಿಚ್ಛೇದಿ ನಾಯಕ ತಿರುಕ್ಕಣಗೌಡ, ಗುಂಜಿಗನೂರ ಕುಂಬಾರ ಬಮ್ಮಣ ಮೊದಲಾದವರು ಈತನ ಆಡಳಿತದಲ್ಲಿ ಗ್ರಾಮದ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು.

ಸಂಘಟಿತ ಆಡಳಿತದ ಜೊತೆಗೆ ಅನೇಕ ಧಾರ್ಮಿಕ ಮತ್ತು ಸಾರ್ವಜನಿಕ ಕಾರ್ಯಗಳನ್ನು ತನ್ನ ಅಧೀನ ಅಧಿಕಾರಿಗಳ ಜೊತೆ ಸೇರಿ ಕೈಗೊಂಡಿರುವುದು ಶಾಸನಗಳಿಂದ ತಿಳಿಯುತ್ತದೆ. ಕ್ರಿ.ಶ. ೧೦೮೭ರಲ್ಲಿ ಸರ್ವಾಧ್ಯಕ್ಷನಾಗಿದ್ದಾಗ ತಂದೆಯ ಅನುಮತಿ ಪಡೆದು ನೀಲಗುಂದದ ಬ್ರಾಹ್ಮಣರಿಗೆ ಕೃಷ್ಣ ಪಲ್ಲಿಕೆಯನ್ನು ದಾನ ನೀಡುತ್ತಾನೆ.[೧೨೪] ತನ್ನ ತಂದೆ ತ್ರಿಭುವನಮಲ್ಲ ಪಾಂಡ್ಯನ ಹೆಸರಿನಲ್ಲಿ ಆನೆಕೊಂಡ ಗ್ರಾಮದಲ್ಲಿ ಪಾಂಡೇಶ್ವರ ದೇವಾಲಯವನ್ನು ನಿರ್ಮಿಸಿ ಅದಕ್ಕೆ ದಾನ ಬಿಟ್ಟನು ಹಾಗೂ ಅಲ್ಲಿಯ ಗ್ರಾಮೇಶ್ವರ ದೇವರಿಗೆ ಪಾಂಡೇಶ್ವರ ದೇವರ ಆಚಾರ್ಯ ಬಿರಮಾಂಡೀಯರೂ ಸಮಸ್ತ ಹಳ್ಳಿಯ ಜನರ ಮಧ್ಯದಲ್ಲಿ ದೇವರಿಗೆ ದಾನ ಬೀಡುತ್ತಾರೆ.[೧೨೫] ಎಲವಟ್ಟಿಯ ಸೋಮೇಶ್ವರ ಮತ್ತು ನಾರಾಯಣದೇವರ ನಿತ್ಯನಿವೇದ್ಯಕ್ಕೆ ಸಾಮಂತ ಕೇತಯ್ಯ ಮದದಿಯಮರಸ ಊರೊಡೆಯರ ಜೊತೆ ಸೇರಿ ದಾನ ನೀಡುತ್ತಾರೆ.[೧೨೬] ತಿಕಮಯ್ಯ ರಾಯಪಾಂಡ್ಯನ ಅನುಮತಿ ಪಡೆದು ರಾಮಘಟ್ಟದಲ್ಲಿ ತ್ರಿಕೂಟ ದೇವಾಲಯವನ್ನು ಮಾಡಿಸಿದ.[೧೨೭] ದೊಡ್ಡ ಅಬ್ಬಿಗೆರೆಯ ಕಲ್ಲಿದೇವರಿಗೆ ರುದ್ರಶಿವಪಂಡಿತರ ಶಿಷ್ಯರಾದ ಜ್ಞಾನ ಶಿವ ಪಂಡಿತರ ಕಾಲನ್ನು ತೊಳೆದು ಭೂಮಿ ಮತ್ತು ತೆರಿಗೆಯನ್ನು ಬಿಡುತ್ತಾರೆ.

ಕ್ರಿ.ಶ. ೧೦೮೭ರಿಂದ ೧೧೯ರವರೆಗೂ ಪಾಂಡ್ಯ ವಂಶದ ಚರಿತ್ರೆಯಲ್ಲಿ ಕಾಣಿಸಿಕೊಳ್ಳುವ ರಾಯಪಾಂಡ್ಯನ ವೈಯಕ್ತಿಕ ಬದುಕನ್ನು ಹರಿಹರದ ಶಾಸನ ತಿಳಿಸುತ್ತದೆ. ಕೊಟ್ಟೆಕಲ್ಲು, ಲೋಕಿಕೆರೆ, ಬಾಗಳಿ ಶಾಸನಗಳು ಕೂಡ ಈ ಮಾಹಿತಿಯನ್ನು ಸ್ಮರಿಸುತ್ತವೆ. ಕ್ರಿ.ಶ. ೧೧೬೮ರ ಹರಿಹರ ಶಾಸನ ರಾಯಪಾಂಡ್ಯನಿಗೆ ಆ ವೈಭವ ಇತರರಿಗಿಂತ ನಾಲ್ಕು ಅಂಗುಲ ಎತ್ತರದಿಂದ ಕೂಡಿದೆ. ಐಶ್ವರ್ಯದಿಂದ ಆದುದೆನ್ನುವಂತೆ ಹೊಗಳಿಕೆಯನ್ನು ಪಡೆದು ಸಮಸ್ತ ಭೂಮಿಗೆ ಪ್ರಭುವಾಗಿ ರಾಜಪಾಂಡ್ಯನು ಶತ್ರು ರಾಜರನ್ನೆಲ್ಲ ಗೆದ್ದನು; ಅವನ ಪರಾಕ್ರಮ ಅತಿಶಯವಾದದ್ದು. ರಾಯಪಾಂಡ್ಯನ ದೊಡ್ಡದಾದ ವಜ್ರಾಯುಧದಂತಿದ್ದ ಗದೆಯ ಪ್ರತಾಪವನ್ನು ನೆನೆದು ಶತ್ರುಗಳು ಸಮುದ್ರವನ್ನು ಆಶ್ರಯಿಸಿದರು. ಅವನ ಪರಾಕ್ರಮ, ಛಲ ವಿಶೇಷವಾದುದು. ಪರಾಕ್ರಮಶಾಲಿಗಳಾದ ಶೂರರನ್ನು ಪೀಡಿಸಿ ಅಧಿಕೃತರ ಭುಜಪ್ರತಾಪರನ್ನು ಗೆದ್ದು ಅತ್ಯಂತ ಪರಾಕ್ರಮಿಯಾದ ರಾಯಪಾಂಡ್ಯನು ಈ ಭೂಮಿಯನ್ನು ಆಳಿದನು.[೧೨೮] ಯುದ್ಧ ಭೂಮಿಯಲ್ಲಿ ಈ ರಾಜನ ತಿರುಗುತ್ತಿದ್ದ ಗದೆಯ ಹೊಡೆತದಿಂದ ಸೀಳಿದ ಶತ್ರುರಾಜರ ಆನೆಗಳು ವಿಪುಲವಾಗಿದ್ದುದರಿಂದ ಅದು ಮಹಾಭಾರತ ಯುದ್ಧವನ್ನು ಮತ್ತೊಮ್ಮೆ ನೆನಪಿಗೆ ತರುತ್ತಿತ್ತು.[೧೨೯]

ಹೀಗೆ ಪ್ರಖ್ಯಾತನಾದ ರಾಯಪಾಂಡ್ಯನಿಗೆ ಸಮಸ್ತ ಭೂಮಿಗೆ ಇವಳೊಬ್ಬಳೇ ಸ್ತ್ರೀ ರತ್ನವೆನ್ನುವಂತೆ ಎಲ್ಲ ಗುಣಗೌರವಗಳಿಂದ ಸೋಮಲದೇವಿ ಅರ್ಧಾಂಗ ಲಕ್ಷ್ಮೀಯಾದಳು. ರಾಯಪಾಂಡ್ಯನ ಹೆಂಡತಿಯಾದ ಸೋಮಲದೇವಿ ಬಿಲ್ಲವರಾಯನ ಮಗಳು. ವಿಕ್ರಮಾದಿತ್ಯ ಇವಳ ಅಣ್ಣ ಆ ಹೆಣ್ಣಿನ ಸತ್ಕುಲೀನತೆಗೆ ಏನಾದರೂ ಕುಂದಿರುವುದೇನು?[೧೩೦] ಅವಳ ಹೊಳೆಯುತ್ತಿದ್ದ ಕಾಲಿನ ಉಗುರುಗಳು ನಮಸ್ಕರಿಸುತ್ತಿದ್ದ ಸಮಸ್ತ ಸವತಿಯರ ಶಿರೋರತ್ನದಂತಿದ್ದವು. ಅವಳಾದರೋ ತನ್ನ ಚಾರಿತ್ರದಿಂದ ಪ್ರವಿತ್ರಳೂ, ವಿದ್ವಾಂಸರಿಂದ ಕೀರ್ತಿತಳೂ ಶ್ರೇಷ್ಠ ಗುಣಗಳಿಗೆ ಆಕರಳೂ ಆಗಿದ್ದಳು, ಸ್ವಭಾವತಃ ಪರಸ್ಪರ ವಿರೋಧಿಗಳಾದ ಸತೀತ್ವ ಮತ್ತು ಪ್ರಣಯಭೂಮಿಯಾದ ಇವಳು ವಿದ್ಯೆ ಸಂಪತ್ತುಗಳ ಮಹಾವೈರನನ್ನು ಬಿಡಿಸಿ ಅವುಗಳಿಗೆ ಏಕಾಶ್ರಯಸ್ಥಾನನಾದ ಪಂಡಿತ ಪಾಂಡ್ಯದೇವನಿಗೆ, ವೀರಪಾಂಡ್ಯ, ಪಲಮಾಂದಪಾಂಡ್ಯ, ವಿಜಯಪಾಂಡ್ಯ(ಕಾಮದೇವ)ರಿಗೆ ಜನ್ಮಕೊಟ್ಟಳು ಎಂದು ಈ ಶಾಸನಗಳು ವರ್ಣಿಸುತ್ತವೆ.[೧೩೧]

ರಾಯಪಾಂಡ್ಯನ ನಂತರ ಎರಡನೇ ಮಗ ವೀರಪಾಂಡ್ಯ ನೊಳಂಬವಾಡಿ ರಾಜ್ಯದ ಅಧಿಪತಿಯಾಗಿ ಮೆರೆದನು. ಕ್ರಿ.ಶ. ೧೧೩೯ರ ದಾವಣಗೆರೆ ಶಾಸನ ರಾಯಪಾಂಡ್ಯನ ಕೊನೆಯ ಶಾಸನವಾಗಿದೆ. ಆನಂತರ ಈತನ ಶಾಸನಗಳು ಲಭ್ಯವಾಗುವುದಿಲ್ಲ. ರಾಯಪಾಂಡ್ಯನ ಅಂತಿಮ ದಿನಗಳ ಬಗ್ಗೆ ಸ್ಪಷ್ಟವಾದ ಮಾಹಿತಿ ದೊರೆಯುವುದಿಲ್ಲ. ಕ್ರಿ.ಶ. ೧೧೪೬ರ ಚಟ್ನಿಹಳ್ಳಿ ಶಾಸನದಲ್ಲಿ ರಾಯಪಾಂಡ್ಯನಿಗೆ ಪುಣ್ಯವಾಗಲೆಂದು ದೇವಾಲಯವನ್ನು ಕಟ್ಟಿಸಿ ಉಚ್ಚಂಗಿ ಊರೊಡೆಯ ದಾನ ಬಿಡುತ್ತಾನೆ. ಹಾಗಾಗಿ ೧೧೪೬ರ ವೇಳೆಗಾಗಲೇ ರಾಯಪಾಂಡ್ಯ ಮಡಿದಿರಬೇಕು. ಹಿರಿಯ ಮಗ ಸಾಹಿತ್ಯ ಪ್ರೇಮಿ ಆಗಿದ್ದರಿಂದ ಅಧಿಕಾರದಿಂದ ದೂರ ಉಳಿದು ತನ್ನ ಅಣ್ಣನಿಗೆ ಆ ಸ್ಥಾನವನ್ನು ಬಿಟ್ಟುಕೊಟ್ಟ. ಹಾಗಾಗಿ ಎರಡನೇ ಮಗ ವೀರಪಾಂಡ್ಯ ಅಧಿಕಾರಕ್ಕೆ ಬಂದ.

**ಪಂಡಿತ ಪಾಂಡ್ಯ**

ಪಂಡಿತ ಪಾಂಡ್ಯ ರಾಯಪಾಂಡ್ಯ ಮತ್ತು ಸೋವಲದೇವಿಯವರ ಹಿರಿಯ ಪುತ್ರನೆಂದು ಪಾಂಡ್ಯರ ಶಾಸನಗಳು ಉಲ್ಲೇಖಿಸುತ್ತವೆ. ಪಾಂಡಿತ್ಯ ಮತ್ತು ಸಾಹಿತ್ಯದ ಒಲವಿನ ಕಾರಣಕ್ಕೆ ರಾಜಪ್ರಭುತ್ವವನ್ನು ತಿರಸ್ಕರಿಸಿದ ಈತನ ವ್ಯಕ್ತಿತ್ವವನ್ನು ಕೆಲವು ಶಾಸನಗಳು ವರ್ಣಿಸುತ್ತವೆ. ಕ್ರಿ.ಶ. ೧೧೪೮ರ ವೀರಪಾಂಡ್ಯನ ಹರಿಹರದ ಶಾಸನ, ರಾಯಪಾಂಡ್ಯನ ಹೆಂಡತಿಯಾದ ಸೋಮಲದೇವಿ ವಿದ್ಯೆ ಸಂಪತ್ತುಗಳ ಮಹಾವೈರವನ್ನು ಬಿಡಿಸಿ ಅವುಗಳಿಗೆ ಏಕಾಶ್ರಯ ಸ್ಥಾನನಾದ ಪಂಡಿತಪಾಂಡ್ಯ ದೇವರಿಗೆ ಜನ್ಮಕೊಟ್ಟಳು. ಇವನಾದರೋ ಲೋಕದ ಹೊಗಳಿಕೆಗೆ ಪಾತ್ರನಾದವನು; ಸಂತತವಾದ ವಿದ್ಯಾವೈಭವದಿಂದ ಕೂಡಿದವನು; ದೇವಗಂಗೆಯ ನೀರಿನಂತೆ ಶ್ರೀಗಂಧದ, ಬಿಳಿಯ ಕಮಲದಂತೆ ಕೀರ್ತಿಯಿಂದ ಪ್ರಕಾಶಗೊಂಡವನು. ಶ್ರೀ ಹರ್ಷ ಉತ್ಪಲ, ಭೋಜ, ವತ್ಸರಾಜ ವಿಕ್ರಮಾದಿತ್ಯ - ಇವರೇ ಮೊದಲಾದ ರಾಜರು ಪರಾಕ್ರಮಕ್ಕೆ ವಿದ್ಯೆಗೆ ಹೆಸರಾಗಿ ಉತ್ಸಾಹದಿಂದ ಆಸೇತು ಹಿಮಾಚಲ ಭೂಮಿಯನ್ನು ಪಾಲಿಸಿದರು. ಆ ರಾಜರ ಗುಣಗಳೆಲ್ಲ ಈ ರಾಜರಲ್ಲಿ ಒಟ್ಟಾಗಿ ಸೇರಿದವೋ ಎನ್ನುವಂತೆ ಪಂಡಿತಪಾಂಡ್ಯನು ಪ್ರಸಿದ್ಧಿ ಪಡೆದನು. ಮಧುಸೂಧನ ದೇವನಿಂದ ಸಮಸ್ತ ವಿದ್ಯೆಗಳನ್ನು ಪಡೆದನೆಂದ ಮೇಲೆ ಕಿವುಡರಾದ ರಾಜರು ಪಂಡಿತ ಪಾಂಡ್ಯನೊಡನೆ

ಯಾವ ರೀತಿಯಲ್ಲಿಯಾದರೂ ಹೋಲಿಕೆಗೆ ಬರುತ್ತಾರೆಯೇ? ನಡತೆಯಲ್ಲಿ ಮುನಿಮುನಿ ವಿದ್ವಾಂಸರಿಗೆ ಆಶ್ರಯದಾತ, ಉದಾತ್ತಚಿತ್ತ, ಈ ಗುಣಗಳಿಂದ ಪಂಡಿತಪಾಂಡ್ಯನು ಈ ರೀತಿಯಲ್ಲಿ ಪ್ರಸಿದ್ಧಿ ಹೊಂದಿದ್ದನು. ರಾಜರು ಹೀಗಲ್ಲವೇ ಕೀರ್ತಿ ಪಡೆಯಬೇಕಾದದ್ದು? ಈ ರಾಜನ ಒಡಹುಟ್ಟಿದವರು. ವೀರಪಾಂಡ್ಯ ಪಲಮಾಂದ ಪಾಂಡ್ಯ(ಕಾಮದೇವ) ವಿಜಯಪಾಂಡ್ಯ ಪಂಡಿತಪಾಂಡ್ಯನ ಮಗ ಪಂಡಿತ ಮಂಡಲಿಯೆಂಬ ಕಮಲವನಕ್ಕೆ ಸೂರ್ಯನಂತೆ ಇರತಕ್ಕ. ಶತ್ರುರಾಜರೆಂಬ ಬೆಟ್ಟಕ್ಕೆ ವಜ್ರಾಯುಧದಂತಿರುವ ಶ್ರೇಷ್ಠವಾದ ಚಾರಿತ್ರ್ಯವುಳ್ಳ ತೈಲಪನು ಹುಟ್ಟಿದನು.[೧೨] ತೈಲಪನು ಕೂಡ ರಾಜ್ಯವಾಳಲಿಲ್ಲ. ಪಂಡಿತ ಪಾಂಡ್ಯ ಯಾವ ಕೃತಿಗಳನ್ನು ರಚಿಸಿದ ಯಾರಿಗೆ ಆಶ್ರಯ ನೀಡಿದ್ದ ಎಂಬ ಯಾವುದೇ ಮಾಹಿತಿಗಳು ತಿಳಿಯುವುದಿಲ್ಲ. ಚಾಳುಕ್ಯ ಸೋಮೇಶ್ವರನಂತೆ ಇವನು ವಿದ್ವಾಂಸನಾಗಿದ್ದ; ತನ್ನ ಜೀವನವನ್ನು ಬೌದ್ಧಿಕ ಕ್ಷೇತ್ರಕ್ಕೆ ಸೀಮಿತಗೊಳಿಸಿದ್ದ.

**ವೀರಪಾಂಡ್ಯ : ಕ್ರಿ.ಶ. ೧೧೪೨ರಿಂದ ೧೧೬೨**

ರಾಯಪಾಂಡ್ಯ ನಂತರ ಆತನ ಎರಡನೇ ಮಗನಾದ ವೀರಪಾಂಡ್ಯ ಪಾಂಡ್ಯನಾಡಿನ ಅಧಿಕಾರವನ್ನು ವಹಿಸಿಕೊಂಡನು. ಸುಮಾರು ೩೫ ಶಾಸನಗಳು ವೀರಪಾಂಡ್ಯನ ಆಡಳಿತವನ್ನು ತಿಳಿಸುತ್ತವೆ. ತಾತ ತ್ರಿಭುವನಮಲ್ಲ ಪಾಂಡ್ಯ ಮತ್ತು ತಂದೆ ರಾಯಪಾಂಡ್ಯನ ಆಡಳಿತದಲ್ಲಿ ಭಾಗವಹಿಸಿದ್ದನು. ಚಾಳುಕ್ಯ ಅರಸರಾದ ವಿಕ್ರಮಾದಿತ್ಯ, ೩ನೇ ಸೋಮೇಶ್ವರ, ಜಗದೇಕಮಲ್ಲ (ಪೆರ್ಮನೃಪ) ಹಾಗೂ ೩ನೇ ತೈಲಪ ಇವರ ಆಡಳಿತ ಕಾಲದಲ್ಲಿ ವೀರಪಾಂಡ್ಯ ಅವರ ಪಾದಪದ್ಮೋಪಜೀವಿಯಾಗಿ ಆಡಳಿತ ನಡೆಸಿದ. ಹಾಗಾಗಿ ಶಾಸನಗಳು ತ್ರೈಲೋಕಮಲ್ಲ ವೀರಪಾಂಡ್ಯ, ಜಗದೇಕಮಲ್ಲ ವೀರಪಾಂಡ್ಯ, ಭೂಲೋಕಮಲ್ಲ ವೀರಪಾಂಡ್ಯ ಎಂದು ವರ್ಣಿಸಿವೆ. ಪಾಂಡ್ಯವಂಶದ ಪಾರಂಪರಿಕ ಬಿರುದುಗಳನ್ನು ಧರಿಸಿದ ವೀರಪಾಂಡ್ಯ ತನ್ನ ಅವಧಿಯಲ್ಲಿ ನೊಳಂಬವಾಡಿಯ ರಾಜಧಾನಿಯನ್ನು ಬೇತೂರಿನಿಂದ ಉಚ್ಚಂಗಿದುರ್ಗಕ್ಕೆ ಬದಲಾವಣೆ ಮಾಡಿದ. ತನ್ನ ಕೊನೆಯ ಅವಧಿಯಲ್ಲಿ ಕಳಚೂರಿ ಬಿಜ್ಜಳನ ಸಾಮಂತನಾಗಿ ಅಧಿಕಾರವನ್ನು ಸ್ಥಿರಪಡಿಸಿಕೊಂಡ. ತನ್ನ ೨೦ ವರ್ಷಗಳ ಆಡಳಿತದಲ್ಲಿ ಸಹೋದರ ವಿಜಯಪಾಂಡ್ಯನಿಗೂ ಆಡಳಿತದಲ್ಲಿ ಅವಕಾಶ ನೀಡಿ ಹೊಯ್ಸಳರ ಅರಸರ ಆಕ್ರಮಣಗಳನ್ನು ಯಶಸ್ವಿಯಾಗಿ ತಡೆದು ಅನೇಕ ಜನಪರ ಕಾರ್ಯ ಕೈಗೊಂಡಿದ್ದನ್ನು ಶಾಸನಗಳು ತಿಳಿಸುತ್ತವೆ.

ಕ್ರಿ.ಶ. ೧೧೪೨ರ ಅಂಬಳಿ ಮತ್ತು ಹೊಳಲು ಶಾಸನಗಳು ವೀರಪಾಂಡ್ಯ ನೊಳಂಬವಾಡಿ-೩೨೦೦೦ ನಾಡಿನ ಮಹಾಮಂಡಳೇಶ್ವರ ಪದವಿಯನ್ನು ಅಲಂಕರಿಸಿದ್ದುದನ್ನು ಮೊದಲ ಬಾರಿಗೆ ತಿಳಿಸುತ್ತವೆ. ಇದಕ್ಕೂ ಮೊದಲು ವೀರಪಾಂಡ್ಯ ತನ್ನ ತಂದೆಯ ಆಡಳಿತದಲ್ಲಿ ಸ್ಥಾನ ಪಡೆದುಕೊಂಡಿದ್ದ ಎಂಬುದನ್ನು ಬಾಗಳಿ ಮತ್ತು ಆನೆಕೊಂಡ ಶಾಸನಗಳು ತಿಳಿಸುತ್ತವೆ. ಕ್ರಿ.ಶ. ೧೧೦೮ರ ಬಾಗಳಿ ಶಾಸನ ಮಹಾಮಂಡಳೇಶ್ವರ ಕಾಂಚೀಪುರವರಾಧೀಶ್ವರ ಯದುವಂಶಾಂಬರದ್ಯುಮಣಿ ಸುಭಟಚೂಡಾಮಣಿ ನಿಜಕುಳಕಮಳ ಮಾರ್ತ್ತಾಂಡ ಪರಿಚ್ಛೇದಿಗಂಡ ರಾಜಿಗಚೋಳಮನೋಭಂಗ ಶ್ರೀಮತು ಹರಿಹರದೇವ ಪಾದಾಬ್ಜಭ್ರಾಂಗಂ ನಾಮಾದಿ ಸಮಸ್ತ

ಪ್ರಶಸ್ತಿ ಸಹಿತಂ ಶ್ರೀಮನ್ಮಹಾಮಂಡಳೇಶ್ವರ ತ್ರಿಭುವನಮಲ್ಲ ವೀರಪಾಂಡ್ಯದೇವರು ನೊಳಂಬವಾಡಿ-೩೨೦೦೦ ದುಷ್ಟ ನಿಗ್ರಹದಿಂದ ಆಳುತ್ತಿದ್ದರು ಎಂದಿದೆ.[೧೩೩]

ಈ ಸಮಯದಲ್ಲಿ ತ್ರಿಭುವನಮಲ್ಲ ಪಾಂಡ್ಯ ಅಧಿಕಾರದಲ್ಲಿದ್ದ; ಅದೇ ಸಮಯದಲ್ಲಿ ರಾಯಪಾಂಡ್ಯನು ಕದಂಬಳಿಗೆ ಸಾವಿರವನ್ನು ಬೇತೂರು ನೆಲೆವೀಡಿನಿಂದ ಆಳುತ್ತಿದ್ದ ವಿಷಯ ಶಾಸನಗಳಿಂದ ದೃಢವಾಗಿದೆ. ಆದರೆ ಇಲ್ಲಿ ವೀರಪಾಂಡ್ಯ ನೊಳಂಬವಾಡಿ-೩೨೦೦೦ವನ್ನು ಆಳುತ್ತಿದ್ದುದಾಗಿ ಹೇಳಿರುವುದು ಉತ್ಪ್ರೇಕ್ಷೆಯ ವಿಷಯ. ರಾಯಪಾಂಡ್ಯನಿಗೆ ವೀರಪಾಂಡ್ಯ ಜನಿಸಿದ ಸಂತೋಷಕ್ಕೆ ಈ ಶಾಸನ ಹಾಕಿಸಿರಬೇಕು. ಇದೇ ಶಾಸನದಲ್ಲಿ ವೀರಪಾಂಡ್ಯನ ಸಾಮಂತನಾಗಿ ವಿಜಯಪಾಂಡ್ಯ ಆಳುತ್ತಿರುವಂತೆ ಆತನ ಕರ್ತವ್ಯಗಳನ್ನು ವಿಜಯ ಹೆಮ್ಮಾಡಿ ದಂಡನಾಯಕ ಪಾಲಿಸುತ್ತಿದ್ದ ಎಂದು ಉಲ್ಲೇಖಿಸಿದೆ. ಹಾಗಾಗಿ ಸ್ವತಂತ್ರ ಆಡಳಿತ ನಡೆಸುವಷ್ಟು ಇವರು ಸಮರ್ಥರಾಗಿರಲಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಅದರಿಂದ ತ್ರಿಭುವನಮಲ್ಲ ಪಾಂಡ್ಯ ರಾಜಕುಮಾರರು ಹುಟ್ಟಿದ ಖುಷಿಗಾಗಿ ಸಾಂಕೇತಿಕವಾಗಿ ಈ ಶಾಸನವನ್ನು ಅವರ ಹೆಸರಿನಲ್ಲಿ ಹೊರಡಿಸಿರಬೇಕು.

ಆನೆಕೊಂಡ ಶಾಸನ ಮಹಾಮಂಡಳೇಶ್ವರ ಪರಿಚ್ಛೇದಿಗಂಡ ರಾಜಿಗಚೋಳ ಮನೋಭಂಗ ಶ್ರೀಮತು ಭೂಲೋಕಮಲ್ಲದೇವಪಾದಾರಾಧಕ ಶ್ರೀಮದು ವೀರಪಾಂಡ್ಯದೇವ ನೊಳಂಬವಾಡಿ ಮೂವತ್ತಿರ್ಚ್ಛಾಸಿರವನ್ನು ಉಚ್ಚಂಗಿಕೋಟೆಯ ನೆಲೆವೀಡಿನೋಳು ಆಳುತ್ತಿರುವುದಾಗಿ ಹೇಳುತ್ತದೆ.[೧೩೪] ವಿಕ್ರಮಾದಿತ್ಯನ ಮರಣದ ನಂತರ (೩ನೇ ಸೋಮೇಶ್ವರ) ಭೂಲೋಕಮಲ್ಲ ಕ್ರಿ.ಶ. ೧೧೨೬ರಿಂದ ೧೧೩೮ರವರೆಗೂ ಚಾಳುಕ್ಯ ಸಿಂಹಾಸನದಲ್ಲಿದ್ದ ಆ ವೇಳೆ ರಾಯಪಾಂಡ್ಯ ನೊಳಂಬವಾಡಿ ಪ್ರಾಂತ್ಯದ ಆಡಳಿತವನ್ನು ಬೇತೂರು ನೆಲೆವೀಡಿನಿಂದ ನಿರ್ವಹಿಸುತ್ತಿದ್ದ. ಹಾಗಾಗಿ ವೀರಪಾಂಡ್ಯ ಉಚ್ಚಂಗಿ ನೆಲೆವೀಡಿನಿಂದ ಆತನ ಜೊತೆಯಲ್ಲಿ ಆಡಳಿತ ನಡೆಸಿರುವುದು ಇದರಿಂದ ಸ್ಪಷ್ಟವಾಗುತ್ತದೆ. ಹರಿಹರ ಶಾಸನ ವೀರಪಾಂಡ್ಯ ಕುಮಾರ ವೃತ್ತಿಯಿಂದ ಆಳುತ್ತಿರುವುದಾಗಿ ಹೇಳುತ್ತದೆ.[೧೩೫]

ಕ್ರಿ.ಶ. ೧೧೪೨ರ ಹೊಳಲು ಶಾಸನ ಶ್ರೀಮಚ್ಚಾಳುಕ್ಯ ಜಗದೇಕಮಲ್ಲ ವರ್ಷದ ೫ನೇ ದುಂದುಬಿ ಸಂವತ್ಸರದ ಸಂಕ್ರಮಣದಂದು ವೀರಪಾಂಡ್ಯದೇವರ ಅಧಿಕಾರಿ ವೀರಪಾಂಡ್ಯ ಅಣುಕಪಲ್ಲವರಾಯರು ಉಯ್ಯದಂದದಂಡನಾಯಕರ ಮಗ ಸಾವಿದೇವನು ಗಂಡರಾಧಿತ್ಯನ ಹೊಳಲ ಗವರೇಶ್ವರ ದೇವರ್ಗ್ಗೆ ತೆರಿಗೆಯಲ್ಲಿ ದಾನ ಬಿಡುತ್ತದೆ.[೧೩೬]

ಅಂಬಳಿಯ ಕ್ರಿ.ಶ. ೧೧೪೩ರ ಶಾಸನ ಸತ್ಯಾಶ್ರಯ ಕುಳತಿಳಕ ಚಾಳುಕ್ಯ ಭರಣ ಶ್ರೀಮತ್ಪ್ರತಾಪ ಚಕ್ರವರ್ತಿ ಜಗದೇಕಮಲ್ಲದೇವರು ಕಲ್ಯಾಣಪುರದ ನೆಲೆವೀಡಿನೊಳು ಆಳುತ್ತಿರುವಾಗ ತತ್ಪಾದ ಪದ್ಮೋಪಜೀವಿ ಸಮಸ್ತ ಪ್ರಶಸ್ತಿ ಸಹಿತ ಮಹಾಮಂಡಳೇಶ್ವರ ಜಗದೇಕಮಲ್ಲ ವೀರಪಾಂಡ್ಯ ದೇವರು ನೊಳಂಬವಾಡಿ ಮೂವತ್ತಿರ್ಚ್ಛಾಸಿರವನ್ನು ಆಳುತ್ತಿರುವುದಾಗಿ ಉಲ್ಲೇಖಿಸುತ್ತದೆ.[೧೩೭] ೩ನೇ ಸೋಮೇಶ್ವರನ ನಂತರ ಅವನ ಹಿರಿಯ ಮಗನಾದ ಜಗದೇಕಮಲ್ಲ ಇವನನ್ನು

ಹೆಮ್ಮಾಡಿದೇವ, ಪೆರ್ಮನೃಪ ಅಥವಾ ಪೆರ್ಮಜಗದಕೇಮಲ್ಲ ಎಂದು ಕರೆಯಲಾಗಿದೆ. ಕ್ರಿ.ಶ. ೧೧೩೮ರಲ್ಲಿ ಅಧಿಕಾರಕ್ಕೆ ಬಂದ ಕ್ರಿ.ಶ. ೧೧೫೧ರವರೆಗೂ ಆಳ್ವಿಕೆ ನಡೆಸಿದ. ಈತನ ಕಾಲದಲ್ಲಿ ವೀರಪಾಂಡ್ಯ ನೊಳಂಬವಾಡಿಯ ಮಹಾಮಂಡಳೇಶ್ವರ ಪದವಿಯನ್ನು ಅಲಂಕರಿಸಿ ಈತನ ನಿಷ್ಠಾವಂತ ಸಾಮಂತನಾಗಿ ಆಳ್ವಿಕೆ ಆರಂಭಿಸಿದ್ದನ್ನು ಈ ಶಾಸನಗಳು ಸ್ಪಷ್ಟಪಡಿಸುತ್ತವೆ.

ಶಿರಾ ತಾಲೂಕಿನ ದೊಡ್ಡಬಾಣಗೆರೆ ಶಾಸನ ಚಾಳುಕ್ಯಭರಣ ತ್ರೈಲೋಕಮಲ್ಲ ದೇವರು ಆಳುತ್ತಿರುವಾಗ ಮಹಾಮಂಡಳೇಶ್ವರ ವೀರಪಾಂಡ್ಯ ಇರುಂಗಳ ದೇವರು ರೊದ್ದಮೂನೂರು, ಸಿರಮುನೂರು, ಹರವೆ ಮುನ್ನೂರು, ಕಣಿಕಲ್ಲು ಮುನ್ನೂರು, ಸಿಂದವಾಡಿ ಸಾಸಿರವನ್ನು ಆಳುತ್ತಿರುವುದಾಗಿ ಹೇಳುತ್ತದೆ.[೧೩೮] ಚಾಳುಕ್ಯ ಜಗದೇಕಮಲ್ಲನ ಮರಣದ ನಂತರ ಕ್ರಿ.ಶ. ೧೧೫೦ರಿಂದ ೧೧೬೨ರವರೆಗೆ ಚಾಳುಕ್ಯ ತೈಲಪ ತ್ರೈಲೋಕಮಲ್ಲ ಎಂಬ ಹೆಸರಿನಲ್ಲಿ ಚಾಳುಕ್ಯ ಸಾಮ್ರಾಜ್ಯವನ್ನು ಆಳಿದ. ಕ್ರಿ.ಶ. ೧೧೫೩ರ ಬಾಗಳಿ ಶಾಸನ ಚಾಳುಕ್ಯ ಜಗದೇಕಮಲ್ಲ ದೇವರು ಕಲ್ಯಾಣದಿಂದ ಆಳುತ್ತಿರುವಾಗ ತತ್ಪಾದಪದ್ಮೋಪಜೀವಿ ಮಹಾಮಂಡಳೇಶ್ವರ ಜಗದೇಕಮಲ್ಲ ವೀರಪಾಂಡ್ಯದೇವ[೧೩೯] ಎಂದು ಉಲ್ಲೇಖಿಸುತ್ತದೆ. ಕ್ರಿ.ಶ. ೧೧೬೦ರ ಇನ್ನೊಂದು ಶಾಸನ ಚಾಳುಕ್ಯ ಜಗದೇಕಮಲ್ಲ ದೇವರು ಆಳುತ್ತಿರುವಾಗ ಅವನ ಸಾಮಂತ ವೀರಪಾಂಡ್ಯದೇವರು ಕದಂಬಳಿಗೆ ಸಾಯಿರ, ಬಲ್ಲಕುಂದೆ, ಮೂನ್ನೂರು, ಕೋಗಳಿಯಯ್ನೂರನ್ನು ಆಳುತ್ತಿದ್ದನು.[೧೪೦] ಇಲ್ಲಿ ತ್ರೈಲೋಕಮಲ್ಲದೇವನ ಆಡಳಿತವಿರುತ್ತದೆ. ಜಗದೇಕಮಲ್ಲನ ಆಡಳಿತ ಮುಗಿದು ೧೦ ವರ್ಷಗಳು ಆಗಿದ್ದರೂ ವೀರಪಾಂಡ್ಯ ಜಗದೇಕಮಲ್ಲನ ಹೆಸರನ್ನು ಕರೆದುಕೊಂಡಿದ್ದಾನೆ.

ತ್ರೈಲೋಕಮಲ್ಲದೇವನ ಕಾಲಕ್ಕೆ ಅವರ ಸಾಮಂತರಾಗಿದ್ದ ಕಳಚೂರಿ ಬಿಜ್ಜಳ ಸ್ವತಂತ್ರನಾಗಲು ಸಿದ್ಧನಾಗಿದ್ದ. ತೈಲಪನು ಅಸಮರ್ಥನಾಗಿದ್ದರಿಂದ ಬಿಜ್ಜಳನು ಈತನ ವಿರುದ್ಧ ತಿರುಗಿ ಬಿದ್ದು ಕ್ರಿ.ಶ. ೧೧೫೫ರಲ್ಲಿ ಕಾಕತೀಯ ರಾಜಮನೆತನದ ಪ್ರೋಲರಾಜನು ತೈಲಪನೊಂದಿಗೆ ಯುದ್ಧ ಮಾಡಿ ಆತನನ್ನು ಸೆರೆಹಿಡಿದನೆಂದು ಬಳ್ಳಿಗಾವೆ ಶಾಸನ ತಿಳಿಸುತ್ತದೆ. ಚಾಳುಕ್ಯ ಸಾರ್ವಭೌಮತ್ವದ ಮೇಲಿನ ನಿಷ್ಠೆಯಿಂದಾಗಿ ಅವನನ್ನು ಬಿಡುಗಡೆ ಮಾಡಿದ[೧೪೧] ಈ ಘಟನೆಯ ಲಾಭ ಪಡೆದ ಬಿಜ್ಜಳ ತೈಲಪನ ಮೇಲೆ ದಾಳಿಗೆ ಇಳಿದ. ಇದರಿಂದ ತಪ್ಪಿಸಿಕೊಳ್ಳಲು ಕ್ರಿ.ಶ. ೧೧೫೭ರಲ್ಲಿ ತೈಲಪನು ಕಲ್ಯಾಣವನ್ನು ಬಿಟ್ಟು ಅಣ್ಣಿಗೇರಿಗೆ ಓಡಿಹೋದ. ಬಿಜ್ಜಳ ಆತನನ್ನು ಬೆನ್ನಟ್ಟಿದ್ದಾಗ ತೈಲಪನು ಅಲ್ಲಿಂದ ಪಲಾಯನ ಮಾಡಿ ಬನವಾಸಿಯನ್ನು ಸೇರಿದ. ಕ್ರಿ.ಶ. ೧೧೫೫ರಿಂದ ಇನೇ ತೈಲಪನ ಪ್ರಭಾವ ತಗ್ಗುತ್ತಲೇ ನಡೆಯತು. ಕ್ರಿ.ಶ. ೧೧೬೦ರ ವೇಳೆಗಾಗಲೇ ಕಳಚೂರಿ ಬಿಜ್ಜಳ ಸಾರ್ವಭೌಮನೆಂದು ಬಿಂಬಿಸಿಕೊಂಡ.[೧೪೨] ಚಾಳುಕ್ಯರ ಕೆಲವು ಸಾಮಂತರು ಬಿಜ್ಜಳನ ಅಧಿಕಾರವನ್ನು ಒಪ್ಪಿಕೊಂಡು ಅವನ ಸಾಮಂತರಾಗಿ ಆಡಳಿತ ನಡೆಸಿದರು. ಆದರೆ ಪರಾಕ್ರಮಿ ಶೂರ ಮತ್ತು ಚಾಳುಕ್ಯ ವಂಶದ ನಿಷ್ಠೆಗೆ ಪಾತ್ರರಾಗಿದ್ದ ವೀರಪಾಂಡ್ಯ ಬಿಜ್ಜಳನ ಅಧಿಕಾರವನ್ನು ಒಪ್ಪಲಿಲ್ಲ. ತ್ರೈಲೋಕಮಲ್ಲನ ಈ ಅಸ್ಥಿರ ಆಡಳಿತ ಕಾರಣಕ್ಕೆ ವೀರಪಾಂಡ್ಯ ಜಗದೇಕಮಲ್ಲದೇವನ ಹೆಸರಿನಲ್ಲಿ ಆಡಳಿತ ನಡೆಸಿ ಸ್ವಾಮಿನಿಷ್ಠೆಯನ್ನು ಉಳಿಸಿಕೊಂಡಿರಬೇಕು.

ಬಿಜ್ಜಳ ಸ್ವತಂತ್ರನಾಗಿ ಕಲ್ಯಾಣದಲ್ಲಿ ಆಡಳಿತ ಆರಂಭಿಸಿದಾಗ ವೀರಪಾಂಡ್ಯ ಸ್ವತಂತ್ರನಾಗಿ ಮತ್ತು ಚಾಳುಕ್ಯ ತ್ರಿಭುವನಮಲ್ಲದೇವನ ಹೆಸರಿನಲ್ಲಿ ಆಡಳಿತ ನಡೆಸಿದ. ಕ್ರಿ.ಶ. ೧೧೬೭ರ ದುಗ್ಗವತಿ ಶಾಸನ ಮಹಾಮಂಡಳೇಶ್ವರ ವೀರಪಾಂಡ್ಯದೇವರು ನೊಳಂಬವಾಡಿ-೩೨೦೦೦ವನ್ನು ಉಚ್ಚಂಗಿ ನೆಲೆವೀಡಿನಿಂದ ಆಳುತ್ತಿರುವುದಾಗಿ ತಿಳಿಸುತ್ತದೆ.[೧೪೩] ಈ ಶಾಸನ ನೇರವಾಗಿ ವೀರಪಾಂಡ್ಯನ ಬಿರುದುಗಳಿಂದಲೇ ಆರಂಭವಾಗುತ್ತದೆ. ಯಾರ ಹೆಸರನ್ನೂ ಹೇಳದೆ ಸ್ವತಂತ್ರವಾಗಿ ಶಾಸನವನ್ನು ಹಾಕಿಸಿಕೊಂಡಿದ್ದಾನೆ.

ಕ್ರಿ.ಶ. ೧೧೬೭ರ ನೀಲಗುಂದ ಶಾಸನ ಮಹಾಮಂಡಳೇಶ್ವರ ಕಾಳಂಜರಪುರವರಾಧೀಶ್ವರ ಸುವರ್ಣ್ನವ್ರಿಷಭಧ್ವಜ ಡಮರುಗತೂರ್ಯ್ಯನಿರ್ಗ್ಘೋಷಣ ಕಳಚ್ಯುರ್ಯಕುಳಕಮಳ ಮಾರ್ತ್ತಂಡ ಶನಿವಾರಸಿದ್ಧಿ ಗಿರಿದುರ್ಗ್ಗಮಲ್ಲ ನಿಶ್ಯಂಕನಾಮಾದಿ ಸಮಸ್ತ ಪ್ರಶಸ್ತಿಸಹಿತಂ ಶ್ರೀಮತ್ರಿಭುವನಮಲ್ಲ ಭುಜಬಳಚಕ್ರವರ್ತಿ ಬಿಜ್ಜಲದೇವರ ವಿಜಯರಾಜ್ಯಮುತ್ತರೋತ್ತರೋತ್ತರಾಭಿವ್ರಿಸಿದ್ಧಿ ತತ್ವಾದ ಪದ್ಮೋಪಜೀವಿ ಮಹಾಮಂಡಳೇಶ್ವರ ತ್ರಿಭುವನಮಲ್ಲದೇವಪಾದಾಬ್ಜಭ್ರಿಂಗಿ ಶ್ರೀಮತ್ರಿಭುವನಮಲ್ಲ ವೀರಪಾಂಡ್ಯದೇವರು ನೊಣಂಬವಾಡಿ ಮೂವತ್ತಿಚ್ಚಾಸಿರಕ್ಕೆ ತಲೆಯೆನಿಸಿದ ಕೋಗಳಿಯಯ್ನೂರು ಕದಂಬಲಿಗೆ ಸಾಯಿರವನ್ನು ಆಳುತ್ತಿರುವುದಾಗಿ ತಿಳಿಸುತ್ತದೆ.[೧೪೪] ವೀರಪಾಂಡ್ಯನನ್ನು ಇಲ್ಲಿ ಬಿಜ್ಜಳನ ಪಾದಪದ್ಮೋಪಜೀವಿ ಎಂದು ಹೇಳಲಾಗಿದೆ. ಆದರೂ ತ್ರಿಭುವನಮಲ್ಲ ವೀರಪಾಂಡ್ಯ ಎಂದು ಉಲ್ಲೇಖಿಸುತ್ತದೆ ಮತ್ತು ಬಿಜ್ಜಳನು ತ್ರಿಭುವನಮಲ್ಲನ ಸಾಮಂತನೆಂದು ಹೇಳಿಕೊಂಡಿದ್ದಾನೆ. ಬಿಜ್ಜಳ ಈ ವೇಳೆಗೆ ಸ್ವತಂತ್ರನಾಗಿದ್ದರೂ ಒಮ್ಮೆಲೇ ಸಾರ್ವಭೌಮತ್ವವನ್ನು ಹೇಳಿಕೊಳ್ಳದೇ ಚಾಳುಕ್ಯ ತ್ರಿಭುವನಮಲ್ಲ ದೇವನ ಹೆಸರಿನಲ್ಲಿ ಸ್ವಲ್ಪ ಕಾಲ ಆಳ್ವಿಕೆ ನಡೆಸಿದಂತೆ ಕಾಣುತ್ತದೆ. ಚಾಳುಕ್ಯ ೪ನೇ ಸೋಮೇಶ್ವರನಿಗೆ ವೀರಸೋಮೇಶ್ವರ, ತ್ರಿಭುವನಮಲ್ಲ, ವೀರನಾರಾಯಣ ಎಂಬ ಬಿರುದುಗಳಿದ್ದವು. ಈ ಶಾಸನದಲ್ಲಿ ಹೇಳಿರುವ ತ್ರಿಭುವನಮಲ್ಲ ೬ನೇ ವಿಕ್ರಮಾದಿತ್ಯನೋ ಅಥವಾ ೪ನೇ ಸೋಮೇಶ್ವರನೋ ಎಂಬ ಗೊಂದಲ ಉಂಟಾಗುತ್ತದೆ. ವಿಕ್ರಮಾದಿತ್ಯ ಮರಣ ಹೊಂದಿ ೪೫ ವರ್ಷಗಳು ಆಗಿರುವುದರಿಂದ ಮತ್ತು ಬಿಜ್ಜಳ ಸ್ವತಂತ್ರನಾಗಿದ್ದರೂ ಚಾಳುಕ್ಯರು ಸಂಪೂರ್ಣ ಅಧಿಕಾರವನ್ನು ಕಳೆದುಕೊಂಡಿರಲಿಲ್ಲ. ತಮ್ಮ ನಿಷ್ಠಾವಂತ ಮಹಾಮಂಡಳೇಶ್ವರರ ಆಶ್ರಯದಲ್ಲಿ ೪ನೇ ಸೋಮೇಶ್ವರ ತೈಲಪನ ನಂತರ ಚಾಳುಕ್ಯ ಚಕ್ರವರ್ತಿಯಾಗಿದ್ದ. ಹಾಗಾಗಿ ಆರಂಭದಲ್ಲಿ ಬಿಜ್ಜಳ ೪ನೇ ಸೋಮೇಶ್ವರ ಅಥವಾ ತ್ರಿಭುವನಮಲ್ಲದೇವನ ಹೆಸರಿನಲ್ಲಿ ಆಡಳಿತ ನಡೆಸಿದ್ದಾನೆ. ವೀರಪಾಂಡ್ಯ ಬಿಜ್ಜಳನ ಸಾಮಂತನಾಗಿದ್ದರಿಂದ ಅವನನ್ನು ತ್ರಿಭುವನಮಲ್ಲದೇವನ ಹೆಸರನ್ನು ತನ್ನ ಬಿರುದಾಗಿ ಪಡೆದುಕೊಂಡಿದ್ದ. ಗಂಗನರಸಿ ಶಾಸನ ವೀರಪಾಂಡ್ಯ ಕಳಚೂರಿ ಬಿಜ್ಜಳನ ಸಾಮಂತನಾಗಿದ್ದ ಎಂಬುದನ್ನು ಸ್ಪಷ್ಟಪಡಿಸುತ್ತದೆ.

**ಸೈನಿಕ ಸಾಧನೆಗಳು**

ವೀರಪಾಂಡ್ಯನ ಆಶ್ರಿತ ರಾಜರಾದ ಜಗದೇಕಮಲ್ಲದೇವ ಯಾವ ದಂಡೆಯಾತ್ರೆಯನ್ನಾಗಲಿ ಸುಖಸಂಚಾರವನ್ನಾಗಲಿ ಕೈಗೊಳ್ಳದೆ ತನ್ನ ಪಿತ್ರಾರ್ಜಿತ ರಾಜಧಾನಿಯಾದ ಕಲ್ಯಾಣದಲ್ಲಿದ್ದು

ಸುಖೋಪಭೋಗದಲ್ಲಿ ಕಾಲಕಳೆದು ರಾಜ್ಯದಲ್ಲಿನ ಆಂತರಿಕ ದಂಗೆಗಳನ್ನು ಮಾತ್ರ ತಡೆದಂತೆ ತೋರುತ್ತದೆ. ಬಿ.ಎಲ್. ರೈಸ್‌ರವರು ಚೋಳ ದಳವಾಯಿಗಳನ್ನು ಗುರ್ಜರ ಅರಸರನ್ನು ಕೊಂದು ಅವರ ದಂಡನ್ನೂ ಸಂಪತ್ತನ್ನೂ ಹಿಡಿದುಕೊಂಡಿರುವುದನ್ನು ಬರೆಯುತ್ತಾರೆ. ಇವನ ನಂತರ ಬಂದ ತೈಲಪ ಕಳಚೂರಿಗಳ ದಂಗೆಯನ್ನು ತಡೆಯದೆ ಕಲ್ಯಾಣವನ್ನು ಬಿಟ್ಟು ಓಡಿ ಹೋಗುತ್ತಾನೆ. ವೀರಪಾಂಡ್ಯನ ಆಶ್ರಿತ ಪ್ರಭುಗಳು ಶಾಂತಿಪ್ರಿಯರು ಮತ್ತು ಅಧಿಕಾರ ವಂಚಿತರು ಆಗಿದ್ದರಿಂದ ಈತನ ಕಾಲದಲ್ಲಿ ಮಹತ್ವದ ಯಾವುದೇ ದಾಳಿಗಳು ನಡೆಯಲಿಲ್ಲ. ಆದರೆ ಹೊಯ್ಸಳರು ಮತ್ತು ಪಾಂಡ್ಯರ ಮಧ್ಯೆ ನಿರಂತರ ಕದನಗಳು ಮುಂದುವರಿದ್ದವು.

**ಚೋಳರೊಂದಿಗೆ ಕದನ**

ವೀರಪಾಂಡ್ಯನನ್ನು ಉಲ್ಲೇಖಿಸುವ ಎಲ್ಲಾ ಶಾಸನಗಳು "ರಾಜಿಗಚೋಳ ಮನೋಭಂಗ" ಎಂದು ಕರೆಯುತ್ತವೆ. ಈ ಬಿರುದು ಪಾಂಡ್ಯ ಅರಸರ ಪಾರಂಪರಿಕ ಬಿರುದಾಗಿತ್ತು ಅನಿಸುತ್ತದೆ. ಕ್ರಿ.ಶ. ೧೧೪೩ರಲ್ಲಿ ಚೋಳರು ಚಾಲುಕ್ಯ ರಾಜ್ಯವನ್ನು ಆಕ್ರಮಿಸಿದಾಗ ಚಾಳುಕ್ಯ ಜಗದೇಕಮಲ್ಲ ತನ್ನ ಸಾಮಂತರ ಜೊತೆ ಸೇರಿ ಅವರನ್ನು ಜಯಸಿದನು.[೧೪೫] ರೈಸರು ಇದನ್ನು ಒಪ್ಪಿಕೊಳ್ಳುತ್ತಾರೆ. ವೀರಪಾಂಡ್ಯ ಜಗದೇಕಮಲ್ಲ ನೆಚ್ಚಿನ ಸಾಮಂತನಾಗಿದ್ದರಿಂದ ಈ ಕದನದಲ್ಲಿ ಭಾಗವಹಿಸಿದ. ಚೋಳ ವಂಶದ ನಿಡುಗಲ್ಲು ಚೋಳ ಮನೆತನದ ಇರುಂಗಳದೇವ ವೀರಪಾಂಡ್ಯನ ಆಶ್ರಯದಲ್ಲಿ ಇದ್ದಂತೆ ತೋರುತ್ತದೆ. ದೊಡ್ಡಬಾಣಗೆರೆ ಶಾಸನ ಮಹಾಮಂಡಳೇಶ್ವರ ವೀರಪಾಂಡ್ಯ ಇರುಂಗಳದೇವ ಎಂದು ಆತನನ್ನು ಕರೆಯಲಾಗಿದೆ. ನೊಳಂಬವಾಡಿ ಪ್ರಾಂತ್ಯದಲ್ಲಿದ್ದ ಚೋಳ ವಂಶದ ಶಾಖೆಯವರು ವೀರಪಾಂಡ್ಯನ ಕಾಲದಲ್ಲಿ ಆತನ ಆಶ್ರಯಕ್ಕೆ ಬಂದಿರಬೇಕು. ಈ ವೇಳೆಗೆ ಹೊಯ್ಸಳ ವಿಷ್ಣುವರ್ಧನ ಮರಣ ಹೊಂದಿದ್ದ.

**ಹೊಯ್ಸಳರು**

ವೀರಪಾಂಡ್ಯನ ಕಾಲಕ್ಕೆ ಹೊಯ್ಸಳ ವಿಷ್ಣುವರ್ಧನ ಮರಣ ಹೊಂದಿ ಆತನ ಮಗ ವೀರನರಸಿಂಹ ಅಧಿಕಾರಕ್ಕೆ ಬಂದಿದ್ದ. ವೀರನರಸಿಂಹ ತನ್ನ ಬಿರುದುಗಳಲ್ಲಿ ತಲಕಾಡು ಗಂಗವಾಡಿ, ನೊಳಂಬವಾಡಿ ಕೊಂಗನಗಲಿ ಬನವಾಸಿಯುಚ್ಚಂಗಿಹಾನುಂಗಲ್ಗೊಂಡ; ಪಾಂಡ್ಯ ಕುಲಕಮಲ ವೇದಂಡ[೧೪೬] (ಪಾಂಡ್ಯ ಕುಲಕಮಲಕ್ಕೆ ದಂಡವಾಗಿರುವುದು) ಎಂಬ ಬಿರುದುಗಳನ್ನು ಹಾಕಿಸಿ ಕೊಂಡಿದ್ದಾನೆ. ಈ ಹಿಂದೆ ವಿಷ್ಣುವರ್ಧನ ಉಚ್ಚಂಗಿಗಿರೀಶ್ಚಂದ್ರ ಸಹಸ್ರಲೋಚನ, ಉಚ್ಚಂಗಿಗೊಂಡ ತಲಕಾಡು ಗಂಗವಾಡಿ ನೊಣಂಬವಾಡಿ ಹಾನುಂಗಲ ಹಲಸಿಗಿಹುಲಿಗೆರೆಕೊಂಡ, ನೊಳಂಬ ವಾಡಿಗೊಂಡ, ಪಾಂಡ್ಯಗಂಡ(ಪಾಂಡ್ಯನ ಅಧಿಪತಿ) ಪಾಂಡ್ಯನಂಬೆಂಕೊಂಡ(ಪಾಂಡ್ಯ ಅರಸರನ್ನು ಹತ್ತಿಕ್ಕಿದವನು) ಪಾಂಡ್ಯದಿಶಾಪಟ್ಟ[೧೪೭] (ಪಾಂಡ್ಯರನ್ನು ದಿಕ್ಕಾಪಾಲಾಗುವಂತೆ ಓಡಿಸಿದವನು) ಎಂದು ಹೊಯ್ಸಳ ಅರಸರು ತಮ್ಮ ಬಿರುದುಗಳಲ್ಲಿ ಹಾಕಿಸಿಕೊಂಡಿದ್ದಾರೆ.

ಪಾಂಡ್ಯ ಅರಸರನ್ನು ಜಯಿಸಿ ಪುನಃ ಅವರಿಗೆ ಅಧಿಕಾರ ನೀಡಿರುವುದಾಗಿ ಹೊಯ್ಸಳ ಶಾಸನಗಳು ತಿಳಿಸುತ್ತವೆ. ಆದರೆ ಪಾಂಡ್ಯರ ಯಾವ ಶಾಸನಗಳು ಕೂಡ ಹೊಯ್ಸಳರ

ಆಡಳಿತವನ್ನು ಒಪ್ಪಿರುವ ಬಗ್ಗೆ ಮಾಹಿತಿ ನೀಡುವುದಿಲ್ಲ. ಹಾನಗಲ್ಲು, ಬನವಾಸಿ, ಬಂಕಾಪುರ, ಹಲಸಿಗೆಗಳನ್ನು ಗೆದ್ದು ಅವುಗಳನ್ನು ತಮ್ಮ ಅಧೀನದಲ್ಲಿ ಹೊಯ್ಸಳರು ಪಡೆದಿರುವುದಕ್ಕೆ ಶಾಸನಗಳು ಲಭ್ಯ ಇವೆ. ಉಚ್ಚಂಗಿ ಮತ್ತು ಪಾಂಡ್ಯರನ್ನು ಜಯಿಸಿರುವ ಬಗ್ಗೆ ಮಾಹಿತಿ ಇಲ್ಲ. ಕೇವಲ ತಮ್ಮ ಬಿರುದುಗಳಲ್ಲಿ ಮಾತ್ರ ಇದು ಕಾಣಿಸುತ್ತದೆ. ಹೊಯ್ಸಳ ಮತ್ತು ವೀರಪಾಂಡ್ಯನ ನಡುವೆ ನಡೆದ ಕದನವನ್ನು ಕ್ರಿಶ. ೧೧೫೦ ಮದಲೂರಿನ ಶಾಸನ ತಿಳಿಸುತ್ತದೆ.

ಹೊಯ್ಸಳರು ನೊಳಂಬವಾಡಿಯ ಮೇಲೆ ದಾಳಿ ಮಾಡಿ ದನಕರುಗಳನ್ನು ವಶಕ್ಕೆ ತೆಗೆದುಕೊಂಡಾಗ ಮಾಚಿಗಾವುಂಡನ ಸುಪುತ್ರ ಮುದ್ದಗಾವುಂಡನು ಬೊಮ್ಮಪುರದ ಮದಲೂರಿನ ಕೆರೆಯ ಕೆಳಗೆ ಗೋವುಗಳನ್ನು ಬಿಡಿಸಲು ಅವರೊಡನೆ ಹೋರಾಡಿ ಮರಣಿಸಿದನು. ಮಾದಗಾವುಂಡನಿಗೆ ಬಚ್ಚಯ್ಯ ಹೆಗ್ಗಡೆಯವರು ೧೪ ಖಂಡುಗದ ಭೂಮಿಯನ್ನು ಮಾನ್ಯವಾಗಿ ಕೊಟ್ಟರು.[೧೪೮] ಕದನದಲ್ಲಿ ಪಾಂಡ್ಯ ಅರಸರಿಗೆ ಜಯವಾಗಿರುವಂತೆ ತೋರುತ್ತದೆ.

ಚಾಳುಕ್ಯ ಜಗದೇಕಮಲ್ಲ ಹೊಯ್ಸಳರ ಮೇಲೆ ದಾಳಿ ಮಾಡಿ ಅವರನ್ನು ಹಿಡಿದು ತನ್ನ ಅಧಿರಾಜತೆಯನ್ನು ಸ್ಥಾಪಿಸಿಕೊಂಡನು. ಕ್ರಿಶ. ೧೧೫೩ರಲ್ಲಿ ಸ್ವತಂತ್ರರಾಗಿದ್ದ ಹೊಯ್ಸಳ ವೀರನರಸಿಂಹ 'ಜಗದೇಕಮಲ್ಲ' ಎಂಬ ಉಪನಾಮಧೇಯವನ್ನು ಧರಿಸಿಕೊಂಡು ಚಾಳುಕ್ಯ ರಾಜ್ಯ ಚಕ್ರಾಧಿಪತ್ಯವನ್ನು ಪರ್ಯಾಯವಾಗಿ ಒಪ್ಪಿಕೊಂಡಿದ್ದ.[೧೪೯] ಜಗದೇಕಮಲ್ಲದೇವನ ಮಹಾಮಂಡಳೇಶ್ವರ ಹೊಯ್ಸಳರ ವಶದಲ್ಲಿದ್ದ ನೊಳಂಬವಾಡಿ ಮತ್ತು ಗಂಗವಾಡಿಯ ಕೆಲವು ಪ್ರದೇಶಗಳನ್ನು ಹೊಯ್ಸಳರಿಂದ ಪಡೆದು ಅರಸೀಕೆರೆಯ ನೆಲೆವೀಡಿನಲ್ಲಿ ನೆಲೆಸಿದ್ದ ಎಂದು ತಿಳಿಸುತ್ತದೆ. ವಿಷ್ಣುವರ್ಧನನ ಮರಣದ ನಂತರ ಹೊಯ್ಸಳರ ಶಕ್ತಿ ಕುಂದಿತು. ಹಾಗಾಗಿ ಪಾಂಡ್ಯರು ಈ ಭಾಗದಲ್ಲಿ ಪ್ರಬಲರಾಗಿ ಕಳೆದುಕೊಂಡಿದ್ದ ತಮ್ಮ ಪ್ರದೇಶಗಳ ಮೇಲೆ ಮತ್ತೆ ಹಿಡಿತ ಸಾಧಿಸಿ ಹೊಯ್ಸಳರ ಮೇಲೆ ವಿಜಯ ಸಾಧಿಸಿದರು. ಇದು ತಾತ್ಕಾಲಿಕವಾಗಿತ್ತು. ಕದನಗಳು ಮತ್ತೆ ಮುಂದುವರಿದವು.

**ಔತ್ತರೇಯ ದಾಳಿಗಳು**

ಕ್ರಿಶ. ೧೧೪೮ರ ಕೊಟ್ಟೈಕಲ್ ಶಾಸನ ಶತ್ರು ಸೈನ್ಯಕ್ಕೆ ಪರ್ವತಾಕಾರನೂ ಪಟುತರ ಪ್ರತಾಪಶಾಲಿಯೂ ಉತ್ತಮ ಪಾಲಕನೂ ಆದ ಚಾಳುಕ್ಯ ನೃಪನ ನೆಚ್ಚಿನ ಕಚ್ಚಿನಕೈ ಅಲಗಿನಂತೆ ಹೊಳೆಯುತ್ತಿದ್ದ ಸಾಹಸಿ ವೀರಪಾಂಡ್ಯ ನರೇಂದ್ರನು ಗಂಗ ಕಳಿಂಗ ವಗಂ ಸೂರ್ಜರೆ ಕೇರಳ, ಚೇರ, ಚೋಳ, ಗೌಡ ಅಂಗ ವರಾಟ, ಲಾಟ ಕೋಶಳ ಕೇರಳ, ಪುಂಡ್ರ, ಪಾರಸಿ ಕೊಂಕಣ, ಆಂಧ್ರ, ತುರಷ್ಕ ಮಗಧ ಮೊದಲಾದ ಉತ್ತುಂಗ ನೃಪಾಳನ್ನು ಎದುರಿಸಿದ[೧೫೦] ಎಂಬ ಬಿರುದುಗಳು ಉತ್ಪ್ರೇಕ್ಷೆ ಅನಿಸಿದರು. ವೀರಪಾಂಡ್ಯ ಚಾಳುಕ್ಯ ಅರಸರಾದ ತ್ರಿಭುವನಮಲ್ಲ, ಭೂಲೋಕಮಲ್ಲ, ಜಗದೇಕಮಲ್ಲ ತ್ರೈಲೋಕಮಲ್ಲ ಇವರ ಅಧೀನ ಆಡಳಿತದಲ್ಲಿ ಇದ್ದ ತ್ರಿಭುವನಮಲ್ಲ, ಭೂಲೋಕಮಲ್ಲ ಹಾಗೂ ಜಗದೇಕಮಲ್ಲ ದೇವರುಗಳು ಈ ಔತ್ತರೇಯ ರಾಜ್ಯಗಳ ಮೇಲೆ ದಾಳಿ ಮಾಡಿರುವುದನ್ನು ಕೆಲವು ಶಾಸನಗಳು ತಿಳಿಸುತ್ತದೆ. ಹಾಗಾಗಿ ವೀರಪಾಂಡ್ಯ ಈ ದಾಳಿಯಲ್ಲಿ ಭಾಗವಹಿಸಿರಬೇಕು. ಪಾಂಡ್ಯ ವಂಶದ ತ್ರಿಭುವನಮಲ್ಲ ಪಾಂಡ್ಯ ರಾಯಪಾಂಡ್ಯ ಈ ಬಿರುದುಗಳನ್ನು ಹೊಂದಿದ್ದರು.

ವೀರಪಾಂಡ್ಯ ಸೈನ್ಯ ಸಂಘಟನೆಯ ಜೊತೆಗೆ ಆಡಳಿತದ ಉಪವಿಭಾಗಗಳಲ್ಲಿ ಮಹಾ ಮಂಡಳೇಶ್ವರ, ಸಾಮಂತ, ದಂಡನಾಯಕರು ಗ್ರಾಮ ಆಡಳಿತದಲ್ಲಿ ಗೌಡ, ಹೆಗ್ಗಡೆ, ಪೆರ್ಗಡೆ, ನಾಡಗೌಡ, ಶಾನಭೋವ, ಸಂಧಿವಿಗ್ರಹಿಗಳು ಈತನ ಆಡಳಿತದಲ್ಲಿ ಭಾಗಿಯಾದರು.

## ಕೊಟ್ಟೂರಿನ ಕದಂಬರು

ಕದಂಬ ವಂಶದ ಚಿಬಿದೇವರಸ, ನಾಚಿದೇವರಸ, ಮಾಚಿದೇವರು, ಜಗದೇಕಮಲ್ಲ ವೀರಪಾಂಡ್ಯನ ಮಹಾಮಂಡಳೇಶ್ವರರಾಗಿ ಕೋಗಳಿ-೫೦೦ ವಿಭಾಗವನ್ನು ಕೊಟ್ಟೂರಿನಿಂದ ಆಡಳಿತ ನಡೆಸಿದ್ದರು. ಅಂಬಳಿ ಶಾಸನ ಕದಂಬ ಘಟ್ಟಿದೇವನ ಮಗ ಮಹಾಮಂಡಳೇಶ್ವರ ಚಿಬಿದೇವರಸ ಕೊಟ್ಟೂರಿನಿಂದ ಕೋಗಳಿ-೫೦೦ನ್ನು ಆಳುತ್ತಿರುವುದಾಗಿ ತಿಳಿಸುತ್ತದೆ.[೧೫೧] ಅಲಬೂರು ಶಾಸನ ಮಹಾಮಂಡಳೇಶ್ವರ ನಾಚಿದೇವರಸ ಕೋಗಳಿ-೫೦೦ರ ಮನ್ನೆಯನ್ನು ಆಳುತ್ತಿರುವಾಗ ಕಲಿದೇವರಿಗೆ ಗುರುಗಳಿಗೆ ದಾನ ನೀಡಿರುವ ಬಗ್ಗೆ ಉಲ್ಲೇಖಿಸುತ್ತದೆ.[೧೫೨] ಉಲುವತ್ತಿ ಶಾಸನ ಮಹಾಮಂಡಳೇಶ್ವರ ಕದಂಬ ಕುಲದ ಮಾಚಿದೇವರು ವೀರಪಾಂಡ್ಯ ದೇವರ ಪಾದಪದ್ಮೋಪಜೀವಿಯಾಗಿ ಕೋಗಳಿ-೫೦೦ರ ಮನ್ನೆಯನ್ನು ಆಳುತ್ತಿರುವುದನ್ನು ಹೇಳುತ್ತದೆ.[೧೫೩]

## ಗುತ್ತ ವಂಶದ ವಿಕ್ರಮಾದಿತ್ಯ-II

ರಾಯಪಾಂಡ್ಯ ಗುತ್ತ ವಂಶದ ವಿಕ್ರಮಾದಿತ್ಯನ ಸಹೋದರಿ ಸೋವಲದೇವಿಯನ್ನು ವಿವಾಹ ವಾಗಿದ್ದ. ಸೋವಲದೇವಿಯ ಮಗನಾದ ವೀರಪಾಂಡ್ಯನ ಕಾಲದಲ್ಲಿ ಆ ವಂಶದ ಇಮ್ಮಡಿ ವಿಕ್ರಮಾದಿತ್ಯ ಆತನ ಸಾಮಂತನಾಗಿ ಗುತ್ತಹೊಳಲು ಭಾಗದಲ್ಲಿ ಆಡಳಿತ ನಡೆಸುತ್ತಿದ್ದ. ತನ್ನ ಮಗಳಾದ ಮಹಾದೇವಿಯನ್ನು ವೀರಪಾಂಡ್ಯನಿಗೆ ಕೊಟ್ಟು ಪಾಂಡ್ಯ ಮತ್ತು ಗುತ್ತ ವಂಶದ ಸಂಬಂಧಗಳನ್ನು ವಿಕ್ರಮಾದಿತ್ಯ ಮತ್ತಷ್ಟು ಗಟ್ಟಿಗೊಳಿಸಿದ. ಕ್ರಿ.ಶ. ೧೧೫೩ರ ಬಾಗಳಿ ಶಾಸನ ಜಗದೇಕಮಲ್ಲ ದೇವರ ಮಾವ ಗುತ್ತ ವಂಶದ ವಿಕ್ರಮಾದಿತ್ಯರಸರು ಹಾಗೂ ವಿಕ್ರಮಾದಿತ್ಯನ ಅತ್ತೆ ಕೇತಬ್ಬರಸಿ ಹೆಂಡತಿ ನಾಗಿಯಾಂಡೆಯರಸಿಗೆ ದಾನಫಲ ಸಲ್ಲಬೇಕೆಂದು ಬಾಗಳಿಯ ಮಹಾಜನಗಳಿಗೆ ದಾನ ಬಿಡುತ್ತಾರೆ.[೧೫೪]

## ಮಹಾಸಾಮಂತ ಅನಂತಪಾಳಯ್ಯ

ಕ್ರಿ.ಶ. ೧೧೪೨ರ ಕೆರೆಗುಡಿಹಳ್ಳಿ ಶಾಸನ ಮಹಾಸಾಮಂತಾಧಿಪತಿ ಮಹಾಪ್ರಚಂಡ ದಂಡನಾಯಕ ಅನಂತಪಾಳಯ್ಯಂಗಳ್ ಸಪ್ತಾರ್ಧಲಕ್ಷಯ ವಡ್ಡರಾವುಳದ ಸುಕಮಂ ಆಳುತ್ತಿರುವಾಗ ತತ್ಪಾದಪದ್ಮೋಮಜೀವಿ ಶ್ರೀಮನುಮಹಾಪ್ರಧಾನಂ ದಂಡನಾಯಕ ಅಳಿಯ ಮಾದಿರಾಜರಸರು ಬನವಾಸೆ-೧೨೦೦೦, ಹಲಸಿಗೆ-೧೨೦೦೦, ನೊಳಂಬವಾಡಿ ಮೂವತ್ತಿರ್ಛಾಸಿರಿರದ ವಡ್ಡಾರಾವುಳದ ಸುಂಕವನ್ನು ಆಳುತ್ತಿರುವಾಗ ತತ್ಪಾದಪದ್ಮೋಪಜೀವಿ ಶ್ರೀಮದ್ದಂಡನಾಯಕ ಪಾಲಿಮರಸರು ನೊಳಂಬವಾಡಿ-೩೨೦೦೦ ವಡ್ಡರಾವುಳದ ಸುಂಕವನ್ನು ಆಳುತ್ತಿರುವಾಗ ಅಯ್ಯಯನ ಬೆಸದಿಂ ಚಾವುಂಡಮಯ್ಯನಾಯಕರು ಕದಂಬಳಿಕೆ-ಸಾಯಿರ ಕೋಗಳಿ-೫೦೦ ಸುಂಕವನ್ನು ಆಳುತ್ತಿರುವುದಾಗಿ ಹೇಳುತ್ತದೆ.[೧೫೫]

**ಮಹಾಸಾಮಂತ ಸೋವಿದೇವ**

ಸೋವಿದೇವ - ವೀರಪಾಂಡ್ಯ ದೇವನ ಮಹಾಸಾಮಂತನಾಗಿ ಆಳುತ್ತಿರುವ ವಿಷಯವನ್ನು ಅಸ್ತಾನಪುರ ಶಾಸನ ಹೇಳುತ್ತದೆ. ಮಹಾಸಾಮಂತ ಸೋವಿದೇವ ಬಳಿಚಿ-೭೦ರ ಮನ್ನೆಯನ್ನು ಆಳುತ್ತಿರುವಾಗ ಸೂಸಲಗೆರೆಯ ಮೂಲಸ್ಥಾನದ ಮಲ್ಲಿಕಾರ್ಜುನ ದೇವರಿಗೆ ದಾನ ಬಿಟ್ಟಿದ್ದ.[೧೫೬]

**ಸುಂಕಾಧಿಕಾರಿ ಕಲಿಮಯ್ಯನಾಯಕ**

ಕ್ರಿ.ಶ. ೧೧೬೨ರ ದುಗ್ಗವತಿ ಶಾಸನ ಕೋಗಳಿ-೫೦೦ರ ಸುಂಕಾಧಿಕಾರಿ ಕಲಿಮಯ್ಯ ನಾಯಕ ಸರ್ವಾಧಿಕಾರಿ ಹೆಗ್ಗಡೆ ಸೋಮರಸ ತೋಟಗಳ ಹೆರ್ಜುಂಕ ಮಡ್ಡರಾವುಳ ವೀರಬೀರವಣರು ದಾನ ಮಾಡಿರುವುದನ್ನು ತಿಳಿಸುತ್ತದೆ. ನೀಲಗುಂದ ಶಾಸನ ಕದಂಬಳಿಗೆ-೧೦೦೦ ಕೋಗಳಿ-೫೦೦ ಹೆಜ್ಜುಂಕದ ಪಂನಾಯದ ಸುಂಕಾಧಿಕಾರಿಯಾಗಿ ಕಲಿಮಯ್ಯ ಆಳುತ್ತಿರುವುದನ್ನು ಹೇಳುತ್ತದೆ.[೧೫೭]

**ಹಿರಿಯ ದಂಡನಾಯಕ ವತ್ಸರಸ**

ಬೆಣ್ಣಿಹಳ್ಳಿಯ ಕ್ರಿ.ಶ. ೧೧೪೮ರ ಶಾಸನ ಹಿರಿಯ ದಂಡನಾಯಕ ವತ್ಸರಸ ಮನ್ನೆಯ ನಾಚಿದೇವ, ಅಲ್ಲಮರಸರು ವೀರಪಾಂಡ್ಯನ ಆಡಳಿತದಲ್ಲಿ ಇರುವುದನ್ನು ದಾಖಲಿಸುತ್ತದೆ. ವೀರಪಾಂಡ್ಯನ ಕಾಲದಲ್ಲಿ ಗ್ರಾಮದ ಆಡಳಿತವನ್ನು ನೋಡಿಕೊಳ್ಳುತ್ತಿದ್ದ ಗೌಡ ಹೆಗ್ಗಡೆ, ಪೆರ್ಗಡೆ, ನಾಡಪ್ರಭುಗಳನ್ನು ಇಲ್ಲಿ ಗುರುತಿಸಲಾಗಿದೆ.

ಕೋಳಹಾಳು ಗ್ರಾಮದ ಬಮ್ಮಗೌಡನ ಪುತ್ರ, ಬೆನಕಗೌಡ, ಬೊಮ್ಮಗೌಡನ ಪುತ್ರ ಮುದ್ದಗೌಡ, ಆನೆಕೊಂಡ ಗ್ರಾಮದ, ನಾಗಬೋವ, ಸಿಂಗಬೋವ, ಮಾಚಿಬೋವ ಅರ್ಯ್ಯಬೋವ, ಕರಿಯ ರೇಚಿಯಬೋವ, ಗೋನಿಬೋವ, ಬಂಮಬೋವ, ಚಿಚಟ್ಟಿಯ ಕೊವೆಯರಬೋವ, ಸಂಧಿವಿಗ್ರಹಿ ಶಂಕರದೇವ, ಗಂಗನರಸಿಯ ಅರಸಿಕೆರೆ ಅಬ್ಬಗೌಡ, ಗಂಗಗೌಡ, ಬಮ್ಮಗೌಡ, ಮಾಳಗೌಡ, ಮುದ್ದೆಗೌಡ, ಸಾತನಗೌಡ, ಕಲ್ಲಗೌಡ, ಹಿರೆಯಗೌಡ, ಉಚ್ಚಂಗಿ ತೆಂಕಣದೆಸೆಯಲ್ಲಿ ಪೆರ್ಗಡೆ ವೀರನಾಗೇಶ್ವರ, ಉಲುವತ್ತಿಯ ನಾಡಪ್ರಭು ಸಿಂಗಗಾಂವುಂಡನ ಮಗ ಅಜ್ಜಗೌಡ, ಉತ್ತಂಗಿಯ ಬೀರಗಾವುಂಡ ಹೆಗ್ಗಡೆ ವಬೋಚಿರಾಜ ಸೇನಾವರ ದಂಡನಾಯಕ ಲಿಮಯ್ಯನಾಯಕ. ಬಾಗಳಿ ಗ್ರಾಮದ ಸೇನಬೋವ ಸಂಕಣ, ಬಾಡಬೆಣ್ಣೆಊರು ಮಲ್ಲರಸ, ಕೊಟ್ಟೂರ್ವ್ವಡೆಯ ರಾಮದೇವ, ದೊಡ್ಡಬಾಣಗೆರೆಯ ಎರಕ ಮಾರಗೌಡ, ಮದಲೂರಿನ ಮಾಚಿಗಾವುಂಡ, ಮಾದಗಾವುಂಡ ಬಚ್ಚಯ್ಯ ಮೊದಲದ ಆಡಳಿತ ವರ್ಗದವರನ್ನು ಶಾಸನಗಳು ತಿಳಿಸುತ್ತವೆ.

**ಧಾರ್ಮಿಕ ಕಾರ್ಯಗಳು**

ಜಗದೇಕಮಲ್ಲ ವೀರಪಾಂಡ್ಯ ತನ್ನ ೨೦ ವರ್ಷಗಳ ಆಡಳಿತದಲ್ಲಿ ರಾಜ್ಯ ಸಂಘಟನೆಯ ಜೊತೆಗೆ ತನ್ನ ಆಡಳಿತ ವರ್ಗದ ಪರಿವಾರದೊಂದಿಗೆ ಅನೇಕ ಜನಪರವಾದ ಸಮಾಜಮುಖಿ ಕಾರ್ಯಗಳನ್ನು ಪಾಲಿಸಿದ್ದನು. ಹರಿಹರದ ಶ್ರೀ ಶಂಕರನಾರಾಯಣದೇವರು ಆತನ

ಮನೆದೇವರಾಗಿತ್ತು. ಹಾಗಾಗಿ ತನ್ನ ಶಾಸನಗಳಲ್ಲಿ ಶಂಕರನಾರಾಯಣ ದೇವರ ಚರಣ ಸ್ಮರಣ ಪರಿಣಾತಾಂತಃಕರಣಂ ಎಂದು ಹೇಳಿಕೊಂಡಿದ್ದಾರೆ. ತನ್ನ ಮನೆದೇವರ ಕೈಂಕರ್ಯಕ್ಕೆ, ಸತ್ರಕ್ಕೆ, ಬ್ರಾಹ್ಮಣರಿಗೆ ದಾನ ಬಿಡುತ್ತಾನೆ. ವೀರಪಾಂಡ್ಯ ತನ್ನ ರಾಣಿ ಮಹಾದೇವಿಯೊಂದಿಗೆ ಅಲಗಿಲವಾಡ ಗ್ರಾಮಕ್ಕೆ ಭೇಟಿ ನೀಡಿ ಊರೊಡೆಯರ ಕೋರಿಕೆಯಂತೆ ಎರಡು ಕೆರೆ ಮಾಡಿಸಿ ಅಲ್ಲಿಯ ಕಲಿದೇವರಿಗೆ ದಾನ ಬಿಡುತ್ತಾರೆ.[೧೫೮] ವೀರಪಾಂಡ್ಯ ಮಾಹದೇವಿ ಬಮ್ಮಗೌಡನ ಪತ್ನಿ ಮಾಳವ್ವೆ ಸಾತಿಕವ್ವೆ ಕಲ್ಲಗೌಡನ ಪತ್ನಿ ಉಮಾದೇವಿ ಮೊದಲಾದವರು ಅರಸಿಕೆರೆಯ ಮಾದೇಶ್ವರ ದೇವರಿಗೆ ದಾನ ಬಿಡುತ್ತಾರೆ.[೧೫೯]

ಅಂಬಳಿಯಲ್ಲಿ ಜ್ಞಾನ ಪ್ರಕಾಶ ಭಟ್ಟಾರಕರು ನರಸಿಂಹ ದೇವಾಲಯವನ್ನು ಮಾಡಿಸಿ ದೇವರಿಗೆ ದಾನ ಬಿಡುತ್ತಾರೆ. ಕೊಟ್ನೆಕಲ್ಲು ಕೋಟಿಶಂಕರ ದೇವರಿಗೆ ಸೇವಾಕಾರ್ಯಗಳಿಗೆ ಮತ್ತು ಬ್ರಾಹ್ಮಣರ ಆಹಾರಕ್ಕೆ ವೀರಪಾಂಡ್ಯನ ಮಾವ ವಿಕ್ರಮಾದಿತ್ಯ ಕೊಟ್ಟಿಗನೂರ ಗ್ರಾಮವನ್ನು ದಾನ ನೀಡಿದ. ಚಟ್ನಹಳ್ಳಿಯಲ್ಲಿ ನೊಯ್ಯೇಶ್ವರ ದೇವರ ಸತ್ರಕ್ಕೆ ವೀರಪಾಂಡ್ಯ ತಂದೆ ರಾಯಪಾಂಡ್ಯನಿಗೆ ಪುಣ್ಯವಾಗಲಿ ಎಂದು ದಾನ ಬಿಡುತ್ತಾರೆ.[೧೬೦] ಉತ್ತಂಗಿಯಲ್ಲಿ ಸೌದರ ಬಸವಯ್ಯ ಮಾಡಿಸಿದ ಬಸವೇಶ್ವರ ದೇವರಿಗೆ ದಾನ ಬಿಡುತ್ತಾರೆ. ವಿಕ್ರಮಾದಿತ್ಯರಸನ ಅತ್ತೆ ಕೇತಬ್ಬರಸಿ, ನಾಗಿಯಾಂಡೆಯರಸಿಯರಿಗೆ ದಾನದ ಫಲ ದೊರೆಯಲೆಂದು ಬಾಗಳಿಯ ನರಸಿಂಹ ದೇವರಿಗೆ ವೀರಪಾಂಡ್ಯನ ಮಾವ ವಿಕ್ರಮಾದಿತ್ಯರಸ ದಾನ ಮಾಡುತ್ತಾನೆ. ಬಾಗಳಿಯಲ್ಲಿ ಧರ್ಮವ್ವೆ ಸ್ಥಾಪಿಸಿದ ಲಕ್ಷ್ಮೀನರಸಿಂಹ ದೇವರಿಗೆ ಪುರಾಣ ಹೇಳುವವನಿಗೆ, ಶಾಸ್ತ್ರ ವ್ಯಾಖ್ಯಾನ ಮಾಡುವವನಿಗೆ, ಬ್ರಾಹ್ಮಣ ಭೋಜನಕ್ಕೆ ದಾನ ಕೊಡುತ್ತಾರೆ.[೧೬೧] ಕೊಟ್ಟೂರಿನ ಮಲ್ಲಿಕಾರ್ಜುನ ಮತ್ತು ಡಕ್ಕೇಶ್ವರ ದೇವರುಗಳಿಗೆ ಪೃಥ್ವಿದೇವನನ್ನು ಒಡೆಯನನ್ನಾಗಿ ಮಾಡಿ, ಇದೇ ಗ್ರಾಮದ ಸಿರಿಯಮೇಶ್ವರ ದೇವರು, ಡಕ್ಕೇಶ್ವರ ದೇವರಿಗೆ ಕದಂಬ ಘಟ್ಟಿದೇವನ ಪತ್ನಿ ಶ್ರೀಯಾದೇವಿ, ದಶಬ್ರದುರಾಯನ ಪತ್ನಿ ನಾಗಲಾದೇವಿಯರು ಸೇರಿ ದಾನ ಮಾಡುತ್ತಾರೆ. ಹೀಗೆ ವೀರಪಾಂಡ್ಯ ದೇವಾಲಯಗಳ ನಿರ್ಮಾಣ, ಜೀರ್ಣೋದ್ಧಾರ, ಬ್ರಾಹ್ಮಣರ ಅಗ್ರಹಾರಗಳಿಗೆ, ವಿದ್ಯಾರ್ಥಿಗಳ ಶಿಕ್ಷಣ ಆಹಾರಕ್ಕೆ ಮತ್ತು ಕೆರೆ, ಬಾವಿ, ಕಾಲುವೆಗಳನ್ನು ನಿರ್ಮಿಸಿ ಅವುಗಳ ನಿರ್ವಹಣೆಗೆ ದಾನ ಬಿಡುವ ಮೂಲಕ ಅನೇಕ ಜನಹಿತ ಧಾರ್ಮಿಕ ಕಾರ್ಯಗಳನ್ನು ಮಾಡಿರುವುದು ಆತನ ಶಾಸನಗಳಿಂದ ತಿಳಿಯುತ್ತದೆ. ತನ್ನ ಆಳ್ವಿಕೆಯನ್ನು ಶಾಶ್ವತವಾಗಿ ನೆನಪಿಸಲು ತನ್ನ ಹೆಸರಿನಲ್ಲಿ ವೀರಪಾಂಡ್ಯ ಮಠವನ್ನು ಮತ್ತು ವೀರಪಾಂಡ್ಯಪುರವನ್ನು ನಿರ್ಮಿಸಿದನು.

### ವ್ಯಕ್ತಿತ್ವ

ವೀರಪಾಂಡ್ಯನ ಗುಣ ಸ್ವಭಾವಗಳನ್ನು ಕೆಲವು ಶಾಸನಗಳು ಅತ್ಯಂತ ವಿಶಿಷ್ಟವಾಗಿ ವರ್ಣಿಸುತ್ತವೆ. ಕ್ರಿ.ಶ. ೧೧೪೮ರ ಹರಿಹರ ಶಾಸನ ರಾಯಪಾಂಡ್ಯನ ರಾಣಿ ಸೋವಲದೇವಿ ದರ್ಪದಿಂದ ಉಬ್ಬಿಹೋದ ಶತ್ರು ರಾಜ್ಯದ ರಾಜರ ಪ್ರಾಣವಾಯುವಿನ ಆಸ್ವಾದನದಿಂದ

ಸ್ವಾಧೀನರಾದ ಶತ್ರುಗಳ ತೋಳುಗಳೆಂಬ ಸರ್ಪಶಿರಸ್ಸಿನಲ್ಲಿ ವಿಶ್ವದ ಭಾರವನ್ನಿಟ್ಟು ಇಡೀ ಜಗತ್ತನ್ನು ವ್ಯಾಪಿಸಿರುವ ಬೆಳದಿಂಗಳಿನಂತೆ ನಿರ್ಮಲವಾದ ಕೀರ್ತಿಯುಳ್ಳ ಹಾಗೂ ಕಲಾನಿಧಿಯಾದ ಶ್ರೀವೀರಪಾಂಡ್ಯ ರಾಜನಿಗೆ ರಾಯಪಾಂಡ್ಯ ಮತ್ತು ಸೋಮದೇವಿ ಜನ್ಮಕೊಟ್ಟಳು. ತಮ್ಮ ಪತಿಗಳು ಇವನ ಖಡ್ಗವೆನ್ನುವ ಕಾಳಸರ್ಪಕ್ಕೆ ತುತ್ತಾಗವುದೆಂದು ಹೆದರಿ ಅವರ ಪ್ರಾಣ ರಕ್ಷಣೆಗಾಗಿ ಶತ್ರುಪತ್ನಿಯರಿಂದ ಪ್ರಾರ್ಥಿತನಾದ. ಮೂರು ವೇದಗಳನ್ನು ಅಭ್ಯಾಸ ಮಾಡಿದ ವೀರಪಾಂಡ್ಯ ನೃಪನ ಶೌರ್ಯವನ್ನು ಯಾರು ತಾನೇ ವರ್ಣಿಸಲು ಸಾಧ್ಯ.?[೮೬]

ಪಂಡಿತ ಪಾಂಡ್ಯ ರಾಜನ ಒಡಹುಟ್ಟಿದವನೂ ಸಮಸ್ತ ಕಲೆಗಳನ್ನು ತಿಳಿದವನೂ ವೀರರಾದ ಶತ್ರುರಾಜರಿಂದ ನಮಸ್ಕೃತನೂ, ದೇವಬ್ರಾಹ್ಮಣ ಗುರುಗಳ ಪಾದ ಸೇವಾ ರೀತಿಯನ್ನು ತಿಳಿದವನೂ ಆದವನೂ ವೀರಪಾಂಡ್ಯದೇವ ಈ ಲೋಕದಲ್ಲಿ ಮಹಿಮೆಯನ್ನು ಹೊಂದಿ ಕೀರ್ತಿ ಪಡೆದ ಹೆಸರುಳ್ಳ ಆದಿತ್ಯ ದಂಡನಾಥನು ಚಕ್ರವರ್ತಿ ಅನುಗ್ರಹಿಸಲು ಮಹಾಪ್ರಧಾನ ಶಿಖಾಮಣಿಯೆನಿಸಿದನು. ಆ ಪ್ರಧಾನಿಯ ಮಗಳು ಗಂಗಾದೇವಿ. ಆಕೆ ಕುಲರೂಪಗುಣ ಗೌರವದಿಂದ ವೀರಪಾಂಡ್ಯನ ಮಹಾದೇವಿಯೆನಿಸಿ ಕೀರ್ತಿಯನ್ನು ಪಡೆದಳು. ಅತಿಶಯವಾದ ಕರುಣೆಯಿಂದ ಶಂಕರನು ಹಿರಿಯರಸಿಯ ಇಷ್ಟಾರ್ಥ ಪೂರ್ತಿಯನ್ನುಂಟು ಮಾಡಲಿ. ನಮಸ್ಕರಿಸಿದ ಇಂದ್ರ, ಉಪೇಂದ್ರ, ಚಂದ್ರನೇ ಮೊದಲಾದ ದೇವತಾಶ್ರೇಷ್ಠ ಕಿರೀಟಗಳ ಕೆಂಪಾದ ಕಿರಣಗಳು ಸತೀದೇವಿ ಎತ್ತಿದ ಆರತಿಯಂತಿರಲು, ಗಂಗೆಯನ್ನು ತಲೆಯಲ್ಲಿ ಧರಿಸಿ ಪ್ರಕಾಶಿಸುತ್ತಿರುವವನೂ ವಿದ್ವಾಂಸರ ಸ್ತೋತ್ರಕ್ಕೆ ಪಾತ್ರನಾದವನೂ ಆದ ತ್ರಿನೇತ್ರನು ಗಂಗಾವಧುವಿನ ಮನಸ್ಸಿನ ಬಯಕೆಯನ್ನು ಪೂರೈಸಲಿ.

ಅರಳಿದ ಕಮಲಕ್ಕೆ ಸಮನಾದ ಕಣ್ಣುಳ್ಳವಳೂ, ವಿಕ್ರಮಾದಿತ್ಯನ ತಂಗಿಯೂ, ವಿದ್ವಾಂಸರಿಗೆ ಕಲ್ಪವೃಕ್ಷದಂತಿರುವವಳೂ ಆದ ವಿಜಯಾದೇವಿ ವೀರಪಾಂಡ್ಯನ ರಾಣಿಯೆನಿಸಿ ಕೀರ್ತಿ ಪಡೆದಳು. ನೀರು, ಆಕಾಶ, ಭೂಮಿ, ಸೂರ್ಯ, ಅಗ್ನಿ, ಚಂದ್ರ, ವಾಯುಗಳ ಸ್ವರೂಪನೂ, ಅಗ್ನಿ, ಸೂರ್ಯ, ಚಂದ್ರರನ್ನೇ ಮೂರು ಕಣ್ಣಾಗಿ ಉಳ್ಳವನೂ, ದೇವ ಗಂಗಾನದಿಯ ಪ್ರವಾಹದ ಮೇಲೇಳುವ ಅಲೆಗಳು ಚಾಮರದಂತೆ ಬೀಸುವ ಕಾಂತಿಯನ್ನುಳ್ಳ ಚಂದ್ರನನ್ನು ತಲೆಯಲ್ಲಿ ಧರಿಸಿರುವ ವಿಭುವಾದ ಶಂಕರನು ಅತಿಶಯವಾದ ಕರುಣೆಯಿಂದ ವಿಜಯಾದೇವಿಗೆ ಅವಳ ಇಷ್ಟಾರ್ಥವನ್ನು ಕೈಗೂಡಿಸಲಿ. ಕೊಬ್ಬಿದ ಶತ್ರುಗಳ ಅತಿಶಯವಾದ ಶೌರ್ಯವನ್ನು ಮುರಿದು, ಚಕ್ರವರ್ತಿಯಿಂದ ವೀರಪಾಂಡ್ಯದೇವನು ಜಗದೇಕಮಲ್ಲನೆಂಬ ಬಿರುದನ್ನು ಪಡೆದನು. ವೀರಪಾಂಡ್ಯದೇವನು ಸಾಮಾನ್ಯನಲ್ಲ. ಗಂಗ, ಕಳಿಗಂ, ವಂಗ(ಬಂಗಾಳ), ಮರು, ಗುರ್ಜರ, ಕೇರಳ, ಚೇರ, ಚೋಳ, ಗೌಡ, ಅಂಗ, ವರಾಟ, ಲಾಟ, ಖಸ, ಬರ್ಬರ, ಕೋಸಳ, ಪುಂಡ್ರ, ಪಾರಸಿಕ, ಕೊಂಗಣ, ಕೊಂಗ, ಕೊಂಕಣ, ಕುರು, ಪ್ರಥರ, ಆಂಧ್ರ, ತುರುಷ್ಕ, ಮಾಗಧ - ಇವರೇ ಮೊದಲಾದ ರಾಜರ ಸಮೂಹವನ್ನು ಅದಿರಿಸಿದ ಶೂರ ಈತ. ವೀರಪಾಂಡ್ಯನ ಹರಿತವಾದ ಕತ್ತಿಯಿಂದ ತುಂಡಾದ ಆನೆಗಳ ಕುಣಿಯುವ ದಂತಗಳ ಚಕ್ಕೆಗಳಿಂದ, ಶತ್ರುಗಳು ಧರಿಸಿದ್ದ ಅತಿಶಯವಾದ ಹೇಮಾಭರಣಗಳ ಕಾಂತಿ ಕಿರಣದಿಂದ ಅವರ ಬಾವುಟ, ಅಸ್ತ್ರ,

ಕವಚ, ಬಟ್ಟೆಗಳ ಚಿತ್ರ ವಿಚಿತ್ರವಾದ ಕಾಂತಿಯಿಂದ, ಅವರ ರಕ್ತದ ಮಡುವಿನ ಪ್ರವಾಹದಿಂದ ಯುದ್ಧರಂಗ ಬಿಳುಪು, ಕಂದು ಬಣ್ಣ, ವಿವಿಧ ವರ್ಣ ಹಾಗೂ ಕೆಂಪು ಬಣ್ಣದಿಂದ ಕೂಡಿದ್ದಾಗಿದೆ. ವಿಜಯಲಕ್ಷ್ಮಿಯ ವಲ್ಲಭನಾದ ಪಾಂಡ್ಯರಾಜನ ಅತಿಶಯವಾದ ತೋಳ್ಬಲದಿಂದ ಭಯಗೊಂಡ ವೈರಿ ಜನರ ದೇಶಗಳಲ್ಲಿ ತಿಲಕ (ಹಣೆಗಿಟ್ಟುಕೊಳ್ಳುವ ಚಿಹ್ನೆ; ಕುಂಕುಮವೆಂದೂ ಆಗಬಹುದು), ಪುನ್ನಾಗ (ಮದ್ದಾನೆ), ಅಂಜನ (ಕಾಡಿಗೆ), ಸ್ಯಂದನ (ರಥ), ಧ್ವಜ (ಬಾವುಟ), ಬಾಣ + ಆಸನ (ಬಿಲ್ಲು), ಸಾಲ (ಕೋಟೆ), ಕಾಂಚನ (ಬಂಗಾರ ಹಾಗೂ ಭಂಡಾರ), ಸಿತಚ್ಛತ್ರ (ಬೆಳ್ಗೊಡೆ) ಎಂಬ ಈ ರಾಜೋಪಕರಣಗಳು ಮರಗಳ ಹೆಸರಿನಲ್ಲಿ ಉಳಿದವೇ ಹೊರತು ಬೇರೆ ವಸ್ತು ಸಮೂಹಗಳ ಹೆಸರುಗಳಲ್ಲಿ ಉಳಿಯಲಿಲ್ಲ. (ತಿಲಕ, ಪುನ್ನಾಗ, ಅಂಜನ, ಸ್ಪಂದನ, ಧ್ವಜ, ಬಾಣಾಸನ, ಸಾಲ, ಕಾಂಚನ, ಸಿತಚ್ಛತ್ರ - ಇವುಗಳ ಮರಗಳ ಹೆಸರೂ ಹೌದು) ಹೆದರದೆ ಎದುರಿಸಿ ಯುದ್ಧ ಮಾಡುವ ಶೂರರನ್ನು ಅಟ್ಟಿಸಿಕೊಂಡು ಹೋಗಿ ಹೆದರಿಹೋಗುವಂತೆ ಮಾಡಿದ, ಸಮಸ್ತ ದಿಕ್ಕುಗಳನ್ನೂ ವ್ಯಾಪಿಸಿದ ಯಶಸ್ಸಿನಿಂದ ಅತಿಶಯವಾಗಿ ಪಾಂಡ್ಯರಾಜನು ಶೋಭಿಸುತ್ತಿದ್ದಾನೆ. ಇಂದ್ರ ಮತ್ತು ಉಪೇಂದ್ರರಿಂದ ವಂದ್ಯನೂ, ಆಕಾಶಗಂಗೆಯ ಅಲೆಗಳಿಂದ ಮೇಲೇಳುತ್ತಿರುವ ತುಂತುರಿನ ನೀರಿನಿಂದಲೂ ಮತ್ತು ಹೊಳೆಯುವ ನಕ್ಷತ್ರಗಳಿಂದಲೂ ಪರಿವೃತನಾದ ಬಾಲಚಂದ್ರನಿಂದ ಪ್ರಕಾಶಿಸುವ ಜಟಾಜೂಟದ ಪ್ರದೇಶವುಳ್ಳವನೂ, ಆಕಾಶವೇ ಕೇಶವಾಗಿವುಳ್ಳವನೂ, ಪಾರ್ವತಿಯ ಜೀವಿತೇಶನೂ ಆದ ಶಂಕರನು ಅತಿಯಾದ ಕರುಣೆ ದೋರಿ ಪಾಂಡ್ಯರಸನೇ, ನಿನಗೆ ದೀರ್ಘಾಯುವನ್ನೂ ಸಂಪತ್ತನ್ನು ದಯಪಾಲಿಸಲಿ.

ಉತ್ಪ್ರೇಕ್ಷೆಯಿಲ್ಲದೆ ಸಹಜವಾಗಿ ಸ್ತೋತ್ರ ಮಾಡುವ ಜನರಿಂದ ಸ್ತುತ್ಯನಾದ ನಿತ್ಯೋದಯವುಳ್ಳ, ಭೀತರಾದ ಶತ್ರುಗಳ ಎದುರಿನಲ್ಲಿ ತನ್ನ ಅತಿಶಯವಾದ ಪ್ರತಾಪದ ಬಿಸಿ ತೋರಿಸಿರುವ, ಪ್ರಕಾಶಮಾನವಾದ ಯಾದವಕುಲವೆನ್ನುವ ಉದಯಪರ್ವತದ ಶಿಖರದಲ್ಲಿ ಸ್ಥಿರವಾಗಿರುವ, ದಿಕ್ಕುದಿಕ್ಕುಗಳಲ್ಲಿ ತನ್ನ ತೇಜಸ್ಸನ್ನು ಬೀರುತ್ತಿರುವ ಶ್ರೀ ಪಾಂಡ್ಯನೆಂಬ ಪ್ರಖರಸೂರ್ಯನಿಗೆ ಮಂಗಳವಾಗಲಿ.

ಶ್ರೀಯುತ ಪಾಂಡ್ಯದೇವನೇ, ನಿನಗೆ ನಮಸ್ಕರಿಸುವ ರಾಜರ ಚೂಡಾಮಣಿಗಳ ಸಾಲುಗಳಲ್ಲಿ ಹೊಳೆಯುವ ರತ್ನಗಳ ಕಿರಣಗಳಿಂದ ಕೆಂಪಾದ ಚರಣವುಳ್ಳವನೇ, ನೀನು 'ಆಚಂದ್ರಾರ್ಕತಾರಂಬರಂ' ಜೀವಿಸು. ನೀನು ತೋರುವ ಪ್ರೀತಿಯಿಂದ ಸಂತುಷ್ಟರಾದ ವಂದಿ ಮಾಗಧ ಮತ್ತು ವಿದ್ವಾಂಸರ ಪ್ರಶಸ್ತಿಯಿಂದ ಪ್ರಸಿದ್ಧವಾದ ಹಾಗೂ ಸಾರವತ್ತಾದ ಸ್ತೋತ್ರವುಳ್ಳ ಅಲ್ಲದೆ ಮನೋಹರವಾದ ಶೀಲವುಳ್ಳ ನಿನಗೆ ಚಿರಕಾಲ ಮಂಗಳವಾಗಲಿ.

ಪಾಂಡ್ಯರಾಜನೇ ದೇವಗಂಗಾನದಿಯ ಕುಣಿಯುವ ಅಲೆಗಳ ಅತಿಶಯತೆಯಿಂದ ಕೂಡಿ ಚಂದ್ರಕಲೆಗಳ ಕಾಂತಿ ಸಮೂಹದಿಂದ ಶೋಭೆಹೊಂದಿದ ವಾಮಾಂಬಕನೂ, ಕೆಂಪಾದ ಮಣಿಯಿಂದ ಹೊಳೆಯುವ ಆದಿಶೇಷನ ವಿಸ್ತಾರವಾದ ಕಾಂತಿಯಿಂದ ಸ್ಫುಟಗೊಂಡ ಜಟಾಜೂಟವುಳ್ಳ ದೇವದೇವನಾದ ಈಶ್ವರನು ನಿನ್ನ ಬಯಕೆಯನ್ನು ಕೈಗೂಡಿಸಲಿ.

ಲಕ್ಷ್ಮೀಗೌರೀದೇವಿಯವರಿಗೆ ಪ್ರಿಯರಾದವರು, ಕಮಲ ಮತ್ತು ಸೂರ್ಯನೇ ಕಣ್ಣಾಗಿ ಉಳ್ಳವರು, ಪೀತಾಂಬರ ಚರ್ಮಾಂಬರಧಾರಿಗಳು, ಗರುಡನಂದಿವಾಹನರು, ಕೃಷ್ಣ(ನೀಲಿ) ಶ್ವೇತಾಂಗ(ಬಿಳಿಯ)ರು, ಕ್ಷೀರಸಮುದ್ರ ಹಿಮಾಲಯಗಳೇ ಮನೆಯಾಗಿ ಉಳ್ಳವರು ಆದ ಹರಿಹರರು ಯದುರಾಜವಂಶ ತಿಲಕನಾದ ಶ್ರೀ ವೀರಪಾಂಡ್ಯನಿಗೆ ಪ್ರೀತಿಯಿಂದ ಸೂರ್ಯ ಚಂದ್ರರಿರುವವರೆಗೆ ಆನಂದವನ್ನೂ ಶುಭಗಳನ್ನೂ ಉಂಟು ಮಾಡಲಿ.

ಶ್ರೀ ಶಂಕರನಾರಾಯಣ ದೇವರ ಪಾದಸ್ಮರಣೆಯಿಂದ ಪಕ್ವವಾದ ಮನಸ್ಸುಳ್ಳವನೂ, ಯಾದವನಾರಾಯಣನೂ ಇವೇ ಮೊದಲಾದ ಹೆಸರಿನ ಪ್ರಶಸ್ತಿಯಿಂದ ಕೂಡಿದ ಶ್ರೀಮನ್ಮಹಾ ಮಂಡಲೇಶ್ವರ ಜಗದೇಕಮಲ್ಲ ವೀರಪಾಂಡ್ಯದೇವರು ನೊಳಂಬವಾಡಿ ಮುವ್ವತ್ತೆರಡು ಸಾವಿರ ಮೊದಲಾಗಿ ಹಲವು ದೇಶಗಳನ್ನು ಕುಮಾರವೃತ್ತಿಯಿಂದ ಆಳಿ ಸುಖಸಂಕಥಾವಿನೋದದಿಂದ ರಾಜ್ಯಭಾರ ಮಾಡುತ್ತಿದ್ದು[೬೩] ಎಂದು ಶಾಸನಗಳು ವೀರಪಾಂಡ್ಯನನ್ನು ಮನದಣಿಯೆ ವರ್ಣಿಸಿವೆ. ಕ್ರಿ.ಶ. ೧೧೬೨ರ ನಂತರ ವೀರಪಾಂಡ್ಯನ ಶಾಸನಗಳು ಸಿಗುವುದಿಲ್ಲ. ತನ್ನ ಸಾಮಂತನಾಗಿ ಆಡಳಿತ ನಡೆಸುತ್ತಿದ್ದ ಸಹೋದರ ವಿಜಯಪಾಂಡ್ಯ ಅಥವಾ ಕಾಮದೇವ ಆನಂತರ ಅಧಿಕಾರಕ್ಕೆ ಬಂದ. ವೀರಪಾಂಡ್ಯ ಆದಿತ್ಯ ದಂಡನಾಥನ ಮಗಳು ಗಂಗಾದೇವಿ ಮತ್ತು ಗುತ್ತ ವಂಶದ ವಿಕ್ರಮಾದಿತ್ಯನ ಸಹೋದರಿ ವಿಜಯದೇವಿಯರನ್ನು ವಿವಾಹವಾಗಿದ್ದನು. ಇವರಿಗೆ ಜನಿಸಿದ ಮಕ್ಕಳ ಬಗ್ಗೆ ಯಾವುದೇ ಮಾಹಿತಿ ಸಿಗುವುದಿಲ್ಲ ಮತ್ತು ವೀರಪಾಂಡ್ಯನ ಕೊನೆಯ ದಿನಗಳ ಬಗ್ಗೆ ಸ್ಪಷ್ಟತೆಯಿರುವುದಿಲ್ಲ.

ಕಳಚೂರಿ ಬಿಜ್ಜಳ, ಹೊಯ್ಸಳ ವೀರನರಸಿಂಹರಿಂದ ನೊಳಂಬವಾಡಿ-೩೨೦೦೦ ಪ್ರಾಂತ್ಯವನ್ನು ರಕ್ಷಿಸಿ ನಾಲ್ಕನೇ ಸಹೋದರ ಕಾಮದೇವನಿಗೆ ಪಾಂಡ್ಯ ನಾಡಿನ ಆಡಳಿತವನ್ನು ವಹಿಸಿದನು. ಮೂರನೇ ಸಹೋದರ ಪಲಮಾಂದ ಅಥವಾ ಪಳಮಾಂದ ಪಾಂಡ್ಯ ಆಡಳಿತದಿಂದ ದೂರ ಉಳಿದಂತೆ ಕಾಣುತ್ತದೆ. ವೀರಪಾಂಡ್ಯನ ೨೦ ವರ್ಷಗಳ ಆಡಳಿತ ಶಾಂತಿಯುತವಾಗಿತ್ತು ಮತ್ತು ಹೆಚ್ಚು ಸುಭೀಕ್ಷವಾಗಿತ್ತು. ಉಚ್ಚಂಗಿದುರ್ಗ ಪಾಂಡ್ಯರ ರಾಜಧಾನಿಯಾಗಿ ಶತ್ರುರಾಜ್ಯರಿಗೆ ಭದ್ರ ಕೋಟೆಯಾಗಿತ್ತು. ಸಾಮಂತರೊಂದಿಗೆ ವೈವಾಹಿಕ ಸಂಬಂಧಗಳನ್ನು ಬೆಳೆಸಿಕೊಂಡು ನೊಳಂಬವಾಡಿ ಆಡಳಿತಕ್ಕೆ ಹೊಸ ಮೆರುಗನ್ನು ನೀಡಿದ್ದುದು ಗಮನಾರ್ಹ.

**ಪಳಮಾಂದ ಪಾಂಡ್ಯ-II**

ಪಳಮಾಂದ ಪಾಂಡ್ಯನು ವೀರಪಾಂಡ್ಯ ಮತ್ತು ವಿಜಯಪಾಂಡ್ಯ ದೇವರ ಒಡಹುಟ್ಟಿದವನು. ರಾಯಪಾಂಡ್ಯನ ಮೂರನೇ ಮಗನಾದ ಪಲಮಾಂದ ಪಾಂಡ್ಯನನ್ನು ಹರಿಹರದ ಶಾಸನ ಉಲ್ಲೇಖಿಸುತ್ತದೆ. ಬಿಲ್ಲವರಾಯನ ಮಗಳಾದ ಸೋವಲದೇವಿ ಹಾಗೂ ರಾಯಪಾಂಡ್ಯರು ಪಳಮಾಂದಪಾಂಡ್ಯನಿಗೆ ಜನ್ಮಕೊಟ್ಟರು. ಈ ರಾಜನ ಒಡಹುಟ್ಟಿದವನೂ ಸಮಸ್ತ ಕಲೆಗಳನ್ನು ತಿಳಿದವನೂ ಶತ್ರುರಾಜರಿಂದ ನಮಸ್ಕೃತನಾದ ವೀರಪಾಂಡ್ಯದೇವ ಇವನ ಒಡಹುಟ್ಟಿದವನು. ಉದಾರಚರಿತನೂ ಮದಿಸಿದ ಶತ್ರುರಾಜರನ್ನು ಗೆದ್ದವನೂ ಆದ ಪಳಮಾಂದ ಪಾಂಡ್ಯ-II ಈ

ಪಾಂಡ್ಯನ ತಮ್ಮ ಕೊಬ್ಬಿದ ಶತ್ರುಗಳನ್ನು ಸೀಳುವುದರಲ್ಲಿ ಸಮರ್ಥನೆನಿಸಿದ ಕಾಮದೇವ[೧೬೪] ಎಂದು ಉಲ್ಲೇಖಿಸುತ್ತದೆ. ರಾಯಪಾಂಡ್ಯನ ನಾಲ್ವರು ಮಕ್ಕಳಲ್ಲಿ ಹಿರಿಯ ಮಗ ಪಂಡಿತಪಾಂಡ್ಯ ಮೂರನೆಯ ಮಗ ಪಳಮಾಂದ ಪಾಂಡ್ಯರು ಪಾಂಡ್ಯವಂಶದ ಆಡಳಿತವನ್ನು ವಹಿಸಿಕೊಳ್ಳಲಿಲ್ಲ. ಪಾಂಡಿತ್ಯದ ಒಲವಿನಿಂದಾಗಿ ಪಂಡಿತ ಪಾಂಡ್ಯ ಅಧಿಕಾರದಿಂದ ದೂರ ಉಳಿದ. ಆದರೆ ಪಳಮಾಂದ ಪಾಂಡ್ಯ ಅಧಿಕಾರದಿಂದ ದೂರವಿದ್ದುದಕ್ಕೆ ಏನು ಕಾರಣವೆಂಬುದು ತಿಳಿಯುವುದಿಲ್ಲ. ಹರಿಹರ ಶಾಸನ ಮಾತ್ರ ಈತನ ಬಗ್ಗೆ ಮಾಹಿತಿ ನೀಡುತ್ತದೆ. ಶತ್ರು ರಾಜನನ್ನು ಗೆದ್ದವನೆಂದು ಹೇಳಿರುವುದು ಶಾಸನ ವರ್ಣನೆಗೆ ಸೀಮಿತವಾಗಿದೆ.

**ವಿಜಯಪಾಂಡ್ಯ ಅಥವಾ ಕಾಮದೇವ (ಕ್ರಿಶ. ೧೧೬೨ರಿಂದ ೧೧೯೩)**

ವಿಜಯಪಾಂಡ್ಯ ಕ್ರಿಶ. ೧೧೬೨ರಲ್ಲಿ ವೀರಪಾಂಡ್ಯನ ಮರಣದ ನಂತರ ಪಾಂಡ್ಯ ವಂಶದ ಸಾರ್ವಭೌಮತ್ವವನ್ನು ಪಡೆದುಕೊಂಡ. ಈತನನ್ನು 'ಕಾಮದೇವ' ಎಂಬ ಇನ್ನೊಂದು ಹೆಸರಿನಿಂದ ಕರೆಯಲಾಗಿದೆ. ರಾಯಪಾಂಡ್ಯನ ನಾಲ್ಕನೇ ಮಗನಾದ ವಿಜಯಪಾಂಡ್ಯ ತಂದೆ ಮತ್ತು ಅಣ್ಣನ ಆಡಳಿತದಲ್ಲಿ ಭಾಗವಹಿಸಿದ್ದನು. ಈತನ ಸ್ವತಂತ್ರ ಆಡಳಿತದ ಕಾಲಕ್ಕೆ ಚಾಳುಕ್ಯರು ಕಲ್ಯಾಣದ ಮೇಲೆ ಹಿಡಿತವನ್ನು ಕಳೆದುಕೊಂಡಿದ್ದರು. ಕಳಚೂರಿ ಬಿಜ್ಜಳ ಅದರ ಅಧಿಪತಿಯಾಗಿದ್ದ. ಆರಂಭದಲ್ಲಿ ಬಿಜ್ಜಳನ ಸಾಮಂತನಾಗಿ ನಂತರ ಅವರ ಸಾಮಂತತನವನ್ನು ಒಪ್ಪದೇ ಸ್ವತಂತ್ರನಾಗಿ ಆಡಳಿತವನ್ನು ಮುಂದುವರಿಸಿದ. ಸ್ವತಂತ್ರ ಆಡಳಿತದ ಕಾಲದಲ್ಲಿ ಚಾಳುಕ್ಯ ಜಗದೇಕಮಲ್ಲನ ಆಡಳಿತ ಮುಕ್ತಾಯವಾಗಿ ೧೨ ವರ್ಷಗಳು ಕಳೆದಿದ್ದರೂ ಜಗದೇಕಮಲ್ಲ ವಿಜಯಪಾಂಡ್ಯ ಎಂಬ ಬಿರುದನ್ನು ಹೊಂದಿ ಆಡಳಿತ ನಡೆಸಿದನು. ಆನಂತರ ಚಾಳುಕ್ಯ ೪ನೇ ಸೋಮೇಶ್ವರನ ಸಾಮಂತನಾಗಿ ತ್ರಿಭುವನಮಲ್ಲ ವಿಜಯಪಾಂಡ್ಯ ಎಂಬ ಬಿರುದನ್ನು ಪಡೆದುಕೊಂಡನು. ಸ್ವಾಮಿನಿಷ್ಠೆಯ ಪ್ರತೀಕವಾಗಿ ಅರಸರ ಬಿರುದುಗಳನ್ನು ಪಡೆದುಕೊಂಡ ವಿಜಯಪಾಂಡ್ಯ ಮಹಾಶೂರನಾಗಿ ಶತ್ರುಭಯಂಕರೆನಿಸಿದ್ದು, ಸಪ್ತಕೊಂಕಣಗಳನ್ನು ಗೆದ್ದು ಕನಕ ಪರ್ವತದ ಮೇಲೆ ಮತ್ಸ್ಯಲಾಂಛನವಿರುವ ಜಯಸ್ತಂಭವನ್ನು ಸ್ಥಾಪಿಸಿ ಕೀರ್ತಿ ಪಡೆದು ಹಿಂದಿನ ದೊರೆಗಳ ಪರಂಪರೆಯನ್ನು ಮುಂದುವರಿಸಿ ಪಾಂಡ್ಯ ವಂಶದ ಬಿರುದುಗಳಾದ ಯದುವಂಶದ್ಯುಮಣಿ, ಪಾಂಡ್ಯಕುಲಕಮಲಮಾರ್ತಂಡ, ಶಂಕರನಾರಾಯಣ ದೇವರ ಪಾದಸ್ಮರಣೆಯನ್ನು ಸದಾ ಅಂತರಂಗದಲ್ಲಿ ಮಾಡುವವನೂ ಭೂತ ಬೇತಾಳಗಳನ್ನು ತನ್ನ ಕಿಂಕರರನ್ನಾಗಿ ಮಾಡಿಕೊಂಡಿದ್ದವನು ರಾಜೀಗಚೋಳನ ಆಸೆಯನ್ನು ಭಂಗಗೊಳಿಸಿದವನ್ನು ಪರಿಚ್ಛೇದಿ ಗಂಡ ಎಂಬುದಾಗಿ ವಿಜಯಪಾಂಡ್ಯ ಕೀರ್ತಿತನಾಗಿದ್ದ. ಹೊಯ್ಸಳ ವೀರಬಲ್ಲಾಳನ ಆರಂಭದ ದಾಳಿಗಳನ್ನು ತಡೆದರೂ ನಂತರ ಆತನ ಸೈನ್ಯಕ್ಕೆ ತತ್ತರಿಸಿ ಶರಣಾಗತನಾದ. ಮುಂದೆ ಪಾಂಡ್ಯರು ಆತನ ಸಾಮಂತರಾಗಿ ಆಡಳಿತ ನಡೆಸಿದರು. ಈವರೆಗೂ ಪ್ರಕಟಗೊಂಡ ೩೭ ಶಾಸನಗಳು ವಿಜಯಪಾಂಡ್ಯನ ಚರಿತ್ರೆಯನ್ನು ಕಟ್ಟಿಕೊಡುತ್ತವೆ.

ವಿಜಯಪಾಂಡ್ಯ ಕ್ರಿ.ಶ. ೧೧೬೨ರಲ್ಲಿ ಪಾಂಡ್ಯ ವಂಶದ ಸಾರ್ವಭೌಮತ್ವವನ್ನು ಪಡೆದಿರುವ ಬಗ್ಗೆ ಗಂಗನರಸಿ ಶಾಸನ ತಿಳಿಸುತ್ತದೆ. ಸ್ವಸ್ತಿ ಶ್ರೀಮನುಮಹಾಮಂಡಳೇಶ್ವರ ವಿಜಯಪಾಂಡ್ಯದೇವರ ರಾಜ್ಯಾಭ್ಯುದಯದ ಕಾಲದ ಹೇಮಳಂಬಿ ಸಂವತ್ಸರದ ಶ್ರಾವಣ ೩ ಅದಿವಾರದಂದು ವಿಶುಸಂಕ್ರಮಣದಂದು ಅರಸಿಯಕೆರೆಯ ಸ್ವಯಂಭುಕಲಿದೇವಸ್ವಾಮಿಯ ನಂದಾದೀವಿಗೆಗೆ ದಾನ ಬಿಡಲಾಗಿದೆ.[೧೬೫] ಇದು ಆತನ ಆಳ್ವಿಕೆಯ ಆರಂಭವನ್ನು ತಿಳಿಸುವ ಮೊದಲ ಶಾಸನವಾಗಿದೆ. ಕ್ರಿ.ಶ. ೧೧೬೨ರ ವಾಸನ ಶಾಸನ ಸ್ವಸ್ತಿಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನ್ಮಹಾಮಂಡಳೇಶ್ವರ ವಿಜಯಪಾಂಡ್ಯ ದೇವರು ನೊಣಂಬಮೂವತ್ತಿಚ್ಛಾಸಿರಮುಮಂ ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ ಎಂದಿದೆ.[೧೬೬]

ಪಾಂಡ್ಯ ವಂಶದ ಸ್ವತಂತ್ರ ಅರಸನಾಗುವ ಪೂರ್ವದಲ್ಲಿ ವಿಜಯಪಾಂಡ್ಯ ಸಹೋದರ ವೀರಪಾಂಡ್ಯನ ಆಡಳಿತದಲ್ಲಿ ಸಾಮಂತನಾಗಿ ಅಥವಾ ಆತನ ಅಧೀನತೆಯಲ್ಲಿ ಕೆಲವು ಭಾಗದ ಆಡಳಿತವನ್ನು ನೋಡಿಕೊಳ್ಳುತ್ತಿದ್ದ. ಕ್ರಿ.ಶ. ೧೧೦೮ರ ಬಾಗಳಿ ಶಾಸನ ಪಾಂಡ್ಯ ವಂಶದ ಪಾರಂಪರಿಕ ಬಿರುದುಗಳನ್ನು ಧರಿಸಿ ಮಹಾಮಂಡಳೇಶ್ವರ ವೀರಪಾಂಡ್ಯದೇವರು ನೊಳಂಬವಾಡಿ-೩೨೦೦೦ನ್ನು ರಾಜ್ಯಂಗೆಯ್ಯುತ್ತಮಿರೆ. ತತ್ಪಾದಪದ್ಮೋಪಜೀವಿ ‖ ಶ್ರೀವಿಜಯಪಾಂಡ್ಯದೇವರು... ವಲ್ಲಭನಹಿತಮಣ್ಡಳೇಶ್ವರಕುಳದ್ರಾವಣ... ವಿಜಯಪಾಂಡ್ಯ ನರೇಶಂಗನುವರ್ತ್ತಿ ಹೆಮ್ಮದಂಡಾಧೀಶ ‖ ಸ್ವಸ್ತಿ ಸಮಸ್ತಪ್ರಶಸ್ತಿಸಹಿತಂ ಶ್ರೀಮನ್ಮಹಾಪ್ರಧಾನಂ ಶ್ರೀಕರಣಂ ಸರ್ವಾಧ್ಯಕ್ಷಂ, ತಂತ್ರಾಧಿಷ್ಠಾಯಕಂ ಮನೆವೆರ್ಗ್ಗಡೆ ಮಹಾಪನಾಹಿತಂ ವಿಜಯಪೆರ್ಮಾಡಿ/ವಿಜಯಹೆಮ್ಮಾಡಿ ದಂಡನಾಯಕರು ಶ್ರೀಮದ್ವಿಜಯಪಾಂಡ್ಯದೇವರ ಮಹಾರಾಜಕಾರ್ಯ್ಯಕ್ರಿಯಾಮಿ..... ಸುಖವಿರಲು[೧೬೭] ಎಂದು ಉಲ್ಲೇಖಿಸುತ್ತದೆ. ವಿಜಯಪಾಂಡ್ಯ ಚಿಕ್ಕವನಿದ್ದ ಕಾರಣಕ್ಕೆ ಆತನ ರಾಜಕಾರ್ಯಗಳನ್ನು ವಿಜಯ ಹೆಮ್ಮಾಡಿ ನೋಡಿಕೊಳ್ಳುತ್ತಿದ್ದ. ಕ್ರಿ.ಶ. ೧೧೧೧ರ ಬೇತೂರು ಶಾಸನ[೧೬೮] ಹಾಗೂ ಕ್ರಿ.ಶ. ೧೧೨೪ರ ಚಿತ್ರದುರ್ಗ ಶಾಸನಗಳು, ಚಾಳುಕ್ಯ ಜಗದೇಕಮಲ್ಲ ಕಲ್ಯಾಣದಲ್ಲಿ ಆಳುತ್ತಿರುವಾಗ ಆತನ ಪಾದಪದ್ಮೋಪಜೀವಿ ಮಹಾಮಂಡಳೇಶ್ವರ ಕಾಂಚೀಪುರಾಧೀಶ್ವರಂ ಯದುವಂ ಸಾಂಬರ ದ್ಯುಮಣಿ, ಸುಭಟಚೂಡಾಮಣಿ, ನಿಜಕುಳಕಮಳಮಾರ್ತ್ತಂಡ, ಪರಿಚ್ಛೇದಿಗಂಡ, ರಾಜೀಗಚೌಳ ಮನೋಭಂಗ ಶ್ರೀಮಜಗದೇಕಮಲ್ಲದೇವಪಾದಾಬ್ಜಭೃಂಗ ವಿಜಯಪಾಂಡ್ಯದೇವರು ನೊಳಂಬವಾಡಿ ಮೂವತ್ತಿರ್ಚ್ಛಾಸಿರಮುಮಂ ದುಷ್ಟನಿಗ್ರಹ ಶಿಷ್ಟ ಪ್ರತಿಪಾಳನೆಯಿಂದ ಉಚ್ಚಂಗಿಯ ನೆಲವೀಡಿನೊಳು ಸುಖಸಂಖತಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ.[೧೬೯]

ಬೇತೂರು ಮತ್ತು ಚಿತ್ರದುರ್ಗ ಶಾಸನಗಳಲ್ಲಿ ವಿಜಯಪಾಂಡ್ಯನನ್ನು ಜಗದೇಕಮಲ್ಲ ದೇವನ ಸಾಮಂತನೆಂದು ಕರೆಯಲಾಗಿದೆ. ಆದರೆ ಈ ಶಾಸನಗಳ ಕಾಲಕ್ಕೆ ಜಗದೇಕಮಲ್ಲ ದೇವನ ಆಡಳಿತ ಇರಲಿಲ್ಲ. ಚಾಳುಕ್ಯ ತ್ರಿಭುವನಮಲ್ಲದೇವ ಕಲ್ಯಾಣದಲ್ಲಿ ಆಡಳಿತ ನಡೆಸುತ್ತಿದ್ದ. ಹಾಗಾಗಿ ಕೆಲವು ವಿದ್ವಾಂಸರು ಪಾಂಡ್ಯ ವಂಶದಲ್ಲಿ ವಿಜಯಪಾಂಡ್ಯ ಎಂಬ ಹೆಸರಿನ ಇಬ್ಬರು ಅರಸರು ಆಡಳಿತ ನಡೆಸಿರಬೇಕೆಂದು ಅಭಿಪ್ರಾಯಪಟ್ಟಿದ್ದಾರೆ. ಪೆರ್ಮಾಡಿ ಜಗದೇಕಮಲ್ಲನ ಆಡಳಿತ ಕ್ರಿ.ಶ. ೧೧೩೮ರಿಂದ ೧೧೪೯ರವರೆಗೆ ಇರುತ್ತದೆ. ಆದರೆ ವಿಕ್ರಮಾದಿತ್ಯನ ಸಹೋದರ ಜಯಸಿಂಹನಿಗೆ

ಜಗದೇಕಮಲ್ಲ ಎಂಬ ಬಿರುದು ಇರುವುದು ಶಾಸನಗಳಿಂದ ತಿಳಿಯುತ್ತದೆ ಹಾಗೂ ಈತ ಸಹೋದರನೊಂದಿಗೆ ಆಡಳಿತದಲ್ಲಿ ಭಾಗವಹಿಸಿರುವ ಬಗ್ಗೆ ಬಿಲ್ಹಣ 'ವಿಕ್ರಮಾಂಕದೇವಚರಿತಂ' ಮತ್ತು ಕೆಲವು ಶಾಸನಗಳು ಉಲ್ಲೇಖಿಸುತ್ತವೆ. ಹುಲ್ಲೂರು ಶಾಸನದಲ್ಲಿ ಶ್ರೀಮತ್ರೈಲೋಕ್ಯ ಮಲ್ಲನೊಳಂಬ ಪಲ್ಲವಪೆರ್ಮ್ಮಾಡಿ ಜಯಸಿಂಘದೇವರು[೧೫] ಎಂದು ಹೇಳಿದೆ. ಕ್ರಿ.ಶ. ೧೧೨೩ರ ಕಬ್ಬೂರು ಶಾಸನ ತ್ರಿಭುವನಮಲ್ಲ ಪಾಂಡ್ಯನನ್ನು ತ್ರಿಭುವನಮಲ್ಲ ವೀರನೊಳಂಬಪೆರ್ಮಾಡಿ ದೇವರ ತಮ್ಮ ತ್ರಿಭುವನಮಲ್ಲ ಪಾಂಡ್ಯ[೧೬] ಎಂದು ತಿಳಿಸುತ್ತದೆ. ವೀರನೊಳಂಬ ಪೆರ್ಮಾಡಿದೇವ ಎಂದರೆ ಚಾಳುಕ್ಯ ಜಯಸಿಂಹ ಆಗಿರುವುದರಿಂದ ಜಯಸಿಂಹನ ಜಗದೇಕಮಲ್ಲ ಎಂಬ ಬಿರುದನ್ನು ಪಾಂಡ್ಯ ವಂಶದ ವೀರಪಾಂಡ್ಯ ಮತ್ತು ವಿಜಯಪಾಂಡ್ಯರು ರಾಯಪಾಂಡ್ಯನ ಸಾಮಂತರಾಗಿದ್ದ ಅವಧಿಯಲ್ಲಿ ಧರಿಸಿದ್ದರು ಎಂಬುದು ಸ್ಪಷ್ಟವಾಗುತ್ತದೆ. ನಂತರ ಚಾಳುಕ್ಯ ಪೆರ್ಮಾಡಿ ಜಗದೇಕಮಲ್ಲ ಅಧಿಕಾರಕ್ಕೆ ಬಂದ ನಂತರ ಈ ಬಿರುದು ವೀರಪಾಂಡ್ಯನಿಗೆ ಮುಂದುವರಿಯಿತು. ಅಲ್ಲದೆ ಬಾಗಳಿ, ಬೇತೂರು, ಚಿತ್ರದುರ್ಗ, ಬನ್ನಿಕೋಡು ಶಾಸನಗಳಲ್ಲಿ ತಿಳಿಸುವ ವಿಜಯಪಾಂಡ್ಯನ ಸಾಮಂತ ಅಧಿಕಾರಿಗಳು ಆತನ ಸ್ವತಂತ್ರ ಆಡಳಿತದ ಅವಧಿಯ ಶಾಸನಗಳಲ್ಲಿ ಕಾಣಿಸಿಕೊಳ್ಳುವುದರಿಂದ ವಿಜಯಪಾಂಡ್ಯ ಎಂಬ ಹೆಸರಿನ ಇಬ್ಬರು ಅರಸರು ಈ ಮನೆತನದಲ್ಲಿ ಆಡಳಿತ ನಡೆಸಿಲ್ಲ ಎಂದು ಸ್ಪಷ್ಟವಾಗುತ್ತದೆ.

೩ನೇ ತೈಲನು ಅಥವಾ ನೂರ್ಮಡಿತೈಲನು ಮರಣ ಹೊಂದಿದ ಮೇಲೆ ಅವನ ಮಗನಾದ ೪ನೇ ಸೋಮೇಶ್ವರನು ಕಲ್ಯಾಣದ ಪಟ್ಟವನ್ನೇರಲಿಲ್ಲ. ಏಕೆಂದರೆ ಚಾಳುಕ್ಯ ಸಾಮ್ರಾಜ್ಯವು ಆ ಕಾಲಕ್ಕೆ ಕಳಚೂರಿ ಬಿಜ್ಜಳನ ವಶವಾಗಿತ್ತು. ಸೋಮೇಶ್ವರನು ನ್ಯಾಯದಿಂದ ಸಾರ್ವಭೌಮ ನಾಗಿದ್ದರೂ ಬಿಜ್ಜಳನು ಕೃತಿಯಿಂದ ಸಾಮ್ರಾಜ್ಯಾಧಿಕಾರಿಯಾಗಿದ್ದನು. ತನ್ನ ಯಜಮಾನನ ಸಾಮ್ರಾಜ್ಯವನ್ನು ಅಪಹರಿಸಿ ತ್ರಿಭುವನಮಲ್ಲ, ಭುಜಬಲ ಚಕ್ರವರ್ತಿ ಮುಂತಾದ ಚಾಳುಕ್ಯ ಬಿರುದುಗಳನ್ನು ಧರಿಸಿ ಆಡಳಿತ ನಡೆಸಿದ. ಈ ಸಮಯದಲ್ಲಿ ಚಾಳುಕ್ಯ ಸಾಮಂತ ಅರಸರು ಬಿಜ್ಜಳನ ಸಾಮಂತರಾಗಿ ಮತ್ತೆ ಕೆಲವರು ಸ್ವತಂತ್ರರಾಗಿ ಆಡಳಿತ ನಡೆಸಿದರು. ವಿಜಯಪಾಂಡ್ಯ ತನ್ನ ಆರಂಭದ ಆಡಳಿತದಲ್ಲಿ ಬಿಜ್ಜಳನ ಸಾಮಂತನಾಗಿದ್ದ ಬಗ್ಗೆ ಶಾಸನಗಳು ಮಾಹಿತಿ ನೀಡುತ್ತವೆ. ಕ್ರಿ.ಶ. ೧೧೬೪ರ ಹರಿಹರ ಶಾಸನ ಕೊಬ್ಬಿದ ಶತ್ರು ಸಮೂಹದ ಪ್ರಾಣವಾಯುಗಳ ಆಹಾರದಿಂದ ಅವನ ಹರಿತವಾದ ಖಡ್ಗವೆಂಬ ಸರ್ವ ತೃಪ್ತಿ ಹೊಂದಿತ್ತು. ವಿದ್ವತ್‌ಶ್ರೇಷ್ಠರನು ತೃಪ್ತಿಗೊಳಿಸಿದುದರ ಫಲವಾಗಿ ಸಂಪಾದಿಸಿದ ದ್ರವ್ಯ ಸಫಲಗೊಂಡಿತು. ಉಜ್ವಲವಾದ ಅವನ ಯಶಸ್ಸು ದಿಗ್ಗಜಗಳು ಕಿವಿಗಳನ್ನು ಕೊರೆದು ಹೊಕ್ಕು ಎಲ್ಲೆಡೆಗಳಲ್ಲಿಯೂ ವ್ಯಾಪಿಸಿತು ಎನಿಸಿದ. ಬಿಜ್ಜಳ ಭೂಮಿಪಾಲನು ಕೀರ್ತಿ ಪಡೆದನು. ಆ ಭೂಪಾಲನ ಸಾಮಂತನೂ ಶತ್ರುಗಳ ಬಾಧೆಯನ್ನು ಪರಿಹರಿಸಿದವನೂ ಉದಾರಿಯೂ ಆದ ವೀರಪಾಂಡ್ಯ. ಆ ಪ್ರಭುವಿನ ತಮ್ಮ ಸಮಸ್ತ ಕಲೆಗಳನ್ನು ತಿಳಿದವನು; ಶತ್ರುರಾಜರಿಂದ ನಮಸ್ಕರಿಸಿಕೊಂಡವನು. ಗುರುಗಳನ್ನು, ಹರಿಹರನನ್ನು, ಬ್ರಾಹ್ಮಣರನ್ನು ಸೇವಿಸಿದವನು ಆದ ನಿಗಳಂಕಮಲ್ಲ ಕಾಮನೃಪಲ ಶೂರರಾದ ಸಾಮಂತರೆಂಬ ಬೆಟ್ಟಕ್ಕೆ ವಜ್ರಾಯುಧದಂತೆ ಇರುವವನೂ ಯುದ್ಧವೀರನೂ ಆದ ವಿಜಯಪಾಂಡ್ಯ

ನೊಳಂಬವಾಡಿ-೩೨,೦೦೦ವನ್ನು ತನ್ನ ಸ್ವಧರ್ಮದಿಂದ ಕಾಪಾಡುತ್ತಿರಲು ಎಂದು ತಿಳಿಸುತ್ತದೆ.[೧೨೨] ಇದರಿಂದಾಗಿ ವಿಜಯಪಾಂಡ್ಯ ದೇವರು ಕಳಚೂರಿ ಬಿಜ್ಜಳನ ಸಾಮಂತನಾಗಿ ಅಧಿಕಾರ ನಡೆಸಿರುವುದು ಇದರಿಂದ ಸ್ಪಷ್ಟವಾಗುತ್ತದೆ; ಆದರೆ ಇದು ತಾತ್ಕಾಲಿಕವಾಗಿತ್ತು.

ಬಿಜ್ಜಳ ಸೋಮೇಶ್ವರನಿಗೆ ಅನುಕೂಲರಾದ ಸಣ್ಣ ದೊಡ್ಡ ಸಾಮಂತರನ್ನು ಮುರಿಯಲಿಕ್ಕೆ ಪ್ರಯತ್ನ ಮಾಡಿದ್ದರಿಂದ ಚಾಳುಕ್ಯರ ಸ್ವಾಮಿನಿಷ್ಠರಾಗಿದ್ದ ಪಾಂಡ್ಯರು ಬಿಜ್ಜಳನನ್ನು ವಿರೋಧಿಸಿ ಸೋಮೇಶ್ವರನ ಬೆನ್ನು ತಟ್ಟಿದ್ದರು. ಹಾಗಾಗಿ ಸ್ವತಂತ್ರರಾಗಿ ಆಳಿದರು. ಕ್ರಿ.ಶ. ೧೧೬೫ರ ಚದುರುಗೋಳ ಶಾಸನ, ಕ್ರಿ.ಶ. ೧೧೭೮ರ ಹೊಳಲು ಶಾಸನ, ಕ್ರಿ.ಶ. ೧೧೪೯ರ ಹೊಳಗುಂದಿ ಶಾಸನ, ಕ್ರಿ.ಶ. ೧೧೬೫ರ ಉಚ್ಚಂಗಿದುರ್ಗ ಶಾಸನ, ಕ್ರಿ.ಶ. ೧೧೭೪ರ ಬಾಗಳಿ ಶಾಸನ, ಕ್ರಿ.ಶ. ೧೧೪೯ರ ಆನೆಕೊಂಡ ಶಾಸನ, ಕ್ರಿ.ಶ. ೧೧೭೧ ಮತ್ತು ೧೧೬೮ರ ಹರಿಹರದ ಶಾಸನಗಳು ಯಾವುದೇ ಆಶ್ರಿತ ಅರಸರನ್ನು ಹೇಳದೆ ನೇರವಾಗಿ ವಿಜಯಪಾಂಡ್ಯನಿಂದ ಆರಂಭವಾಗುತ್ತವೆ. ಈ ವೇಳೆಗೆ ವಿಜಯಪಾಂಡ್ಯ ಕಳಚೂರಿಗಳ ಆಡಳಿತವನ್ನು ಧಿಕ್ಕರಿಸಿ ಸ್ವತಂತ್ರನಾಗಿ ಚಾಳುಕ್ಯ ೪ನೇ ಸೋಮೇಶ್ವರ ಮತ್ತು ಜಗದೇಕಮಲ್ಲ ದೇವನ ಬಿರುದುಗಳನ್ನು ಧರಿಸಿ ಆಡಳಿತ ನಡೆಸಿದ. ಕ್ರಿ.ಶ. ೧೧೭೧ರ ಮಾಡಲಗೇರಿ ಶಾಸನ ಪ್ರತಾಪಚಕ್ರವರ್ತಿ ಜಗದೇಕಮಲ್ಲ ದೇವರು ಕಲ್ಯಾಣದಿಂದ ಆಳುತ್ತಿರುವಾಗ ತತ್ಪಾದಪದ್ಮೋಪಜೀವಿ ಮಹಾಮಂಡಳೇಶ್ವರ ತ್ರಿಭುವನಮಲ್ಲ ವಿಜಯಪಾಂಡ್ಯ ದೇವರು ನೊಳಂಬವಾಡಿ ಮೂವತ್ತಿಚ್ಛಾಸಿರಮಮಂ ದುಷ್ಟನಿಗ್ರಹಶಿಷ್ಟಪ್ರತಿಪಾಳನ ಮಾಡಿ ಉಚ್ಚಂಗಿಯ ನೆಲೆವೀಡಿನೊಳು ಆಳುತ್ತಿರುವುದಾಗಿ ಹೇಳುತ್ತದೆ.[೧೨೩] ಕ್ರಿ.ಶ. ೧೧೪೯ಕ್ಕೆ ಚಾಳುಕ್ಯ ಜಗದೇಕಮಲ್ಲ ದೇವನ ಆಡಳಿತ ಮುಕ್ತಾಯವಾಗಿರುತ್ತದೆ. ಕ್ರಿ.ಶ. ೧೧೮೩ರ ಮಾನ್ಯರ ಮಸಲವಾಡ ಶಾಸನ ಚಾಳುಕ್ಯಭರಣ ಜಗದೇಕಮಲ್ಲದೇವ ಕಲ್ಯಾಣದಲ್ಲಿ ಆಳುತ್ತಿರುವಾಗ ಮಹಾಮಂಡಳೇಶ್ವರ ವಿಜಯಪಾಂಡ್ಯದೇವರು ಕೋಗಳಿಯೂನ್ನೂರುಮಂ ನೊಳಂಬವಾಡಿಯ ಮೂವತ್ತಿಚ್ಛಾಸಿರಮುಮಂ ಆಳುತ್ತಿರುವುದಾಗಿ ಉಲ್ಲೇಖಿಸುತ್ತದೆ. ಕ್ರಿ.ಶ. ೧೧೮೬ರ ಗಾರೆಹಟ್ಟಿ ಶಾಸನ ಚಾಳುಕ್ಯ ತ್ರಿಭುವನಮಲ್ಲ ದೇವರು ರಾಜ್ಯವಾಳುತ್ತಿರುವಾಗ ಮಹಾಮಂಡಳೇಶ್ವರ ವಿಜಯ ಪಾಂಡ್ಯದೇವರು ನೊಳಂಬವಾಡಿ ಮೂವತ್ತಿರ್ತಾಸಿರಮುಮನುಚ್ಚಂಗಿಯ ನೆಲವೀಡಿನೊಳು ಆಳುತ್ತಿರುವುದಾಗಿ ತಿಳಿಸುತ್ತದೆ.[೧೨೪] ವಿಜಯಪಾಂಜ್ಯದೇವನು ತನ್ನ ಶಕ ೧೦೮೮ನೆಯ ಪಾರ್ಥಿವ ಸಂವತ್ಸರ(೧೧೬೫)ದ ದಾವಣಗೆರೆ ಶಿಲಾಶಾಸನದಲ್ಲಿ ಆ ಸಂವತ್ಸರವು ೩ನೆಯ ತೈಲನ ಆಳ್ವಿಕೆಯ ೧೫ನೆಯ ವರ್ಷವಾಗಿತ್ತೆಂದು ಬರೆಯಿಸಿದ್ದಾನೆ. ಸಿಂದ ಮನೆತನದ ವತ್ಸರಸರಾದ ಬಿಜ್ಜಳದೇವ ವಿಕ್ರಮದೇವರು ತಮ್ಮ ಶಕ ೧೦೬೨ನೆಯ ವಿರೋಧಿ ಸಂವತ್ಸರ(೧೧೭೦) ಶಿಲಾಶಾಸನದಲ್ಲಿ ಈ ಸಂವತ್ಸರವು ಚಾಳುಕ್ಯ ವಿಕ್ರಮ ಶಕದ ೬೪ನೆಯ ವರ್ಷವಾಗಿತ್ತೆಂದು ಉಲ್ಲೇಖವಿರುವುದರಿಂದ ಸಿಂದ ಮತ್ತು ಪಾಂಡ್ಯ ಮನೆತನದ ಮಹಾಮಂಡಳೇಶ್ವರರು ಕಳಚೂರಿ ಬಿಜ್ಜಳನನ್ನು ವಿರೋಧಿಸಿ ಸೋಮೇಶ್ವರ ಬೆನ್ನು ತಟ್ಟಿದ್ದರೆಂದು ಊಹಿಸಲಿಕ್ಕೆ ಅಡ್ಡಿ ತೋರುವುದಿಲ್ಲ.

ಬಿಜ್ಜಳ - ಬಸವರ ಧರ್ಮ ಹೋರಾಟ, ಲಿಂಗಾಯತ ಮತದ ಪ್ರಾಬಲ್ಯ, ಬಿಜ್ಜಳನ ಕೊಲೆ ರಾಜಧಾನಿಯಾದ ಕಲ್ಯಾಣದಲ್ಲಿ ಅರಾಜಕತ್ವವನ್ನು ಉಂಟುಮಾಡಿದ್ದರಿಂದ ಚಾಳುಕ್ಯ ಸೋಮೇಶ್ವರನಿಗೆ ತನ್ನ ಪಿತ್ರಾರ್ಜಿತ ರಾಜ್ಯವನ್ನು ಮರಳಿ ದೊರಕಿಸಲಿಕ್ಕೆ ಉತ್ತಮ ಸಂಧಿಯು ದೊರೆಯಿತು. ಸೋಮೇಶ್ವರನ ದಂಡನಾಯಕನಾದ ಬಮ್ಮ ಅಥವಾ ಬಮ್ಮಯ್ಯನೆಂಬುವನು ಸೋಮೇಶ್ವರನ ಬೆನ್ನು ತಟ್ಟಿ ಕಳಚೂರಿಯರ ರಾಜ್ಯವನ್ನು ಕಿತ್ತುಕೊಂಡು, ಚಾಳುಕ್ಯ ರಾಜ್ಯ ಪ್ರತಿಷ್ಠಾಪಕನೆಂಬ ಬಹು ಗೌರವದ ಬಿರುದು ಪಡೆದುಕೊಂಡಿರುವುದನ್ನು ಧಾರವಾಡ ಜಿಲ್ಲೆಯ ಅಬ್ಲೂರಿನ ಶಾಸನ ತಿಳಿಸುತ್ತದೆ.[೧೫] ಕ್ರಿ.ಶ. ೧೧೯೨ರ ಗದಗಿನ ಹೊಯ್ಸಳರ ಶಾಸನ ಬ್ರಹ್ಮನು ತನ್ನ ತಂದೆ ಕಾವಣ ಅಥವಾ ಕಾಮನನ್ನು ತಿರಸ್ಕರಿಸಿ ಕಳಚೂರಿಯರ ರಾಜ್ಯಾಧಿಕಾರವನ್ನು ಕಿತ್ತಿಕೊಂಡನೆಂದು ಹೇಳುತ್ತದೆ.[೧೬] ಕ್ರಿ.ಶ. ೧೧೮೩ನೆಯ ಇಸ್ವಿಯ ಆರಂಭದಲ್ಲಿ ಸೋಮೇಶ್ವರನು ದಂಡನಾಯಕ ಬಮ್ಮರಸನ ನೆರವಿನಿಂದ ಕಳಚೂರಿಯರನ್ನು ಮುರಿಬಡಿದು ತನ್ನ ಪಿತ್ರಾರ್ಜಿತ ರಾಜ್ಯವನ್ನು ಮರಳಿ ದೊರಕಿಸಿಕೊಂಡು ಏಳು ವರ್ಷಗಳವರೆಗೆ ಆಳಿದನು.

ದಂಡನಾಯಕ ಬಮ್ಮರಸ ಉಚ್ಚಂಗಿ ಪಾಂಡ್ಯ ವಂಶದ ಅರಸರೊಂದಿಗೆ ಇರುವುದನ್ನು ಬೇತೂರು, ಅಲಗಿಲವಾಡ, ಚೆದುರುಗೋಳ, ಬಿಳಿಚೋಡು ಗ್ರಾಮದ ಶಾಸನಗಳು ತಿಳಿಸುತ್ತವೆ. ಕ್ರಿ.ಶ. ೧೧೦೮ರ ಬೇತೂರು ಶಾಸನ ಮಹಾಪ್ರಧಾನಂ ಬಾಣಸವೆರ್ಗ್ಗಡೆದಂಡನಾಯಕನನನ್ತ ಪಾಳಯ್ಯಂಗಳ ಬೆಸದಿಂ ಸಮಸ್ತ ರಾಜ್ಯಭಾರ ನಿರೂಪಿತ ಮಹಾಮಾತ್ಯ ಪದವೀವಿರಾಜಮಾನ ಮಾನೋನ್ನತ ಪ್ರಭುವಂತ್ರೋತ್ಸಾಹ ಶಕ್ತಿತ್ರಯಸಾಹಸನುಡಿದುಮತ್ತೆನ್ನ ಗೋತ್ರಪವಿತ್ರಪರಾಂಗನಾ ಪುತ್ರನರ್ಯ್ಯಸಿಂಗನಾಮಾದಿ ಸಮಸ್ತ ಪ್ರಸಸ್ತಿ ಸಹಿತಂ ಶ್ರೀಮದಚ್ಚು ಪನ್ನಾಯದಿಷ್ಠಾಯಕ ಶ್ರೀಮತುಬಮ್ಮರಸರು ನಳಂಬವಾಡಿ ಮೂವತ್ತಿರ್ಚ್ಛಾಸಿರದ ಪನ್ನಾಯಮಂ ದುಷ್ಮ ನಿಗ್ರಹಸಿಷ್ಟ ಪ್ರತಿಪಾಳನದಿಂ ಶುಖದಿನಾಳುತ್ತಮಿರೆ । ದಾರ ಚರಿತಂವಿಭುಬಮ್ಮರಸಂ ಧರಿತ್ರಿಯೊಳ್ । ಕೊಂಗಳಿನಾಡೊಳಗ್ಗದ ಕದಂಬಳಿಸಾಯಿರದಾಗರಂಗಳೋಳ್‌ದೇಗುಲಕಂ ಜಿನಾಲಯಕವಾರೆವೆಗಂಕೆರೆ ಬಾವಿ. ಸತ್ರಕ್ಕೆ ದಾನ ಬಿಟ್ಟಿದನ್ನು ದಾಖಲಿಸಿದೆ.[೧೭]

ತ್ರಿಭುವನಮಲ್ಲ ಮತ್ತು ರಾಯಪಾಂಡ್ಯದೇವನ ಕಾಲದಲ್ಲಿ ಬಮ್ಮರಸ ನೊಳಂಬವಾಡಿ-೩೨೦೦೦ ವಿಭಾಗದ ಪನ್ನಾಯದ ಅಧಿಕಾರಿಯಾಗಿದ್ದ. ಕ್ರಿ.ಶ. ೧೧೬೪ರ ಚದುರುಗೋಳ ಶಾಸನ ವಿಜಯಪಾಂಡ್ಯದೇವರು ನೊಳಂಬವಾಡಿ-೩೨೦೦೦ವನ್ನು ಆಳುತ್ತಿರುವಾಗ ಮಹಾಸಾಮಂತ ಸೋವಿದೇವನಾಯಕ ಬರ್ಮ್ಮದೇವರುಗಳು ದೇವರಿಗೆ ದಾನ ಬಿಡುವಾಗ ಇರುವುದನ್ನು ತಿಳಿಸುತ್ತದೆ.[೧೮] ವಿಜಯಪಾಂಡ್ಯದೇವರು ಉಚ್ಚಂಗಿ ನೆಲೆವೀಡಿನಲ್ಲಿ ಆಳುತ್ತಿರುವಾಗ ದಂಡನಾಯಕರು ವಿಜಯಹೆಂಮಾಡಿ ಮಲೆಯಾದಿರಾಜ ಮಹಾನಾಯಕ ಮಣಿವುದಿಯಾದಿತ್ಯನುಂ ನಾಯಕ ಬಮ್ಮಯ್ಯನು ಹಿರಿಯ ಬೆತ್ತೂರ ದೇಮೇಶ್ವರದೇವರ್ಗ್ಗೆ ಹಿರಿಯಕೆರೆಯ ಯೇರಿಯ ಕೆಳಗೆ ದಾನ ನೀಡಿದ್ದನು ಉಲ್ಲೇಖಿಸುತ್ತದೆ.[೧೯] ಅಲಗಿಲವಾಡದ ಕ್ರಿ.ಶ. ೧೧೬೯ರ ಶಾಸನ ಮತ್ತು ಕ್ರಿ.ಶ. ೧೧೬೨ರ ಗಂಗನರಸಿ ಶಾಸನಗಳು ಬ್ರಹ್ಮರಸ/ಬಮ್ಮ/ಬರ್ಮನ್ನು ವಿಜಯಪಾಂಡ್ಯನ

ಆಡಳಿತದಲ್ಲಿದ್ದ ಬಗ್ಗೆ ಮಾಹಿತಿ ನೀಡುತ್ತವೆ. ಬಮ್ಮರಸ ತ್ರಿಭುವನಮಲ್ಲಪಾಂಡ್ಯ ಮತ್ತು ವಿಜಯಪಾಂಡ್ಯನ ಕಾಲದಲ್ಲಿ ಅವರ ಆಡಳಿತ ವರ್ಗದಲ್ಲಿ ದಂಡನಾಯಕ ಮೊದಲಾದ ಹುದ್ದೆಗಳಲ್ಲಿ ಇರುವುದು ಈ ಶಾಸನಗಳಿಂದ ತಿಳಿಯುತ್ತದೆ.

ಕ್ರಿಶ. ೧೧೮೩ರಲ್ಲಿ ೪ನೇ ಸೋಮೇಶ್ವರ ಪಿತ್ರಾರ್ಜಿತ ರಾಜ್ಯದ ಸಾರ್ವಭೌಮನಾಗಿ ಆಳ್ವಿಕೆಯನ್ನು ಆರಂಭಿಸಿದ. ಮೇಲೆ ವಿಜಯಪಾಂಡ್ಯ ಆತನ ಸಾಮಂತನಾಗಿ ಮುಂದುವರಿದನು. ಈವರೆಗೂ ಸ್ವತಂತ್ರನಾಗಿ ಮತ್ತು ಜಗದೇಕಮಲ್ಲದೇವನ ಬಿರುದಿನಲ್ಲಿ ಶಾಸನಗಳನ್ನು ಹಾಕಿಸಿಕೊಂಡಿದ್ದ ಈತ ೪ನೇ ಸೋಮೇಶ್ವರನ ಸಾಮಂತನೆಂದು ಹೇಳಿಕೊಂಡಿದ್ದಾನೆ. ಕ್ರಿಶ. ೧೧೮೬ರ ಗಾರೆಹಟ್ಟಿ ಶಾಸನ ಚಾಳುಕ್ಯಾಭರಣ ಶ್ರೀಮತ್ರಿಭುವನಮಲ್ಲದೇವರು ಜಯಂತೀಪುರದ ನೆಲೆವೀಡಿನಲ್ಲಿ ಆಳುತ್ತಿರಲು ತ್ರಿಭುವನಮಲ್ಲದೇವಪಾದಾಬ್ಜಭ್ರಿಂಗನಾಮಾದಿಸಮಸ್ತಪ್ರಶಸ್ತಿಸಹಿತಂ ಮಹಾಮಂಡಳೇಶ್ವರ ವಿಜಯಪಾಂಡ್ಯ ದೇವರು ನೊಳಂಬವಾಡಿ ಮೂವರ್ತ್ತಿತ್ಸಾಸಿರಮು ಮನುಚ್ಚಂಗಿಯ ನೆಲವೀಡಿನಿಂದ ಆಳುತ್ತಿರುವುದಾಗಿ ಹೇಳುತ್ತದೆ.[೫೦]

ಆದರೆ ಇಬ್ಬರ ನ್ಯಾಯ ಮೂರನೆಯವರೆಗೆ ಲಾಭ ಎಂಬ ಗಾದೆಯಂತೆ ಕಳಚೂರಿಯರೊಡನೆ ಕಾದಾಡಿ ಹಣ್ಣಾದ ಚಾಳುಕ್ಯರನ್ನು ಸೋಲಿಸಿ ಅವರ ಸಾಮ್ರಾಜ್ಯದ ದಕ್ಷಿಣ ಭಾಗವನ್ನು ಹೊಯ್ಸಳ ವೀರಬಲ್ಲಾಳನು ಉತ್ತರ ಭಾಗವನ್ನು ದೇವಗಿರಿ ಯಾದವರೂ ಸೆಳೆದುಕೊಂಡಿದ್ದರಿಂದ ೨೦೦ ವರ್ಷ ಘನತೆಯಿಂದ ಆಳಿದ ಕಲ್ಯಾಣದ ಹೆಸರು ಹೇಳದೆ ಹೋಯಿತು. ಕ್ರಿಶ. ೧೧೮೬ರ ನಂತರದಲ್ಲಿ ವಿಜಯಪಾಂಡ್ಯನ ಆಳ್ವಿಕೆಯ ಯಾವುದೇ ದಾಖಲೆಗಳು ದೊರೆಯುವುದಿಲ್ಲ. ಕ್ರಿಶ. ೧೨೦೬ರಲ್ಲಿ ಮತ್ತೆ ಪಾಂಡ್ಯರ ದಾಖಲೆಗಳು ದೊರೆಯುತ್ತವೆ. ಈ ವೇಳೆಗೆ ಪಾಂಡ್ಯರು ಹೊಯ್ಸಳರ ಸಾಮಂತರಾಗಿದ್ದರು.

### ಸೈನಿಕ ಸಾಧನೆಗಳು

ಕಳಚೂರಿ ಬಿಜ್ಜಳ ಚಕ್ರವರ್ತಿ ಎಂದು ಘೋಷಿಸಿಕೊಂಡ ಮೇಲೆ ತುಂಗಭದ್ರಾ ನದಿ ಹೊಯ್ಸಳ ಮತ್ತು ಕಳಚೂರಿ ಅರಸರ ಮೇರೆಯಾಗಿ ಚಾಳುಕ್ಯ ರಾಜ್ಯ ಹಂಚಿಹೋಯಿತು. ಇಂತಹ ಪರಿಸ್ಥಿತಿಯಲ್ಲಿ ಅಧಿಕಾರಕ್ಕೆ ಬಂದ ವಿಜಯಪಾಂಡ್ಯ ತಾವು ನಿಷ್ಠೆ ತೋರಿದ ಚಾಳುಕ್ಯ ೪ನೇ ಸೋಮೇಶ್ವರನಿಗೆ ಪುನಃ ಚಾಳುಕ್ಯ ಸಾರ್ವಭೌಮತ್ವವನ್ನು ಕೊಡಿಸುವುದಕ್ಕಾಗಿ ಕಳಚೂರಿ ಅರಸರೊಂದಿಗೆ ಹಾಗೂ ಪಾಂಡ್ಯ ವಂಶದ ಪಾರಂಪರಿಕ ಶತ್ರುಗಳಾಗಿದ್ದ ಹೊಯ್ಸಳರ ಆಕ್ರಮಣದಿಂದ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವುದಕ್ಕೆ ತನ್ನ ಆಡಳಿತದುದ್ದಕ್ಕೂ ಆಂತರಿಕ ಕದನಗಳು ನಡೆದವು. ತ್ರಿಭುವನಮಲ್ಲಪಾಂಡ್ಯ, ರಾಯಪಾಂಡ್ಯ, ವೀರಪಾಂಡ್ಯರಂತೆ ವಿಜಯಪಾಂಡ್ಯನಿಗೆ ಸಾಮ್ರಾಜ್ಯದ ಆಚೆಗೆ ಯುದ್ಧ ಮಾಡುವ ಅವಕಾಶಗಳು ದೊರೆಯಲೇ ಇಲ್ಲ. ಆದರೂ ರಾಜೀಗಚೊಳಮನಭಂಗ, ಕಳಿಗಂ, ಅಂಗ, ವಂಗ, ಮಗಧ, ನೇಪಾಳ, ಪಾಂಚಾಳ, ಗುರ್ಜರ, ಗೌಳ, ದ್ರವಿಳ, ಆಂಧ್ರ, ಮಾಳವ, ಸೌರಾಷ್ಟ್ರ, ಬರ್ಬರ, ಕಾಶ್ಮೀರ ಮೊದಲಾದ ಔತ್ತರೇಯ ರಾಜ್ಯಗಳ ಅರಸರನ್ನು ಸೋಲಿಸಿದವನೆಂದು ತನ್ನ ಬಿರುದುಗಳಲ್ಲಿ ಹಾಕಿಕೊಂಡಿದ್ದಾನೆ. ಇದು ಶಾಸನಗಳ ಉತ್ಪ್ರೇಕ್ಷೆಯ ವರ್ಣನೆ ಮತ್ತು ತನ್ನ ವಂಶದ ಅರಸರ ಪಾರಂಪರಿಕ ಬಿರುದುಗಳಾಗಿವೆ.

**ಕಳಚೂರಿಗಳ ದಾಳಿ**

ಕಲ್ಯಾಣದ ಚಾಳುಕ್ಯರನ್ನು ಸುಮಾರು ೩೫ ವರ್ಷಗಳ ಕಾಲ ಮೂಲೆಗುಂಪು ಮಾಡಿ ಕಳಚೂರಿಗಳು ಕಲ್ಯಾಣದಲ್ಲಿ ಆಳ್ವಿಕೆ ಮಾಡಿದರು. ಇವರು ಮಧ್ಯೆ ಭಾರತದ ಕಳಚೂರಿ ವಂಶದ ಹೈಹಯ ಕುಲಕ್ಕೆ ಸೇರಿದವರು. ಶಿವಭಕ್ತರಾಗಿ 'ಸುವರ್ಣ ವೃಷಭ' ಲಾಂಛನವನ್ನು ಹೊಂದಿದ ಕಳಚೂರಿಗಳು ೩ನೇ ತೈಲನ ಕಾಲದವರೆಗೂ (ಕ್ರಿ.ಶ. ೧೧೬೨) ಅವರ ಸಾಮಂತರಾಗಿ ಆಡಳಿತ ನಡೆಸಿದರು. ಈ ಮನೆತನದ ಬಿಜ್ಜಳ ಆಶ್ರಿತ ಪ್ರಭುವನ್ನು ಕಲ್ಯಾಣದಿಂದ ಓಡಿಸಿ ಕ್ರಿ.ಶ. ೧೧೬೩ರಲ್ಲಿ ಕಲ್ಯಾಣದ ಚಕ್ರವರ್ತಿ ಎಂದು ಗುರುತಿಸಿಕೊಂಡು ಚಾಳುಕ್ಯರಿಗೆ ನಿಷ್ಠರಾಗಿದ್ದ ಸಾಮಂತರನ್ನು ಒಲಿಸಿಕೊಳ್ಳಲು ಆರಂಭದಲ್ಲಿ ಯಶಸ್ವಿಯಾಗಿದ್ದ. ಆದರೆ ಕೆಲವು ಸಾಮಂತರು ಚಾಳುಕ್ಯರನ್ನು ಕೈಬಿಡದೆ ಅವರ ಬೆನ್ನಿಗೆ ನಿಂತರು. ವೀರಪಾಂಡ್ಯ ಮತ್ತು ವಿಜಯಪಾಂಡ್ಯ ಆರಂಭದಲ್ಲಿ ಬಿಜ್ಜಳನ ಅಧಿಕಾರವನ್ನು ಒಪ್ಪಿಕೊಂಡಿರುವುದು ಶಾಸನಗಳಿಂದ ತಿಳಿಯುತ್ತದೆ. ಧರ್ಮ ಸಂಘರ್ಷದಲ್ಲಿ ಬಿಜ್ಜಳ ಮೃತನಾದ ನಂತರ ಅನೇಕ ಸಾಮಂತರು ಕಳಚೂರಿಗಳ ವಿರುದ್ಧ ತಿರುಗಿಬಿದ್ದರು. ರಾಯಮುರಾರಿ ಸೋಯಿದೇವನ ಕಾಲಕ್ಕೆ ವಿಜಯಪಾಂಡ್ಯ ಸ್ವತಂತ್ರನಾಗಿ ಚಾಳುಕ್ಯ ಜಗದೇಕಮಲ್ಲ ಮತ್ತು (೪ನೇ ಸೋಮೇಶ್ವರನ) ತ್ರಿಭುವನಮಲ್ಲ ಎಂಬ ಬಿರುದನ್ನು ಪಡೆದು ಆಡಳಿತ ನಡೆಸಲು ಆರಂಭಿಸಿದ. ಗಂಗನರಸಿ, ವಾಸನ, ಚದುರಗೊಳ, ಹೊಳಲು, ಹೊಳಗುಂದಿ ಮಾನ್ಯರಮಸಲವಾಡ, ಉಚ್ಚಂಗಿದುರ್ಗ, ಬಾಗಳಿ ಶಾಸನಗಳು ಈ ವಿಷಯವನ್ನು ಸ್ಪಷ್ಟಪಡಿಸುತ್ತವೆ. ಕ್ರಿ.ಶ. ೧೧೮೩ರ ಮಾನ್ಯರಮಸಲವಾಡ ಶಾಸನದಲ್ಲಿ ಕಳಚುರ್ಯ್ಯ ಭುಜಬಳ ಚಕ್ರವರ್ತಿ ರಾಯನಾರಾಯಣ ಅಹವಮಲ್ಲದೇವವರ್ಷದ ನಾಲ್ಕನೆಯ ಶೋಭಕ್ರಿತ್ಸಂವತ್ಸರ ಜೇಷ್ಠದ ಪುಣ್ಣಮಿ ಸೋಮಗ್ರಹಮದಲು.[೧೮೧] ಇಲ್ಲಿ ಕಳಚೂರಿ ಚಕ್ರವರ್ತಿ ಅಹವಮಲ್ಲದೇವರ ಆಳ್ವಿಕೆಯ ವರ್ಷವಿದ್ದರೂ ಶಾಸನದ ಆರಂಭ ಜಗದೇಕಮಲ್ಲದೇವನನ್ನು ಸ್ಮರಿಸುತ್ತದೆ ಹಾಗೂ ತ್ರಿಭುವನಮಲ್ಲ ವಿಜಯಪಾಂಡ್ಯ ಆಳುತ್ತಿರುವುದನ್ನು ಹೇಳುತ್ತದೆ. ಇಲ್ಲಿ ಕಳಚೂರಿಗಳ ಆಡಳಿತದ ವಿವರಣೆ ಇಲ್ಲ. ಈ ವೇಳೆಗೆ ವಿಜಯಪಾಂಡ್ಯ ಕಳಚೂರಿ ಆಡಳಿತದ ವಿರುದ್ಧ ತಿರಿಗಿ ಬಿದ್ದು ಸ್ವತಂತ್ರನಾಗಿದ್ದ.

ಕ್ರಿ.ಶ. ೧೧೭೭ರ ಕುಪ್ಪಟೂರು ವೀರಶಾಸನ, ರಾಯಮುರಾರಿ ಸೋವಿದೇವನು ಆಳುತ್ತಿರುವಾಗ ಶಾಂತಳಿಗೆ ಸಹಸ್ರದ ಪೆರ್ಗಡೆ ಪುಳಿಯಮ್ಮ ಬನವಾಸೆನಾಡನ್ನು ಕುಪ್ಪಟೂರು- ಸಾಸಿರವನ್ನು ಆಳುತ್ತಿರುವಾಗ ಉಚ್ಚಂಗಿಯ ಹಡವದೇವನು ದಾಳಿ ಮಾಡಿ ಗ್ರಾಮವನ್ನು, ಸ್ತ್ರೀಯರನ್ನು ಮತ್ತು ಗೋವುಗಳನ್ನು ಸೂರೆಗೊಂಡ ಸೆರೆಹಿಡಿದ. ಕೇತನಾಯಕನು ಸ್ತ್ರೀಯರನ್ನು ಮತ್ತು ಗೋವುಗಳನ್ನು ಹೋರಾಡಿ ರಕ್ಷಿಸಿದ; ಈ ಹೋರಾಟದಲ್ಲಿ ಕೇತನಾಯಕ ಸುರಲೋಕ ಪ್ರಾಪ್ತನಾದ. ಇದನ್ನು ಮಹಾಜನರು ಮೆಚ್ಚಿ ಆತನ ಮಗ ಮಾಕೆಯನಾಯಕನಿಗೆ ಸರ್ವಬಾಧ ಪರಿಹಾರವಾಗಿ ದಾನ ಕೊಟ್ಟಿರುವುದನ್ನು ತಿಳಿಸುತ್ತದೆ.[೧೮೨] ವಿಜಯಪಾಂಡ್ಯನ ಸೈನ್ಯ ನೊಳಂಬವಾಡಿ ಪ್ರದೇಶದ ಆಚೆ ಕಳಚೂರಿಗಳ ಅಧೀನದಲ್ಲಿದ್ದ ಸಾಂತಳಿಗೆ ಪ್ರದೇಶವನ್ನು ಆಕ್ರಮಿಸಿತ್ತು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಕ್ರಿ.ಶ. ೧೧೮೦ರ ಮುಚ್ಚಡಿ ವೀರಗಲ್ಲು ಶಾಸನ ಕಳಚೂರಿ ರಾಯನಾರಾಯಣನ ಕಾಲದಲ್ಲಿ ಪಾಂಡ್ಯದೇವರಸನು ಉದ್ದರೆಯಲ್ಲಿ ಸೈನ್ಯವನ್ನು ನಿಲ್ಲಿಸಿ ಪುರವನ್ನು ಆಕ್ರಮಿಸಿ ಉದಯಬ್ಬೆ(ನಾಟ್ಯಗಾರ್ತಿ) ಹಾಗೂ ಹಸುಗಳನ್ನು ಒಯ್ದುದ್ದನ್ನು ಈ ಶಾಸನ ತಿಳಿಸುತ್ತದೆ. ಆಗ ಕರಿಮಾರಲೀಲೋಜನ ಮಗ ಲೋಪಲೋಜನು ಸುದ್ದಿ ತಿಳಿದು ಸಿಟ್ಟಿನಿಂದ ಅವನ ಮೇಲೆ ದಾಳಿ ನಡೆಸಿದನು. ಹಸುಗಳನ್ನು ಮತ್ತಿತರರನ್ನು ವಶಪಡಿಸಿಕೊಂಡು ಸ್ವರ್ಗಸ್ಥನಾದನೆಂದು ಉಲ್ಲೇಖಿಸುತ್ತದೆ.[೧೮೩] ಕ್ರಿ.ಶ. ೧೧೭೬ರ ಕುರುಗೋಡು ಶಾಸನ ಕಳಚೂರಿ ದೊರೆ ಕುಂತಲ ದೇಶದ ಚಕ್ರವರ್ತಿ ರಾಯಮುರಾರಿ ಸೋವಿದೇವನ ಆಳ್ವಿಕೆಯ ಕಾಲದಲ್ಲಿ ಸಿಂಧ ವಂಶದ ಮಹಾಮಂಡಳೇಶ್ವರ ರಾಚಮಲ್ಲ ಚೋಳನಾಳು ಮಾಡುವುದು, ಗೂರ್ಜ್ಜರರಂಸಲೆತರ್ದ್ದಿಕುಂಕರಂ ಲಾಲನನಾಳಿ ಮಾಡುವುದು, ಪಾಂಡ್ಯನನಂಡಾಗುಂ ತೆಲುಂಗ ಭೂಪಾಲನನೇಳಿದಿಕ್ಕೆಯನೆ ಮಾಡುವುದೀ[೧೮೪] ಎಂಬ ಬಿರುದುಗಳನ್ನು ಧರಿಸಿದ್ದನು. ಅಂದರೆ ಸಿಂಧ ವಂಶದ ರಾಜಮಲ್ಲ ಪಾಂಡ್ಯನ ಬೆನ್ನೆಲುಬು ಮುರಿದವನು ಅಥವಾ ತೆಗೆದವನು ಎಂಬ ಬಿರುದನ್ನು ಹೊಂದಿರುವುದರ ಹಿನ್ನೆಲೆ ತಿಳಿಯುವುದಿಲ್ಲ. ಆವರೆಗೂ ಸಿಂಧರು ಪಾಂಡ್ಯ ಅರಸರ ಸಾಮಂತರಾಗಿದ್ದರು. ರಾಚಮಲ್ಲ ಕಳಚೂರಿಗಳ ಸಾಮಂತನಾಗಿದ್ದರಿಂದ ಅವರ ಶತ್ರುಗಳಾದ ಪಾಂಡ್ಯರು ರಾಚಮಲ್ಲನಿಗೂ ಶತ್ರುಗಳಾಗಿದ್ದಂತೆ ಕಾಣುತ್ತದೆ. ಆದರೆ ಸಿಂಧರಿಗೂ ಮತ್ತು ಪಾಂಡ್ಯರಿಗೂ ನಡೆದ ಕದನ ವೈಮನಸುಗಳ ಕುರಿತು ಯಾವ ದಾಖಲೆಗಳು ದೊರೆಯುವುದಿಲ್ಲ. ಹಾಗಾಗಿ ರಾಚಮಲ್ಲ, ಕಳಚೂರಿಗಳಿಂದ ಈ ಬಿರುದನ್ನು ಪಡೆದುಕೊಂಡಂತೆ ಕಾಣುತ್ತದೆ. ಕ್ರಿ.ಶ. ೧೧೮೩ರಲ್ಲಿ ತ್ರಿಭುವನಮಲ್ಲ ಪಾಂಡ್ಯನ ಕಾಲದಲ್ಲಿ ನೊಳಂಬವಾಡಿ-೩೨೦೦೦ದ ಪನ್ನಯದ ಅಧಿಕಾರಿಯಾಗಿದ್ದ ಬಮ್ಮರಸ ಸೋಮೇಶ್ವರನ ಕಾಲಕ್ಕೆ ದಂಡನಾಯಕನಾಗಿದ್ದ ಈತ ರಾಯನಾರಾಯಣ ಅಹವಮಲ್ಲನನ್ನು ಸೋಲಿಸಿ ಚಾಳುಕ್ಯ ರಾಜ್ಯ ಪ್ರತಿಷ್ಠಾಪಕ ಎಂಬ ಬಿರುದನ್ನು ಪಡೆದುಕೊಂಡ. ೪ನೇ ಸೋಮೇಶ್ವರ ಈ ವೇಳೆ ಸಿಂದವಾಡಿ, ನೊಳಂಬವಾಡಿ, ಕೋಗಳಿನಾಡು ಹಾಗೂ ಕಲ್ಯಾಣ ರಾಜಧಾನಿಯನ್ನು ಹಿಡಿದುಕೊಂಡನು. ಸೋಮೇಶ್ವರ 'ಕಳಚುರ್ಯ ಕುಲನಿರ್ಮೂಲನ'[೧೮೫] ಎಂಬ ಬಿರುದನ್ನು ಪಡೆದುಕೊಂಡನು. ವಿಜಯಪಾಂಡ್ಯ ತನ್ನ ಸ್ವಾಮಿ ನಿಷ್ಠೆಗೆ ಬದ್ಧನಾಗಿ ಕಳಚೂರಿ ರಾಯ ನಾರಾಯಣ ಅಹವಮಲ್ಲ ರಾಯಮುರಾರಿ ಸೋವಿದೇವರ ವಿರುದ್ಧ ಹೋರಾಡಿರುವುದು ಇಲ್ಲಿ ಸ್ಪಷ್ಟವಾಗುತ್ತದೆ.

**ಹೊಯ್ಸಳರ ದಾಳಿಗಳು**

ಉಚ್ಚಂಗಿ ಪಾಂಡ್ಯರ ಆರಂಭ ಕಾಲದಿಂದಲೂ ಈ ಮನೆತನಗಳ ಮಧ್ಯೆ ನಿರಂತರವಾಗಿ ಕದನಗಳು ನಡೆಯುತ್ತಲೇ ಬಂದವು. ಸ್ವತಂತ್ರ ರಾಜ್ಯದ ಹಂಬಲ ಹೊಂದಿದ ಹೊಯ್ಸಳರ ಕನಸನ್ನು ತ್ರಿಭುವನಮಲ್ಲದೇವ, ಜಗದೇಕಮಲ್ಲದೇವ ನುಚ್ಚುನೂರು ಮಾಡಿದ್ದರು. ಆದರೆ ಈ ಅರಸರ ಮರಣದ ನಂತರ ಹೊಯ್ಸಳರು ಸ್ವತಂತ್ರರಾಗಿ ಕಲ್ಯಾಣದ ರಾಜ್ಯವನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿದರು. ಈ ಪ್ರಯತ್ನಕ್ಕೆ ಪಾಂಡ್ಯರು ತಡೆಗೋಡೆಯಾಗಿದ್ದರಿಂದ ಇವರೊಂದಿಗೆ ನಿರಂತರವಾಗಿ ಯುದ್ಧಗಳನ್ನು ಮುಂದುವರಿಸಿದರು. ವಿಜಯಪಾಂಡ್ಯ ಹೊಯ್ಸಳ ಅರಸರಾದ ವೀರನರಸಿಂಹ ಮತ್ತು ವೀರಬಲ್ಲಾಳರ ಆಕ್ರಮಣಗಳನ್ನು ಎದುರಿಸಬೇಕಾಯಿತು.

ವಿಜಯಪಾಂಡ್ಯನ ಆಡಳಿತದ ಆರಂಭದ ಕಾಲಘಟ್ಟದಲ್ಲಿ ಹೊಯ್ಸಳ ವೀರನರಸಿಂಹ ಅಧಿಕಾರದಲ್ಲಿದ್ದ(ಕ್ರಿ.ಶ. ೧೧೫೨ರಿಂದ ೧೧೭೩). ಈತನ ಕೆಲವು ಶಾಸನಗಳು, ತಲಕಾಡು ಗಂಗವಾಡಿನೊಳಂಬವಾಡಿಕೊಂಗುನಂಗಲಿಬನವಾಸೆಯುತ್ಸಂಗಿ ಹಾನುಂಗಲ್ಗೊಂಡ; ತಲಕಾಡು ಕೊಂಗುನಂಗಲಿಕೊಯತೂರುಚಂಗಿವನವಾಸೆಹಾನುಂಗಲ್ಲುಕೊಂಡ; ಅಂದರೆ ತಲಕಾಡು, ಗಂಗವಾಡಿ, ನೊಳಂಬವಾಡಿ, ಕೊಂಗುನಾಡು, ನಂಗಲಿ, ಬನವಾಸಿ, ಉಚ್ಚಂಗಿ, ಹಾನಗಲ್ಲು, ಕೊಯಮತ್ತೂರು ಮೊದಲಾದವುಗಳನ್ನು ಗೆದ್ದಿರುವುದಾಗಿ ಮತ್ತು ಪಾಂಡ್ಯಕುಲಕಮಲವೇದಂಡ ಎಂಬ ಬಿರುದುಗಳನ್ನು ಧರಿಸಿದ್ದನು.[೧೮೬] ಈ ಬಿರುದುಗಳು ವಿಷ್ಣುವರ್ಧನ ಮಹಾರಾಜನಿಗೂ ಇದ್ದವು. ಹಾಗಾಗಿ ವೀರನರಸಿಂಹನಿಗೆ ಈ ಬಿರುದುಗಳು ಪಾಂಡ್ಯರ ಮೇಲೆ ಜಯ ಸಾಧಿಸಿದ ಕಾರಣಕ್ಕೆ ಬಂದವುಗಳಲ್ಲ; ವಂಶಪಾರಂಪರಿಕವಾಗಿ ಬಂದಿರುವುದು ಸ್ಪಷ್ಟವಾಗುತ್ತದೆ. ಅಲ್ಲದೆ ವೀರನರಸಿಂಹನ ಕಾಲದಲ್ಲಿ ವಿಜಯಪಾಂಡ್ಯ ಆತನಿಗಿಂತ ಹೆಚ್ಚು ಪ್ರಬಲನಾಗಿದ್ದರಿಂದ ವೀರನರಸಿಂಹ ಇವನನ್ನು ಮುಟ್ಟುವ ಪ್ರಯತ್ನವನ್ನು ಮಾಡಲಿಲ್ಲ. ನೊಳಂಬವಾಡಿ ಪ್ರದೇಶದ ಪಕ್ಕದ ನಾಡುಗಳಾದ ಬನವಾಸಿ, ಹಾನಗಲ್ಲು, ಬಂಕಾಪುರ ನೆಲೆಗಳು ಹೊಯ್ಸಳ ದಾಳಿಗೆ ತುತ್ತಾಗಿದ್ದವು. ನೊಳಂಬವಾಡಿ ಮಾತ್ರ ಇವರಿಂದ ದೂರವಿತ್ತು. ವೀರನರಸಿಂಹನ ನಂತರ ಅಧಿಕಾರಕ್ಕೆ ಬಂದ ವೀರಬಲ್ಲಾಳ ವಿಜಯಪಾಂಡ್ಯನ ಮೇಲೆ ನಿರಂತರವಾಗಿ ದಾಳಿ ಮಾಡಿ ಕ್ರಿ.ಶ. ೧೧೯೩ರ ವೇಳೆಗೆ ಪಾಂಡ್ಯ ರಾಜ್ಯವನ್ನು ವಶಪಡಿಸಿಕೊಂಡು ಕೆಲವು ದಿನಗಳ ಕಾಲ ತನ್ನ ರಾಣಿಗೆ ನೊಳಂಬನಾಡಿನ ಆಡಳಿತ ನೀಡಿ ಪುನಃ ಪಾಂಡ್ಯ ವಂಶದವರಿಗೆ ರಾಜ್ಯವನ್ನು ಬಿಟ್ಟುಕೊಟ್ಟು" ಪಾಂಡ್ಯರಾಜ್ಯ ಪ್ರತಿಷ್ಠಾಪನಾಚಾರ್ಯ/ಪಾಂಡ್ಯರಾಜ್ಯಸಮುದ್ದರಣ" ಎಂಬ ಬಿರುದುಗಳನ್ನು ಹೊಂದಿದ್ದನು.[೧೮೭]

ವೀರಬಲ್ಲಾಳ ಪಾಂಡ್ಯನಾಡಿನ ಮೇಲೆ ಕೈಗೊಂಡ ದಾಳಿಗಳನ್ನು ವೀರಗಲ್ಲು ಮತ್ತು ಕೆಲವು ಶಾಸನಗಳು ಸ್ಪಷ್ಟಪಡಿಸುತ್ತವೆ. ಕ್ರಿ.ಶ. ೧೧೭೫ರ ಬೋರಸಂದ್ರದ ವೀರಗಲ್ಲು ಶಾಸನ ಹೊಯ್ಸಳ ಚಕ್ರವರ್ತಿ ಭುಜಬಲ ವೀರಬಲ್ಲಾಳ ದೇವರು ನೊಳಂಬವಾಡಿಯ ಸಿಬಿಯ ಮೇಲೆ ದಾಳಿ ಮಾಡಿ ಮುತ್ತಿದನು. ಈ ದಾಳಿಯಲ್ಲಿ ಹೋರಾಡಿ ಮಡಿದ ಸಂತೆಯ ಬೊಮ್ಮಯ್ಯಗೌಡನಿಗೆ ಆತನ ಮಗ ಬ್ರಹ್ಮಯ್ಯನು ವೀರಗಲ್ಲುನು ನೆಡಿಸಿದನು.[೧೮೮] ಈ ಕದನದಲ್ಲಿ ವೀರಬಲ್ಲಾಳನಿಗೆ ಜಯ ದೊರೆತು ನೊಳಂಬವಾಡಿಯಲ್ಲಿನ ಸಿಬಿ ಪರಿಸರ ಆತನ ಹತೋಟಿಗೆ ಹೋಗಿರಬೇಕು. ಈ ಕದನದ ನಂತರದಲ್ಲಿ ಆ ಪ್ರದೇಶದಲ್ಲಿ ಬಲ್ಲಾಳನ ಶಾಸನಗಳು ಕಾಣಿಸಿಕೊಳ್ಳುತ್ತವೆ. ಪಾಂಡ್ಯರ ಉಲ್ಲೇಖಗಳು ದೊರೆಯುವುದಿಲ್ಲ. ಈ ಕದನದಿಂದ ತುಮಕೂರು ಜಿಲ್ಲೆಯ ಶಿರಾ ತಾಲೂಕು, ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲೂಕಿನ ಪ್ರದೇಶಗಳು ವೀರಬಲ್ಲಾಳನಿಗೆ ದೊರೆತವು.

ಕಾಲದ ಉಲ್ಲೇಖವಿಲ್ಲದ ಯರಬಳ್ಳಿಯ ವೀರಗಲ್ಲು ಕ್ರೋಧನ ಸಂವತ್ಸರದ ಭಾದ್ರಪದ ಸುಮಾರು ೧೦ರಂದು ಶ್ರೀಮತುಪ್ರತಾಪಚಕ್ರವರ್ತಿ ಹೊಯ್ಸಳ ವೀರಬಲ್ಲಾಳ ದೇವರ ಮಹಾಪ್ರಧಾನ ಬೆಚೆಯ ದಂಡನಾಯಕರು ಕರಡಿಕೆರೆಯ ಪೆರುಮಗೌಡನ ಮಗ ನಾಗೆಯನಾಯ್ಕರಿಗೆ ಕೊಟ್ಟನೆತ್ತರು. ಕಂಬಲದೇವ ಹುಳಿಎರನಿಡಿದು ಹೊಯಿತ್ತಿರುವಾಗ ಬೆಚೆಯ ದಂಡನಾಯಕರು ಹೊಯಲು

ಬಂದವರನ್ನು ಕದನದಲ್ಲಿ ತಡೆದಾಗ ನಡೆದ ನಾಗೆನಾಯಕರ ತಮ್ಮ ಚಿಕ್ಕನಾಯ್ಕನು ಕಾಳಗದಲ್ಲಿ ಕಾದಿ ಸತ್ತಾಗ ನಾಗೆಯನಾಯಕ ಕೊಟ್ಟನೆತ್ತರು.[೧೮೯] ಹಿರಿಯೂರು ತಾಲೂಕಿನ ಭಾಗದಲ್ಲಿ ಈ ಕದನ ನಡೆದಿದ್ದು ಇಲ್ಲಿ ಯಾರಿಗೆ ಲಾಭವಾಯಿತು ಎಂಬುದು ತಿಳಿಯುವುದಿಲ್ಲ.

ಶ್ರವಣಬೆಳಗೊಳದ ಕ್ರಿ.ಶ. ೧೧೮೧ರ ಆಚಿಯಕ್ಕನ ದತ್ತಿ ಶಾಸನ ಅದಿರಾಜರ ಪಾಲಿಗೆ ಅಂತ್ಯಕಾಲದ ಪ್ರಳಯ ಜ್ವಾಲೆಯಾದ ವೀರಬಲ್ಲಾಳನು ರಣಭೇರಿ ಮೊಳಗಿಸಿದನೋ ಇಲ್ಲವೋ ಲಾಳನಲೀಲೆ ಮುಗಿಯಿತು. ಗುರ್ಜರನಿಗೆ ಉಗ್ರವಾದ ಭಯ ಜ್ವರ ಹಿಡಿಯಿತು. ಗೌಳನಿಗೆ ಹೊಟ್ಟೇ ಶೂಲೆ ಬಂದಿತು. ಪಲ್ಲವನು ಬಿಳಿ ಬಾವುಟ ಹಿಡಿದನು. ಚೋಳನು ಬತ್ತಲೆಯಾದನು. ತೋಳಪೇಟೆಯನ್ನು ತಡೆಯಲಾರದೆ ಒಡೆಯರಸನು ಕಾದಾಟಕ್ಕೆ ಕಾತರಗೊಳ್ಳಲು ಬಲ್ಲಾಳ ನೃಪಾಲನ ದಂಡೆತ್ತಿ ಹೋಗಿ ಅವನನ್ನು ಬಳಸಿದನು. ಇವನ ಗಜ ಸೈನ್ಯವು ಉಚ್ಚಂಗಿ ಶಿಖರವನ್ನು ತನ್ನ ದಂತಗಳಿಂದ ತಿವಿದು ಪುಡಿ ಮಾಡಿತು. ಪಾಂಡ್ಯನ ರೂಪವತಿ ಪತ್ನಿಯನ್ನೂ, ದೇಶವನ್ನೂ, ಕೋಶವನ್ನೂ, ತಂದೆಯನ್ನೂ, ಅಶ್ವವೃಂದವನ್ನು ಬಲ್ಲಾಳನು ಸೆರೆ ಹಿಡಿದನು. ಬಹುಕಾಲದಿಂದ ಶತ್ರುಗಳಿಗೆ ಅಸಾಧ್ಯವೆನಿಸಿದ್ದ ಉಚ್ಚಂಗಿಯನ್ನು ಧರ್ದತೇಜೋನಿಧಿಯಾದ ಬಲ್ಲಾಳನು ಮುತ್ತಿ ಧೂಳಪಟ ಮಾಡಿದ್ದಲ್ಲದೆ ಕಾಮದೇವರಾಜನನ್ನು ಒಡೆಯರಾಜನನ್ನು, ಭಂಡಾರ, ಸ್ತ್ರೀಯರು ಮತ್ತು ಅಶ್ವದಳ ಸಮೇತ ಸೆರೆ ಹಿಡಿದನು[೧೯೦] ಎಂದು ಹೇಳುತ್ತದೆ. ಈ ಶಾಸನದಲ್ಲಿ ತಿಳಿಸುವಂತೆ ವಿಜಯಪಾಂಡ್ಯ ಸಂಪೂರ್ಣವಾಗಿ ಸೋತಿರಲಿಲ್ಲ ಮತ್ತು ಉಚ್ಚಂಗಿ ಕೋಟೆಯನ್ನು ಬಿಟ್ಟುಕೊಟ್ಟಿರಲಿಲ್ಲ ಎಂಬುದು ಶಾಸನಗಳಿಂದ ತಿಳಿಯುತ್ತದೆ. ವೀರಗಲ್ಲು ಶಾಸನಗಳು ತಿಳಿಸುವಂತೆ ವೀರಬಲ್ಲಾಳ ಈ ವೇಳೆಗೆ ಪಾಂಡ್ಯನಾಡಿನ ತುಮಕೂರು, ಚಿತ್ರದುರ್ಗ ಭಾಗದ ಕೆಲವು ಪ್ರದೇಶಗಳ ಮೇಲೆ ಹಿಡಿತ ಹೊಂದಿದ್ದ. ಈ ಪ್ರದೇಶಗಳ ಮೇಲಿನ ಹಿಡಿತವನ್ನು ಉತ್ಪ್ರೇಕ್ಷೆಯಿಂದ ತನ್ನ ಶಾಸನಗಳಲ್ಲಿ ಹೇಳಿಕೊಂಡಿರಬೇಕು.

ಕ್ರಿ.ಶ. ೧೧೮೫ರ ಮಾನ್ಯರಮಸಲವಾಡ ಶಾಸನ ಚಾಳುಕ್ಯ ಜಗದೇಕಮಲ್ಲದೇವನು ಕಲ್ಯಾಣದಲ್ಲಿ ಆಳುತ್ತಿರುವಾಗ ಮಹಾಮಂಡಳೇಶ್ವರ ತ್ರಿಭುವನಮಲ್ಲ ವಿಜಯಪಾಂಡ್ಯ ದೇವರು ಪಾಂಡ್ಯ ವಂಶದ ಪಾರಂಪರಿಕ ಬಿರುದುಗಳನ್ನು ಧರಿಸಿಕೊಂಡು ನೊಳಂಬವಾಡಿ-೩೨೦೦೦, ಕೋಗಳಿ-೫೦೦ನ್ನು ಆಳುತ್ತಿರುವುದಾಗಿ ಹೇಳುತ್ತದೆ.[೧೯೧] ಕ್ರಿ.ಶ. ೧೧೮೬ರ ಗಾರೆಹಟ್ಟಿ ಶಾಸನ ಮಹಾಮಂಡಳೇಶ್ವರ ತ್ರಿಭುವನಮಲ್ಲ ವಿಜಯಪಾಂಡ್ಯ ದೇವರು ನೊಳಂಬವಾಡಿ-೩೨೦೦೦ವನ್ನು ಆಳುತ್ತಿರುವುದಾಗಿ ದಾಖಲಿಸಿದೆ. ಹಾಗಾಗಿ ಶ್ರವಣಬೆಳಗೊಳದ ಶಾಸನದಲ್ಲಿ ವೀರಬಲ್ಲಾಳ ಹೊಂದಿರುವ ಬಿರುದುಗಳು ಕೇವಲ ಶಾಸನ ವರ್ಣನೆ ಮಾತ್ರ ಸೀಮಿತವಾಗಿರುತ್ತದೆ. ವೀರಬಲ್ಲಾನ ಆನಂತರದ ದಾಳಿಯಲ್ಲಿ ವಿಜಯಪಾಂಡ್ಯ ಆತನಿಗೆ ಸಂಪೂರ್ಣವಾಗಿ ಶರಣಾಗತನಾಗುತ್ತಾನೆ.

ಕ್ರಿ.ಶ. ೧೧೮೬ರ ನಂತರ ವಿಜಯಪಾಂಡ್ಯನ ಶಾಸನಗಳು ದೊರೆಯುವುದಿಲ್ಲ. ಕ್ರಿ.ಶ. ೧೧೯೫ರ ವೇಳೆಗೆ ನೊಳಂಬವಾಡಿಯ ಆಡಳಿತ ವೀರಬಲ್ಲಾಳನಿಗೆ ಸೇರಿತು. ಬಾಗಳಿಯ ಕ್ರಿ.ಶ. ೧೧೯೫ರ ಶಾಸನ ಅದನ್ನು ಸ್ಪಷ್ಟಪಡಿಸುತ್ತದೆ. ಹೊಯ್ಸಳ ಚಕ್ರವರ್ತಿ ವೀರಬಲ್ಲಾಳ ದೇವರು

ಬಾಳ್ಗುಳಿಯ ನೆಲೆವೀಡಿನಲ್ಲಿದ್ದಾಗ ಆ ಸ್ಥಳದ ಕಲಿದೇವಸ್ವಾಮಿಗೆ ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ ನಂದಿಬೆವೂರು ಸೀಮೆಯೊಳಗಣ ಸಮಸ್ತ ಭೂಮಿಯನ್ನು ನೀಡಿದ ಬಗ್ಗೆ ಮಾಹಿತಿ ಕೊಡುತ್ತದೆ.[೧೯೨] ಕ್ರಿ.ಶ. ೧೧೯೩ರ ವೇಳೆಗೆ ಪಾಂಡ್ಯರನ್ನು ಸೋಲಿಸಿ ನೊಳಂಬವಾಡಿ ಪ್ರಾಂತ್ಯದಲ್ಲಿ ನೆಲೆನಿಂತಿರುವುದು ಇದರಿಂದ ಸ್ಪಷ್ಟವಾಗುತ್ತದೆ.

ಕುರುವತ್ತಿಯ ಯಾಹುವಮಲ್ಲೇಶ್ವರ ದೇವರಿಗೆ ದಾನ ನೀಡಿರುವುದನ್ನು ಕ್ರಿ.ಶ. ೧೨೦೧ರ ಶಾಸನ ತಿಳಿಸುತ್ತದೆ. ಇನ್ನೊಂದು ಕ್ರಿ.ಶ. ೧೨೦೫ರ ಕುರುವತ್ತಿ ಶಾಸನ ವೀರಬಲ್ಲಾಳನ ಪಟ್ಟಮಹಾದೇವಿ ಪದುಮಲದೇವಿಯರ ಮಹಾಪ್ರಧಾನ ಭಂಡಾರಿ ಸೋಮರಸನು ಗುತ್ತೊಳಲಿನಿಂದ ಆಳುತ್ತಿರುವುದಾಗಿ ಹೇಳುತ್ತದೆ.[೧೯೩] ಕ್ರಿ.ಶ. ೧೧೯೩ರಲ್ಲಿ ನೊಳಂಬವಾಡಿ ಪ್ರದೇಶವನ್ನು ಜಯಿಸಿ ಕ್ರಿ.ಶ. ೧೨೦೫ರವರೆಗೆ ಆ ಪ್ರದೇಶವನ್ನು ತನ್ನ ಹತೋಟಿಯಲ್ಲಿ ಇಟ್ಟುಕೊಂಡು ನಂತರ ಪಾಂಡ್ಯರಿಗೆ ಅವರ ರಾಜ್ಯವನ್ನು ಮರಳಿ ನೀಡಿದನು. ಕ್ರಿ.ಶ. ೧೨೦೬ರ ಕುರುವತ್ತಿ ಶಾಸನ ವೀರಬಲ್ಲಾಳದೇವ ವರ್ಷದ ೧೬ನೆಯ ಕ್ಷಯಸಂವತ್ಸರದಂದು ಶ್ರೀಮನ್ಮಹಾಮಂಡಳೇಶ್ವರ ಪಾಂಡ್ಯ ದೇವರು ಅನುಮತಿಯಂತೆ ದಾಸಿಯಣ್ಣನಾಯಕರು ಅಹವಮಲ್ಲದೇವರಿಗೆ ದಾನ ಬಿಡುತ್ತಾನೆ.[೧೯೪] ಇಲ್ಲಿ ಬರುವ ಪಾಂಡ್ಯ ಅರಸ ಯಾರು ಎಂಬುದು ಸ್ಪಷ್ಟವಾಗುವುದಿಲ್ಲ. ಹೀಗೆ ಪುನಃ ಪಾಂಡ್ಯರಿಗೆ ಅವರ ವಿಭಾಗವಾದ ನೊಳಂಬವಾಡಿ-೩೨೦೦೦ ಪ್ರದೇಶದ ಆಡಳಿತವನ್ನು ವೀರಬಲ್ಲಾಳ ಮುಂದುವರಿಸಿ ಪಾಂಡ್ಯರಾಜ್ಯ ಪ್ರತಿಷ್ಠಾಪನಾಚಾರ್ಯ/ಪಾಂಡ್ಯರಾಜ್ಯಸಮುದ್ಧರಣ ಎಂಬ ಬಿರುದುಗಳನ್ನು ಪಡೆದುಕೊಂಡನು. ಕಲ್ಯಾಣದ ಚಾಳುಕ್ಯರಿಗೆ ಸಾಮಂತರಾಗಿದ್ದ ಉಚ್ಚಂಗಿ ಪಾಂಡ್ಯರು ಹೊಯ್ಸಳ ವೀರಬಲ್ಲಾಳನ ಸಾಮಂತರಾಗಿ ನೊಳಂಬವಾಡಿಯ ಆಡಳಿತದಲ್ಲಿ ಮುಂದುರುವರಿದಿ ರುವುದನ್ನು ಕ್ರಿ.ಶ. ೧೨೦೫ರ ಕುರುವತ್ತಿ ಶಾಸನ ಇದನ್ನು ಸ್ಪಷ್ಟಪಡಿಸುತ್ತದೆ.

ಪಾಂಡ್ಯ ವಂಶದ ರಕ್ಷಣೆಗಾಗಿ ತನ್ನ ಇಡೀ ಆಡಳಿತವನ್ನು ಮೀಸಲಿಟ್ಟ ವಿಜಯಪಾಂಡ್ಯ ಸಮರ್ಥ ಆಡಳಿತ ವರ್ಗವನ್ನು ಸಂಘಟಿಸಿದ ಮಹಾಸಾಮಂತ, ದಂಡನಾಯಕ ಮೊದಲಾದವರು ಇಲ್ಲಿ ಮುಖ್ಯವಾಗಿದ್ದರು.

### ವಿಜಯ ಪೆರ್ಮಾಡಿ (ಕ್ರಿ.ಶ. ೧೧೪೩-೧೧೬೩)

ವಿಜಯ ಪೆರ್ಮಾಡಿ ವಿಜಯಪಾಂಡ್ಯದೇವನ ನೆಚ್ಚಿನ ಮಹಾದಂಡನಾಯಕನಾಗಿದ್ದ. ದಂಡನಾಯಕ ಹುದ್ದೆಯ ಜೊತೆಯಲ್ಲಿ ಸರ್ವಾಧ್ಯಕ್ಷ, ಮಹಾಪಸಾಯಿತ, ಮಹಾಪ್ರಧಾನ ಮೊದಲಾದ ಪದವಿಗಳನ್ನು ಪಡೆದುಕೊಂಡಿದ್ದ. ವಿಜಯಪಾಂಡ್ಯದೇವ ವೀರಪಾಂಡ್ಯದೇವನ ಸಾಮಂತನಾಗಿ ಆಡಳಿತದಲ್ಲಿ ನೇಮಕಗೊಂಡಾಗ ವಿಜಯ ಪೆರ್ಮಾಡಿ ದಂಡನಾಯಕ ಆತನ ಸಮಸ್ತ ರಾಜ್ಯ ಕಾರ್ಯಗಳನ್ನು ನೋಡಿಕೊಳ್ಳುತ್ತಿದ್ದ. ಆತನ ಆಡಳಿತದ ಆರಂಭದಿಂದ ಕೊನೆಯ ಕಾಲದವರೆಗೂ ನಂಬಿಕಸ್ಥ ದಂಡನಾಯಕನಾಗಿದ್ದ. ಕ್ರಿ.ಶ. ೧೧೭೧ರ ಮಾಡಲಗೇರಿ ಶಾಸನ ಸಕಳಗುಣಾಢ್ಯನಪ್ಪ ಶ್ರೀಮನ್ಮಹಾಪ್ರಧಾನಂ ವಿಜಯಹೆಮಾಡಿ ದಣ್ನಾಯಕ ನೊಣಂಬವಾಡಿ ಮೂವತ್ತಿಚ್ಛಾಸಿರಮಂ

ಸರ್ವ್ವಾಧಿಕಾರಂಗೆಯ್ಯುತ್ತವಿರ್ದ್ದು[೧೯೫] ಎಂದು ದಾಖಲಿಸಿದೆ. ವಿಜಯಪಾಂಡ್ಯ ದೇವನ ಆಡಳಿತ ವರ್ಗದಲ್ಲಿ ಈತನಿಗೆ ಹೆಚ್ಚಿನ ಸ್ಥಾನಮಾನವನ್ನು ನೀಡಲಾಗಿತ್ತು. ರಾಜಪ್ರತಿನಿಧಿಯಾಗಿ ಕರ್ತವ್ಯ ನಿರ್ವಹಿಸಿದ ಕೀರ್ತಿ ಈತನಿಗೆ ಸಲ್ಲುತ್ತದೆ.

### ಮಹಾಸಾಮಂತ ಕಾಮೆಯನಾಯಕ

ವಿಜಯಪಾಂಡ್ಯದೇವರು ನೊಳಂಬವಾಡಿ ಪ್ರದೇಶವನ್ನು ಆಳುತ್ತಿರುವಾಗ ಪಾದಪದ್ಮೋಪಜೀವಿ, ಶೌಚಗಂಗೇಯ ಪರಬಳಸಾಧಕ ಮಹೇಶ್ವರ ದೇವರ ಪಾದಾರಾಧಕ ಮಹಾಸಾಮಂತ ಕಾಮೆಯನಾಯಕನು ಬೆಮ್ಮಚ್ಚನೂರ ನೆಲೆವೀಡಿನಿಂದ ಆಳುತ್ತಿರುವುದನ್ನು ಗಾರೆಹಟ್ಟಿ ಶಾಸನ[೧೯೬] ಹೇಳುತ್ತದೆ. ಈತನ ತಂದೆ ಉದಯಾದಿತ್ಯ ನಾಯಕ ತ್ರಿಭುವನಮಲ್ಲ ಪಾಂಡ್ಯ, ರಾಯಪಾಂಡ್ಯ ಮತ್ತು ವೀರಪಾಂಡ್ಯ ಅರಸರ ಕಾಲದಲ್ಲಿ ಇದೇ ನೆಲೆವೀಡಿನಿಂದ ಮಹಾಸಾಮಂತನಾಗಿ ಆಡಳಿತ ನಡೆಸುತ್ತಿದ್ದ.

### ಸಾಮಂತ ಸೋವಿದೇವ

ಚಿತ್ರದುರ್ಗ ತಾಲೂಕಿನ ಹಿರೇಬೆನ್ನೂರು ಮತ್ತು ಯಳಗೋಡು ಶಾಸನಗಳು ಸೋವಿದೇವನ ಬಗ್ಗೆ ಮಾಹಿತಿ ನೀಡುತ್ತವೆ. ಜಗದೇಕಮಲ್ಲ ವಿಜಯಪಾಂಡ್ಯ ಉಚ್ಚಂಗಿಯ ನೆಲೆವೀಡಿನಲ್ಲಿ ಆಳುತ್ತಿರುವಾಗ ಸಾಮಂತ ಸೋವಿದೇವರು ಮಲ್ಲಿಕಾರ್ಜುನ ಪಂಡಿತರ ಕಾಲನು ತೊಳೆದು ದೇವರಿಗೆ ದಾನ ಬಿಡುತ್ತಾರೆ.[೧೯೭] ಸೋವಿದೇವ, ಸೋಮೇಶ್ವರ, ಸೋರ್ವಿದೇವ ಎಂದು ಶಾಸನಗಳು ಈತನನ್ನು ಉಲ್ಲೇಖಿಸುತ್ತವೆ.

### ಕದಂಬ ನಾಚಿದೇವ

ಕೊಟ್ಟೂರನಾಚಿದೇವ ತನ್ನ ಪೂರ್ವಿಕರಂತೆ ವಿಜಯಪಾಂಡ್ಯದೇವನ ಪಾದಪದ್ಮೋಪಜೀವಿಯಾಗಿ ಆಳುತ್ತಿರುವುದನ್ನು ಹೊಳಗುಂದಿ ಶಾಸನ ತಿಳಿಸುತ್ತದೆ. ಕೋಗಳಿ ಯಯ್ನೂರಕಂ ಚಾಗಿ ಮಹಾಭೋಗಿ ಮಂನೆಯಂ ವಿಶದಯಶೋಭಾಗಿರಿಪು ನೃಪ ಪಯೋದಸದಾಗತಿ ಕೊಟ್ಟೂರು ನಾಚಿದೇವಂ ನೆಗಳ್ದಂ । ಎಂದು ಉಲ್ಲೇಖಿಸುತ್ತದೆ.

### ಇಮ್ಮಡಿ ವಿಕ್ರಮಾದಿತ್ಯ

ಗುತ್ತ ವಂಶದ ಇಮ್ಮಡಿ ವಿಕ್ರಮಾದಿತ್ಯ ವಿಜಯಪಾಂಡ್ಯನ ಕಾಲದಲ್ಲಿ ಬೆಳುಹುಗೆ-೭೦ ಮತ್ತು ಬೆಣ್ಣೆವೂರು-೧೨ನ್ನು ಆಳುತ್ತಿರುವಾಗ ಆತನ ಪ್ರಧಾನ ಸುಸಂಗದಣ್ಣಾಯಕನ ಮಹಾಮಂಡಳೇಶ್ವರ ವಿಜಯಪಾಂಡ್ಯರಸನ ಅನುಮತಿಯಂತೆ ಬಾಚರಸ ಮತ್ತು ಕುರುವತ್ತಿಯ ಮಹಾಜನಗಳ ಎದುರಿನಲ್ಲಿ ಮೊದಲು ಹಿರಿಯ ವಿಕ್ರಮಾದಿತ್ಯನು ಕೊಟ್ಟ ವ್ರಿತ್ತಿಭೂಮಿ ಸಮೇತ ಆಹವಮಲ್ಲೇಶ್ವರದೇವರಿಗೆ ೭೦ ಮತ್ತರು ಭೂಮಿಯನ್ನು ದಾನ ಬಿಡುತ್ತಾನೆ. ಲೋಕಾಭರಣನು ಈ ದಾನವನ್ನು ಪಡೆದನು[೧೯೮] ಎಂದು ಹೇಳುತ್ತದೆ. ಗುತ್ತ ವಂಶದೊಂದಿಗೆ ಪಾಂಡ್ಯ ಅರಸರ ಸಂಬಂಧಗಳು ಬೆಳೆದಿದ್ದರಿಂದ ಅವರಿಗೆ ತಮ್ಮ ಆಡಳಿತದಲ್ಲಿ ಆಶ್ರಯವನ್ನು ನೀಡಿದ್ದರು. ಮಾನ್ಯರಮಸಲವಾಡ ಕೊಟ್ನೆಕಲ್ಲು ಶಾಸನಗಳು ಈತನನ್ನು ಉಲ್ಲೇಖಿಸುತ್ತವೆ.

**ಇಮ್ಮಡಿ ಈಶ್ವರದೇವ**

ಬೆಳಗುತ್ತಿಯ ಸಿಂದರ ಮನೆತನಕ್ಕೆ ಸೇರಿದ ಎರಡನೇ ಈಶ್ವರದೇವನನ್ನು ಹರಿಹರದ ಶಾಸನ ಉಲ್ಲೇಖಿಸುತ್ತದೆ. ಕಲ್ಯಾಣದ ಚಾಳುಕ್ಯರ, ಕಳಚೂರ್ಯರ ಮತ್ತು ಸೇವುಣರ ಸಾಮಂತರಾಗಿದ್ದ ಬೆಳಗುತ್ತಿ ಸಿಂಧರು ಪಾಂಡ್ಯರಿಗೆ ವಿಧೇಯರಾಗಿದ್ದರೂ ವಿಜಯಪಾಂಡ್ಯನ ಕಾಲದಲ್ಲಿ ಇಮ್ಮಡಿ ಈಶ್ವರದೇವ ಆತನ ಸಾಮಂತನಾಗಿ ಬನವಾಸಿ ನಾಡನ್ನು ಆಳುತ್ತಿದ್ದ. ಹರಿಹರದ ಶಾಸನ ಬೆಳಗುತ್ತಿ ಸಿಂದ ಕುಲದ ವಂಶಾವಳಿಯನ್ನು ನೀಡುತ್ತದೆ.

**ಹರಿಯಮ ನಾಯಕ**

ಹರಿಹರ ತಾಲೂಕಿನ ವಾಸನದ ಶಾಸನ ಈತನ ಬಗ್ಗೆ ಮಾಹಿತಿ ನೀಡುತ್ತದೆ. ವಿಜಯಪಾಂಡ್ಯ ನೊಳಂಬವಾಡಿ-೩೨೦೦೦ ಪ್ರದೇಶವನ್ನು ಆಳುತ್ತಿರುವಾಗ ಸಾಮಂತ ಹುಣಿಯನಾಯಕನ ಮಗ ಹರಿಯಮ ನಾಯಕನು ವಾಸನ ಕೊಕ್ಕಲೂರುಗಳನ್ನು ಆಳುತ್ತಿರುವುದಾಗಿ ದಾಖಲಿಸಿದೆ.

**ಶಂಕರ ದಂಡನಾಯಕ**

ಕ್ರಿ.ಶ. ೧೧೭೮ರ ಹೊಳಲು ಮತ್ತು ಕೊಟ್ಟೆಕಲ್ಲು ಶಾಸನಗಳು ದಂಡನಾಯಕ ಶಂಕರದೇವನನ್ನು ಉಲ್ಲೇಖಿಸುತ್ತವೆ. ಶಂಕರದೇವ ವಿಜಯಪಾಂಡ್ಯನ ಆಡಳಿತದಲ್ಲಿ ಮಹಾಪ್ರಧಾನ ಸರ್ಬ್ಬಾಧಿಕಾರಿ, ಸಂಧಿವಿಗ್ರಹಿ ಮಹಾಪಸಾಯಿತ, ದಂಡನಾಯಕ ಹುದ್ದೆಗಳನ್ನು ಹೊಂದಿದ್ದುದನ್ನು ಹೊಳಲು ಶಾಸನ ಹೇಳುತ್ತದೆ.

**ಜಗದಳ ಹಂಪರಸ**

ಮಾಡಲಗೇರಿಯ ಕ್ರಿ.ಶ. ೧೧೭೧ರ ಶಾಸನ ಮಹಾಮಂಡಳಿಕ ಜಗದಳ ಹಂಪರಸರು ತಮಯರಸಿಯಕೆರೆಯ ಹೊಲದೊಳಗೆಯಾಮಾದನೇಶ್ವರ ದೇವರಿಗೆ ಭೂಮಿಯನ್ನು ಬಿಡುತ್ತಾರೆ. ವಿಜಯಪಾಂಡ್ಯನ ಕಾಲದಲ್ಲಿ ಹಂಪರಸರು ಹರಪನಹಳ್ಳಿ ತಾಲೂಕಿನ ಅರಸೀಕೆರೆ ಪ್ರದೇಶವನ್ನು ಆಳುತ್ತಿದ್ದರು.

ಈ ಉನ್ನತ ಅಧಿಕಾರಿಗಳ ಜೊತೆಗೆ ಹಳ್ಳಿಗಳ ಆಡಳಿತವನ್ನು ಗೌಡ, ಹೆಗ್ಗಡೆ, ಶಾನಬೋವ ಮೊದಲಾದವರು ನೋಡಿಕೊಳ್ಳುತ್ತಿದ್ದರು. ಗಾರೆಹಟ್ಟಿಯ ಮಾಚಯ್ಯ ಹೆಗ್ಗಡೆ, ಹಿರೇಬೆಂನೂರು ಮಲ್ಲಗೌಡ, ಬಾಚಗೌಡ, ಆನೆಕೊಂಡದ ಕೋಬೂರ ತಿಲ್ಲೆನಾಯಕರ ಮಗ ಶಿವಕಲ್ಯಾಣನಾಯಕ, ಗಂಗನರಸಿಯ ಗಂಗಗೌಡ, ಬಮ್ಮಗೌಡ, ಸೇನಾಪತಿ ದಂಡನಾಥ, ಬೆಣ್ಣೆಯೂರು, ಬಾಚರಸ, ಮಾನ್ಯರಮಸಲವಾಡದ ಹೆಗ್ಗಡೆ ಯ್ಯೆಚೆಣ, ಹೊಲ್ಲಣ, ರಾಜಮ, ಗಟ್ಟಿಗಾವುಂಡ ಇಮ್ಮಡಿ ಗಟ್ಟಿಗಾವುಂಡ, ಸೇನಬೋವ ದುಗ್ಗಣ ಕೇತಶೆಟ್ಟಿ ಮಗ ಸೋಸನಯ್ಯ ಪಸಾಯಿತ ದೊಳೆಯ ಸಾಹಣಿ, ಕೇತದಂಡನಾಥನ ಪೆರ್ಗಡೆ ದಾಸಿಯಣ್ಣ ಬ್ರಹ್ಮದೇವ, ಬಾಗಳಿಯ ಸೇನಬೋವ ಸಂಕಣ ಸೇನಬೋವ ಹೊನ್ನಬಾಚಯ್ಯ, ಹಿರೇಮ್ಯಾಗಳಗೇರಿ ದಂಡಾದೀಪ ಗೋವಿಂದ,

ಮಲೆಯಾದಿರಾಜ ಮಹಾನಾಯಕ ಉದಯಾದಿತ್ಯನಾಯಕ, ಬಮ್ಮಯನಾಯಕ, ಗೂಳಿಮೆನಾಯಕ, ವಾಸುದೇವನಾಯಕ ಸಾತಿಮೆನಾಯಕ, ಮೂಕಗಾವುಂಡ ಮಾದಿಮಯ್ಯನಾಯಕ ಮೊದಲಾದವರು ವಿಜಯಪಾಂಡ್ಯನ ಕಾಲದಲ್ಲಿ ಗ್ರಾಮಗಳ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು.

ವಿಜಯಪಾಂಡ್ಯ ರಾಜಕೀಯ ಆಡಳಿತದ ಜೊತೆ ಜೊತೆಯಲ್ಲಿ ತನ್ನ ಪೂರ್ವಿಕರಂತೆ ಆಡಳಿತ ವರ್ಗದೊಂದಿಗೆ ಸೇರಿ ಧಾರ್ಮಿಕ ಮತ್ತು ಪ್ರಜಾಕಲ್ಯಾಣ ಕಾರ್ಯಕ್ರಮದಲ್ಲಿ ತೊಡಗಿದ್ದನು. ಚಿತ್ರದುರ್ಗ ಬೆಟ್ಟದ ಹಿಡಂಬೇಶ್ವರ ದೇವರ ನಂದಾದೀಪಕ್ಕೆ ಮಹಾಸಾಮಂತ ಕಾಮಯ್ಯನಾಯಕ, ಚೋಳಯ್ಯ ನಾಯಕರ ಜೊತೆಯಲ್ಲಿ ಭೂಮಿ ನೀಡಿದ.[೧೯೯] ಹೆಗ್ಗಡೆ ಮಾಚಯ್ಯನ ಮಗಳು ಗಂಗೌವೆ ಗಾರೆಹಟ್ಟಿಯಲ್ಲಿ ಮಹೇಶ್ವರದೇವರ ಲಿಂಗಪ್ರತಿಷ್ಠೆ ಮಾಡಿಸಿ, ಆ ದೇವರಿಗೆ ದಾನ ಬಿಡುತ್ತಾರೆ.[೨೦೦] ಆನೆಕೊಂಡ ಗ್ರಾಮದಲ್ಲಿ ಸೋಮಲದೇವಿ ನಿರ್ಮಿಸಿದ ಸೋಮೇಶ್ವರ ದೇವರಿಗೆ ದಾನ ಬಿಡುತ್ತಾರೆ ಹಾಗೂ ತನ್ನ ಆರಾಧ್ಯ ದೇವರಾದ ಹರಿಹರದ ಶಂಕರನಾರಾಯಣ ದೇವರಿಗೆ ದಂಡನಾಯಕನ ಜೊತೆಗೂಡಿ ದಾನ ಮಾಡುತ್ತಾರೆ.[೨೦೧] ವಾಸನದಲ್ಲಿ ಸಾಮಂತರೊಂದಿಗೆ ಸೇರಿ ಚಂಡೆಯನಂ ಕೆರೆಯನುಂಬಾಳನವಂ ಮಾಡಿಸಿದರು. ತುಂಗಭದ್ರ ನದಿಯ ದಂಡೆಯಲ್ಲಿರುವ ಗಂಡಾರಾದಿತ್ಯನ ಹೊಳಲು ಗ್ರಾಮದ ೧೨೦ ಮಹಾಜನಗಳಿಗೆ ದಾನ ಬಿಟ್ಟು ಅದರ ಸುಂಕ ವಸೂಲಿಯ ಅಧಿಕಾರವನ್ನು ೧೨೦ ಮಹಾಜನಗಳಿಗೆ ಹೊರಿಸಲಾಯಿತು.[೨೦೨]

ಹೊಳಗುಂದಿಯ ಮಲ್ಲಿನಾಥ ದೇವರ ಬಸದಿಯ ಸೇವಾಕಾರ್ಯಗಳಿಗೆ ಭೂಮಿ ದಾನ ಬಿಡುತ್ತಾರೆ. ಮಂಡೆನಹಳ್ಳಿಯ ಮಂಡೇಶ್ವರ ದೇವರಿಗೆ ಆ ಸ್ಥಳಕ್ಕೆ ಬಾಚಜೀಯನನ್ನು ಆಚಾರ್ಯನನ್ನಾಗಿ ನೇಮಿಸಿ ಭೂದಾನ ಮಾಡುತ್ತಾರೆ.[೨೦೩] ಉಚ್ಚಂಗಿದುರ್ಗದ ಕಲ್ಲಿನಾಥ ದೇವರಿಗೆ ಉಚ್ಚಂಗಿ ಪಟ್ಟಣದ ತೆರಿಗೆಯನ್ನು ಚಿಕ್ಕಮನಕೆರೆಯಿಂದ ಚಟ್ಟನಕೆರೆಯ ಉತ್ತರದ ಕೋಡಿಯವರೆಗಿನ ನೀರಾವರಿ ಭೂಮಿಯನ್ನು ದಾನ ಬಿಡುತ್ತಾನೆ. ಕಂಚಿಕೆರೆಯಲ್ಲಿ ಗೋಮಠದ ಕೋಡವಲ್ಲಿಭಟ್ಟರ ಮಗಳು ಪೊಂನವೆ ನಿರ್ಮಿಸಿದ ಪೊನ್ನೇಶ್ವರದೇವರು ಮತ್ತು ನಾರಾಯಣದೇವರುಗಳ ಸೇವಾಕಾರ್ಯಕ್ಕೆ ದಾನ ಬಿಡುತ್ತಾರೆ. ಬಾಗಳಿಯ ಸೋಮನಾಥದೇವರಿಗೆ ನೀಲೇಶ್ವರ ದೇವರಿಗೆ ದಾನ ಮಾಡುತ್ತಾನೆ. ಹಿರೆಯಬೆತ್ತೂರ ದೇಮೇಶ್ವರ ದೇವರಿಗೆ ಸೋಮೇಶ್ವರ ದೇವರಿಗೆ ಮಲೆಯಾಧಿರಾಜ ಮಹಾನಾಯಕ ಉದಯಾದಿತ್ಯನಾಯಕ, ಬಮ್ಮಯ್ಯನಾಯಕರು ಹಿರಿಯಕೆರೆಯ ಕೆರೆಗೆ ದಾನ ಬಿಡುತ್ತಾರೆ. ವಿಜಯಪಾಂಡ್ಯ ತನ್ನ ಆಡಳಿತ ಕಾಲದಲ್ಲಿ ದೇವಾಲಯಗಳ ನಿರ್ಮಾಣ ಜೀರ್ಣೋದ್ಧಾರ, ಅಗ್ರಹಾರಗಳ ಬ್ರಾಹ್ಮಣರಿಗೆ, ವಿದ್ಯಾರ್ಥಿಗಳಿಗೆ, ಅಧ್ಯಾಪಕರಿಗೆ, ಆಚಾರ್ಯರಿಗೆ ಮೊದಲಾದವರಿಗೆ ಆಶ್ರಯ ನೀಡಿರುವುದು ಆತನ ಶಾಸನಗಳಿಂದ ತಿಳಿಯುತ್ತದೆ.

### ವ್ಯಕ್ತಿತ್ವ

ಉಚ್ಚಂಗಿ ಪಾಂಡ್ಯರಲ್ಲಿ ಶ್ರೇಷ್ಠವೆನಿಸಿ ವೈಭವದಿಂದ ಮೆರೆದ ವಿಜಯಪಾಂಡ್ಯನ ವ್ಯಕ್ತಿತ್ವವನ್ನು ಕ್ರಿ.ಶ. ೧೧೬೮ರ ಹರಿಹರ ಶಾಸನ ಮತ್ತು ಕ್ರಿ.ಶ. ೧೧೭೧ರ ಲೋಕಿಕೆರೆಯ ಶಾಸನಗಳು ವರ್ಣಿಸುತ್ತವೆ. ರಾಯಪಾಂಡ್ಯನ ಇನ್ನೊಬ್ಬ ಮಗನೇ ವಿಜಯಪಾಂಡ್ಯ. ಇವನಿಗೆ ಕಾಮದೇವ ಎಂಬ ಇನ್ನೊಂದು ಹೆಸರಿತ್ತು. ಕೊಬ್ಬಿದ ಶತ್ರುಗಳನ್ನು ಸೀಳುವುದರಲ್ಲಿ ಸಮರ್ಥನೆನಿಸಿದ

ಕಾಮದೇವ ಮಹಾಶೂರನಾಗಿ ಶತ್ರುಭಯಂಕರನೆನಿಸಿದ್ದನು. ಸಪ್ತಕೊಂಕಣಗಳನ್ನು ಗೆದ್ದು ಕನಕ ಪರ್ವತದ ಮೇಲೆ ಮತ್ಸ್ಯಲಾಂಛನವಿರುವ ಜಯಸ್ತಂಭವನ್ನು ಸ್ಥಾಪಿಸಿ ಕೀರ್ತಿ ಪಡೆದ ಹಿಂದಿನ ದೊರೆಗಳ ಪರಂಪರೆಯನ್ನು ಮುಂದುವರಿಸಿ, ಯಾದವವಂಶದ್ಯುಮಣಿ, ಪಾಂಡ್ಯಕುಲ ಕಮಲಮಾರ್ತಂಡ, ಶಂಕರನಾರಾಯಣ ದೇವರ ಪಾದಸ್ಮರಣೆಯನ್ನು ಸದಾ ಅಂತರಂಗದಲ್ಲಿ ಮಾಡುವವನೂ, ಭೂತ ಬೇತಾಳಗಳನ್ನು ತನ್ನ ಕಿಂಕರರನ್ನಾಗಿ ಮಾಡಿಕೊಂಡಿದ್ದವನೂ, ರಾಜಿಗ ಚೋಳನ ಆಸೆಯನ್ನು ಭಂಗಗೊಳಿಸಿದವನು, ಪರಿಚ್ಛೇದಿ ಗಂಡ ಎನಿಸಿದವನು ಎಂದು ಮುಂತಾಗಿ ಕೀರ್ತಿತನಾದವನು ವಿಜಯಪಾಂಡ್ಯ[೨೦೪] ರಾಯಪಾಂಡ್ಯನ ಮಗನಾದ ಈತನಿಗೆ ಕಲ್ಪವೃಕ್ಷಕ್ಕೆ ಜನ್ಮ ಕೊಟ್ಟ ಸಮುದ್ರದ ದಡವನ್ನೂ, ಸಿಂಹಗಳಿಗೆ ಜನ್ಮಕೊಟ್ಟ ಮೇರುಪರ್ವದ ತಪ್ಪಲನ್ನೂ, ಸೂರ್ಯನಿಗೆ ಜನ್ಮ ಕೊಟ್ಟ ಪೂರ್ವದಿಕ್ಕನ್ನೂ ತಿರಸ್ಕರಿಸಿದ ಎಂದರೆ ಮೀರಿಸಿದ ರಾಯಮಹೇಶ್ವರನ ರಾಣಿ ಕಾಮನೆಂಬ ಹೆಸರಿನಿಂದ ಪ್ರಸಿದ್ಧನಾದ ನಿಗಳಂಕಮಲ್ಲ ವಿಜಯಶ್ರೀಪಾಂಡ್ಯನಿಗೆ ಜನ್ಮ ಕೊಟ್ಟಳು. ಜಗತ್ತಿನ ಸೃಷ್ಟಿಯಲ್ಲಿ ನಿಷ್ಣರಾದ ಎಷ್ಟು ಜನ ಬ್ರಹ್ಮರಿಲ್ಲ? ಆದರೆ ಅವರಲ್ಲಿ ಒಬ್ಬನಾದರೂ ಅತ್ರಿಮುನಿಯಂತೆ ಅಲ್ಲ. ಏಕೆಂದರೆ ಯಾವ ಅತ್ರಿಮುನಿಯ ವಂಶದಲ್ಲಿ ಲಕ್ಷ್ಮೀಪತಿಯಾದ ಶ್ರೀಮಹಾವಿಷ್ಣು ಮೊದಲು ಸುಧಾಂಶು(ಚಂದ್ರ)ವಾಗಿ, ಆ ಬಳಿಕ ಕೃಷ್ಣನಾಗಿ ಹುಟ್ಟಿದನೋ ಈಗ ಅವನೇ ಕಾಮನೃಪಾಲನಾಗಿ ಜನ್ಮವೆತ್ತಿದ್ದಾನೆ. ವೀರನಾದ ಶ್ರೀ ನಿಗಳಂಕಮಲ್ಲರಾಜನ ಸೇವಾಸುಧಾಸ್ವಾದನವನ್ನು ತಿರಸ್ಕರಿಸಿ ಕೆಲವು ರಾಜರು ಯುದ್ಧಕ್ಕೆ ದೃಢನಿಶ್ಚಯ ಮಾಡಿರುವರು. ಆ ರಾಜರುಗಳೇನು ದ್ವಿಪಾಂತರವನ್ನು ನೋಡಲು ಇಚ್ಛೆಯುಳ್ಳವರೋ? ಅಥವಾ ಸ್ವರ್ಗ ಸ್ತ್ರೀಯರಲ್ಲಿ ಅನುರಕ್ತರೋ? ಇಲ್ಲವೆ ಭೂಭಾರವನ್ನು ಹೊತ್ತು ಆಯಾಸಗೊಂಡಿರುವರೋ? ಯಾರ ಪ್ರತಾಪ, ಶತ್ರು ರಾಜರ ಮೇಲೆ ಪ್ರಹಾರ ಮಾಡಿ ತೃಪ್ತಿ ಹೊಂದಿದೆಯೋ ಅಂಥ ಶತ್ರುರಾಜರ ಪತ್ನಿಯರ ಕಪೋಲಗಳು ಮಾತ್ರ ಮೂರು ಲೋಕದಲ್ಲಿ ಶ್ರೀಗಂಧದಂತೆ ಹರಡಿರುವ ವಿಜಯಪಾಂಡ್ಯನ ಕೀರ್ತಿಯನ್ನು ನೋಡುವುದಿಲ್ಲ. ವಿಜಯಪಾಂಡ್ಯರಾಜನ ಪರಾಕ್ರಮ ಸತತವಾಗಿ ಕಣ್ಣೀರಿನಿಂದ ಒದ್ದೆಯಾದ ಶತ್ರುರಾಜರ ಸ್ತ್ರೀಯರ ಹೃದಯಗಳನ್ನು ಸುಡಲು ಸನ್ನದ್ಧವಾಗಿರುವುದರಲ್ಲಿ ಆಶ್ಚರ್ಯವೇನು? ಏಕೆಂದರೆ ಅವನ ತೇಜಸ್ಸು ಇಡೀ ಜಗತ್ತನ್ನೇ ಆಕ್ರಮಿಸಿ ಸುಡುತ್ತಿದೆ. ಬ್ರಹ್ಮನಿಂದ ಅವನೊಬ್ಬನೇ ಸರಿಸಾಟಿಯಿಲ್ಲದೆ ಸೃಷ್ಟಿತನಾದ ವ್ಯಕ್ತಿ. ಏಕೆಂದರೆ ಅವನ ಧೈರ್ಯಾದಿ ಗುಣಗಳನ್ನು ಹೋಲುವ ಮತ್ತೊಬ್ಬನು ಇನ್ನೆಲ್ಲಿಯೂ ಕಂಡುಬರುವುದಿಲ್ಲ. ಏಕೆಂದರೆ ಪ್ರಬಲಪ್ರತಾಪರಹಿತರಾದ ಶತ್ರುರಾಜರಿಂದ ಕುಲಪರ್ವತಗಳು ಆಶ್ರಯಿಸಲ್ಪಟ್ಟವು; ಸಮುದ್ರಗಳು ದಾಟಲ್ಪಟ್ಟವು; ಸೂರ್ಯನು ಭೇದಿಸಲ್ಪಟ್ಟನು. ಮೂರು ಲೋಕಗಳಲ್ಲಿ ಶಾಶ್ವತವಾಗಿ ಶೋಭಿಸುವ ಪಾಂಡ್ಯ ರಾಜನ ಕೀರ್ತಿಗೆ ವಶವಾಗಿ, ರಾತ್ರಿಯಲ್ಲಿ ಪ್ರಸಿದ್ಧವಾದ ಬೆಳದಿಂಗಳನ್ನೂ, ಮೂರು ಲೋಕಗಳಿಗೆ ಸೀಮಿತವಾದ ಮೂರು ಪ್ರವಾಹವುಳ್ಳ ಗಂಗೆಯನ್ನೂ, ದಡಗಳ ಎಲ್ಲೆಯನ್ನು ಹೊಂದಿರುವ ಸಾಗರವನ್ನೂ ನಮ್ಮ ವಾಣಿ ಸ್ತೋತ್ರ ಮಾಡಲು ಬಯಸದು. ನಮಸ್ಕಾರ ಮಾಡುವ ಸಮಸ್ತರಾಜರ ಕಿರೀಟಗಳಲ್ಲಿರುವ ಹೊಳೆಯುವ ಮಾಣಿಕ್ಯ ಸಮೂಹಗಳ ಕಿರಣಗಳಿಂದ ಪೂಜಿತವಾದ ಪಾದಪದ್ಮಗಳುಳ್ಳ ಮತ್ತು ಶತ್ರುರಾಜರ ಹಣೆಯ ಬರಹವನ್ನು ಅಳಿಸಲು ಸಮರ್ಥವಾದ ಭುಜಬಲವೆಂಬ ಖಡ್ಗವುಳ್ಳ ಶ್ರೀಕಾಮನೃಪಾಲನಿಗೆ ಜಯವಾಗಲಿ.

ಶತ್ರುಗಳಲ್ಲಿ ಕೆಲವರು ಸಮುದ್ರವನ್ನು ದಾಟುವಂತೆ, ಕೆಲವರಿಗೆ ಕೌಪೀನ ಮಾತ್ರ ಉಳಿಯುವಂತೆ, ಕೆಲವರು ಸೂರ್ಯನಿಗೆ ಇದಿರಾಗಿ ಹೋಗುವಂತೆ ಮಾಡಿದ ಕಾರಣಗಳಿಂದ ಹನುಮಂತನ ವ್ಯಾಪಾರವನ್ನು ತೋರಿಸಿದ ಪಾಂಡ್ಯರಾಜನಿಗೆ ಪ್ರಿಯ ಹನುಮಂತನಂತಿರುವ ಪೆರ್ಮಾಡಿ ದಂಡಾಧಿಪನಿಗೆ ಜಯವಾಗಲಿ.

ಮಹಾಮಂಡಲೇಶ್ವರನಾದ ವಿಜಯಪಾಂಡ್ಯದೇವನು ನೊಳಂಬವಾಡಿ ಭೂಮಂಡಲವನ್ನು ದಿಗ್ಗಜಗಳ ಕುಂಭಸ್ಥಳದಂತೆ ಎತ್ತರವಾದ ಆದಿಶೇಷನ ಶರೀರದಂತೆ ತುಂಬಿದ, ಆಮೆಯ ಚಿಪ್ಪಿನಂತೆ ಕಠಿಣವಾದ ಜಗತ್ತೆಂಬ ಮನೆಯ ರಕ್ಷಣೆಯ ದೀಕ್ಷೆ ತೊಟ್ಟಿರುವ ಬಲಭುಜದಿಂದ ವಲಯ(ಬಳೆ, ಬೇಲಿ)ದಂತೆ ಅನಾಯಾಸವಾಗಿ ಹೊತ್ತು, ನಿರಂತರ ನಮಸ್ಕರಿಸುವ ಸಮಸ್ತರಾಜರ ಕಿರೀಟಗಳ ಅಂಚಿನಲ್ಲಿರುವ ಸುಂದರವಾದ ಮಣಿಗಳ ಕಿರಣ ಸಮೂಹಗಳಿಂದ ಮಿಶ್ರವಾದ ಕಾಲಿನ ಉಗುರುಗಳ ಸಮೂಹವುಳ್ಳವನಾಗಿ ಸಮಸ್ತ ಜನರನ್ನು ಸಂತೋಷಗೊಳಿಸಿದವನಾಗಿ ಉಚ್ಚಂಗಿಯೆಂಬ ಹೆಸರಿನ ರಾಜಧಾನಿಯಲ್ಲಿದ್ದು ದುಷ್ಟಶಿಕ್ಷಣ ಶಿಷ್ಟಾನುಗ್ರಹನಿರತನಾಗಿ ಸುಖಸಂಕಥಾ ವಿನೋದದಿಂದ ರಾಜ್ಯಭಾರ ಮಾಡುತ್ತಿರುವುದಾಗಿ ಆತನನ್ನು ವೈಭವಯುತವಾಗಿ ವ್ಯಕ್ತಿತ್ವವನ್ನು ವರ್ಣಿಸುತ್ತದೆ.[೨೦೫] ಇಂತಹ ಅಪರೂಪದ ವ್ಯಕ್ತಿತ್ವ ಹೊಂದಿದ ವಿಜಯಪಾಂಡ್ಯ ಸ್ವತಂತ್ರ ರಾಜ್ಯಭಾರ ಮಾಡಿದರು. ವೀರಬಲ್ಲಾಳನ ಸೈನ್ಯದ ಮುಂದೆ ಮಂಡಿಯೂರಿ ಶರಣಾಗಿದ್ದರಿಂದ ಪಾಂಡ್ಯರು ಗರ್ವಕ್ಕೆ ಧಕ್ಕೆ ಬಂತು. ವಿಜಯಪಾಂಡ್ಯನ ನಂತರ ಈ ಮನೆತನದ ಅರಸರು ಹೊಯ್ಸಳ ವೀರಬಲ್ಲಾಳನ ಸಾಮಂತರಾಗಿ ತಮ್ಮ ಸ್ವಾಮಿನಿಷ್ಠೆಯನ್ನು ಬದಲಾಯಿಸಿ ಹೊಯ್ಸಳರಿಗೆ ಸಾಮಂತರಾಗಿ ಪಾಂಡ್ಯನಾಡಿನಲ್ಲಿ ಉಳಿದುಕೊಂಡರು.

**ಜಗದಳ ಪಾಂಡ್ಯ (ಕ್ರಿಶ. ೧೨೦೬)**

ಜಗದಳ ಪಾಂಡ್ಯನ ಮೂಲ ಹಿನ್ನೆಲೆಯ ಬಗ್ಗೆ ಯಾವುದೇ ಮಾಹಿತಿ ದೊರೆಯುವುದಿಲ್ಲ. ಹೊಯ್ಸಳ ವೀರಬಲ್ಲಾಳ ನೊಳಂಬವಾಡಿ-೩೨೦೦೦ ವಿಭಾಗವನ್ನು ವಶಪಡಿಸಿಕೊಂಡು ಕೆಲವು ದಿನಗಳ ಕಾಲ ಇಲ್ಲಿ ನೆಲೆಸಿದ ಮತ್ತು ತನ್ನ ನಿಷ್ಠಾವಂತ ಅಧಿಕಾರಿಗೆ ಅದರ ಆಡಳಿತದ ಉಸ್ತುವಾರಿಯನ್ನು ನೀಡಿದ್ದ. ಆದರೆ ಸ್ವಲ್ಪ ಸಮಯದ ನಂತರ ನೊಳಂಬವಾಡಿಯ ಆಡಳಿತವನ್ನು ಪುನಃ ಉಚ್ಚಂಗಿ ಪಾಂಡ್ಯರಿಗೆ ಮರಳಿ ನೀಡಿದನು. ಇದರಿಂದ ಪಾಂಡ್ಯ ರಾಜ್ಯ ಪ್ರತಿಷ್ಠಾಪನಾ ಚಾರ್ಯ ಎಂಬ ಬಿರುದನ್ನು ಹೊಂದಿದ್ದನು. ಹಾಗಾಗಿ ಉಚ್ಚಂಗಿ ಪಾಂಡ್ಯರು ಹೊಯ್ಸಳ ವೀರಬಲ್ಲಾಳನ ಸಾಮಂತರಾಗಿ ಬದಲಾವಣೆ ಹೊಂದಿದರು.

ಕ್ರಿ.ಶ. ೧೨೦೬ರ ಕುರುವತ್ತಿ ಶಾಸನ ಮಹಾರಾಜಾಧಿರಾಜ ಪರಮೇಶ್ವರ ದ್ವಾರಾಮತೀ ಪುರವರಾಧೀಶ್ವರಂ ಯಾದವಕುಳಾನ್ವಯಂ ಪ್ರತಾಪ ಚಕ್ರವರ್ತಿ ಹೊಯ್ಸಣ ವೀರಬಲ್ಲಾಳದೇವ ವರುಷದ ೧೬ನೆಯ ಕ್ಷಯಃಸಂವತ್ಸರದ ಚೈತ್ರ ಬಹುಳ ಅಮವಾಸ್ಯೆಯಾದಿವಾರಂ ಸೂರ್ಯಗ್ರಹಣ ವ್ಯತಿಪಾತದಂದು ಶ್ರೀಮನ್ಮಹಾಮಂಡಳೇಶ್ವರ ಉಚ್ಚಂಗಿ ಪುರವರಾಧೀಶ್ವರಂ ಪಾಂಡ್ಯದೇವರ ಬೆಸದಿಂ[೨೦೬]

ಎಂದು ಹೇಳುತ್ತದೆ. ಹೊಯ್ಸಳರ ಸಾಮಂತರಾಗಿದ್ದರು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಇದಕ್ಕೂ ಪೂರ್ವದಲ್ಲಿ ಅಂದರೆ ಕ್ರಿ.ಶ. ೧೨೦೫ರಲ್ಲಿ ವೀರಬಲ್ಲಾಳನ ಪಟ್ಟಮಹಾದೇವಿ ಪದುಮಲದೇವಿಯರ ಮಹಾಪ್ರಧಾನ ಬಂಡಾರಿಸೋವರಸನು ಗುತ್ತೊಳಲಿನಿಂದ ಈ ಪ್ರದೇಶವನ್ನು ಆಳುತ್ತಿರುವುದಾಗಿ ಕುರುವತ್ತಿಯ ಶಾಸನ ಹೇಳುತ್ತದೆ. ಅದೇ ಗ್ರಾಮದ ಕ್ರಿ.ಶ. ೧೧೯೭ರ ಶಾಸನ ಹೊಯಿಸಣ ವೀರಬಲ್ಲಾಳದೇವ ವರ್ಷದ ೭ನೆಯ ಪಿಂಗಳಸಂವತ್ಸರದಂದು ಅರಸೀಕೆರೆಯ ಮಹದೇವದಂಡನಾಯಕ, ಹೆಗ್ಗಡೆಯವರು ದಾನ ಬೀಡುತ್ತಾರೆ. ಅಂದರೆ ಈ ವೇಳೆಗೆ ಹೊಯ್ಸಳ ವೀರಬಲ್ಲಾಳನ ಆಡಳಿತ ಇಲ್ಲಿ ನೆಲೆಗೊಂಡಿತು ಎಂಬುದು ದೃಢವಾಗುತ್ತದೆ.

ಹೊಯ್ಸಳ ವೀರಬಲ್ಲಾಳನ ಸಾಮಂತನಾಗಿ ಪಾಂಡ್ಯ ವಂಶದ ಜಗದಳ ಪಾಂಡ್ಯ ಆಡಳಿತ ನಡೆಸಿರುವುದು ಅಂಬಳಿ ಮತ್ತು ಉಜ್ಜನಿ ಶಾಸನದಿಂದ ತಿಳಿಯುತ್ತದೆ. ಕ್ರಿ.ಶ. ೧೨೦೬ರ ಕುರುವತ್ತಿಯ ಶಾಸನದಲ್ಲಿ ಉಲ್ಲೇಖಿಸಿರುವ 'ಪಾಂಡ್ಯದೇವ' ಜಗದಳ ಪಾಂಡ್ಯನೆ ಎಂಬುದರಲ್ಲಿ ಯಾವುದೇ ಅನುಮಾನಗಳು ಇಲ್ಲ. ಜಗದಳ ಪಾಂಡ್ಯ ಕೊಟ್ಟೂರಿನ ಕದಂಬರ ವಂಶದ ಬಿರುದುಗಳಿಂದ ಗುರುತಿಸಿಕೊಂಡಿರುವುದು ವಿಶೇಷವಾಗಿದೆ.

ಉಜ್ಜನಿ ಶಾಸನ ತೊಳೆಪೆಳೆವೆರೆ ಕೆಂಜಡೆಯೊಳ್ವಳಚ್ಚನರಲಲ್ಲಿ ಬೀಳಿಸೆಗಂಗಾ ನದಿ ಕೆಣರ್ಗೊಳಿಸುವ ಕಲಿದೇವೇಶಂಸಲೆಜಗದಳಪಾಂಡ್ಯ ನೃಪಗೀಗಭಿಮತಮಂ ॥ ಆ ಅಂಬುಜಸಂಭವಂ ಪಡೆದು ಪುಟ್ಟಿದ ಕೃಷ್ಣನಾ ನಾಚಿಪ.. ಪನ್ತೆಂತೆಂಬುದು ಚಂದ್ರ.. ಭವೋಜ್ವಳ.. ಪಯೋನಿಧಾನದಂತೆಂಬುದು ಮೆಚ್ಚಿ ಮೆಚ್ಚಿ ಪರಿಭಾವಿಸಿ. ಭಾವಿಸಿ ಕೂರ್ತ್ತದಾತ್ರಿ ಕಾದಂಬ ಕುಲೋದ್ಭವಾಗ್ರಣಿ ಜಗದ್ದಳ ಪಾಂಡ್ಯ ನೃಪಾಳವೇಶವಂ ॥ ಆ ಭುವನವಿನುತ ಕುಲದೊಳು ಭೂಭುವನವನೊಂದೆ ತೋಳೊಳೊರ್ಬ್ಯನೆ ಬರೆಯೂ...ರನಾದಂತೆ ತಳೆದಂ ಭೂಬೃತ್ಕುಳತಿಳಕನೆನಿಪ ಜಗದಳಪಾಂಡ್ಯ ॥ ಎಳೆಯೊಳ್ವಿಖ್ಯಾತಿವೆತ್ತಂ ಪೊಳೆಮಾಳಕ್ಕರಿಧಾಬ್ಯಬದಶ್ಚ... ಜ. ದೊಳೆ ಶ್ರೀಕಲಿದೇವಗೀತನಾನಂದದೆ ಜಗದಳ ಪಾಂಡ್ಯೋರ್ವ್ವಿಪಂ ಗಟ್ಟಿಯರ ಕೋಗಳಿಯಾಳ್ನಾಲುನೂರಂ ಕಂಬಸ್ಥಳವನ ದಾನ ಬಿಟ್ಟಿರುವುದನ್ನು ಹೇಳುತ್ತದೆ.[೨೦೭] ಕಾಲದ ಉಲ್ಲೇಖವಿರದ ಅಂಬಳಿ ಶಾಸನ ಉಜ್ಜನಿ ಶಾಸನದ ವಿವರಣೆಯನ್ನೇ ನೀಡುತ್ತದೆ. ಜಗದಳಪಾಂಡ್ಯ ಹೊಯ್ಸಳರ ಸಾಮಂತನಾಗಿ ಕೋಗಳಿ-೪೦೦ ಆಡಳಿತವನ್ನು ನೋಡಿಕೊಳ್ಳುತ್ತಿದ್ದಂತೆ ಕಾಣುತ್ತದೆ. ಹಿಂದಿನ ಪಾಂಡ್ಯ ಅರಸರಂತೆ ಈತನಿಗೆ ಇಡೀ ನೊಳಂಬವಾಡಿಯ ಆಡಳಿತ ದೊರೆಯುತ್ತಿರಲಿಲ್ಲ. ಈ ವೇಳೆಗೆ ನೊಳಂಬವಾಡಿಯ ಕೆಲವು ಭಾಗವನ್ನು ಸೇವಣರು ಹಿಡಿದುಕೊಂಡಿದ್ದರು. ವೀರಬಲ್ಲಾಳನ ನಂತರ ಅವರೇ ಈ ಭಾಗದಲ್ಲಿ ಪ್ರಬಲರಾದರು.

ಜಗದಳಪಾಂಡ್ಯನ ಈ ಎರಡು ಶಾಸನಗಳ ನಂತರ ಉಚ್ಚಂಗಿ ಪಾಂಡ್ಯರ ಚರಿತ್ರೆಯ ದಾಖಲೆಗಳು ದೊರೆಯುವುದಿಲ್ಲ. ಪಾಂಡ್ಯರ ಅವನತಿಯ ನಂತರ ನೊಳಂಬವಾಡಿ-೩೨೦೦೦ ಪ್ರಾದೇಶಿಕ ಆಡಳಿತ ವಿಭಾಗ ಪಾಂಡ್ಯನಾಡು ಎಂದು ಹೆಸರು ಪಡೆದು ಹೊಯ್ಸಳ ವಿಜಯನಗರ ಕಾಲದಲ್ಲಿ ಉಲ್ಲೇಖವಾಯಿತು. ಪಾಂಡ್ಯ ವಂಶದ ನಂತರ ಈ ವಿಭಾಗದಲ್ಲಿ ಮತ್ತೊಮ್ಮೆ

ಅಖಂಡ ರಾಜಕೀಯ ಪ್ರಭುತ್ವ ಹುಟ್ಟಿಕೊಳ್ಳಲಿಲ್ಲ. ಅಷ್ಟೇ ಅಲ್ಲದೆ ಪಾಂಡ್ಯರ ಸಾಮಂತರಾಗಿದ್ದ ಕೆಲವು ಚಿಕ್ಕ ಪುಟ್ಟ ಮನೆತನಗಳು ಚರಿತ್ರೆ ಪುಟದಿಂದಲೇ ದೂರವಾದವು. ನೊಳಂಬವಾಡಿ ವಿಭಾಗದಲ್ಲಿ ಆನಂತರದಲ್ಲಿ ಅನೇಕ ಪಾಳೇಗಾರ ಮನೆತನಗಳು ತಲೆ ಎತ್ತಿ ಹೊಸದೊಂದು ಆಡಳಿತ ವ್ಯವಸ್ಥೆಗೆ ಮುನ್ನುಡಿ ಬರೆದರು.

**ಉಚ್ಚಂಗಿ ಪಾಂಡ್ಯ ಅರಸರ ಬಿರುದಾವಳಿಗಳು**

ಬಿರುದುಗಳು ಒಬ್ಬ ವ್ಯಕ್ತಿ ಅಥವಾ ಒಂದು ವಸ್ತುವಿಗೆ ಗೌರವಸೂಚಕವಾಗಿ ಕೊಡುವ ವಿಶೇಷಣಗಳು ಅಥವಾ ಪ್ರಶಸ್ತಿಗಳ ಸಮೂಹ. ಶಾಸನಗಳಲ್ಲಿ ಬಿಂಬಿತವಾಗಿರುವ ಬಿರುದುಗಳನ್ನು ಸಾಮಾನ್ಯವಾಗಿ ಪ್ರಶಸ್ತಿಗಳೆಂದೇ ಕರೆಯಲಾಗಿದೆ. ಈ ಬಿರುದುಗಳು ವ್ಯಕ್ತಿಯ/ವಸ್ತುವಿನ ವ್ಯಕ್ತಿತ್ವದ ಒಟ್ಟು ವಿಶ್ಲೇಷಣೆ ಹಾಗೂ ತನ್ನ ವಂಶ ಅಥವಾ ಸಮುದಾಯದ ಒಟ್ಟು ವಿಶೇಷಣಗಳನ್ನು ಕ್ರೋಢೀಕರಿಸಿ ಪ್ರಶಸ್ತಿ ರೂಪದಲ್ಲಿ ಹೇಳಲಾಗಿದೆ. ಅಂದರೆ ವ್ಯಕ್ತಿ/ವಸ್ತುವಿನ ಹುಟ್ಟು ಮತ್ತು ಅದರ ಜೀವಿತ ಸಾಧನೆ, ವಂಶದ ಮೂಲ, ಜೀವಿತ ಸಮಯದಲ್ಲಿ ಇತರರೊಂದಿಗೆ ಹೊಂದಿದ ಸಂಬಂಧಗಳು. ಕುಲದೇವರು, ಸ್ವಾಮಿನಿಷ್ಠೆ, ಅವರ ಪ್ರಜಾಕಲ್ಯಾಣ ಕಾರ್ಯಕ್ರಮದ ಯಶಸ್ಸು ಮೊದಲಾದ ವಿಷಯಗಳ ಒಟ್ಟು ವಿಶೇಷಣಗಳಾಗಿರುತ್ತವೆ. ವ್ಯಕ್ತಿ ಹೊಂದಿದ ಅಧಿಕಾರ, ಸ್ಥಾನಮಾನದ ಆಧಾರದ ಮೇಲೆ ಅವುಗಳ ಗುಣವಿಶೇಷಗಳು ಭಿನ್ನವಾಗಿರುತ್ತವೆ. ಇವುಗಳು ರಾಜಕೀಯ ಚರಿತ್ರೆಯ ವಿವಿಧ ಆಯಾಮಗಳ ಸಾಂಸ್ಕೃತಿಕ ವಿಷಯಗಳ ಕಟ್ಟುವಿಕೆ ಹಾಗೂ ಈಗಾಗಲೇ ಕಟ್ಟಿಕೊಂಡಿರುವ ಚರಿತ್ರೆಯ ಪುನರ್ ಸಂಘಟನೆಗೆ ಬಿರುದುಗಳು ವಿಪುಲ ಅವಕಾಶಗಳನ್ನು ನೀಡುತ್ತವೆ.

ಚರಿತ್ರೆಯ ರಾಜಕೀಯ ಯಜಮಾನಿಕೆಯಲ್ಲಿ ಚಕ್ರವರ್ತಿ, ಮಹಾಸಾಮಂತ, ಮಹಾಮಂಡಳೇಶ್ವರ, ದಂಡನಾಯಕ, ಸರ್ವಾಧ್ಯಕ್ಷ, ಸಂಧಿವಿಗ್ರಹಿ, ಗೌಡ, ಹೆಗಡೆ ಮೊದಲಾದ ಮಂತ್ರಿವರ್ಗ ಹಾಗೂ ಆಸ್ಥಾನ ಸ್ವಾಮಿಗಳು, ವ್ಯಾಪಾರಿ ವರ್ತಕರು, ಅಗ್ರಹಾರದ ಬ್ರಾಹ್ಮಣರು ಹೊಂದಿದ ಬಿರುದುಗಳು ಅನನ್ಯವಾಗಿವೆ. ಅವುಗಳು ಅಂದಿನ ಶಾಸನಗಳ ಮೂಲಕ ಅಭಿವ್ಯಕ್ತಿಗೊಳ್ಳುತ್ತವೆ. ಸಾಂಸ್ಕೃತಿಕ ಚರಿತ್ರೆಯ ಮೇಲೆ ಬೆಳಕು ಚೆಲ್ಲುವ ಈ ಬಿರುದುಗಳ ಕುರಿತ ನಡೆದಿರುವ ಅಧ್ಯಯನಗಳ ಸಂಖ್ಯೆ ಬಹಳ ವಿರಳ. ಕನ್ನಡ ವಿಶ್ವವಿದ್ಯಾಲಯದಲ್ಲಿ ಎಸ್.ವೈ. ಸೋಮಶೇಖರ್‌ರವರು ಕರ್ನಾಟಕದ ಬಿರುದಾವಳಿಗಳು ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ ಎಂಬ ಕೃತಿಯಲ್ಲಿ ಕರ್ನಾಟಕವನ್ನು ಆಳಿದ ಎಲ್ಲಾ ಅರಸುಮನೆತನಗಳು ಹಾಗೂ ಅವರಿಗೆ ಸಾಮಂತರಾಗಿದ್ದ ಅಧಿಕಾರಿವರ್ಗದ ಬಿರುದುಗಳನ್ನು ಕ್ರೋಢೀಕರಿಸಿರುವ ಅವರ ಮೊದಲ ಪ್ರಯತ್ನ ಶ್ಲಾಘನೀಯವಾಗಿದೆ.

ಈ ಕೃತಿಯಲ್ಲಿ ಉಚ್ಚಂಗಿ ಪಾಂಡ್ಯ ವಂಶದ ಅರಸರ ಕೆಲವು ಬಿರುದುಗಳನ್ನು ದಾಖಲಿಸಲಾಗಿದೆ. ಸಮಗ್ರ ಅಧ್ಯಯನ ಕೊರತೆಯಿದೆ. ಈ ಕೃತಿಯ ಹಿನ್ನೆಲೆಯಲ್ಲಿ ಪಾಂಡ್ಯ ವಂಶದಲ್ಲಿ ಆಡಳಿತ ನಡೆಸಿದ ಎಲ್ಲಾ ಅರಸರು ಹೊಂದಿದ್ದ ಬಿರುದುಗಳನ್ನು ಇಲ್ಲಿ ಕ್ರೋಢೀಕರಿಸುವ

ಪ್ರಯತ್ನ ಮಾಡಲಾಗಿದೆ. ಪಾಂಡ್ಯ ಅರಸರು ಚಾಳುಕ್ಯ ಅರಸರ ಸಾಮಂತರಾಗಿದ್ದರಿಂದ ಆ ಅರಸರು ಕೆಲವು ಬಿರುದುಗಳನ್ನು ಹೊಂದಿದ್ದರು. ಆಶ್ರಿತ ಪ್ರಭುವಿನ ಬಿರುದುಗಳನ್ನು ಆತನಿಂದ ಪಡೆದು ತಮ್ಮ ಹೆಸರಿನ ಮುಂದೆ ಹಾಕಿಕೊಂಡಿದ್ದಾರೆ. ಇನ್ನು ಕೆಲವು ಬಿರುದುಗಳು ಅವರ ಸ್ವಶಕ್ತಿ, ಶೌರ್ಯ, ಪರಾಕ್ರಮದಿಂದ ಬಂದಿದ್ದವು. ಪಾಂಡ್ಯ ವಂಶದ ಆರಂಭಿಕ ಅರಸರು ಹೊಂದಿದ್ದ ಬಿರುದುಗಳನ್ನು ಪರಂಪರೆ ಎಂಬಂತೆ ಚಾಚುತಪ್ಪದೇ ಮುಂದುವರಿಸಿಕೊಂಡು ಬಂದಿರುವುದು ವಿಶಿಷ್ಟವಾಗಿದೆ. ಈ ಪಾರಂಪರಿಕ ಬಿರುದುಗಳ ಮುಂದುವರಿದ ಭಾಗವಾಗಿ ಅವರ ವೈಯಕ್ತಿಕ ಸಾಧನೆಗಳ ವಿಶೇಷಣಗಳು ಸೇರಿಕೊಂಡಿರುವುದನ್ನು ಪಾಂಡ್ಯ ಅರಸರ ಶಾಸನಗಳು ಹೇಳುತ್ತವೆ.

**ಆದಿತ್ಯದೇವ ಅಥವಾ ಮಂಗಯ್ಯ**

**ಯಾದವಕುಲತಿಲಕ :** ಯಾದವ ಕುಲಕ್ಕೆ ತಿಲಕಪ್ರಾಯವಾದನು. ಹರಿಹರದ ಶಾಸನ ಇದನ್ನು ಭಿನ್ನವಾಗಿ ಹೇಳುತ್ತದೆ. ಯಾದವ ಕುಲದಲ್ಲಿ ತಿಲಕಪ್ರಾಯನಾದವನು. ಚಂದ್ರವಂಶದಲ್ಲಿ ಯದುರಾಜನು ಹುಟ್ಟಿದನು. ಆತನಿಂದ ಯದುವಂಶ ಲೋಕದಲ್ಲಿ ಶೋಭಿಸಿ ಯಾದವರೆಂಬ ಕ್ಷತ್ರಿಯರಿಗೆ ನೆಲೆವೀಡಾಗಿ ಕೀರ್ತಿಯ ಆಗರವಾಯಿತು. ವೃಷ್ಣವಾಂಶಸಂಭೂತರಾದ ಬಲರಾಮ ಶ್ರೀಕೃಷ್ಣರ ಅವತಾರದಿಂದ ಮಂಗಳಕ್ಕೆ ಮನೆಯೆನಿಸಿದ ಆ ವಂಶದಲ್ಲಿ ಮಂಗಯ್ಯನೆಂಬ ರಾಜನು ಜನ್ಮವೆತ್ತಿ ಯಾದವ ಕುಲತಿಲಕನಾದ ಎಂದು ವರ್ಣಿಸುತ್ತದೆ.[೨೦೮]

**ಚೇದಿರಾಜ/ತೇಜರಾಜ (ಕ್ರಿ.ಶ. ೧೦೪೭ - ೧೦೬೮)**

ಯಾದವ ಕುಲಭೂಷಣಃ ಯಾದವ ಕುಲಕ್ಕೆ ಭೂಷಣಪ್ರಾಯನೆನಿಸಿದವನು. ಸೂರ್ಯ ವಂಶದಿಕ್ಷ್ವಾಕು ಚಕ್ರವರ್ತಿಯಿಂದಮವ್ಯವಚ್ಛಿಂನ್ನಮಾಗೆ ಬಂದಃ ಸೂರ್ಯವಂಶದ ಇಕ್ಷ್ವಾಕು ಚಕ್ರವರ್ತಿಗಳಿಂದ ಅವಿಚ್ಛೇನ್ನವಾಗಿ ಬಂದ ವಂಶದಲ್ಲಿ ಹುಟ್ಟಿದವನು. ಚೋಳಚಕ್ರವರ್ತಿಗಳ ಕಟಕವಜ್ರಃ[೨೦೯] ಚೋಳ ಚಕ್ರವರ್ತಿಗಳಿಗೆ ವಜ್ರಕೋಟೆ ಎನಿಸಿಕೊಂಡವನು ಚೋಳರ ಆಕ್ರಮಣಿಕೆ ವಜ್ರಕೋಟೆಯಂತೆ ತಡೆಯೊಡ್ಡಿದವನು.

**ಸಿಂಹಾಸನಮುವಂ ತನ್ನ ಬಾಹುಬಳದೊಳ ಪ್ರತಿಪಾಳಿಸಿದಿ :** ತನ್ನ ಸ್ವಂತ ಶಕ್ತಿಯಿಂದ ಪಾಂಡ್ಯ ಸಿಂಹಾಸನವನ್ನು ಪಡೆದವನು.

**ವೀರಾಂಗನವಲ್ಲಭ[೨೧೦]:** ವೀರರಾದವರಿಗೆಲ್ಲ ಒಡೆಯನಾದವನು. ಎಲ್ಲಾ ವೀರರ ಮೇಲೆ ಒಡೆತನ ಸಾಧಿಸಿದವನು.

**ಪಲಮಾಂದಪಾಂಡ್ಯ / ಪ್ರಚಂಡ ಪಾಂಡ್ಯ (ಕ್ರಿ.ಶ. ೧೦೬೮ - ೧೦೭೯)**

**ಪರಿಚ್ಛೇಧಿಗಂಡ[೨೧೧]** : ದೃಢವಾದ ನಿರ್ಧಾರವನ್ನು ತೆಗೆದುಕೊಳ್ಳುವ ವೀರ. ಯಾವ ಯುದ್ಧರಂಗ ದಲ್ಲಿಯೂ ಸೋಲನ್ನು ಕಂಡವರಲ್ಲ/ಎಲ್ಲಾ ಬಗೆಯ ಯುದ್ಧಗಳನ್ನು ಗೆದ್ದವನು ಎಂದರ್ಥ. ದಿನಕರ ದೇಸಾಯಿ ಅವರು ಪರಿಚ್ಛೇದಿ ಗಂಡ ಎಂದರೆ ಪರಶುವಿನ ಎರಡು ಮುಖಗಳಂತೆ ಎಂದು ಅಭಿಪ್ರಾಯಪಡುತ್ತಾರೆ.

**ಭ್ರೂಭಂಗಮಾತ್ರವಿಧುರೀಕೃತ ವೈರಿವರ್ಗ** : ಭೂಮಿಯಲ್ಲಿ ವೈರಿಗಳ ಮನಸ್ಸಿನ ಧೈರ್ಯವನ್ನು ಭಂಗ ಮಾಡುವಂತೆ ಆತನ ತೇಜಸ್ಸು ಓಜೋಯುಕ್ತವಾಗಿದೆ.

**ಭೂನೈಕಮಲ್ಲನಂ ಭೂಭವನವಸುಂಗೊಳೆ ಭುವಮರಳ್ಚಿ ರಾಜ್ಯಮನಧಿಕೋತ್ಸವದಿಂ ತ್ರಿಭುವನಮಲ್ಲಂ ಗವಯವದಿಂ ಕೊಂಡುಕೊಟ್ಟಗಂಡ**[೨೧೨]: ಚಾಳುಕ್ಯ ೨ನೇ ಸೋಮೇಶ್ವರ ಭೂನೈಕಮಲ್ಲನಿಂದ ಚಾಳುಕ್ಯ ರಾಜ್ಯವನ್ನು ಪಡೆದು ೬ನೇ ವಿಕ್ರಮಾದಿತ್ಯ ತ್ರಿಭುವನಮಲ್ಲದೇವನಿಗೆ ಕೊಟ್ಟ ಗಂಡ.

**ಪಾಂಡ್ಯಗಂಡಗರ್ಬ್ಬಮಂಎನೆನೆಗರ್ದ** : ಪಾಂಡ್ಯಗಂಡನ ಹೊಟ್ಟೆಯಲ್ಲಿ ಜನಿಸಿದವನು/ ಪಾಂಡ್ಯ ಗಂಡ ತೇಜರಾಜನ ಹೊಟ್ಟೆಯಲ್ಲಿ ಜನಿಸಿದವನು.

**ತ್ರಿಭುವನಮಲ್ಲ ಪಾಂಡ್ಯ (ಕ್ರಿಶ. ೧೦೭೯ - ೧೧೨೫)**

**ಮಹಾಮಂಡಳೇಶ್ವರ** : ವಿಶಾಲ ವಿಸ್ತಾರವಾದ ಭೂಮಿಯ ಒಡೆಯ/ಮಹಾಮಂಡಲದ ಅಧಿಪತಿ.

**ಯದವಂಶಾಂಬರದ್ಯುಮಣಿ** : ಯದುವಂಶದಲ್ಲಿ ಸೂರ್ಯನಂತೆ ಪ್ರಕಾಶಿಸುವವನು.

**ಪಂಚಮಹಾಶಬ್ಧ** : ಮಂಗಳಕರವಾದ ಪಂಚಮಹಾಶಬ್ದಗಳ ಗೌರವವನ್ನು ಹೊಂದಿದವನು.

**ಶ್ರೀಪೃಥ್ವಿವಲ್ಲಭ** : ಭೂಮಂಡಲದ ಒಡೆಯ

**ಪಲ್ಲವಕುಳತಿಳಕ**[೨೧೩]: ಪಲ್ಲವ ಕುಲಕ್ಕೆ ತಿಲಕಪ್ರಾಯವಾದವನು.

**ನಿಜಕುಲಕಮಲ ಮಾರ್ತಾಂಡ** : ನಿಜ ಕುಲದ ಕಮಲದಲ್ಲಿ ಸೂರ್ಯನಂತೆ ಪ್ರಕಾಶಿಸುವವನು.

**ಸುಭಟಚೂಡಾಮಣಿ** : ಶುಭ್ರವಾದ ಚೂಡಾಮಣಿಯ ರತ್ನಗಳಂತೆ ಪ್ರಕಾಶಿಸುವವನು/ಯೋಧರಲ್ಲಿ ಚೂಡಾಮಣಿಯಂತೆ ಪ್ರಕಾಶಿಸುವವನು.

**ಕಾಂಚಿಪುರವರಾಧೀಶ್ವರ** : ಕಾಂಚಿಪುರದ ಅಧಿಪತ್ಯವನು ಪಡೆದು ಅದರ ಅಧಿಪತಿಯಾದವನು.

**ಕುಳಂಬಪುರವರೇಶ್ವರ**[೨೧೪]: ಕುಳಂಬಪುರ ಪಟ್ಟಣದ ಅಧಿಪತಿ/ಕುಳಂಬಪುರ ಪಟ್ಟಣದ ಮೇಲೆ ಹಿಡಿತ ಸಾಧಿಸಿದವನು ಮತ್ತು ಅದರ ಒಡೆಯನಾಗಿದ್ದವನು.

**ರಾಜೀಗಚೋಳ ಮನೋಭಂಗ** : ಚೋಳ ಅರಸ ರಾಜಿಗಚೋಳನ ಮನಸ್ಸಿನ ಆಸೆಗಳನ್ನು ಭಂಗಗೊಳಿಸಿದವನು/ರಾಜಿಗಚೋಳನನ್ನು ಸೋಲಿಸಿ ಅವನ ಮನಸ್ಸಿಗೆ ಆಘಾತವನ್ನು ಉಂಟು ಮಾಡಿದವನು.

**ತ್ರಿಭುವನಮಲ್ಲ** : ಮೂರು ಲೋಕಗಳಲ್ಲಿ ಮಿಗಿಲಾದ ಪರಾಕ್ರಮಿಯಾದವನು. ಸ್ವರ್ಗ, ಮೃತ್ಯ ಮತ್ತು ಪಾತಾಳಗಳೆಂಬ ಮೂರು ಲೋಕಗಳ ಒಡೆಯ, ವಿಕ್ರಮಾದಿತ್ಯ ತ್ರಿಭುವನಮಲ್ಲದೇವನಿಂದ ಪಳತ್ತ ಪಾಂಡ್ಯ ತ್ರಿಭುವನಮಲ್ಲಪಾಂಡ್ಯ ಎಂಬ ಬಿರುದನ್ನು ಪಡೆದ ಇದು ಆತನ ಆಶ್ರಿತ ಎಂಬ ಅರ್ಥವನ್ನು ನೀಡುತ್ತದೆ.

**ರಾಜಿಗಚೋಳದ್ವಿಪಮೃಗರಾಜಂ**[೨೧೫]**:** ರಾಜಿಗ ಚೋಳನಿಗೆ ಮೃಗಗಳ ರಾಜನಾದ ಸಿಂಹದಂತೆ ಇದ್ದವನು.

**ಪಾಂಡ್ಯರಾಜ್ಯನೂರ್ಜ್ಜಿತ ತೇಜಂ :** ಪಾಂಡ್ಯ ರಾಜ್ಯವನ್ನು ಉದ್ಧರಿಸುವ ತೇಜಸ್ಸಿನಂತೆ ಇರುವವನು/ ಪಾಂಡ್ಯ ರಾಜ್ಯದ ಕೀರ್ತಿಯನ್ನು ಎತ್ತಿಹಿಡಿಯುವ ಕಾಂತಿಯ ತೇಜಸ್ಸನ್ನು ಹೊಂದಿದವನು.

**ರಾಯಪಾಂಡ್ಯ (ಕ್ರಿ.ಶ. ೧೧೨೫ - ೧೧೪೨)**

ತ್ರಿಭುವನಮಲ್ಲ ಪಾಂಡ್ಯ ಹೊಂದಿದ್ದ ಎಲ್ಲಾ ಬಿರುದುಗಳನ್ನು ರಾಯಪಾಂಡ್ಯ ವಂಶಪಾರಂಪರಿಕವಾಗಿ ಧರಿಸಿದ. ಅದರ ಜೊತೆಗೆ ಕೆಲವು ವಿಶೇಷ ಬಿರುದುಗಳು ಈತನಿಗೆ ಇದ್ದವು.

**ಶಂಕರನಾರಾಯಣ ದೇವರ ಚರಣಸ್ಮರಣಪರಿಣತಾಂತಃಕರಣಂ :** ಪಾಂಡ್ಯ ವಂಶದವರ ಮನೆದೇವರಾದ ಹರಿಹರದ ಕೂಡಲೂರಿನ ಶಂಕರನಾರಾಯಣ ದೇವರ ನಾಮಸ್ಮರಣೆಯಿಂದ ಪಕ್ವಗೊಂಡ ಮನಸ್ಸುಳ್ಳವನು.

**ಸಾಹಸೋತ್ತುಂಗ :** ಶತ್ರುರಾಜರನ್ನು ಎದುರಿಸುವ ಸಾಹಸದ ಉತ್ತುಂಗದಲ್ಲಿದ್ದವನು.

**ಸುಭಟಚೂಡಾಮಣಿ, ಮಹೇಂದ್ರಮಣಿ ಮುಕಟ ಕೋಟಿ ವಿಘಟಿತ ನಿಜಯವಿಜಯ ಕರಕಂಕಣಲಿಳಾ ಮಾತ್ರ ಸಾಧಿತ :** ರಾಜರ ಚೂಡಾಮಣಿಗಳ ಸಾಲುಗಳಲ್ಲಿ ಹೊಳೆಯುವ ರತ್ನಗಳ ಕಿರಣಗಳಿಂದ ಕೆಂಪಾದ ಚರಣವುಳ್ಳವನು.

**ಸಪ್ತಕೊಂಕಣ ಕಚಕನಗಶಿಳಾತಳ ಸ್ಥಾಪಿತ ಪಾಠೀನಃ ಲಾಂಚ್ಛನ ಜಯಸ್ತಂಭದೂರೀಕ್ರಿತಾಃ** ಸಪ್ತಕೊಂಕಣಗಳ ತಳದಲ್ಲಿ ಮೀನಿನ ಗುರುತುಳ ಜಯಸ್ತಂಭವನ್ನು ಸ್ಥಾಪಿಸಿದವನು.

**ತಾಂಬ್ರವರ್ಣ್ನೀನಿರ್ಣ್ನಿಕ್ತ ಮೌಕ್ತಿಕಯುಕ್ತಾನೇಕ ರತ್ನಾಕರಾಮುದ್ರಮುದ್ರಿತ ಸರೋದ್ರಭಂಡಾಗಾರಂ:** ತಾಮ್ರಪರ್ಣೀ ನದಿ ಸೆಳೆದೊಯ್ದ ಮುತ್ತುಗಳನ್ನು, ಸಮುದ್ರದ ಪ್ರಶಸ್ತ ರತ್ನಗಳನ್ನು ತನ್ನ ಭಂಡಾರದಲ್ಲಿ ಉಳ್ಳವನು.

**ಮಳಯಗಿರಿ ಕಂದರ ಚಂದನನನ್ದನ ಮಧ್ಯದೇಶ ನಿವೇಶಿತ ಶ್ರೀಂಗಾರಾಗಾರಂ:** ಮಲಯ ಪರ್ವತದ ಕಣಿವೆಯ ಶ್ರೀಗಂಧದ ತೋಪುಗಳ ಮಧ್ಯೆ ನೆಲೆಗೊಂಡ ಶೃಂಗಾರ ಸ್ಥಾನವುಳ್ಳವನು.

**ಕಿಂಕರೀಕ್ರಿತ ಭೂತವೇತಾಳ ಮಂಡಳಂ ಸ್ವೀಕ್ರಾತಿ :** ಭೂತ ಬೇತಾಳಗಳ ಗುಂಪನ್ನು ಆಳುಗಳನ್ನಾಗಿ ಮಾಡಿಕೊಂಡವನು.

**ಹಿತಾನೇಕ ಜಳಶೈಳ ದುರ್ಗ್ಗಂ ವಂದೀ ಕ್ರಿತಾರಾತ್ರಿವೀರ ಮಂಡಳಿಕ**[೨೧೬] **:** ಅನೇಕ ಜಲದುರ್ಗ್ಗಳನ್ನು ಹೊಂದಿದ್ದ ವೀರ ಮಾಂಡಳಿಕ/ನೀರಿನಿಂದ ಸುತ್ತುವರಿದಿರುವ ಅನೇಕ ಕೋಟೆಗಳನ್ನು ಹೊಂದಿದ್ದ ಅತ್ಯಂತ ಪರಾಕ್ರಮಿ ಸಾಮಂತ.

**ಪಂಡಿತ ಪಾಂಡ್ಯ**

**ಭುವನಪ್ರಸ್ತುತ್ಯನಿತ್ಯ ವಿದ್ಯಾವಿಭವಂ** : ಲೋಕದ ಹೊಗಳಿಕೆಗೆ ಪಾತ್ರನಾದವನು ಸಂತತವಾದ ವಿದ್ಯಾವೈಭವದಿಂದ ಕೂಡಿದವನು.

**ದಿವಿಜನದೀಜಳಮಳಯಜಧವಳಕಮಳ ತುಳಿತಕೀರ್ತಿ** : ದೇವಗಂಗೆಯ ನೀರಿನಂತೆ ಶ್ರೀಗಂಧದ ಬಿಳಿಯ ಕಮಲದಂತೆ ಕೀರ್ತಿಯಿಂದ ಪ್ರಕಾಶಗೊಂಡವನು.

**ಅಧಿಗತಸಮಸ್ತವಿದ್ಯಾಂ ಮಧುಸೂದನ ದೇವರಿಂದಮೆನೆ ಪಂಡಿತಪಾಂಡ್ಯಧರಾಧಿಪತಿಯ ಪೋಲ್ವೆಗೆ ಬಧಿರರಾಧೀಶರೆಂತುಮೇಂ ಬಂದಪರೇ**[೨೦೭]: ಮಧುಸೂದನದೇವನಿಂದ ಸಮಸ್ತ ವಿದ್ಯೆಗಳನ್ನು ಪಡೆದನೆಂದ ಮೇಲೆ ಕಿವುಡರಾದ ರಾಜರು ಪಂಡಿತಪಾಂಡ್ಯನೊಡನೆ ಯಾವ ರೀತಿಯಲ್ಲಿಯಾದರೂ ಹೋಲಿಕೆಗೆ ಬರುತ್ತಾರೆಯೇ?

ಪಂಡಿತ ಪಾಂಡ್ಯ ಪಾಂಡ್ಯವಂಶದಲ್ಲಿ ಅಧಿಕಾರಕ್ಕೆ ಬರದಿದ್ದರಿಂದ ಆ ವಂಶದ ಪಾರಂಪರಿಕ ಬಿರುದುಗಳು ಇವನಿಗೆ ಇರಲಿಲ್ಲ. ಅಲ್ಲದೆ ಸಾಹಿತ್ಯ ಆಸಕ್ತನಾಗಿದ್ದರಿಂದ ಆ ಕುರಿತಂತೆ ವೈಯಕ್ತಿಕವಾಗಿ ಮೇಲಿನ ವಿಶೇಷಣಗಳನ್ನು ಹೊಂದಿದ್ದನು.

**ವೀರಪಾಂಡ್ಯ (ಕ್ರಿ.ಶ. ೧೧೪೨ - ೧೧೬೩)**

ಪಲಮಾಂದಪಾಂಡ್ಯ, ತ್ರಿಭುನವಮಲ್ಲ ಪಾಂಡ್ಯ, ರಾಯಪಾಂಡ್ಯರು ಹೊಂದಿದ್ದ ಬಿರುದುಗಳನ್ನು ವೀರಪಾಂಡ್ಯ ಪಾರಂಪರಿಕವಾಗಿ ಧರಿಸಿದ್ದ. ಅದರೊಂದಿಗೆ ಕೆಲವು ಹೊಸ ಬಿರುದುಗಳು ಸೇರಿಕೊಂಡವು.

**ಜಗದೇಕಮಲ್ಲ ವೀರಪಾಂಡ್ಯ**[೨೦೮]: ಲೋಕದಲ್ಲೇ ಮಿಗಿಲಾದ ಪರಾಕ್ರಮಿಯಾದವನು ನಿನ್ನೆ ಜಯಸಿಂಹ ಹಾಗೂ ಪೆರ್ಮಾಡಿ ಜಗದೇಕಮಲ್ಲನ ಸಾಮಂತನಾಗಿ ಆಳಿದ್ದರಿಂದ ಈ ಬಿರುದು ಬಂತು. ಅವನ ಆಶ್ರಿತ ಎಂಬ ಅರ್ಥವನ್ನು ನೀಡುತ್ತದೆ.

**ಭೂಲೋಕಮಲ್ಲ**[೨೦೯]: ಭೂಲೋಕದಲ್ಲಿ ಪ್ರಸಿದ್ಧವಾದ ಪರಾಕ್ರಮಿ, ಮಹಾಶೂರ. ೩ನೇ ಸೋಮೇಶ್ವರನ ಸಾಮಂತನಾಗಿದ್ದರಿಂದ ಈ ಬಿರುದು ಬಂದಿತ್ತು. ಅವನ ಆಶ್ರಿತ ಎಂಬ ಅರ್ಥವನ್ನು ನೀಡುತ್ತದೆ.

**ತ್ರೈಲೋಕಮಲ್ಲ**[೨೧೦]: ಪರಾಕ್ರಮದಲ್ಲಿ ಮೂರು ಲೋಕಗಳಿಗೆ ಹೆಸರಾಗಿರುವವನು. ೩ನೇ ತೈಲಪನ ಮಹಾಮಂಡಳೇಶ್ವರನಾಗಿದ್ದರಿಂದ ತ್ರೈಲೋಕಮಲ್ಲ ವೀರಪಾಂಡ್ಯ ಎಂಬ ಬಿರುದಿತ್ತು.

**ಚಾಳುಕ್ಯ ನೃಪಾಳನೆಚ್ಚಿನ ಕಟ್ಟಿದ ಲಗಿನಂತೆಸೆದಂಕೂರ್ಪಿನ ಬಲ್ಪಿನ ತೇಜದ ಮಾಂತನದೊಳ್ಪಿಂ ವೀರಪಾಂಡ್ಯ ದೇವನರೇಂದ್ರಂ । ಗಂಗ, ಕಳಿಂಗ, ವಂಗ, ಗುರ್ಜರ, ಕೇರಳ, ಚೇರ ಚೋಳ, ಗೌಡ, ಅಂಗ, ವರಾಟ, ಲಾಟ. ಖಸಬವರ್ಗರ ಕೋಸಳ, ಪುಂಡ್ರ, ಪಾರಸಿ, ಕೊಂದಣ, ಕೊಂಗ, ಕೊಂಗಣ, ಕುರುಪ್ರದರ್, ಆಂಧ್ರ ತುರುಷ್ಕ, ಮಾಗದ, ಉತ್ತುಂಗ ನೃಪಾಳಜಹಾಳಮನ್ ಅದಿರ್ಪಿದ ಮೆಯ್ಗಲಿ ಪಾಂಡ್ಯ ಭೂಬುಜಂ.**[೨೧೧]

ಚಾಳುಕ್ಯ ನೃಪಾಳನೆಚ್ಚಿನ ಕಟ್ಟಿದ ಕೆಚ್ಚಿನ ಕೈ ಅಲಗಿನಂತೆ ಹೊಳೆಯುತ್ತಿದ್ದ ಸಾಹಸಿ ವೀರಪಾಂಡ್ಯ ನರೇಂದ್ರನು ಔತ್ತರೇಯ ಗಂಗ, ಕಳಿಂಗ, ವಂಗ, ಗುರ್ಜರ, ಕೇರಳ, ಚೇರ ಚೋಳ, ಗೌಡ, ಅಂಗ, ವರಾಟ, ಲಾಟ. ಖಸಬರ್ಬರ ಕೋಸಳ, ಪುಂಡ್ರ, ಪಾರಸಿ, ಕೊಂದಣ, ಕೊಂಗ, ಕೊಂಗಣ, ಕುರುಪ್ರದರ್, ಆಂಧ್ರ ತುರುಷ್ಕ, ಮಾಗದ, ಉತ್ತುಂಗ ರಾಷ್ಟ್ರಗಳನ್ನು ಜಯಸಿದನು ಮತ್ತು ಇವುಗಳನ್ನು ಗೆಲ್ಲಲು ರಾಜನಿಗೆ ಇವನೊಬ್ಬನೆ.

**ಸುಭಟ ಚೂಡಾಮಣಿ** : ವೀರಯೋಧರಲ್ಲಿಯೇ ಶ್ರೇಷ್ಠನಾದವನು.

**ಸಮ್ಯಿಕ್ತ ಚೂಡಾಮಣಿ** : ಹಲವು ಗುಣಗಳನ್ನು ಒಟ್ಟಿಗೆ ಹೊಂದಿದ ಶ್ರೇಷ್ಠ ವೀರ.

**ಗಿರಿದುರ್ಗಕ್ಕೆ ಶನಿ ಸ್ವರೂಪ** : ಗಿರಿದುರ್ಗದ ಆಕ್ರಮಣಕ್ಕೆ ಬರುವ ಶತ್ರುಗಳಿಗೆ ಶನಿ ರೂಪದಂತೆ ಇರುವವನು/ಚೋಳ ಮತ್ತು ಹೊಯ್ಸಳರ ಉಚ್ಚಂಗಿದುರ್ಗದ ಆಕ್ರಮಣಕ್ಕೆ ಶನಿಯಂತೆ ಇದ್ದವನು.

**ವಿಜಯಪಾಂಡ್ಯ (ಕ್ರಿ.ಶ. ೧೧೬೨ - ೧೧೮೩)**

ಪಾಂಡ್ಯ ವಂಶದಲ್ಲಿ ಸ್ವತಂತ್ರನಾಗಿ ಆಡಳಿತ ನಡೆಸುವ ಅವಕಾಶ ದೊರೆತರೂ ವಿಜಯಪಾಂಡ್ಯನಿಗೆ ಅನ್ಯರಾಜ್ಯಗಳ ಮೇಲೆ ದಾಳಿ ಮಾಡಲು ಸಂದರ್ಭಗಳೇ ಬರಲಿಲ್ಲ. ಹಾಗಾಗಿ ವೀರಪಾಂಡ್ಯನಂತೆ ಈತನಿಗೆ ಹೊಸ ಬಿರುದುಗಳು ಇರಲಿಲ್ಲ. ಆದರೆ ವೀರಪಾಂಡ್ಯ ಹೊಂದಿದ ಎಲ್ಲಾ ಪಾರಂಪರಿಕ ಬಿರುದುಗಳನ್ನು ವಿಜಯಪಾಂಡ್ಯ ಹೊಂದಿದ್ದ.

**ತ್ರಿಭುವನಮಲ್ಲ**[೨೨೨]: ಮೂರು ಲೋಕಗಳಲ್ಲಿ ಮಿಗಿಲಾದ ಪರಾಕ್ರಮಿಯಾದವನು ಬಾಲ್ಯದಲ್ಲಿ ವಿಕ್ರಮಾದಿತ್ಯನ ಪಾದಪದ್ಮೋಪಜೀವಿಯಾಗಿದ್ದರಿಂದ ತ್ರಿಭುವನಮಲ್ಲ ವಿಜಯಪಾಂಡ್ಯ ಎಂಬ ಬಿರುದನ್ನು ಪಡೆದ. ಕಳಚೂರಿಗಳಿಂದ ಕಲ್ಯಾಣದ ಅಧಿಕಾರವನ್ನು ಪಡೆದು ೪ನೇ ಸೋಮೇಶ್ವರ ಸಿಂಹಾಸನಕ್ಕೆ ಬಂದಾಗ ಆತನ ಸಾಮಂತನಾಗಿದ್ದರಿಂದ ಮತ್ತೊಮ್ಮೆ ತ್ರಿಭುವನಮಲ್ಲ ಎಂಬ ಬಿರುದು ಹೊಂದಿದ.

**ಜಗದೇಕಮಲ್ಲ**[೨೨೩]: ಲೋಕದಲ್ಲಿಯೇ ಮಿಗಿಲಾದ ಪರಾಕ್ರಮಿಯಾದವನು ವಿಜಯಪಾಂಡ್ಯನ ಆಡಳಿತದ ಕಾಲಕ್ಕೆ ಜಗದೇಕಮಲ್ಲದೇವನ ಆಡಳಿತ ಮುಕ್ತಾಯವಾಗಿದ್ದರೂ ಆತನ ಬಿರುದನ್ನು ಹೊಂದಿರುವುದು ವಿಶೇಷವಾಗಿದೆ.

**ಸಾಹಸೋತುಂಗ**[೨೨೪]: ಯುದ್ಧ ಸಾಹಸದಲ್ಲಿ ಪರಾಕ್ರಮಿಯಾದವನು.

**ನಿಶ್ಶಂಕಮಲ್ಲ** : ಭಯ, ಭೀತಿಗಳಿಲ್ಲದ, ಶತ್ರುಗಳಿಗೆ ಅಂಜದ ಅರಸ.

**ಪಾಂಡ್ಯಕುಳಕಮಳಮಾರ್ತಂಡ** : ಪಾಂಡ್ಯಕುಲಕಮಲದಲ್ಲಿ ಸೂರ್ಯನಂತೆ ಬೆಳಗುವವನು.

**ಉಚ್ಚಂಗಿಯ ನೆಲೆವಿಡಿನೊಳು** : ಇಂದಿನ ಹರಪನಹಳ್ಳಿ ತಾಲೂಕಿನ ಉಚ್ಚಂಗಿದುರ್ಗ ಪಟ್ಟಣದಿಂದ ಆಳುತ್ತಿರುವುದು.

**ಜಗದಳ ಪಾಂಡ್ಯ (ಕ್ರಿ.ಶ. ೧೨೦೬)**

ಜಗದಳಪಾಂಡ್ಯ ಹೊಯ್ಸಳ ವೀರಬಲ್ಲಾಳನ ಸಾಮಂತನಾಗಿ ಆಡಳಿತಕ್ಕೆ ಬಂದ ಈತ ಪಾಂಡ್ಯರ ಪಾರಂಪರಿಕ ಬಿರುದುಗಳನ್ನು ಹೊಂದಿರಲಿಲ್ಲ. ಬದಲಾಗಿ ಕದಂಬ ವಂಶದ ಬಿರುದುಗಳೊಂದಿಗೆ ಕಾಣಿಸಿಕೊಳ್ಳುತ್ತಾನೆ.

**ಕಾದಂಬಕುಲೋದ್ಭವಾಗ್ರಣಿ** : ಕದಂಬ ಕುಲದಲ್ಲಿ ಹುಟ್ಟಿದವನು.

**ಕಾದಂಬವಂಶಾಗ್ರಗಣ್ಯಂ** : ಕದಂಬ ಕುಲದಲ್ಲಿ ಅಗ್ರಗಣ್ಯವಾಗಿರುವುದು. ಕೋಗಳಿ-೪೦೦, ಕದಂಬ ಕುಲದ ಅಗ್ರಗಣ್ಯ ನೆಲೆಯಾಗಿತ್ತು.

**ಆ ಭೂವನವಿನುತಕುಲದೊಳ್ಬೊಭೂವನವನೊಂದೆ** : ತೋಳೊಳೊರ್ಬ್ಬನೆ ಕೆಯೂರಾಃ ಭರಣದಂತೆ ತಳೆದಂ ಭೂಭೃತ್ಕುಳ ತಿಳಕನೆನಿಸಿ.[೨೨೫]

ಪಾಂಡ್ಯ ವಂಶದ ಆಡಳಿತ ಜಗದಳ ಪಾಂಡ್ಯನೊಂದಿಗೆ ಕೊನೆಗೊಳ್ಳುತ್ತದೆ. ಇಲ್ಲಿ ಕ್ರೋಢೀಕರಿಸಿರುವ ಪಾಂಡ್ಯ ಅರಸರ ಬಿರುದುಗಳು ಅವರ ರಾಜಕೀಯ ಮತ್ತು ಸಾಂಸ್ಕೃತಿಕ ಚರಿತ್ರೆಯ ಬರವಣಿಗೆಗೆ ಪೂರಕ ಮಾಹಿತಿಯನ್ನು ಒದಗಿಸುತ್ತವೆ. ಬಿರುದುಗಳನ್ನು ಭಾಷಿಕ ನೆಲೆಯಲ್ಲಿ ಅಧ್ಯಯನಕ್ಕೆ ಬಳಸಿ ಅವುಗಳ ಸಾಂಸ್ಕೃತಿಕ ಆಯಾಮವನ್ನು ಕಟ್ಟಿಕೊಳ್ಳುವ ತುರ್ತು ಅಗತ್ಯತೆ ಇದೆ.

**ಉಚ್ಚಂಗಿ ಪಾಂಡ್ಯರ ವೈವಾಹಿಕ ಸಂಬಂಧಗಳು**

ಪ್ರಭುತ್ವ ವ್ಯವಸ್ಥೆಯಲ್ಲಿ ವೈವಾಹಿಕ ಸಂಬಂಧಗಳು ಸಮಾಜ ಮತ್ತು ಆಡಳಿತ ವರ್ಗದಲ್ಲಿ ಭಿನ್ನವಾಗಿಯೇ ನಡೆಯುತ್ತಿತ್ತು. ಸಮಾಜದ ಸಾಮಾನ್ಯ ಜನರಿಗೆ ವೈವಾಹಿಕ ವಿಷಯದಲ್ಲಿ ಕಠಿಣ ನೀತಿ ನಿಯಮಗಳು, ಸಾಮಾಜಿಕ ಕಟ್ಟಳೆಗಳಿಗೆ ಅನುಗುಣವಾಗಿ ನಡೆಯುತ್ತಿದ್ದವು. ಆದರೆ ಆಡಳಿತ ವರ್ಗಕ್ಕೆ ಯಾವುದೇ ನಿಯಮಗಳು, ಸಾಮಾಜಿಕ ಕಟ್ಟಳೆಗಳು ಇರುತ್ತಿರಲಿಲ್ಲ. ಆಡಳಿತ ವರ್ಗದ ವೈವಾಹಿಕ ಸಂಬಂಧಗಳಿಗೆ ಸಾಮ್ರಾಜ್ಯ ವಿಸ್ತರಣೆ ಅದರ ರಕ್ಷಣೆ ಇಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಆಡಳಿತದ ವಿರುದ್ಧ ಬಂಡಾಯ ಹೇಳುವ ಸಾಮಂತರನ್ನು ಸಮಾಧಾನ ಮಾಡಲು ಚಕ್ರವರ್ತಿ, ಸಾಮಂತ ದಂಡನಾಯಕ ಗೌಡ ಮೊದಲಾದ ಆಡಳಿತ ವರ್ಗಗಳ ಮಧ್ಯೆ ವೈವಾಹಿಕ ಸಂಬಂಧಗಳು ಏರ್ಪಡುತ್ತಿದ್ದವು. ಇಂತಹ ವೈವಾಹಿಕ ಸಂಬಂಧಗಳಿಗೆ ಯಾವುದೇ ನಿರ್ದಿಷ್ಟ ನಿಯಮಮಗಳು ಇರಲಿಲ್ಲ. ಪ್ರಭುವರ್ಗ ಪುತ್ರಿಯನೋ, ಸಹೋದರಿಯನೋ, ಪುತ್ರನೂ, ಸಹೋದರನೂ ಪರಸ್ಪರ ಕೊಡುಕೊಳ್ಳುವ ಮೂಲಕ ಈ ರಕ್ತ ಸಂಬಂಧ ಏರ್ಪಟ್ಟು ಎರಡು ಮನೆತನದ ನಡುವೆ ಇದ್ದಂತಹ ಸಂಘರ್ಷಗಳು ದೂರವಾಗಿ ಪರಸ್ಪರ ಎರಡು ಮನೆತನಗಳ ನಡುವೆ ಪ್ರೀತಿ ವಿಶ್ವಾಸ ಹಾಗೂ ಶಾಂತಿ ವೃದ್ಧಿಸುತ್ತಿತ್ತು.

ಉಚ್ಚಂಗಿ ಪಾಂಡ್ಯರು ನೊಳಂಬ ಪಲ್ಲವ, ಹೊಯ್ಸಳ, ಚೋಳ, ಗುತ್ತರು ಮತ್ತು ಮಹಾಪ್ರಧಾನ ಅದಿತ್ಯ ದಂಡನಾಯಕರೊಂದಿಗೆ ವೈವಾಹಿಕ ಸಂಬಂಧಗಳನ್ನು ಬೆಳೆಸಿ ನೊಳಂಬವಾಡಿಯ

ಆಡಳಿತವನ್ನು ಭದ್ರಪಡಿಸಿಕೊಂಡಿದ್ದರು. ಪಾಂಡ್ಯರ ವಂಶಾವಳಿಯನ್ನು ವಿವರಿಸುವ ಶಾಸನಗಳು ಸಮಕಾಲೀನ ಅರಸರೊಂದಿಗೆ ಹೊಂದಿದ್ದ ಸಂಬಂಧಗಳನ್ನು ಪರಿಚಯಿಸುತ್ತವೆ. ಪಾಂಡ್ಯರು ತಾವು ಚಂದ್ರವಂಶ, ಯದುವಂಶದವರೆಂದು ಹೇಳಿಕೊಂಡು, ತಮ್ಮ ವಂಶದ ಮೂಲಕ್ಕೆ ಪುರಾಣವನ್ನು ಮೊರೆಹೊಕ್ಕಿದ್ದಾರೆ. ಈ ವಂಶದಲ್ಲಿ ಮಂಗಯ್ಯನೆಂಬ ಹೆಸರಿನ ರಾಜನು ಜನ್ಮವೆತ್ತಿದನು. ಯಾದವ ಕುಲತಿಲಕನಾದ ಆದಿತ್ಯನಿಂದ ಪಾಂಡ್ಯ ವಂಶೋದಯವಾಯಿತು.[೨೨೬]

ಈ ಮನೆತನದ ಮೂಲ ಪುರುಷನಾದ ಮಂಗಯ್ಯ ಬಲರಾಮ ಮತ್ತು ಕೃಷ್ಣರು ಹುಟ್ಟಿದಂತಹ ಯದುವಂಶದಲ್ಲಿ ಹುಟ್ಟಿದ ಬಲರಾಮ ಮತ್ತು ಕೃಷ್ಣರು ವೈಷ್ಣವ ಧರ್ಮವನ್ನು ಸ್ಥಾಪಿಸಿದಂತೆ ಆ ವಂಶದಲ್ಲಿ ಹುಟ್ಟಿದ ಮಂಗಯ್ಯ ಪಾಂಡ್ಯ ಕುಲದ ಉದಯಕ್ಕೆ ಕಾರಣನಾದ. ಹೀಗೆ ದೇವಲೋಕದ ರಕ್ತಸಂಬಂಧವನ್ನು ಹೊಂದಿದ್ದನೆಂದು ಶಾಸನಗಳು ಹೇಳುತ್ತವೆ.

ಯದುವಂಶದಲ್ಲಿ ಉದಯಿಸಿದ ಮಂಗಯ್ಯನ ಕುಲದವರು ಸಪ್ತಕೊಂಕಣದ ಭಾಗವಾದ ಕರ್ನಾಟಕದ ಪಶ್ಚಿಮ ಕರಾವಳಿ ಪ್ರದೇಶದಲ್ಲಿ ನೆಲೆಸಿದ್ದರು. ಪೂರ್ವ ಚಾಳುಕ್ಯ ಜಯಸಿಂಹನು ಸಪ್ತಕೊಂಕಣ ಪ್ರದೇಶವನ್ನು ಗೆದ್ದು ತನ್ನ ವಶ ಮಾಡಿಕೊಂಡಾಗ ಪಾಂಡ್ಯ ಕುಲದವರು ನೊಳಂಬವಾಡಿಯ ಭಾಗಕ್ಕೆ ಬಂದು ಚಾಳುಕ್ಯ ಆಡಳಿತದಲ್ಲಿ ಸೇರಿಕೊಂಡರು. ಮಂಗಯ್ಯನ ಮಕ್ಕಳಾದ ಪಾಂಡ್ಯನೃಪಾಲ, ಚೇದಿರಾಜ ಮತ್ತು ಪಲಮಾಂದ ಪಾಂಡ್ಯರು ಚಾಳುಕ್ಯ ಅರಸರಾಗಿ ನಿಷ್ಠಾವಂತ ಸೈನಿಕರಾಗಿ ಸೇವೆ ಸಲ್ಲಿಸಿದ್ದರು. ಚೇದಿರಾಜ ಚೇದಿ ಅರಸರನ್ನು ಸೋಲಿಸಿ ಚಾಳುಕ್ಯರಿಗೆ ವಿಜಯ ದೊರಕಿಸಿಕೊಟ್ಟ ಇದರ ನೆನಪಿಗಾಗಿ ತೇಜರಾಜ ಚೇದಿರಾಜನೆಂಬ ಬಿರುದನ್ನು ಪಡೆದುಕೊಂಡ. ಇವನಿಂದಲ್ಲೇ ಈ ಮನೆತನಕ್ಕೆ ಪಾಂಡ್ಯ ಎಂಬ ಹೆಸರು ಬಂತು.

ಪಲಮಾಂದಪಾಂಡ್ಯನ ಮಗನಾದ ತ್ರಿಭುವನಮಲ್ಲ ಪಾಂಡ್ಯನನ್ನು ವಿಪ್ರದ ಶಾಸನ ನೊಳಂಬರ ಪಾರಂಪರಿಕ ಬಿರುದುಗಳಿಂದ ಕರೆಯುತ್ತದೆ. ಕಬ್ಬೂರು ಶಾಸನ ಇವನನ್ನು ವೀರನೊಳಂಬಪಲ್ಲವ ಪೆರ್ಮಾಡಿ ದೇವರ ತಮ್ಮ ಎಂದು ಹೇಳುತ್ತದೆ. ಚಾಳುಕ್ಯ ಜಯಸಿಂಹನಿಗೆ ಈ ಬಿರುದುಗಳು ಇದ್ದವು. ಹಾಗಾಗಿ ಪಲಮಾಂದಪಾಂಡ್ಯ ನೊಳಂಬ ಪಲ್ಲವ ಮತ್ತು ಚಾಳುಕ್ಯ ಅರಸು ಮನೆತನಗಳೊಂದಿಗೆ ರಕ್ತಸಂಬಂಧ ಬೆಳೆಸಿರುವುದು ಸ್ಪಷ್ಟವಾಗುತ್ತದೆ. ಹಾಗಾಗಿ ಚಾಳುಕ್ಯ ಮತ್ತು ಪಾಂಡ್ಯರ ಸಂಬಂಧಗಳು ಗಟ್ಟಿಯಾಗಿದ್ದವು. ಆದರೆ ಸ್ವಲ್ಪ ಸಮಯದ ನಂತರ ಇವರ ಸಂಬಂಧಗಳು ಹಳಸಿದವು. ಪಾಂಡ್ಯ ವಂಶದ ಇರುಕ್ಕವೇಳ್‌ಪಾಂಡ್ಯ ಚೋಳ ಮತ್ತು ಹೊಯ್ಸಳರೊಂದಿಗೆ ವೈವಾಹಿಕ ಸಂಬಂಧಗಳನ್ನು ಏರ್ಪಡಿಸಿದ್ದನು. ಚೋಳರು ಚಾಳುಕ್ಯರ ಶತ್ರುಗಳಾಗಿದ್ದರಿಂದ ಪಾಂಡ್ಯನ ಈ ನಡೆ ಆಶ್ರಿತ ರಾಜರಿಗೆ ಬೇಸರ ಉಂಟುಮಾಡಿತು.[೨೨೭]

ಕ್ರಿ.ಶ. ೧೧೦೦ರ ಹೊಯ್ಸಳ ಎರೆಯಂಗನಿಗೆ ಸೇರಿದ ಕಾಟಿಕೆರೆ ಶಾಸನ ಯರೆಯಂಗನ ರಾಣಿ ಮಹಾದೇವಿ ಪಾಂಡ್ಯಕುಲದವಳು ಎಂದು ಹೇಳುತ್ತದೆ.[೨೨೮] ಇರುಕ್ಕವೇಳ್‌ನ ಹೆಂಡತಿ ಚೋಳ ವಂಶದ ಮಗಳೆಂದು ಇವಳು ಚೋಳ ವಂಶದ ರಾಜಕುಮಾರಿ ಆಗಿರದೇ ಚೋಳ ವಂಶದ ಯಾವುದೇ ಶಾಖೆಗೆ ಸೇರಿದವಳಾಗಿರುವ ಸಾಧ್ಯತೆ ಇದೆ ಅಥವಾ ಚೋಳ ಅರಸ

ಸಾಮಂತ ಮನೆತನದ ಮಗಳಾಗಿರಬೇಕು[೨೯] ಎಂಬ ಸಾಧ್ಯತೆಯನ್ನು ತಳ್ಳಿ ಹಾಕುವಂತಿಲ್ಲ. ಈ ಕರ್ಕಡ ಮನೆತನದವರು ನೊಳಂಬವಾಡಿ ಪ್ರದೇಶದ ತೆರೆಯೂರನ್ನು ಕೇಂದ್ರವಾಗಿಟ್ಟುಕೊಂಡು ಆಳುತ್ತಿದ್ದರು. ತೆರೆಯೂರು ಮಧುಗಿರಿ ತಾಲ್ಲೂಕಿನ ಒಂದು ಗ್ರಾಮವಾಗಿದೆ. ಇಲ್ಲಿ ಚೋಳರ ಅನೇಕ ಶಾಸನಗಳು ದೊರೆಯುತ್ತವೆ. ಹಾಗಾಗಿ ಕರ್ಕಡ ಮನೆತನದವರು ಚೋಳ ವಂಶದ ಶಾಖೆಗೆ ಸೇರಿರಬೇಕು ಅಥವಾ ಚೋಳ ಅರಸರ ಸಾಮಂತರಾಗಿದ್ದಿರಬೇಕು.

ಇರುಕ್ಕವೇಳ್ ಪಾಂಡ್ಯ ಕರ್ಕಡ ಮಹಾರಾಯನಿಗೆ ತನ್ನ ಮಗಳನ್ನು ಕೊಟ್ಟು ವಿವಾಹ ಮಾಡಿಕೊಟ್ಟಿದ್ದ. ಈತ ಹೊಯ್ಸಳರೊಂದಿಗೆ ಉತ್ತಮ ಸಂಬಂಧವನ್ನು ಹೊಂದಿದ್ದರಿಂದ ಹೊಯ್ಸಳರು ಮತ್ತು ಕರ್ಕಡ ಮನೆತನದೊಂದಿಗೆ ಸಂಬಂಧಗಳನ್ನು ಬೆಳೆಸಿದ. ಹೊಯ್ಸಳ ಎರೆಯಂಗನಿಗೆ ಕರ್ಕಡ ಮಹಾರಾಯನ ಮಗಳಾದ ಮಹಾದೇವಿಯನ್ನು ಕೊಟ್ಟು ವಿವಾಹ ಮಾಡಿದ್ದ. ಮಹಾದೇವಿ ಇರುಕ್ಕವೇಳ್‌ನ ಮಗಳ ಮಗಳಾಗಿದ್ದರಿಂದ ಪಾಂಡ್ಯ ವಂಶದ ಸಂಬಂಧವನ್ನು ಹೊಂದಿದ್ದಳು.[೩೦] ಎರೆಯಂಗನ ರಾಣಿಯಾದ ಮಹಾದೇವಿಯು ಸಾಮಂತ ಕಾಡುವೆಟ್ಟ ಅವನ ಪತ್ನಿ ಸೇರದೆಯಬ್ಬೆ ಜೊತೆ ಸೇರಿ ಹೊಸ ಊರಿನಲ್ಲಿ ಕೆರೆ ಕಟ್ಟಿಸಿ ದೇವರಿಗೆ ದಾನ ನೀಡುತ್ತಾಳೆ.

ಈ ಶಾಸನದ ಕಾಲಕ್ಕಾಗಲೇ ಹೊಯ್ಸಳ ವಿಷ್ಣುವರ್ಧನ ಸ್ವತಂತ್ರನಾಗಲು ಪ್ರಯತ್ನ ಮಾಡುತ್ತಿದ್ದರಿಂದ ಚಾಳುಕ್ಯರ ಕೋಪಕ್ಕೆ ಕಾರಣನಾಗಿದ್ದ ಮತ್ತು ತ್ರಿಭುವನಮಲ್ಲ ಪಾಂಡ್ಯನ ಮೇಲೆ ದಾಳಿ ಮಾಡಿ ಸೋತಿದ್ದ. ಚೋಳರು ಆರಂಭದಿಂದಲೂ ಚಾಳುಕ್ಯ ಮನೆತನದ ಶತ್ರುಗಳಾಗಿದ್ದರು. ಇರುಕ್ಕವೇಳ್ ಪಾಂಡ್ಯನ ಈ ನಡೆ ಹಲವು ಅನುಮಾನಗಳಿಗೆ ಅವಕಾಶ ನೀಡುತ್ತದೆ. ಪಲಮಾಂದ ಪಾಂಡ್ಯ ತನ್ನ ಅಧಿಕಾರವನ್ನು ಪಳತ್ತ/ತ್ರಿಭುವನಮಲ್ಲ ಪಾಂಡ್ಯನಿಗೆ ನೀಡಿದ ಇರುಕ್ಕವೇಳ್‌ನನ್ನು ಆಡಳಿತದಿಂದ ದೂರವಿಟ್ಟಿದ್ದರಿಂದ ಈತ ಪಾಂಡ್ಯರ ಶತ್ರುಗಳೊಂದಿಗೆ ಸಂಬಂಧ ಬೆಳೆಸಿ ಅಧಿಕಾರ ಪಡೆಯುವ ತಂತ್ರಗಾರಿಕೆ ಇದ್ದರೂ ಅದು ಫಲಿಸಲಿಲ್ಲವೆಂದು ತೋರುತ್ತದೆ. ಇಲ್ಲಿ ಶತ್ರುಗಳಾದ ಚೋಳ ಮತ್ತು ಹೊಯ್ಸಳರೊಂದಿಗೆ ಸಂಬಂಧ ಬೆಳೆಸಿ ಅವರ ವಿಶ್ವಾಸಗೊಳಿಸುವ ಪ್ರಯತ್ನ ಮಾಡಿರಬೇಕು. ಇರುಕ್ಕವೇಳ್ ಆಡಳಿತದಿಂದ ದೂರವಿದ್ದುದರಿಂದ ಈ ಸಂಬಂಧಗಳ ಯಾವ ಪ್ರತಿಫಲಗಳು ಪಾಂಡ್ಯ ಅರಸರಿಗೆ ಲಾಭವಾಗಲೇ ಇಲ್ಲ. ಹೊಯ್ಸಳರು ಮತ್ತು ಚೋಳರು ಇವರ ಶತ್ರುಗಳಾಗಿ ಉಳಿದರು. ಉಚ್ಚಂಗಿ ಪಾಂಡ್ಯರು ಇರುಕ್ಕವೇಳ್‌ನನ್ನು ಅಧಿಕಾರದಿಂದ ದೂರವಿಟ್ಟು ಚಾಳುಕ್ಯ ಅರಸರ ನಂಬಿಕೆ ವಿಶ್ವಾಸವನ್ನು ಉಳಿಸಿಕೊಂಡರು.

ಇರುಕ್ಕವೇಳ್ ಪಾಂಡ್ಯನಿಂದ ಹಾಳಾಗಿದ್ದ ಪಾಂಡ್ಯ ಮತ್ತು ಚಾಳುಕ್ಯ ಸಂಬಂಧಗಳನ್ನು ಪಳತ್ತ/ತ್ರಿಭುವನಮಲ್ಲ ಪಾಂಡ್ಯ ಮತ್ತೆ ಗಟ್ಟಿಗೊಳಿಸಿದಂತೆ ಕಾಣುತ್ತದೆ. ವಿಪ್ರದ ಕ್ರಿ.ಶ. ೧೦೯೪ರ ಶಾಸನ ಮಹಾಪಲ್ಲವಾನ್ವಯಂ ಪ್ರಿಥ್ವಿವಲ್ಲಭಪಲ್ಲವಕುಳತಿಳಕಂನಮೋಘವಾಕ್ಯಂ ಕಾಂಚಿಪುರವರೇಸ್ವರಂ ರಾಜಿಗಚೋಳ ಮನೋಭಂಗಂ ಶ್ರೀಮತ್ರಿಭುವನಮಲ್ಲ ಪಾದಾಬ್ಜಭ್ರಾಂಗಂ ಶ್ರೀಮನ್ ಮಹಾಮಂಡ ಳೇಶ್ವರಂ ತ್ರಿಭುವನಮಲ್ಲಪಾಂಡ್ಯ ವೀರನೊಳಂಬ ಪಲ್ಲವಪೆರ್ಮನಡಿದೇವರು ನೊಳಂಬವಾಡಿ

ಮೂವತ್ತಿರ್ಚ್ಛಾಸಿರಮಂ ರಾಜ್ಯಂಗೆಯುತ್ತಮಿರೆ.[೨೧] ಕ್ರಿ.ಶ. ೧೧೨೩ರ ಕಬ್ಬೂರು ಶಾಸನ ತ್ರಿಭುವನಮಲ್ಲವೀರ ನೊಳಂಬ ಪೆರ್ಮಾಡಿದೇವರ ತಮ್ಮ ತ್ರಿಭುವನಮಲ್ಲ ಪಾಂಡ್ಯ ನೊಳಂಬವಾಡಿ-೩೨೦೦೦ವನ್ನು ಆಳುತ್ತಿರುವುದಾಗಿ ಹೇಳುತ್ತದೆ.[೨೨] ವಿಕ್ರಮಾದಿತ್ಯನ ಸಹೋದರ ಜಯಸಿಂಹ ಈ ಬಿರುದುಗಳನ್ನು ಹೊಂದಿದ್ದ. ಬಿ.ಎಲ್. ರೈಸ್‌ರು ಚಾಳುಕ್ಯ ಜಯಸಿಂಹ ಪಲ್ಲವ ರಾಜಕುಮಾರಿಯ ಮಗನೆಂದು ಅಭಿಪ್ರಾಯಿಸಿದ್ದರು. ಹುಲ್ಲೂರು ಶಾಸನ ತ್ರೈಲೋಕ್ಯಮಲ್ಲ ನೊಳಂಬ, ಪಲ್ಲವ, ಪೆರ್ಮ್ಮಾಡಿ ಜಯಸಿಂಹ ದೇವರು ಎಂದು ಹೇಳುತ್ತದೆ ಇನ್ನೊಂದು ಶಾಸನ ಪಲ್ಲವ ಕುಲ ತಿಲಕ 'ಕಾಂಚೀಪುರವರೇಶ್ವರ ಎಂದು ಕರೆಯುತ್ತದೆ.[೨೩] ಕೆಲವು ವಿದ್ವಾಂಸರು ಅಪುತ್ರಕನಾದ ನೊಳಂಬರು ಜಯಸಿಂಹನನ್ನು ದತ್ತು ಪಡೆದರೆಂದು ಹೇಳುತ್ತಾರೆ.

ಕಬ್ಬೂರು ಶಾಸನದಲ್ಲಿ ತಿಳಿಸಿರುವಂತೆ ತ್ರಿಭುವನಮಲ್ಲ ಪಾಂಡ್ಯ ನಿಜವಾಗಲೂ ಅವನಿಗೆ ಸಹೋದರ ಸಂಬಂಧಿಕನಾಗಿದ್ದನೇ ಅಥವಾ ಕೇವಲ ಪರಿಚಯಪೂರ್ವಕ ಪ್ರಸ್ತಾವವೇ ಎಂಬುದು ಸ್ಪಷ್ಟವಾಗುವುದಿಲ್ಲ. ಆದರೆ ವಿಪ್ರ ಮತ್ತು ಕಬ್ಬೂರು ಶಾಸನಗಳನ್ನು ಸಮೀಕರಿಸಿ ಹೇಳುವುದಾದರೆ, ಜಯಸಿಂಹ ನೊಳಂಬ ಪಲ್ಲವರು ಮತ್ತು ತ್ರಿಭುವನಮಲ್ಲ ಪಾಂಡ್ಯರ ನಡುವಿನ ಸಂಬಂಧಗಳ ಕಾರಣಕ್ಕಾಗಿಯೇ ಪಾಂಡ್ಯನನ್ನು ಈ ಶಾಸನಗಳಲ್ಲಿ ನೊಳಂಬ ಪಲ್ಲವರು ಮತ್ತು ಚಾಳುಕ್ಯ ಅರಸನನ್ನು ಸ್ಮರಿಸಿದಂತೆ ಕಾಣುತ್ತದೆ. ಹಾಗಾಗಿ ಈ ಇಬ್ಬರ ತಾಯಂದಿರು ಒಂದೇ ಮನೆತನಕ್ಕೆ ಅಂದರೆ ಪಲ್ಲವ ಮನೆತನಕ್ಕೆ ಸೇರಿದವರು ಎಂದು ಊಹಿಸಬಹುದು. ಮೂರು ಮನೆತನಗಳ ನಡುವಿನ ರಕ್ತಸಂಬಂಧ ತ್ರಿಭುವನಮಲ್ಲ ಪಾಂಡ್ಯನ ತಂದೆ ಪಲಮಾಂದ ಪಾಂಡ್ಯನ ಕಾಲಕ್ಕೆ ಏರ್ಪಟ್ಟಿದ್ದು ಮಗನ ಕಾಲದಲ್ಲಿ ಅದು ಗಟ್ಟಿಯಾಗಿ ಉಳಿದು ಮುಂದುವರಿದಿದೆ.

ತ್ರಿಭುವನಮಲ್ಲಪಾಂಡ್ಯನ ನಂತರ ಅಧಿಕಾರಕ್ಕೆ ಬಂದ ರಾಯಪಾಂಡ್ಯ ಬೆಳಹುಗೆ-೭೦, ಬೆಣ್ಣೆವೂರು-೧೨ನ್ನು ಆಳುತ್ತಿದ್ದ ಗುತ್ತ ವಂಶದ ಸಾಮಂತರೊಂದಿಗೆ ವೈವಾಹಿಕ ಸಂಬಂಧಗಳನ್ನು ಬೆಸೆದನು.

ಕ್ರಿ.ಶ. ೧೧೪೮ರ ಹರಿಹರ ಶಾಸನ ಅತ್ಯಂತ ಪರಾಕ್ರಮಿಯಾದ ರಾಯಪಾಂಡ್ಯನು ಈ ಭೂಮಿಯನ್ನು ಆಳುತ್ತಿದ್ದನು. ಪ್ರಖ್ಯಾತನಾದ ರಾಯಪಾಂಡ್ಯನಿಗೆ ಸಮಸ್ತ ಭೂಮಿಗೆ ಇವಳೊಬ್ಬಳೇ ಸ್ತ್ರೀ ರತ್ನವೆನ್ನುವಂತೆ ಎಲ್ಲ ಗುಣ ಗೌರವಗಳಿಂದ ಸೋವಲದೇವಿ ಅರ್ಧಾಂಗ ಲಕ್ಷ್ಮೀಯಾದಳು. ರಾಯಪಾಂಡ್ಯನ ಹೆಂಡತಿಯಾದ ಸೋವಲದೇವಿ ಗುತ್ತ ವಂಶದ ಬಿಲ್ಲವರಾಯನ ಮಗಳು. ಈ ವಂಶದ ವಿಕ್ರಮಾದಿತ್ಯ ಇವಳ ಅಣ್ಣ. ಈ ಹೆಣ್ಣಿನ ಸತ್ಕುಲಿನತಿಗೆ ಏನಾದರೂ ಕುಂದಿರುವದೇನು?[೨೪] ಪಂಡಿತಪಾಂಡ್ಯ, ವೀರಪಾಂಡ್ಯ ಪಲಮಾಂದಪಾಂಡ್ಯ ಕಾಮದೇವ ಅಥವಾ ವಿಜಯಪಾಂಡ್ಯರಿಗೆ ಸೋವಲದೇವಿ ಜನ್ಮ ಕೊಟ್ಟಳು. ಸೋವಲದೇವಿಯ ಸಹೋದರನಾದ ವಿಕ್ರಮಾದಿತ್ಯ ಮತ್ತು ಆತನ ಮಗನಾದ ಇಮ್ಮಡಿ ವಿಕ್ರಮಾದಿತ್ಯರಸು, ಪಾಂಡ್ಯರ ಸಾಮಂತರಾಗಿ ಆಡಳಿತ ನಡೆಸಿ ಕೊಟ್ನೆಕಲ್ಲು ಗ್ರಾಮದ ಕೋಟಿಶಂಕರದೇವರಿಗೆ ಹಾಗೂ ಬಾಗಳಿಯ ಶ್ರೀ ಅಹವಮಲೇಶ್ವರ ದೇವರಿಗೆ ದಾನ ಬಿಡುತ್ತಾರೆ.

ಈ ರಕ್ತ ಸಂಬಂಧ ವೀರಪಾಂಡ್ಯನ ಕಾಲಕ್ಕೂ ಮುಂದುವರಿಯಿತು. ಹರಿಹರ ಶಾಸನ ತಿಳಿಸುವಂತೆ ಅರಳಿದ ಕಮಲಕ್ಕೆ ಸಮನಾದ ಕಣ್ಣುಳ್ಳವಳೂ ವಿಕ್ರಮಾದಿತ್ಯನ ತಂಗಿಯೂ ವಿದ್ವಾಂಸರಿಗೆ ಕಲ್ಪವೃಕ್ಷದಂತಿರುವವಳೂ ಆದ ವಿಜಯದೇವಿ ವೀರ ಪಾಂಡ್ಯನ ರಾಣಿಯೆನಿಸಿ ಕೀರ್ತಿ ಪಡೆದಳು.[೨೩೫] ಇಲ್ಲಿ ಹೆಸರಿಸುವ ವಿಕ್ರಮಾದಿತ್ಯ ಗುತ್ತ ವಂಶದ ಇಮ್ಮಡಿ ವಿಕ್ರಮಾದಿತ್ಯರಸ ಇವನು ಪಾಂಡ್ಯರ ಸಾಮಂತನಾಗಿ ಬೆಳಹುಗೆ-೭೦, ಬೆಣ್ಣೆವೂರು-೧೨ನೂ ಹೊಳಲು ಪಟ್ಟಣದಿಂದ ಆಳುತ್ತಿದ್ದ.

ವೀರಪಾಂಡ್ಯ ಎರಡು ವಿವಾಹವಾಗಿದ್ದ. ಗುತ್ತ ವಂಶದ ವಿಜಯದೇವಿಯನ್ನು ತನ್ನ ಸೈನ್ಯದಲ್ಲಿ ಪ್ರಚಂಡ ದಂಡನಾಯಕನಾಗಿದ್ದ ಮಹಾಪ್ರಧಾನ ಆದಿತ್ಯದಂಡನಾಥನ ಮಗಳಾದ ಗಂಗಾದೇವಿಯನ್ನು ಮದುವೆಯಾಗಿದ್ದ. ಇವಳೇ ಆತನ ಮೊದಲ ರಾಣಿಯಾಗಿದ್ದಳು. ಈ ಲೋಕದಲ್ಲಿ ಕೀರ್ತಿಯನ್ನು ಪಡೆದು ಹೆಸರುಳ್ಳ ಆದಿತ್ಯದಂಡನಾಥನು ಚಕ್ರವರ್ತಿ ಅನುಗ್ರಹಿಸಲು ಮಹಾಪ್ರಧಾನ ಶಿಖಾಮಣಿಯೆನಿಸಿದನು. ಆ ಪ್ರಧಾನಿಯ ಮಗಳು 'ಗಂಗಾದೇವಿ' ಆಕೆ ಕುಲರೂಪಗುಣ ಗೌರವದಿಂದ ವೀರಪಾಂಡ್ಯನ ಮಹಾದೇವಿಯೆನಿಸಿ ಕೀರ್ತಿಯನ್ನು ಪಡೆದಳು. ಅತಿಶಯವಾದ ಕರುಣೆಯಿಂದ ಶಂಕರನು ಹಿರಿಯರಸಿಯ ಇಷ್ಟಾರ್ಥ ಪೂರ್ತಿಯನ್ನುಂಟುಮಾಡಲಿ, ಗಂಗೆಯನ್ನು ತಲೆಯಲ್ಲಿ ಧರಿಸಿ ಪ್ರಕಾಶಿಸುತ್ತಿರುವವನೂ ವಿದ್ವಾಂಸರ ಸ್ತೋತ್ರಕ್ಕೆ ಪಾತ್ರನಾದವನೂ ಆದ ತ್ರಿನೇತ್ರನು ಗಂಗಾವಧುವಿನ ಮನಸ್ಸಿನ ಬಯಕೆಗಳನ್ನು ಪೂರೈಸಲಿ.[೨೩೬]

ವಿಜಯಪಾಂಡ್ಯನ ವೈವಾಹಿಕ ಸಂಬಂಧಗಳ ಬಗ್ಗೆ ತಿಳಿಯುವುದಿಲ್ಲ. ವೀರಪಾಂಡ್ಯ ಮತ್ತು ರಾಯಪಾಂಡ್ಯರು ಬೆಳೆಸಿದ ಸಂಬಂಧಗಳನ್ನು ವಿಜಯಪಾಂಡ್ಯ ಕಾಪಾಡಿಕೊಂಡು ಬಂದ. ತನ್ನ ಪೂರ್ವಿಕರ ಯಾವ ಸಂಬಂಧಗಳನ್ನು ಕಡೆಗಣಿಸದೇ ಅವುಗಳಿಗೆ ಮಾನ್ಯತೆ ನೀಡಿದ. ವೀರಪಾಂಡ್ಯನಿಗೆ ತನ್ನ ತಂಗಿ ವಿಜಯದೇವಿಯನ್ನು ಕೊಟ್ಟಿದ್ದ ಇಮ್ಮಡಿ ವಿಕ್ರಮಾದಿತ್ಯ ಕ್ರಿ.ಶ. ೧೧೮೧ರಲ್ಲಿ ವಿಜಯಪಾಂಡ್ಯನ ಸಾಮಂತನಾಗಿ ಬೆಳಹುಗೆ-೭೦ ಬೆಣ್ಣೆವೂರು-೧೨ ಆಳುತ್ತಿರುವಾಗ ಹಿರಿಯ ವಿಕ್ರಮಾದಿತ್ಯ ನೀಡಿದ ವೃತಿ ಭೂಮಿ ಸಮೇತ ಕುರುವತ್ತಿಯ ಅಹವಮಲೇಶ್ವರ ದೇವರಿಗೆ ದಾನ ಬಿಡುತ್ತಾನೆ. ಲೋಕಭರಣನು ಈ ದಾನವನ್ನು ಸ್ವೀಕರಿಸುತ್ತಾನೆ.[೨೩೭] ಗುತ್ತ ವಂಶದ ಎರಡನೇ ತಲೆಮಾರಿನ ರಕ್ತಸಂಬಂಧವನ್ನು ಉಳಿಸಿಕೊಂಡಿರುವುದು ಇದರಿಂದ ಸ್ಪಷ್ಟವಾಗುತ್ತದೆ.

ವಿಜಯಪಾಂಡ್ಯ ಹೊಯ್ಸಳ ವೀರಬಲ್ಲಾಳನಿಂದ ತನ್ನ ಆಡಳಿತವನ್ನು ಕಳೆದುಕೊಂಡು ಚರಿತ್ರೆಯ ಪುಟದಿಂದ ಹಿಂದೆ ಸರಿಯುತ್ತಾನೆ. ಕೆಲವು ದಿನಗಳ ನಂತರ ಪಾಂಡ್ಯ ವಂಶದ ಜಗದಳ ಪಾಂಡ್ಯ ಹೊಯ್ಸಳ ಅರಸರ ಸಾಮಂತನಾಗಿ ಮತ್ತೆ ನೊಳಂಬವಾಡಿಯ ಅಧಿಕಾರದಲ್ಲಿ ಕಾಣಿಸಿಕೊಳ್ಳುತ್ತಾನೆ. ಅಂಬಳಿ-ಉಜ್ಜನಿ ಶಾಸನಗಳು ಈತನ ಆಡಳಿತ ಬಗ್ಗೆ ತಿಳಿಸುತ್ತವೆ. ಜಗದಳಪಾಂಡ್ಯ ಕದಂಬ ಕುಲದವನು ಎಂದು ಕರೆದುಕೊಂಡಿದ್ದಾನೆ. ಇದರ ಹಿನ್ನೆಲೆ ಏನೆಂಬುದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಅಂಬಳಿ ಶಾಸನ ಕಾದಂಬಕುಲೋದ್ಭವಾಗ್ರಣಿ ಜಗದ್ದಳ ಪಾಂಡ್ಯ ನೃಪಾಳವಂಶವಂ ॥ ಆ ಭುವನವಿನುತಕುಲದೊಳ್ಬೊಭುವನವನೊಂಡಿ ತೋಳೊಳೊರ್ಬ್ಬನೆ

ಕೇಯೂರಾಭರಣದಂತೆ ತಳೆದಂ ಭೂಭೃತ್ಕುಳತಿಳಕನೆನಿಸಿ ಜಗದಳ ಪಾಂಡ್ಯಂ||³⁵⁶ ಎಂದು ಕದಂಬ ವಂಶದ ಬಿರುದಿನೊಂದಿಗೆ ಕೋಗಳಿ-೫೦೦ನ್ನು ಆಳುತ್ತಿರುವುದಾಗಿ ಹೇಳುತ್ತದೆ. ಉಚ್ಚಂಗಿ ಪಾಂಡ್ಯರು ಚಾಳುಕ್ಯ ಅರಸರಿಗೆ ನಿಷ್ಠೆ ತೋರಿದಂತೆ ಕದಂಬರು ಪಾಂಡ್ಯ ಅರಸರಿಗೆ ನಿಷ್ಠೆ ತೋರಿದ್ದರು. ಹೊಯ್ಸಳ ವೀರಬಲ್ಲಾಳ ಪಾಂಡ್ಯರ ಆಡಳಿತವನ್ನು ಅಕ್ರಮಿಸಿದಾಗ ಕೊಟ್ಟೂರಿನ ಕದಂಬರು ಪಾಂಡ್ಯರಿಗೆ ಆಶ್ರಯ ನೀಡಿರಬೇಕು. ಹೊಯ್ಸಳರ ಸಾಮಂತರಾಗುವ ಪೂರ್ವದಲ್ಲಿ ಪಾಂಡ್ಯರ ಆಶ್ರಯದಲ್ಲಿದ್ದ ಕದಂಬರು ಅವರೊಂದಿಗೆ ರಕ್ತಸಂಬಂಧವನ್ನು ಬೆಳೆಸಿರಬೇಕು ಅಥವಾ ಹೊಯ್ಸಳರು ಅಧಿಕಾರ ನೀಡಲು ಒಪ್ಪಿದಾಗ ಕದಂಬರು ತಮ್ಮ ಪಾರಂಪರಿಕ ಆಡಳಿತ ಭಾಗವಾದ ಕೋಗಳಿ-೫೦೦ನ್ನು ಪಾಂಡ್ಯರಿಗೆ ಬಿಟ್ಟುಕೊಟ್ಟಿರಬೇಕು. ವಿಜಯಪಾಂಡ್ಯನ ನಂತರ ಕದಂಬರು ಈ ಭಾಗದಲ್ಲಿ ಕಾಣಿಸುವುದಿಲ್ಲ. ಹಾಗಾಗಿ ಜಗದಳಪಾಂಡ್ಯ ಆಶ್ರಿತ ಸಾಮಂತರು ಮತ್ತು ಮೂಲವಂಶವನ್ನು ಸಮೀಕರಿಸಿಕೊಂಡು ಹೊಯ್ಸಳರ ಸಾಮಂತನಾಗಿ ಕೋಗಳಿ-೫೦೦ರ ಆಡಳಿತವನ್ನು ಪಡೆದುಕೊಂಡಿರಬೇಕು. ಕ್ರಿ.ಶ. ೧೨೦೬ರ ನಂತರ ಉಚ್ಚಂಗಿ ಪಾಂಡ್ಯರು ನೊಳಂಬವಾಡಿ ಪ್ರಾಂತ್ಯದ ಚರಿತ್ರೆಯ ಪುಟಗಳಿಂದ ದೂರ ಸರಿಯುತ್ತಾರೆ.

ಉಚ್ಚಂಗಿ ಪಾಂಡ್ಯರು ಸಮಕಾಲೀನ ಅರಸುಮನೆತನಗಳೊಂದಿಗೆ ವೈವಾಹಿಕ ಸಂಬಂಧಗಳನ್ನು ಹೊಂದಿದ್ದರು. ಮತ್ತೆ ಕೆಲವು ಅಕ್ಕಪಕ್ಕದ ಸಾಮಂತ ಮನೆತನಗಳಾದ ಬೆಳಗುತ್ತಿ ಸಿಂದರು ಕುರುಗೋಡು ಸಿಂದರು, ನಿಡುಗಲ್ಲು ಚೋಳರು, ಬನವಾಸಿ, ಹಾನಗಲ್ಲು, ಸಾಂತಳಿಗೆ ನಾಡಿನ ಸಾಮಂತರೊಂದಿಗೆ ರಾಜತಾಂತ್ರಿಕ ಸಂಬಂಧಗಳನ್ನು ಹೊಂದಿದ್ದರು. ಪಾಂಡ್ಯರ ಈ ಸಂಬಂಧಗಳು ಅವರ ಆಡಳಿತಕ್ಕೆ ರಕ್ಷಣೆ ಮತ್ತು ಪ್ರಜೆಗಳ ನೆಮ್ಮದಿಗೆ ಕಾರಣವಾಗಿತ್ತು. ಹಾಗಾಗಿಯೇ ಪಾಂಡ್ಯರ ಕಾಲದಲ್ಲಿ ನೊಳಂಬವಾಡಿಯ ಒಳಗೆ ಯಾವುದೇ ಆಂತರಿಕ ಗಲಭೆಗಳು ಉಂಟಾಗಲಿಲ್ಲ. ಹೊಯ್ಸಳರನ್ನು ಹೊರತುಪಡಿಸಿ ಪಾಂಡ್ಯನಾಡಿನ ಸುತ್ತಲಿನ ಎಲ್ಲಾ ಸಾಮಂತರು ಪಾಂಡ್ಯರ ಸ್ನೇಹಿತರಾಗಿದ್ದರು. ಅವರೆಂದು ಪಾಂಡ್ಯನಾಡಿನ ಆಕ್ರಮಣಕ್ಕೆ ಮಾಡಲೇ ಇಲ್ಲ. ಉಚ್ಚಂಗಿ ಪಾಂಡ್ಯರ ಸ್ನೇಹ ಪರವಾದ ಸಂಬಂಧಗಳೇ ಇದಕ್ಕೆ ಕಾರಣವಾಗಿತ್ತು. ಅವರು ಶೌರ್ಯ ಪರಾಕ್ರಮದಷ್ಟೇ ಹೃದಯವಂತರೂ ಆಗಿದ್ದರು.

**ರಾಜಧಾನಿಗಳು**

ರಾಜಮನೆತನಗಳ ಇತಿಹಾಸ ರೂಪುಗೊಳ್ಳುವಲ್ಲಿ ರಾಜಧಾನಿಗಳು ಮಹತ್ವದ ಪಾತ್ರವನ್ನು ವಹಿಸುತ್ತವೆ. ರಾಜಧಾನಿ ಪಟ್ಟಣಗಳ ಹೆಸರಿನಿಂದಲೇ ಆಡಳಿತ ನಡೆಸಿದ ಮತ್ತು ರಾಜಧಾನಿ ಪಟ್ಟಣಗಳನ್ನು ನಿರ್ಮಿಸಿದ ಅರಸುಮನೆತನಗಳನ್ನು ಕರೆಯುವ ಪದ್ಧತಿ ರೂಢಿಯಾಗಿದೆ. ಉದಾ: ಕಲ್ಯಾಣದ ಚಾಳುಕ್ಯರು ಬಾದಾಮಿಯ ಚಾಳುಕ್ಯರು, ಬನವಾಸಿ ಕದಂಬರು, ದ್ವಾರಸಮುದ್ರದ ಹೊಯ್ಸಳರು ಕಂಚಿಯ ಪಲ್ಲವರು, ಉಚ್ಚಂಗಿ ಪಾಂಡ್ಯರು ಹೀಗೆ ಅರಸು ವಂಶದ ಸಂಕೇತಗಳಾಗಿ ರಾಜಧಾನಿಗಳು ಬೆಳೆದುಬಂದಿವೆ. ಈ ಸಂಪ್ರದಾಯ ಕೇವಲ ಅರಸು ಮನೆತನಗಳಿಗೆ

ಸೀಮಿತವಾಗಿರದೆ ಸಾಮಂತ ಮನೆತನಗಳು ಕೂಡ ರಾಜಧಾನಿ ಪ್ರದೇಶದ ಹೆಸರಿನಿಂದಲೇ ಗುರುತಿಸಿಕೊಂಡಿವೆ. ಉದಾ: ನಿಡುಗಲ್ಲು ಚೋಳರು, ಸಾಂತಳಿಗೆ ಸಾಂತರು, ಕೆಳದಿ ನಾಯಕರು, ನೊಳಂಬ ಪಲ್ಲವರು, ಹಾನಗಲ್ಲು ಕದಂಬರು, ಕುರುಗೋಡು ಸಿಂದರು ಮೊದಲಾದವರು.

ಪ್ರತಿಯೊಂದು ಅರಸುಮನೆತನಗಳು ತನ್ನ ರಾಜಧಾನಿ ಕೇಂದ್ರವನ್ನು ಆಯ್ಕೆ ಮಾಡುವಾಗ ಆ ಪ್ರದೇಶದ ಆರ್ಥಿಕ, ರಾಜಕೀಯ ಹಾಗೂ ಭೌಗೋಳಿಕ ಅಂಶಗಳಿಗೆ ಹೆಚ್ಚಿನ ಮಹತ್ವ ನೀಡುತ್ತವೆ. ಪ್ರಾಕೃತಿಕವಾಗಿ ನಿರ್ಮಾಣವಾದ ಬೆಟ್ಟಗುಡ್ಡ, ನದಿ, ಹಳ್ಳಗಳು ರಾಜಧಾನಿಗೆ ರಕ್ಷಣೆಯನ್ನು ಒದಗಿಸುತ್ತಿದ್ದವು. ಹಾಗಾಗಿ ರಾಜ್ಯ ನಿರ್ಮಾಣ ಮತ್ತು ವಿಸ್ತರಣೆಯಲ್ಲಿ ಭೌಗೋಳಿಕ ಅಂಶಗಳ ಪಾತ್ರ ಮಹತ್ವದ್ದಾಗಿರುತ್ತದೆ. ಈ ಭೌಗೋಳಿಕ ಅಂಶಗಳ ಆಯ್ಕೆ ಜೊತೆಯಲ್ಲಿ ಆರ್ಥಿಕ ಮತ್ತು ರಾಜಕೀಯ ಅಂಶಗಳು ತಮ್ಮ ಪ್ರಭಾವವನ್ನು ಬೀರುತ್ತವೆ. ಹಾಗೆಯೇ ಸಾಮ್ರಾಜ್ಯಗಳು ಮತ್ತು ಆಡಳಿತ ವಿಭಾಗಗಳ ವಿಂಗಡಣೆ ಮತ್ತು ಅವುಗಳ ಗಡಿಭಾಗಗಳು ಹಾಗೂ ಮುಖ್ಯ ಕೇಂದ್ರದ ನಿರ್ಣಯದಲ್ಲಿ ಭೌಗೋಳಿಕ ಅಂಶಗಳು ಹೊರತಾಗಿಲ್ಲ.

ಉಚ್ಚಂಗಿ ಪಾಂಡ್ಯರು ನೊಳಂಬವಾಡಿ ಪ್ರಾಂತ್ಯದ ಆಡಳಿತವನ್ನು ವಹಿಸಿಕೊಂಡಾಗ ತಮ್ಮ ಆಡಳಿತ ಕೇಂದ್ರದ ಆಯ್ಕೆಯಲ್ಲಿ ಭೌಗೋಳಿಕ ಅಂಶಗಳಿಗೆ ಪ್ರಾಧ್ಯಾನತೆ ನೀಡಿರುವುದನ್ನು ಗುರುತಿಸಬಹುದು. ನೊಳಂಬ ಪಲ್ಲವರು ಈ ಪ್ರದೇಶದ ಆಡಳಿತವನ್ನು ಮಾಡುವಾಗ ಹೆಂಜೇರು ಅವರ ಆರಂಭದ ರಾಜಧಾನಿಯಾಗಿತ್ತು.

ನೊಳಂಬಾದಿರಾಜ ಇಮ್ಮಡಿ ಮಹೇಂದ್ರ ಪಟ್ಟಕ್ಕೆ ಬಂದ ಕಾಲದಲ್ಲಿ ನೊಳಂಬರಾಜ್ಯ ವಿಸ್ತಾರ ರೂಪ ಪಡೆಯುತ್ತಾ ಬಂತು. ಆದರೆ ಈ ವೇಳೆಯಲ್ಲಿ ನೊಳಂಬರ ಮೇಲೆ ಗಂಗ ಮತ್ತು ಚೋಳರ ದಾಳಿಗಳು ಹೆಚ್ಚಾಗತೊಡಗಿದವು. ಗಂಗ ಮಾರಸಿಂಹನು ನೊಳಂಬ ಪಲ್ಲವರನ್ನು ಸೋಲಿಸಿ ನೊಳಂಬಕುಲಾಂತಕ ಎಂಬ ಬಿರುದು ಧರಿಸಿದನು. ಚೋಳರು ಬಜಯತಿಮಂಗಲ ತಲುಪಿ ನೊಳಂಬ ಸೇನೆಯನ್ನು ಸೋಲಿಸಿದರು.[೨೯] ಇದರಿಂದ ವಿಚಲಿತರಾದ ನೊಳಂಬರು ತಮ್ಮ ರಾಜಧಾನಿಯನ್ನು ಬದಲಾಯಿಸಲು ನಿರ್ಧರಿಸಿ ಬಳ್ಳಾರಿ ಪ್ರದೇಶಕ್ಕೆ ಬಂದು 'ಕಂಪಿಲಿ'ಯನ್ನು ಎರಡನೇ ರಾಜಧಾನಿಯನ್ನಾಗಿ ಮಾಡಿಕೊಂಡರು. ನೊಳಂಬ ಪಲ್ಲವರ ಕಾಲದಲ್ಲಿಯೇ ನೊಳಂಬವಾಡಿಯ ಆಡಳಿತ ಕೆಲವು ಕಾಲ ಚಾಳುಕ್ಯ ರಾಜಕುಮಾರರ ಕೈಗೆ ಬರುತ್ತದೆ. ವಿಷ್ಣುವರ್ಧನ ವಿಜಯಾದಿತ್ಯ, ೬ನೇ ವಿಕ್ರಮಾದಿತ್ಯ, ಜಯಸಿಂಹರು ಈ ಪ್ರದೇಶದ ಆಡಳಿತವನ್ನು ನೋಡಿಕೊಳ್ಳುವಾಗ ಅವರು 'ಕಂಪಿಲಿ' ರಾಜಧಾನಿಯಲ್ಲೇ ಇದ್ದರು.

ತ್ರಿಭುವನಮಲ್ಲ ವಿಕ್ರಮಾದಿತ್ಯ ದೇವರು ಕ್ರಿ.ಶ. ೧೦೭೬ರಲ್ಲಿ ಕಲ್ಯಾಣದ ಅಧಿಕಾರವನ್ನು ವಹಿಸಿಕೊಂಡು ನೊಳಂಬವಾಡಿ-೩೨೦೦೦ ಪ್ರಾಂತ್ಯದ ಆಡಳಿತವನ್ನು ಉಚ್ಚಂಗಿ ಪಾಂಡ್ಯರಿಗೆ ನೀಡಿದನು. ಈ ವೇಳೆಗೆ ನೊಳಂಬವಾಡಿ ಪ್ರಾಂತ್ಯ ತನ್ನ ಮೂಲ ಸ್ವರೂಪವನ್ನು ಕಳೆದುಕೊಂಡಿತು. ತುಂಗಭದ್ರಾ ನದಿಯ ದಕ್ಷಿಣ ಭಾಗ ಅದರ ಗಡಿ ಪ್ರದೇಶವಾಗಿತ್ತು. ಕಂಪಿಲಿ ಭಾಗದಲ್ಲಿ

ಕುರುಗೋಡು ಸಿಂದರು ಪ್ರಬಲರಾಗಿದ್ದರು. ಅಲ್ಲದೆ ನೊಳಂಬ ಪಲ್ಲವರಿಂದ ಅಧಿಕಾರವನ್ನು ಕಿತ್ತುಕೊಂಡು ಪಾಂಡ್ಯರಿಗೆ ನೀಡಿದ್ದ ಕಾರಣಕ್ಕೆ ಉಚ್ಚಂಗಿ ಪಾಂಡ್ಯರು ರಾಜಧಾನಿಯನ್ನು ಬದಲಾಯಿಸುವ ಅನಿವಾರ್ಯತೆ ಇತ್ತು. ಸೂಕ್ತ ರಾಜಧಾನಿಯ ಹುಡುಕಾಟದಲ್ಲಿದ್ದ ತ್ರಿಭುವನಮಲ್ಲ ಪಾಂಡ್ಯ ಆರಂಭದಲ್ಲಿ ಉಳವಿ, ಕೇಸವೂರು ನೆಲೆಗಳನ್ನು ಗುರುತಿಸಿದ ನಂತರ ಬೇತೂರು ಸ್ವಲ್ಪ ಕಾಲ ರಾಜಧಾನಿಯಾಗಿತ್ತು. ರಾಯಪಾಂಡ್ಯನ ಕಾಲದಲ್ಲಿ ಹೊಯ್ಸಳ ವಿಷ್ಣುವರ್ಧನ ಸ್ವತಂತ್ರನಾಗಲು ಹಂಬಲಿಸಿ ಪದೇ ಪದೇ ನೊಳಂಬವಾಡಿ ಮೇಲೆ ಆಕ್ರಮಣ ಮಾಡಲು ಆರಂಭಿಸಿದ್ದರಿಂದ ಪಾಂಡ್ಯರು ಅತ್ಯಂತ ಸುರಕ್ಷಿತ ಪ್ರದೇಶವಾದ ಉಚ್ಚಂಗಿದುರ್ಗಕ್ಕೆ ರಾಜಧಾನಿಯನ್ನು ವರ್ಗಾಯಿಸಿದರು. ಸುಮಾರು ೫೦ ವರ್ಷಗಳ ಕಾಲ ಉಚ್ಚಂಗಿದುರ್ಗ ಪಾಂಡ್ಯರ ರಾಜಧಾನಿಯಾಗಿ ತಮ್ಮ ವಂಶದ ಸಂಕೇತವಾಗಿ ಚರಿತ್ರೆಯಲ್ಲಿ ದಾಖಲಾಯಿತು.

**ಉಳವಿ**

ಪಾಂಡ್ಯ ಅರಸರ ಆಡಳಿತದ ಮೊದಲ ರಾಜಧಾನಿ ಪ್ರದೇಶ 'ಉಳವಿ' ಎಂಬುದನ್ನು ಶಾಸನಗಳು ಹೇಳುತ್ತವೆ. ಪಾಂಡ್ಯ ಅರಸ ಮೊದಲ ಶಾಸನವಾದ ಕ್ರಿ.ಶ. ೧೦೭೯ರ ನೀಲಗುಂದ ಶಾಸನ ತ್ರಿಭುವನಮಲ್ಲದೇವರು ಕಲ್ಯಾಣದಲ್ಲಿ ಆಳುತ್ತಿರುವಾಗ ಆತನ ಪಾದಪದ್ಮೋಪಜೀವಿ ಮಹಾಮಂಡಳೇಶ್ವರ ತ್ರಿಭುವನಮಲ್ಲ ಪಾಂಡ್ಯ ಪಾರಂಪರಿಕ ಬಿರುದುಗಳೊಂದಿಗೆ ನೊಳಂಬವಾಡಿ-೩೨೦೦೦ವನ್ನು 'ಉಳವಿ' ನೆಲೆವೀಡಿನಿಂದ ಆಳುತ್ತಿರುವುದಾಗಿ ದಾಖಲಿಸುತ್ತದೆ.[೨೬೦] ಕ್ರಿ.ಶ. ೧೧೦೬ರ ಅಂಬಳಿ, ಕ್ರಿ.ಶ. ೧೧೨೩ರ ಚನ್ನಗಿರಿ ಶಾಸನಗಳು ಕೂಡ ತ್ರಿಭುವನಮಲ್ಲ ಪಾಂಡ್ಯ 'ಉಳವಿ' ನೆಲೆವೀಡಿನಿಂದ ಆಳುತ್ತಿರುವುದನ್ನು ತಿಳಿಸುತ್ತವೆ.

ಉತ್ತರ ಕನ್ನಡ ಜಿಲ್ಲೆಯ ಜೋಯಿಡಾ ತಾಲೂಕಿನಲ್ಲಿರುವ 'ಉಳವಿ' ಗ್ರಾಮವೇ ಅಂದಿನ ಪಾಂಡ್ಯರ ರಾಜಧಾನಿ ಪ್ರದೇಶವಾಗಿರಬೇಕು. ಚನ್ನಬಸವೇಶ್ವರ ದೇವಾಲಯ ಈ ಗ್ರಾಮದಲ್ಲಿದೆ. ದಾವಣಗೆರೆ ಮತ್ತು ಚಿತ್ರದುರ್ಗ ಜಿಲ್ಲೆಯಲ್ಲಿ ಈ ಹೆಸರಿನ ಯಾವುದೇ ಗ್ರಾಮಗಳು ಕಾಣಿಸುವುದಿಲ್ಲ. ಉತ್ತರ ಕನ್ನಡ ಜಿಲ್ಲೆಯ 'ಉಳವಿ' ಪಾಂಡ್ಯರ ರಾಜಧಾನಿ ಆಗಿತ್ತು ಎಂಬುದನ್ನು ಊಹಿಸಲಿಕ್ಕೆ ಕೆಲವು ಕಾರಣಗಳನ್ನು ನೋಡಬಹುದು. ಪಾಂಡ್ಯರು ಹೈಹ ಅಥವಾ ಹೈವೆನಾಡಿನಿಂದ ಬಂದಿರುವುದು ಶಾಸನಗಳಿಂದ ಸ್ಪಷ್ಟವಾಗಿದೆ. ಈ ಹೈಹ ಪ್ರದೇಶವನ್ನು ಗೋವಿಂದ ಪೈ, ಪಾದೇಕಲ್ಲು ವಿಷ್ಣುಭಟ್ಟರು, ಗಣಪತಿಗೌಡ ಮೊದಲಾದವರು ಉತ್ತರ ಕನ್ನಡ ಜಿಲ್ಲೆಯ ಭಾಗವನ್ನು ಹೈಹ ಪ್ರದೇಶ ಒಳಗೊಂಡಿತ್ತು ಎಂದು ಗುರುತಿಸಿದ್ದಾರೆ. ಪಾಂಡ್ಯ ವಂಶದ ಇನ್ನೊಂದು ಶಾಖೆಯ ಶಿಶುಗಲಿ ಪಾಂಡ್ಯರ ರಾಜಧಾನಿ ಶಿಶುಗಲಿ ಉತ್ತರ ಕನ್ನಡ ಜಿಲ್ಲೆಯಲ್ಲಿರುವುದನ್ನು ಸ್ಪಷ್ಟಪಡಿಸಿದ್ದಾರೆ. ದಿನಕರ ದೇಸಾಯಿ, ಬಿ.ಎಲ್. ರೈಸ್, ಫ್ಲೀಟ್, ಝಡ್.ಕೆ. ಅನ್ಸಾರಿ, ಕುಂ.ಬಾ. ಸದಾಶಿವಪ್ಪ ಮೊದಲಾದ ವಿದ್ವಾಂಸರು ಉಚ್ಚಂಗಿ ಪಾಂಡ್ಯರು ಆರಂಭದಲ್ಲಿ ಶಿಶುಗಲಿಯಿಂದ ಆಡಳಿತ ನಡೆಸಿದರು ಎಂದು ಅಭಿಪ್ರಾಯಪಡುತ್ತಾರೆ. ಪಾಂಡ್ಯರು ಸಪ್ತಕೊಂಕಣ ಹೈಹ ನಾಡಿನವರು ಎಂಬುದು ಸತ್ಯ. ಇವರು ಹೈಹ ನಾಡಿನವರಾದ್ದರಿಂದ ಆರಂಭದ ಬೆಳವಣಿಗೆ ಇಲ್ಲಿಂದಲೇ ಆಗಿರಬೇಕು.

ಕಾಳಿ ನದಿಯ ಸಮೀಪ ರಾಕ್ಷಸಘಟ್ಟದ ತುದಿಯ ಮೇಲಿರುವ ಸಣ್ಣ ಹಳ್ಳಿ 'ಉಳವಿ'. ಈ ಪ್ರದೇಶಕ್ಕೆ ಹಿಂದೆ 'ವೃಷಭಪುರ' ಅನ್ನುತ್ತಿದ್ದರು. ಇದರ ನೈರುತ್ಯ ದಿಕ್ಕಿನಲ್ಲಿ ಕೋಟೆಯ ಅವಶೇಷಗಳು ಇತರೆ ಸ್ಮಾರಕ ಅವಶೇಷಗಳು ಇವೆ. ಈ ಅವಶೇಷಗಳು ಸಾದ್ವಿಯರಸರಿಗೆ ಸೇರಿದ್ದವು. ಪ್ರಾಚೀನ ಕಾಲದಿಂದಲೂ ಇಲ್ಲಿ ರಾಜಕೀಯ ಚಟುವಟಿಕೆಗಳು ನಡೆದಿರುವುದು ಅಲ್ಲಿನ ಅವಶೇಷಗಳಿಂದ ತಿಳಿಯುತ್ತದೆ. ಈ 'ಉಳವಿ' ಗ್ರಾಮ ಹಿಂದಿನ ಪ್ರಾಚೀನ ಆಡಳಿತ ವಿಭಾಗವಾದ ಬನವಾಸಿ-೧೨೦೦೦ ಪ್ರಾಂತ್ಯಕ್ಕೆ ಸೇರಿತು. ಪಾಂಡ್ಯರ ಆನಂತರದ ಆಡಳಿತ ರಾಜಧಾನಿಗಳಾದ ಕೇಸವೂರು, ಬೇತೂರು ಮತ್ತು ಉಚ್ಚಂಗಿದುರ್ಗ ಪಟ್ಟಣಗಳು ಬನವಾಸೆ-೧೨೦೦೦ ಉಪವಿಭಾಗ ಕದಂಬಳಿಗೆ-೧೦೦೦ದಲ್ಲಿ ಇರುವುದು ವಿಶೇಷವಾಗಿದೆ. ಅಲ್ಲದೆ ಆಡಳಿತ ಆರಂಭದ ಸುಳಿವುಗಳು ಬನವಾಸಿ ನಾಡಿನಲ್ಲಿ ದೊರೆಯುತ್ತವೆ. ಹಾಗಾಗಿ ಪಾಂಡ್ಯರು ತಮ್ಮ ಆಡಳಿತವನ್ನು ಮೂಲ ಪ್ರದೇಶದಿಂದಲೇ ಆರಂಭಿಸಿದ್ದರಿಂದ 'ಉಳವಿ' ಅವರ ರಾಜಧಾನಿಯಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ. ಮುಂದೆ ಶಿಶುಗಲಿ ಪಾಂಡ್ಯರು ಇಲ್ಲಿ ಆಡಳಿತವನ್ನು ಮುಂದುವರಿಸಿದ್ದರು.

೧೨ನೇ ಶತಮಾನದಲ್ಲಿ ಕಲ್ಯಾಣದ ಕ್ರಾಂತಿಯಾದಾಗ ಬಸವಣ್ಣನ ಸೋದರಳಿಯ ಚನ್ನಬಸವೇಶ್ವರ ತನ್ನ ಅನುಯಾಯಿಗಳೊಡನೆ ಇಲ್ಲಿಗೆ ಬಂದು ನೆಲೆನಿಂತು ಇಲ್ಲಿಯೇ ಸಮಾಧಿ ಹೊಂದಿದ್ದನು.[೨೪೧] ಅಂದಿನಿಂದ ಈ ಪ್ರದೇಶ ವೀರಶೈವ ಜನಾಂಗದ ಧಾರ್ಮಿಕ ಕೇಂದ್ರವಾಗಿ ಪ್ರಸಿದ್ಧಿಗೊಂಡಿದೆ. ತ್ರಿಭುವನಮಲ್ಲ ಪಾಂಡ್ಯ 'ಉಳವಿ' ನೆಲೆವೀಡನು ತಾತ್ಕಾಲಿಕವಾಗಿ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದ ಇದೇ ವೇಳೆಯಲ್ಲಿ ಕೇಸವುರ ಮತ್ತು ಬೇತೂರುಗಳಿಂದ ಆಡಳಿತ ನಡೆಸಿರುವುದನ್ನು ಶಾಸನಗಳು ತಿಳಿಸುತ್ತವೆ. ರಾಜಧಾನಿಯ ಆಯ್ಕೆಯಲ್ಲಿದ್ದ ಈತ ಮೊದಲು 'ಉಳವಿ' ನೆಲೆವೀಡಿನಿಂದ ಆಡಳಿತ ನಡೆಸಿದ.

**ಕೇಸವುರು**

ಕೇಸವುರ ತ್ರಿಭುವನಮಲ್ಲ ಪಾಂಡ್ಯದೇವನ ಎರಡನೇ ಆಡಳಿತ ಕೇಂದ್ರವಾಗಿದೆ. ಈ ಕೇಸವುರ ಪಟ್ಟಣ ಯಾವುದು ಎಂಬುದು ಸ್ಪಷ್ಟವಾಗುವುದಿಲ್ಲ. ಕದಂಬಳಿಗೆ-೧೦೦೦ ವಿಭಾಗದಲ್ಲಿ ಈ ಪಟ್ಟಣ ಇದ್ದಿರಬೇಕು. ಎರಡನೇ ರಾಜಧಾನಿ 'ಕೇಸವುರ' ಪಟ್ಟಣವನ್ನು ಕ್ರಿ.ಶ. ೧೦೮೩ರ ಅಂಬಳಿ ಶಾಸನ ತ್ರಿಭುವನಮಲ್ಲದೇವಪಾದಾಬ್ಜಭ್ರಿಂಗ ಶ್ರೀಮತ್ತ್ರಿಭುವನಮಲ್ಲ ಪಾಂಡ್ಯ ದೇವರು ನೊಣಂಬವಾಡಿ ಮೂವತ್ತಿರ್ಚ್ಛಾಸಿರಮುಮಂ ದುಷ್ಟನಿಗ್ರಹ ಶಿಷ್ಟಪ್ರತಿಪಾಳನದಿಂರಾರ್ದು ಕೇಸವುರದ ನೆಲೆವೀಡಿನೊಳ್ಸುಖಸಂಕಥಾವಿನೋದದಿಂದ ರಾಜ್ಯಂಗೆಯ್ಯುತ್ತಮಿರೆ ॥ ಎಂದು ಹೇಳುತ್ತದೆ.[೨೪೨] ಕ್ರಿ.ಶ. ೧೧೧೩ರ ಕೊಟ್ಟೂರು ಶಾಸನ ತ್ರಿಭುವನಮಲ್ಲ ಪಾಂಡ್ಯ ಕೇಸಾಪುರದ ನೆಲೆವೀಡಿನೊಳ್ ಆಳುತ್ತಿರುವುದಾಗಿ ಹೇಳುತ್ತದೆ.[೨೪೩] ಈ ಎರಡು ಶಾಸನಗಳನ್ನು ಬಿಟ್ಟು ಬೇರೆ ಶಾಸನಗಳಲ್ಲಿ ಇದರ ಉಲ್ಲೇಖ ಬರುವುದಿಲ್ಲ. ರಾಜಧಾನಿ ಆಯ್ಕೆಯಲ್ಲಿದ್ದ ಪಾಂಡ್ಯದೇವ ಎರಡನೇ ಆಯ್ಕೆಯಾಗಿ ಕೇಸವುರ ಪ್ರದೇಶದಿಂದ ಆಡಳಿತದ ಪ್ರಯೋಗ ನಡೆಸಿದ್ದಾನೆ.

**ಬೇತೂರು**

ಬೇತೂರು ತ್ರಿಭುವನಮಲ್ಲಪಾಂಡ್ಯನ ಮೂರನೇ ಆಡಳಿತ ನೆಲೆವೀಡಾಗಿರುವುದನ್ನು ಶಾಸನಗಳು ತಿಳಿಸುತ್ತವೆ. ರಾಜಧಾನಿ ಪ್ರದೇಶದ ಹುಡುಕಾಟದಲ್ಲಿದ್ದ ಪಾಂಡ್ಯದೇವ ಬೇತೂರು ಪಟ್ಟಣವನ್ನು ಅಂತಿಮವಾಗಿ ಆಯ್ಕೆ ಮಾಡಿಕೊಂಡಂತೆ ಕಾಣುತ್ತದೆ. ಈತನ ನಂತರ ಅಧಿಕಾರಕ್ಕೆ ಬಂದ ರಾಯಪಾಂಡ್ಯ ಮತ್ತು ವೀರಪಾಂಡ್ಯರು ಇದೇ ಪ್ರದೇಶದಿಂದ ಆಡಳಿತ ನಡೆಸಿದರು. ಹಾಗಾಗಿ 'ಬೇತೂರು' ಪಾಂಡ್ಯ ಅರಸ ಅಧಿಕೃತ ಮೊದಲ ರಾಜಧಾನಿ ಎಂಬುದು ಸ್ಪಷ್ಟ. ಬೇತೂರು ಹಿರಿಯ ರಾಜಧಾನಿ ಎಂದು ಶಾಸನಗಳಲ್ಲಿ ದಾಖಲಾಗಿದೆ.

ದಾವಣಗೆರೆಯ ಪೂರ್ವಕ್ಕೆ ಸಮೀಪದಲ್ಲಿಯೇ ಇರುವ 'ಎಲೆಬೇತೂರು' ಎಂಬ ಗ್ರಾಮವೇ ಅಂದಿನ ಬೇತೂರು ಪಟ್ಟಣವಾಗಿತ್ತು. ಪ್ರಾಚೀನ ಸ್ಮಾರಕಗಳಿಂದ ತುಂಬಿಕೊಂಡಿರುವ ಅತ್ಯಂತ ಹಳೆಯ ಗ್ರಾಮ. ಜೈನರು ಇಲ್ಲಿ ನೆಲೆನಿಂತು ಜೈನ ಸ್ಮಾರಕಗಳನ್ನು ನಿರ್ಮಿಸಿದರು ಹಾಗೂ ಈ ಗ್ರಾಮದ ಒಂದು ಬೀದಿಗೆ ಜೈನರ ಬೀದಿ ಎಂದು ಹೆಸರಿದೆ. ರಾಯಪಾಂಡ್ಯ ನಿರ್ಮಿಸಿದ ಪಾಂಡೇಶ್ವರ ದೇವಾಲಯ ಈ ಗ್ರಾಮದ ಪಕ್ಕದಲ್ಲಿಯೇ ಇದೆ. ಬೇತೂರು ಅರೆಮಲ್ಲೆನಾಡು ಪ್ರದೇಶವಾಗಿದ್ದು ಫಲವತ್ತಾದ ಕಪ್ಪು ಕೃಷಿ ಭೂಮಿಯಿಂದ ಕೂಡಿದೆ. ತುಂಗಭದ್ರ ನದಿಯ ಸಮೀಪದಲ್ಲಿರುವ ಬೇತೂರು ರಾಜಧಾನಿ ಪ್ರದೇಶಕ್ಕೆ ಭೌಗೋಳಿಕವಾಗಿ ಸೂಕ್ತವಾಗಿದೆ. ಈ ಕಾರಣಕ್ಕಾಗಿ ತ್ರಿಭುವನಮಲ್ಲ ಬೆತ್ತೂರನು ಪಾಂಡ್ಯ ವಂಶದ ಆಡಳಿತ ಕೇಂದ್ರಕ್ಕೆ ಆಯ್ಕೆ ಮಾಡಿರಬೇಕು.

ಕ್ರಿ.ಶ. ೧೧೦೦ರ ಉಚ್ಚಂಗಿದುರ್ಗ, ಕ್ರಿ.ಶ. ೧೧೨೬ರ ದುಗ್ಗವತಿ, ಕ್ರಿ.ಶ. ೧೧೨೩ರ ದಾವಣಗೆರೆ ಶಾಸನಗಳು ತ್ರಿಭುವನಮಲ್ಲ ಪಾಂಡ್ಯದೇವರು ನೊಣಂಬವಾಡಿ ಮೂವತ್ತಿರ್ಚ್ಛಾಸಿರಮುಮಂ ದುಷ್ಟನಿಗ್ರಹ ಸಿಷ್ಟಪ್ರತಿಪಾಳನದಿ 'ಬೇಲುರು'ವಿನ ನೆಲೆವೀಡಿನೊಳು ರಾಜ್ಯಂಗೆಯ್ಯುತ್ತಿರೆ[೨೪೪] ಎಂದು ದಾಖಲಿಸಿವೆ. ತ್ರಿಭುವನಮಲ್ಲ ಪಾಂಡ್ಯನ ನಂತರ ಅಧಿಕಾರಕ್ಕೆ ಬಂದ ರಾಯಪಾಂಡ್ಯ ಬೇತೂರು ರಾಜಧಾನಿಯಿಂದ ಆಡಳಿತ ನಡೆಸಿದ. ದಾವಣಗೆರೆ ಶಾಸನ ತ್ರಿಭುವನಮಲ್ಲ ರಾಯಪಾಂಡ್ಯ ದೇವರು ನೊಳಂಬವಾಡಿ ಮೂವತ್ತಿರ್ಚ್ಛಾಸಿರಮುಮಂ ಸಾನ್ತಳಿಗೆ ಸಾಸಿರವನು ಬೆಲ್ತುರುವಿನ ನೆಲೆವೀಡಿನೊಳುಸುಖಸಂಕತಾ ವಿನೋದದಿಂದ ಆಳುತ್ತಿರುವುದಾಗಿ ಹೇಳುತ್ತದೆ.[೨೪೫] ಇನ್ನೊಂದು ಶಾಸನ ಪರಿಚ್ಛೇದಿಗಂಡ ರಾಜಿಗಚೋಳ ಮನೋಭಂಗಂ ಸಾಹಸಾತ್ತುಂಗ ಮಹಾಮಂಡಳೇಶ್ವರ ರಾಯಪಾಂಡ್ಯ ದೇವರು ನೊಣಂಬವಾಡಿ ಮೂವತ್ತಿಚ್ಛಾಸಿರಮಂ ಶ್ರೀಮದು ರಾಜಧಾನಿ ಹಿರಿಯ ಬೆಳ್ದೂರ ಆನೆಯ ನೆಲೆವೀಡಿನೊಳು ದುಷ್ಟ ನಿಗ್ರಹ ಶಿಷ್ಟ ಪ್ರತಿಪಾಳನದಿಂದ ಆಳುತ್ತಿದ್ದರು[೨೪೬] ಎಂದು ತಿಳಿಸುತ್ತದೆ.

ಚಾಳುಕ್ಯ ವಿಕ್ರಮಾದಿತ್ಯನ ಮರಣದ ನಂತರ ಹೊಯ್ಸಳ ವಿಷ್ಣುವರ್ಧನ ಸ್ವತಂತ್ರನಾದ್ದರಿಂದ ಚಾಳುಕ್ಯ ಸಾಮ್ರಾಜ್ಯದ ಆಕ್ರಮಣಕ್ಕೆ ಮುಂದಾದ. ಈ ವೇಳೆಗೆ ಹಾನಗಲ್ಲು, ಬಂಕಾಪುರ, ಬನವಾಸೆ ಪ್ರದೇಶಗಳು ವಿಷ್ಣುವರ್ಧನನ ಅಧೀನಕ್ಕೆ ಬಂದಿದ್ದವು. ಚಾಳುಕ್ಯ ಸಾಮ್ರಾಜ್ಯದ ದಾಳಿಗೆ ನೊಳಂಬವಾಡಿ ಹೆಬ್ಬಾಗಿಲಾಗಿತ್ತು. ಏಕೆಂದರೆ ತುಂಗಭದ್ರಾ ನದಿ ದಕ್ಷಿಣದಲ್ಲಿ ರಕ್ಷಣೆ

ನೀಡಿತು. ಉತ್ತರದಲ್ಲಿದ್ದ ನಿಡುಗಲ್ಲು ಚೋಳರು ಹೊಯ್ಸಳರ ಸಾಮಂತರಾಗಿದ್ದರು. ಹಾಗಾಗಿ ಪಾಂಡ್ಯ ನಾಡಿನ ಮೂಲಕವೇ ಅವರ ಪಶ್ಚಿಮದ ದಾಳಿ ಆರಂಭವಾಗಬೇಕಿದ್ದರಿಂದ ಹೊಯ್ಸಳರಿಗೂ ಮತ್ತು ಪಾಂಡ್ಯರಿಗೂ ನಿರಂತರವಾಗಿ ಕದನಗಳು ನಡೆಯುತ್ತಲೇ ಬಂದವು. ರಾಯಪಾಂಡ್ಯನ ಅಂತ್ಯಕಾಲದಲ್ಲಿ ಈ ದಾಳಿಗಳು ಹೆಚ್ಚಾಗಿದ್ದರಿಂದ ಪಾಂಡ್ಯರು ತಮ್ಮ ಆಡಳಿತ ಕೇಂದ್ರವನ್ನು ಉಚ್ಚಂಗಿದುರ್ಗಕ್ಕೆ ಬದಲಾಯಿಸಿದರು.

**ಉಚ್ಚಂಗಿದುರ್ಗ**

ಹರಪನಹಳ್ಳಿ ತಾಲೂಕಿನ ಉಚ್ಚಂಗಿದುರ್ಗ ಗ್ರಾಮವೇ ಅಂದಿನ ಪಾಂಡ್ಯರ ಉಚ್ಚಂಗಿ ನೆಲೆವೀಡಾಗಿತ್ತು. ವೀರಪಾಂಡ್ಯ ತನ್ನ ತಂದೆಯ ಜೊತೆಯಲ್ಲಿ ಆಡಳಿತ ನಡೆಸುವ ಸಮಯದಲ್ಲಿಯೇ ಉಚ್ಚಂಗಿದುರ್ಗವನ್ನು ರಾಜಧಾನಿ ಮಾಡಲು ಆಯ್ಕೆ ಮಾಡಿಕೊಂಡಿದ್ದ. ಹಾಗಾಗಿ ಆತನ ಆಡಳಿತ ಉಚ್ಚಂಗಿ ನೆಲೆವೀಡಿನಿಂದಲೇ ಆರಂಭವಾಗಿದೆ. ಆನೆಕೊಂಡ ಶಾಸನ ಮಹಾಮಂಡಳೇಶ್ವರ, ಕಾಂಚೀಪುರವರಾಧೀಶ್ವರ, ಯದುವಂಸಾಂಬರದ್ಯುಮಣಿ, ಪರಿಚ್ಛೇದಿಗಂಡ, ರಾಜೀಗಚೋಳ ಮನೋಭಂಗ, ಶ್ರೀಮತು ಭೂಲೋಕಮಲ್ಲದೇವರಪಾದಾರಾದಕ ಶ್ರೀಮದ್ದವೀರಪಾಂಡ್ಯದೇವರು ನೊಣಂಬವಾಡಿ ಮೂವತ್ತಿರ್ಚ್ಛಾಸಿರವನ್ನು ಉಚ್ಚಂಗಿಕೋಟೆಯ ನೆಲೆವೀಡಿನೊಳು ಸುಖದಿಂದ ರಾಜ್ಯಂಗೆಯುತ್ತಮಿರೆ[೨೪೭] ಎಂದು ತಿಳಿಸುತ್ತದೆ. ದುಗ್ಗವತಿ ಶಾಸನ ವೀರಪಾಂಡ್ಯ ನೊಳಂಬವಾಡಿ ಮೂವತ್ತಿರ್ಚ್ಛಾಸಿರವನ್ನು ಉಚ್ಚಂಗಿ ನೆಲೆವೀಡಿನಿಂದ ಆಳುತ್ತಿರುವುದಾಗಿ ದಾಖಲಿಸಿದೆ. ನಿರಂತರ ಹೊಯ್ಸಳರ ದಾಳಿಗಳಿಂದಾಗಿ ವೀರಪಾಂಡ್ಯ ತನ್ನ ರಾಜಧಾನಿಯನ್ನು ಉಚ್ಚಂಗಿದುರ್ಗಕ್ಕೆ ಸ್ಥಳಾಂತರಿಸಿದ.

ಐದನೆಯ ಶತಮಾನದಲ್ಲಿ ಉಚ್ಚಂಗಿದುರ್ಗ ಕದಂಬ ಅರಸರ ಎರಡನೇ ರಾಜಧಾನಿಯಾಗಿತ್ತು. ಕ್ರಿ.ಶ. ೪೮೫ರಿಂದ ೫೧೪ರವರೆಗೆ ಆಳಿದ ಕದಂಬ ಹರಿವರ್ಮನ ರಾಜಧಾನಿಗಳಲ್ಲಿ ಉಚ್ಚಶೃಂಗಿಯು ಒಂದಾಗಿತ್ತು ಎಂಬುದನ್ನು ಹಲಸಿ ಶಾಸನ ತಿಳಿಸುತ್ತದೆ. ರವಿವರ್ಮನು ಸಹೋದರ ಶಿವರಥನು ಪ್ರಾಂತ್ಯಾಧಿಕಾರಿಯಾಗಿ ಉಚ್ಚಂಗಿಯಿಂದ ಆಳುತ್ತಿದ್ದನು.[೨೪೮] ಉಚ್ಚಂಗಿದುರ್ಗದ ಕೋಟೆ ಇರುವ ಬೆಟ್ಟ ಸಮುದ್ರ ಮಟ್ಟದಿಂದ ೨೫೭೫ ಅಡಿ ಎತ್ತರ ಉತ್ತರ ದಕ್ಷಿಣವಾಗಿ ೧.೨೫ ಕಿ.ಮೀ. ವಿಸ್ತಾರ ಹೊಂದಿದೆ.[೨೪೯] ದಕ್ಷಿಣೋತ್ತರವಾಗಿ ಹಬ್ಬಿರುವ ಎರಡು ಬೆಟ್ಟಗಳನ್ನು ಬಳಸಿ ಹೊರಕೋಟೆಯನ್ನು ಕಟ್ಟಲಾಗಿದೆ. ಕಾಡುವಟ್ಟಿ ಎಂಬುವವನು ಈ ಕೋಟೆಯನ್ನು ದೀರ್ಘ ಕಾಲದವರೆಗೆ ಮುತ್ತಿ ಸ್ಥಳೀಯರನ್ನು ತನ್ನ ಶೌರ್ಯದಿಂದ ದಂಗುಬಡಿಸಿದರೂ ಅವನಿಂದ ಕೋಟೆಯನ್ನು ಗೆಲ್ಲಲಾಗದೇ ಹಿಂದಿರುಗಿದನು. ಇಂತಹ ಅಭೇದ್ಯವಾದ ಕೋಟೆಯನ್ನು ಚಾಳುಕ್ಯರ ಚೂಡಾಮಣಿ ರಾಜಾಧಿತ್ಯನು ಆಳುತ್ತಿದ್ದ. ಆ ಸಮಯದಲ್ಲಿ ಗಂಗ ವಂಶದ ಎರಡನೇ ಮಾರಸಿಂಹನು ಕ್ರಿ.ಶ. ೯೭೧ರಲ್ಲಿ ಕೋಟೆಯನ್ನು ಮುತ್ತಿ ವಶಪಡಿಸಿಕೊಂಡನು.[೨೫೦] ಪಾಂಡ್ಯರ ಕಾಲದಲ್ಲಿ ಚೋಳ ಅರಸನು ಹನ್ನೆರಡು ವರ್ಷಗಳ ಕಾಲ ಈ ಕೋಟೆಗೆ ಮುತ್ತಿಗೆ ಹಾಕಿದರೂ ಗೆಲ್ಲಲಾರದೆ ಹಿಂತಿರುಗಿದ ಎಂದು ಶಾಸನಗಳು ವರ್ಣಿಸುತ್ತದೆ. ಉಚ್ಚಂಗಿ ಬೆಟ್ಟದ ಕಂದಕವು

ಪಾತಾಳದಂತಿತ್ತು. ಉಚ್ಚಂಗಿ ಅಷ್ಟದಿಕ್ಕುಗಳಷ್ಟು ಅಗಲ ಮತ್ತು ಆಕಾಶದಷ್ಟು ಎತ್ತರವಿದ್ದು ಮೂರು ಲೋಕಗಳಲ್ಲಿ ಖ್ಯಾತಿ ಪಡೆದಿತ್ತು.[೨೮೧]

ಇಂತಹ ಅಭೇದ್ಯವಾದ ಉಚ್ಚಂಗಿದುರ್ಗದ ಕೋಟೆಯ ಭೌಗೋಳಿಕ ಪರಿಸರ ಬೆಟ್ಟಗುಡ್ಡಗಳು, ನೀರಿನ ತೊರೆಗಳು ರಾಜಧಾನಿಯ ರಕ್ಷಣೆಯ ಜವಾಬ್ದಾರಿಯನ್ನು ಹೊತ್ತುಕೊಂಡಂತೆ ಇತ್ತು. ಕೋಟೆಯ ರಚನೆಯ ಖರ್ಚು ವೆಚ್ಚಗಳು ಮತ್ತು ದೀರ್ಘ ಸಮಯದ ಉಳಿತಾಯ ವೀರಪಾಂಡ್ಯನಿಗೆ ಇದರ ಆಯ್ಕೆಗೆ ಕಾರಣವಾಗಿತ್ತು. ಉಚ್ಚಂಗಿದುರ್ಗದ ಬೆಟ್ಟಸಾಲು ನೈಸರ್ಗಿಕವಾಗಿ ರಕ್ಷಣೆ ನೀಡಿತ್ತು. ಅದರ ಪಶ್ಚಿಮ ಭಾಗದ ರಕ್ಷಣೆಯನ್ನು ತುಂಗಭದ್ರ ನದಿ ನೋಡಿಕೊಳ್ಳುತ್ತಿತ್ತು. ಆಗ್ನೇಯ ಭಾಗದಲ್ಲಿ ತಮ್ಮ ಮಿತ್ರರು ಮತ್ತು ರಕ್ತಸಬಂಧಿಗಳಾಗಿದ್ದ ಗುತ್ತ ಅರಸರು, ಹಾನಗಲ್ಲು, ಕದಂಬರು, ಬೆಳಗುತ್ತಿ ಸಿಂದರು ವೀರಪಾಂಡ್ಯನ ಸಾಮಂತರಾಗಿ ರಕ್ಷಕರಾಗಿದ್ದರು.

ವೀರಪಾಂಡ್ಯನ ನಂತರ ವಿಜಯಪಾಂಡ್ಯ ಇದೇ ರಾಜಧಾನಿಯಲ್ಲಿ ಅಧಿಕಾರ ಸ್ವೀಕರಿಸಿದ. ಈತ ಕಳಚೂರಿ ಅರಸರಿಂದ ಹಿಂದೆ ಸರಿದು ಚಾಳುಕ್ಯ ಅರಸರ ಹೆಸರಿನಲ್ಲಿ ಸ್ವತಂತ್ರನಾಗಿ ಆಳಿದ. ಚಾಳುಕ್ಯ ೪ನೇ ಸೋಮೇಶ್ವರನಿಗೆ ಉಚ್ಚಂಗಿ ಕೋಟೆಯಲ್ಲಿ ರಕ್ಷಣೆ ನೀಡಿದ್ದ. ತನ್ನ ದಂಡನಾಯಕ ಬ್ರಮ್ಮನೊಂದಿಗೆ ಸೇರಿ ಕಳಚೂರಿಗಳಿಂದ ಪುನಃ ಚಾಳುಕ್ಯ ಸಾಮ್ರಾಜ್ಯವನ್ನು ಪಡೆದು ೪ನೇ ಸೋಮೇಶ್ವರನಿಗೆ ನೀಡಿ ಆತನ ಸಾಮಂತನಾಗಿ ನೊಳಂಬವಾಡಿ ನಾಡನ್ನು ಉಚ್ಚಂಗಿಯಿಂದ ಆಳಿದನು. ಕ್ರಿ.ಶ. ೧೧೮೬ರ ಗಾರೆಹಟ್ಟಿ ಶಾಸನ ತ್ರಿಭುವನಮಲ್ಲ ದೇವಪಾದಾಬ್ಜಭ್ರಿಂಗನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನ್ಮಹಾಮಂಡಳೇಶ್ವರ ವಿಜಯಪಾಂಡ್ಯ ದೇವರು ನೊಳಂಬವಾಡಿ ಮೂವತ್ತಿತ್ಸಾರಿಮುಮನುಚ್ಚಂಗಿಯ ನೆಲೆವೀಡಿನಿಂದ ಆಳುತ್ತಿರುವುದಾಗಿ ಹೇಳುತ್ತದೆ.[೨೮೨]

ಹೊಯ್ಸಳ ವೀರಬಲ್ಲಾಳ ವಿಜಯಪಾಂಡ್ಯ ಮತ್ತು ಉಚ್ಚಂಗಿ ಕೋಟೆಯನ್ನು ಗೆದ್ದಿರುವುದಾಗಿ ಶಾಸನಗಳು ಹೇಳುತ್ತವೆ. ಶ್ರವಣಬೆಳಗೊಳದ ಆಚಿಯಕ್ಕನ ದತ್ತಿಶಾಸನ ಅದಿರಾಜರ ಪಾಲಿಗೆ ಅಂತ್ಯಕಾಲದ ಪ್ರಳಯಜ್ವಾಲೆಯಾದ ವೀರಬಲ್ಲಾಳನು ರಣಭೇರಿ ಮೊಳಗಿಸಿದನೋ ಇಲ್ಲವೋ ಲಾಳನಲೀಲೆ ಮುಳುಗಿತು. ಇವನ ಗಜ ಸೈನ್ಯವು ಉಚ್ಚಂಗಿ ಶಿಖರವನ್ನು ತನ್ನ ದಂತಗಳಿಂದ ತಿವಿದು ಪುಡಿ ಮಾಡಿತು. ಪಾಂಡ್ಯನ ರೂಪವತಿ ಪತ್ನಿಯನ್ನು ದೇಶವನ್ನೂ ಕೋಶವನ್ನೂ ತಂದೆಯನ್ನೂ ಅಶ್ವವೃಂದವನ್ನು ವೀರಬಲ್ಲಾಳನು ಸೆರೆ ಹಿಡಿದನು. ಬಹುಕಾಲದಿಂದ ಶತ್ರುಗಳಿಗೆ ಅಸಾಧ್ಯವೆನಿಸಿದ್ದ ಉಚ್ಚಂಗಿಯನ್ನು ದುರ್ಧ ತೇಜೋನಿಧಿಯಾದ ಬಲ್ಲಾಳನು ಮುತ್ತಿ ಧೂಳೀಪಟ ಮಾಡಿದ್ದಲ್ಲದೆ ಕಾಮದೇವ ರಾಜನನು ಒಡೆಯರಾಜನನು ಭಂಡಾರ, ಸ್ತ್ರೀಯರು ಮತ್ತು ಅಶ್ವದಳ ಸಮೇತ ಸೆರೆಹಿಡಿದನು ಎಂದು ವರ್ಣಿಸುತ್ತದೆ.[೨೮೩] ಹೊಯ್ಸಳ ವೀರಬಲ್ಲಾಳನ ದಾಳಿಗೆ ವಿಜಯಪಾಂಡ್ಯ ಶರಣಾದ ಮೇಲೆ ಪಾಂಡ್ಯ ವಂಶದ ಆಡಳಿತ ಇಳಿಮುಖವಾಯಿತು. ಹೊಯ್ಸಳ ಅರಸ ಪುನಃ ಅಧಿಕಾರ ನೀಡಿದ್ದರೂ ಅದು ಕೋಗಳಿ ನಾಡಿಗೆ ಸೀಮಿತವಾಯಿತು.

ಪಾತಾಳದಂತಿತ್ತು. ಉಚ್ಚಂಗಿ ಅಷ್ಟದಿಕ್ಕುಗಳಷ್ಟು ಅಗಲ ಮತ್ತು ಆಕಾಶದಷ್ಟು ಎತ್ತರವಿದ್ದು ಮೂರು ಲೋಕಗಳಲ್ಲಿ ಖ್ಯಾತಿ ಪಡೆದಿತ್ತು.[೨೫೧]

ಇಂತಹ ಅಭೇದ್ಯವಾದ ಉಚ್ಚಂಗಿದುರ್ಗದ ಕೋಟೆಯ ಭೌಗೋಳಿಕ ಪರಿಸರ ಬೆಟ್ಟಗುಡ್ಡಗಳು, ನೀರಿನ ತೊರೆಗಳು ರಾಜಧಾನಿಯ ರಕ್ಷಣೆಯ ಜವಾಬ್ದಾರಿಯನ್ನು ಹೊತ್ತುಕೊಂಡಂತೆ ಇತ್ತು. ಕೋಟೆಯ ರಚನೆಯ ಖರ್ಚು ವೆಚ್ಚಗಳು ಮತ್ತು ದೀರ್ಘ ಸಮಯದ ಉಳಿತಾಯ ವೀರಪಾಂಡ್ಯನಿಗೆ ಇದರ ಆಯ್ಕೆಗೆ ಕಾರಣವಾಗಿತ್ತು. ಉಚ್ಚಂಗಿದುರ್ಗದ ಬೆಟ್ಟಸಾಲು ನೈಸರ್ಗಿಕವಾಗಿ ರಕ್ಷಣೆ ನೀಡಿತ್ತು. ಅದರ ಪಶ್ಚಿಮ ಭಾಗದ ರಕ್ಷಣೆಯನ್ನು ತುಂಗಭದ್ರ ನದಿ ನೋಡಿಕೊಳ್ಳುತ್ತಿತ್ತು. ಆಗ್ನೇಯ ಭಾಗದಲ್ಲಿ ತಮ್ಮ ಮಿತ್ರರು ಮತ್ತು ರಕ್ತಸಬಂಧಿಗಳಾಗಿದ್ದ ಗುತ್ತ ಅರಸರು, ಹಾನಗಲ್ಲು, ಕದಂಬರು, ಬೆಳಗುತ್ತಿ ಸಿಂದರು ವೀರಪಾಂಡ್ಯನ ಸಾಮಂತರಾಗಿ ರಕ್ಷಕರಾಗಿದ್ದರು.

ವೀರಪಾಂಡ್ಯನ ನಂತರ ವಿಜಯಪಾಂಡ್ಯ ಇದೇ ರಾಜಧಾನಿಯಲ್ಲಿ ಅಧಿಕಾರ ಸ್ವೀಕರಿಸಿದ. ಈತ ಕಳಚೂರಿ ಅರಸರಿಂದ ಹಿಂದೆ ಸರಿದು ಚಾಳುಕ್ಯ ಅರಸರ ಹೆಸರಿನಲ್ಲಿ ಸ್ವತಂತ್ರನಾಗಿ ಆಳಿದ. ಚಾಳುಕ್ಯ ೪ನೇ ಸೋಮೇಶ್ವರನಿಗೆ ಉಚ್ಚಂಗಿ ಕೋಟೆಯಲ್ಲಿ ರಕ್ಷಣೆ ನೀಡಿದ್ದ. ತನ್ನ ದಂಡನಾಯಕ ಬ್ರಮ್ಮನೊಂದಿಗೆ ಸೇರಿ ಕಳಚೂರಿಗಳಿಂದ ಪುನಃ ಚಾಳುಕ್ಯ ಸಾಮ್ರಾಜ್ಯವನ್ನು ಪಡೆದು ೪ನೇ ಸೋಮೇಶ್ವರನಿಗೆ ನೀಡಿ ಆತನ ಸಾಮಂತನಾಗಿ ನೊಳಂಬವಾಡಿ ನಾಡನ್ನು ಉಚ್ಚಂಗಿಯಿಂದ ಆಳಿದನು. ಕ್ರಿ.ಶ. ೧೧೮೬ರ ಗಾರೆಹಟ್ಟಿ ಶಾಸನ ತ್ರಿಭುವನಮಲ್ಲ ದೇವಪಾದಾಬ್ಜಭ್ರಿಂಗನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನ್ಮಹಾಮಂಡಳೇಶ್ವರ ವಿಜಯಪಾಂಡ್ಯ ದೇವರು ನೊಳಂಬವಾಡಿ ಮೂವತ್ತಿತ್ಸಾರಿಮುಮನುಚ್ಚಂಗಿಯ ನೆಲವೀಡಿನಿಂದ ಆಳುತ್ತಿರುವುದಾಗಿ ಹೇಳುತ್ತದೆ.[೨೫೨]

ಹೊಯ್ಸಳ ವೀರಬಲ್ಲಾಳ ವಿಜಯಪಾಂಡ್ಯ ಮತ್ತು ಉಚ್ಚಂಗಿ ಕೋಟೆಯನ್ನು ಗೆದ್ದಿರುವುದಾಗಿ ಶಾಸನಗಳು ಹೇಳುತ್ತವೆ. ಶ್ರವಣಬೆಳಗೊಳದ ಆಚಿಯಕ್ಕನ ದತ್ತಿಶಾಸನ ಅದಿರಾಜರ ಪಾಲಿಗೆ ಅಂತ್ಯಕಾಲದ ಪ್ರಳಯಜ್ವಾಲೆಯಾದ ವೀರಬಲ್ಲಾಳನು ರಣಭೇರಿ ಮೊಳಗಿಸಿದನೋ ಇಲ್ಲವೋ ಲಾಳನಲೀಲೆ ಮುಳುಗಿತು. ಇವನ ಗಜ ಸೈನ್ಯವು ಉಚ್ಚಂಗಿ ಶಿಖರವನ್ನು ತನ್ನ ದಂತಗಳಿಂದ ತಿವಿದು ಪುಡಿ ಮಾಡಿತು. ಪಾಂಡ್ಯನ ರೂಪವತಿ ಪತ್ನಿಯನ್ನು ದೇಶವನ್ನೂ ಕೋಶವನ್ನೂ ತಂದೆಯನ್ನೂ ಅಶ್ವವೃಂದವನ್ನು ವೀರಬಲ್ಲಾಳನು ಸೆರೆ ಹಿಡಿದನು. ಬಹುಕಾಲದಿಂದ ಶತ್ರುಗಳಿಗೆ ಅಸಾಧ್ಯವೆನಿಸಿದ್ದ ಉಚ್ಚಂಗಿಯನ್ನು ದುರ್ಧ ತೇಜೋನಿಧಿಯಾದ ಬಲ್ಲಾಳನು ಮುತ್ತಿ ಧೂಳೀಪಟ ಮಾಡಿದ್ದಲ್ಲದೆ ಕಾಮದೇವ ರಾಜನನು ಒಡೆಯರಾಜನನು ಭಂಡಾರ, ಸ್ತ್ರೀಯರು ಮತ್ತು ಅಶ್ವದಳ ಸಮೇತ ಸೆರೆಹಿಡಿದನು ಎಂದು ವರ್ಣಿಸುತ್ತದೆ.[೨೫೩] ಹೊಯ್ಸಳ ವೀರಬಲ್ಲಾಳನ ದಾಳಿಗೆ ವಿಜಯಪಾಂಡ್ಯ ಶರಣಾದ ಮೇಲೆ ಪಾಂಡ್ಯ ವಂಶದ ಆಡಳಿತ ಇಳಿಮುಖವಾಯಿತು. ಹೊಯ್ಸಳ ಅರಸ ಪುನಃ ಅಧಿಕಾರ ನೀಡಿದ್ದರೂ ಅದು ಕೋಗಳಿ ನಾಡಿಗೆ ಸೀಮಿತವಾಯಿತು.

ಕಡಿಮೆ ಇರುತಿತ್ತು. ಇಲ್ಲಿ ಒಬ್ಬ ಅಧಿಕಾರಿ ಎರಡು ಅಥವಾ ಮೂರಕ್ಕಿಂತ ಹೆಚ್ಚು ಹುದ್ದೆಗಳ ಕರ್ತವ್ಯಗಳನ್ನು ಏಕಕಾಲದಲ್ಲಿ ನಿರ್ವಹಿಸುತ್ತಿದ್ದ. ತ್ರಿಭುವನಮಲ್ಲ ಪಾಂಡ್ಯದೇವನ ಆಡಳಿತದಲ್ಲಿ ಅನಂತಪಾಳಯ್ಯ ಎಂಬ ಅಧಿಕಾರಿ, ಮಹಾಪ್ರಧಾನ, ಬಾಣಸವೆರ್ಗ್ಗಡೆ, ದಂಡನಾಯಕ, ಹುದ್ದೆಗಳನ್ನು ನೋಡಿಕೊಳ್ಳುತ್ತಿದ್ದ.[೨೫೫] ವಿಜಯ ಪಾಂಡ್ಯನ ಕಾಲದಲ್ಲಿ ವಿಜಯ ಪೆರ್ಮಾಡಿ ದಂಡನಾಯಕ ಮಹಾಪ್ರಧಾನ[೨೫೬], ಸರ್ವಾಧ್ಯಕ್ಷ, ಮಹಾಪಸಾಯಿತ[೨೫೭], ಸುಂಕಾಧಿಕಾರಿ ಹುದ್ದೆಗಳನ್ನು ನೋಡಿ ಕೊಳ್ಳುತ್ತಿದ್ದ.

ಉಚ್ಚಂಗಿ ಪಾಂಡ್ಯರು ಕಲ್ಯಾಣದ ಚಾಳುಕ್ಯರ ಆಶ್ರಯದಲ್ಲಿದ್ದ ಕಾರಣಕ್ಕೆ ಅವರ ಆಡಳಿತ ವ್ಯವಸ್ಥೆಯನ್ನು ಚಾಚುತಪ್ಪದೇ ಪಾಲಿಸಿದರು. ಇವರ ಶ್ರೇಣೀಕೃತ ಆಡಳಿತ ವ್ಯವಸ್ಥೆಯಲ್ಲಿ ಮಹಾಮಂಡಳೇಶ್ವರ, ಮಹಾಸಾಮಂತ, ಸಾಮಂತ, ದಂಡನಾಯಕ, ಪೆರ್ಗ್ಗಡೆ ಗೌಡ ಮೊದಲಾದ ಆಡಳಿತ ಅಧಿಕಾರಿಗಳು ಇರುವುದು ಇವರ ಶಾಸನಗಳಿಂದ ತಿಳಿಯುತ್ತದೆ. ಕಲ್ಯಾಣ ಚಾಳುಕ್ಯರ ಆಡಳಿತದಲ್ಲಿ ೧೪ ಜನ ಮಂತ್ರಿಗಳಿದ್ದರೆಂಬುದು ಹೂವಿನಹಡಗಲಿಯ ಕೊಟ್ನೆಕಲ್ಲು ಶಾಸನದಿಂದ ತಿಳಿಯುತ್ತದೆ. ಆದರೆ ಪಾಂಡ್ಯ ಅರಸರು ಈ ಸಂಖ್ಯೆಯ ಮಂತ್ರಿಗಳನ್ನು ಹೊಂದಿರಲಿಲ್ಲ.

ಒಂದು ರಾಜ್ಯದಲ್ಲಿ ಎಷ್ಟು ಜನ ಮಂತ್ರಿಗಳಿರಬೇಕು ಎನ್ನುವ ವಿಷಯದಲ್ಲಿ ಪ್ರಾಚೀನ ವಿದ್ವಾಂಸರಲ್ಲಿ ಒಮ್ಮತವಿರಲಿಲ್ಲ. ಆದರೆ ಸಂಖ್ಯೆ ಎಷ್ಟಿರಬೇಕೆಂಬುದು ರಾಜ್ಯದ ವಿಸ್ತಾರ, ಅವಶ್ಯಕತೆ ಮುಂತಾದವುಗಳನ್ನು ಅವಲಂಬಿಸಿದೆ ಎಂದು 'ಮನು' ಹೇಳುತ್ತಾನೆ[೨೫೮] ಕೌಟಿಲ್ಯನ ಪ್ರಕಾರ ರಾಜತ್ವವು ಸಹಾಯದಿಂದ ಮಾತ್ರ ಸಾಧ್ಯ; ಏಕೆಂದರೆ ಒಂದು ಚಕ್ರದಿಂದ ರಥವು ನಡೆಯುವುದಿಲ್ಲ. ಆದುದರಿಂದ ಸಚಿವರನ್ನು ನಿಯಮಿಸಿಕೊಳ್ಳಬೇಕು ಮತ್ತು ಅವರ ಸಲಹೆಗಳನ್ನು ಕೇಳಬೇಕು ಎಂದು ತಿಳಿಸುತ್ತ ಮಂತ್ರಿಗಳ ಸಂಖ್ಯೆ ೧೨, ೧೬ ಮತ್ತು ೨೦ ಇರಬೇಕು ಎನ್ನುತ್ತಾನೆ.[೨೫೯] ಶುಕ್ರನ ಪ್ರಕಾರ ಎಷ್ಟೇ ವಿದ್ವಾಂಸನಾದರೂ ರಾಜನು ಎಲ್ಲವನ್ನೂ ತಿಳಿದುಕೊಳ್ಳಲು ಸಾಧ್ಯವಿಲ್ಲ. ಆದುದರಿಂದ ರಾಜನು ಮಂತ್ರಿಗಳ ಸಹಾಯವನ್ನು ಪಡೆಯಬೇಕು. ಇಲ್ಲದಿದ್ದರೆ ರಾಜನು ತಾನೂ ನಾಶವಾಗುವುದರ ಜೊತೆಗೆ ರಾಜ್ಯವನ್ನು ನಾಶ ಮಾಡುತ್ತಾನೆ ಎಂದು ತಿಳಿಸುತ್ತಾ, ಮಂತ್ರಿಗಳ ಸಂಖ್ಯೆ ಕೇವಲ ಏಳು ಮಾತ್ರ ಇರಬೇಕೆಂದು ಹೇಳುತ್ತಾಸೆ.[೨೬೦]

ಆಡಳಿತ ವರ್ಗದ ಅರ್ಹತೆ ಏನಿರಬೇಕೆಂದು 'ಮಾನಸೋಲ್ಲಾಸ' ಕೃತಿ ವಿವರವಾಗಿ ತಿಳಿಸುತ್ತದೆ. ಅದರ ಪ್ರಕಾರ ಅವನು ಸ್ಥಳೀಯನಾಗಿರಬೇಕು; ಉಚ್ಚ ಕುಟುಂಬದಲ್ಲಿ ಜನಿಸಿರಬೇಕು; ಪ್ರಭಾವಿಯಾಗಿರಬೇಕು; ಕಲೆಗಳಲ್ಲಿ ನಿಷ್ಣಾತನಾಗಿರಬೇಕು; ದೂರದರ್ಶಿಯಾಗಿರಬೇಕು; ಬುದ್ಧಿವಂತ ನಾಗಿರಬೇಕು; ಒಳ್ಳೆಯ ಜ್ಞಾಪಕ ಶಕ್ತಿ ಇರಬೇಕು; ಜಾಗರೂಕನಾಗಿರಬೇಕು; ವಾಕ್‌ಸಂಪತ್ತಿರಬೇಕು; ಶೂರನಾಗಿರಬೇಕು; ಉತ್ಸಾಹಶೀಲನಾಗಿರಬೇಕು; ಗಾಂಭೀರ್ಯವಿರಬೇಕು; ತಾಳ್ಮೆ ಇರಬೇಕು; ಮನಸ್ಸು ಮತ್ತು ಕಾರ್ಯಗಳಲ್ಲಿ ಶುದ್ಧಿಯಿರಬೇಕು; ರಾಜನ ಬಗ್ಗೆ ಹೆಚ್ಚಿನ ಗೌರವ ಹೊಂದಿರಬೇಕು; ಶೀಲವಂತನಾಗಿರಬೇಕು; ಆರೋಗ್ಯವಂತನಾಗಿರಬೇಕು; ರಾಜನು ಅವಮಾನ ಮಾಡಿದರೂ ಅವನನ್ನು ದ್ವೇಷಿಸಬಾರದು; ಇಷ್ಟೆಲ್ಲ ಗುಣಗಳಿರಬೇಕು.[೨೬೧] ಈ ಗುಣಗಳು ಚಾಳುಕ್ಯರ ಮಂತ್ರಿಗಳಲ್ಲಿ

ಇದ್ದವು ಎಂಬುದನ್ನು ಶಾಸನಗಳು ತಿಳಿಸುತ್ತವೆ. ಹಾಗೆಯೇ ಉಚ್ಚಂಗಿ ಪಾಂಡ್ಯರ ಆಡಳಿತ ವರ್ಗದಲ್ಲಿ ಅವರ ಸಾಮಂತ ಅಧಿಕಾರಿಗಳಲ್ಲಿ ಈ ರೀತಿಯ ಗುಣಗಳು ಇದ್ದವು ಎಂಬುದು ಪಾಂಡ್ಯರ ಶಾಸನಗಳಲ್ಲಿ ಅವರನ್ನು ಪರಿಚಯಿಸಿದಾಗ ಇಂತಹ ಗುಣಗಳಿಂದ ವರ್ಣಿಸಿರುವುದು ಕಂಡುಬರುತ್ತದೆ.

ಇಂತಹ ಗುಣಗಳಿಂದ ಕೂಡಿದ ಅಧಿಕಾರಿಯನ್ನು ಮೆಚ್ಚಿ ರಾಜರು ಉನ್ನತ ಹುದ್ದೆ, ಬಿರುದು ಮತ್ತು ರಾಜತ್ವದ ಚಿಹ್ನೆಗಳ ಗೌರವವನ್ನು ನೀಡುತ್ತಿದ್ದರು. ರವಿಗ ದಂಡನಾಯಕನ ಗುಣಗಳಿಗೆ ಮೆಚ್ಚಿ ವಿಕ್ರಮಾದಿತ್ಯ ಇವನಿಗೆ ರಾಜತ್ವದ ಲಾಂಛನವನ್ನು ಮತ್ತು ಕೆಲವು ವಿಶೇಷ ಬಿರುದುಗಳನ್ನು ಕೊಟ್ಟಿರುವುದು ಹೂವಿನಹಡಗಲಿ ಶಾಸನದಿಂದ ತಿಳಿಯುತ್ತದೆ. ಹಾಗೆಯೇ ಪಳತ್ತ ಪಾಂಡ್ಯ ತ್ರಿಭುವನಮಲ್ಲ ಎಂಬ ಬಿರುದನ್ನು ಪಡೆದುಕೊಳ್ಳುತ್ತಾನೆ. ಜಗದೇಕಮಲ್ಲ ಪೆರ್ಮಾಡಿದೇವ ವೀರಪಾಂಡ್ಯನಿಗೆ ಜಗದೇಕಮಲ್ಲ ಎಂಬ ಬಿರುದನ್ನು ನೀಡಿದ್ದನು. ಹಾಗೆ ವಿಜಯಪಾಂಡ್ಯ ದಂಡನಾಥ ಪೆರ್ಮಾಡಿ ದೇವನಿಗೆ ವಿಜಯ ಪೆರ್ಮಾಡಿ ಎಂದು ಬಿರುದು ನೀಡಿದ್ದನು.

ಅರ್ಹತೆಯ ಆಧಾರದ ಮೇಲೆ ಮಂತ್ರಿಗಳನ್ನು ನಿಯಮಿಸುವುದು ಸಾಮಾನ್ಯ ಪದ್ಧತಿಯಾದರೂ ಆಗಲೇ ಕರ್ತವ್ಯದಲ್ಲಿದ್ದ ಅಧಿಕಾರಿಗಳ ಮಕ್ಕಳು ಇತರ ಬಂಧುಗಳಿಗೆ ಪ್ರಾಶಸ್ತ್ಯ ಕೊಡುತ್ತಿದ್ದರು. ಆದರೆ ಅರ್ಹತೆಯನ್ನು ಮಾತ್ರ ಕಡೆಗಣಿಸುತ್ತಿರಲಿಲ್ಲ. ವಡ್ಡಾರಾಧನೆಯ ಪ್ರಕಾರ ಮಂತ್ರಿ ಸೋಮಶರ್ಮನು ಮೃತನಾದ ಮೇಲೆ ರಾಜ ಅತಿಬಲನು ಅವನ ಮಕ್ಕಳಾದ ಅಗ್ನಿಮಿತ್ರ ಮತ್ತು ವಾಯುಭೂತಿಯನ್ನು ಕರೆಯಿಸಿ ನೋಡಲಾಗಿ, ಅವರಿಗೆ ಅರ್ಹತೆಗಳಿಲ್ಲದೇ ಇರುವುದರಿಂದ ಅವರನ್ನು ಹಿಂದಿರುಗಿಸಿ ಕಳುಹಿಸುತ್ತಾನೆ. ನಾಲ್ಕಾರು ವರ್ಷಗಳ ಆನಂತರ ಅವರು ವಿದ್ಯೆಯನ್ನು ಪಡೆದುಕೊಂಡು ಮಂತ್ರಿ ಪದವಿಗೆ ಅರ್ಹರೆಂದು ತೋರಿಸಿಕೊಂಡರು.[೨೨] ಮಂತ್ರಿ ಕೇಶಿಮಯ್ಯನ ಮಗ ವಾಮಣರಸನು ಮಹಾಸಂಧಿ ವಿಗ್ರಹಿಯಾಗಿದ್ದನು. ಗಂಗದುರ್ವಿನೀತನಿಂದ ಸನ್ಮಾನಿತನಾದ ಪಶುಪತಿಭಟ್ಟನ ವಂಶಸ್ಥನಾದ ಭೋಗದೇವನ ಮಗನಾದ ಅಮ್ಮೆಳೆಯ ಪ್ರಭುಗಳಾದ ಶಿವರಾಜನು ದೇವರಿಗೆ ದಾನ ನೀಡಿದೆ[೨೩], ಅಂಬಳಿ, ಹಗರಿಬೊಮ್ಮನಹಳ್ಳಿ). ಮಂತ್ರಿ ಅನಂತಪಾಲನ ತಂದೆ, ತಾತ, ಸೋದರಳಿಯ ಗೋವಿಂದರಸ, ಅವನ ಅಣ್ಣ ಲಕ್ಷ್ಮಣ ಹೀಗೆ ಎಲ್ಲರೂ ಮಂತ್ರಿಗಳಾಗಿದ್ದರು.[೨೪]

ನಾಡ ಪ್ರಭು ಸಿಂಗಗೌಡನ ಮಗ ಅಜ್ಜಗೌಡ.[೨೫] ಆದಿತ್ಯಸಾಹಣಿ ವಿಭುಪಲ್ಲವ ಇವನ ತಮ್ಮ ಬಮ್ಮಗೌಡ.[೨೬] ಹೀಗೆ ಮಂತ್ರಿಗಳ ಕುಟುಂಬದಲ್ಲಿ ಬಂದವರು ಆಡಳಿತದಲ್ಲಿ ಇದ್ದರೆಂಬುದು ಶಾಸನಗಳಿಂದ ಸ್ಪಷ್ಟವಾಗುತ್ತದೆ.

ಆದರೆ ಅರ್ಹತೆಯ ವಿಷಯದಲ್ಲಿ ಮಾತ್ರ ಯಾವುದೇ ವಿನಾಯಿತಿ ಕೊಡುತ್ತಿರಲಿಲ್ಲ ಎನ್ನುವುದು ಇಲ್ಲಿ ಗಮನಾರ್ಹ. ಅಸಮರ್ಪಕ ದುರಾಡಳಿತ ಸೇವೆಗಾಗಿ ಅಧಿಕಾರಿಗಳು ಹೊಂದಿದ

ಅಧಿಕಾರವನ್ನು ತೆಗೆದು ಹಾಕುವ ಪದ್ಧತಿ ಜಾರಿಯಲ್ಲಿತ್ತು. ಹೊಳಲಿನ ಮನ್ನೆಯ ಬೊಪ್ಪನು ಗ್ರಾಮವನ್ನು ಸುಲಿಗೆ ಮಾಡಿ ಬ್ರಾಹ್ಮಣರನ್ನು ಕೊಂದನು. ಆಗ ಅರಸನಿಗೆ ದೂರು ನೀಡಿದ್ದರಿಂದ ಬೊಪ್ಪನಿಗೆ ಶಿಕ್ಷಿಸಿ ಅವನ ಸಂತತಿಯವರು ಹೊಳಲಿನ ಮನ್ನೆಯನ್ನು ಪಡೆಯದಂತೆ ಆಜ್ಞಾಪಿಸಿದನು.[೨೬೭]

ಚಕ್ರವರ್ತಿಯಂತೆ ಆಶ್ರಿತ ಸಾಮಂತ ಅರಸರು ಮತ್ತು ಕೆಲವು ಅಧಿಕಾರಿಗಳು ತಮ್ಮ ವ್ಯಕ್ತಿತ್ವವನ್ನು ಅಭಿವ್ಯಕ್ತಿಗೊಳಿಸುವಂಥ ಬಿರುದಾವಳಿಗಳನ್ನು ಹೊಂದಿದ್ದರು. ಸಾಮಂತ ಅರಸರು ಆಶ್ರಿತ ಪ್ರಭುವಿನ ಬಿರುದುಗಳನ್ನು ತಮ್ಮ ಹೆಸರಿನ ಮುಂದೆ ಹಾಕಿಕೊಳ್ಳುತ್ತಿದ್ದರು. ಇದು ಆತನ ಸಾಮಂತ ಸೂಚಕವಾಗಿ ತೋರುತ್ತದೆ. ಉದಾ: ತ್ರಿಭುವನಮಲ್ಲ, ಜಗದೇಕಮಲ್ಲ, ಭೂಲೋಕಮಲ್ಲ ಇತ್ಯಾದಿ.

ಚಾಳುಕ್ಯ ಚಕ್ರವರ್ತಿ ತ್ರೈಲೋಕಮಲ್ಲದೇವನು ತನ್ನ ದಂಡನಾಯಕ ಗುಣ ಸಂಪನ್ನನಾದ ರವಿಗನಿಗೆ ಸಂಧಿವಿಗ್ರಹಿ ಎಂಬ ಪದವಿಯನ್ನು ನೀಡಿ ಬೆಳ್ಗೊಡೆ, ಪಾಮಡಂಬರ, ಚಾಮರ, ಓರ್ಜರ, ಕುರುಳ, ಕುಂತವೆಂಬ ರಾಜ ಚಿಹ್ನೆಗಳನ್ನು ಕೊಟ್ಟು ಗೌರವಿಸಿದ್ದನು.[೨೬೮] ಸಾಮಂತ ಮತ್ತು ಆಡಳಿತ ವರ್ಗದ 'ಅಧಿಕಾರ' ವ್ಯವಸ್ಥೆ ಏಕರೂಪದ್ದಾಗಿರಲಿಲ್ಲ. ವಿವಿಧ ಮಾದರಿಯ ಅಧಿಕಾರ ರೂಪಗಳು ರಾಜಪ್ರಭುತ್ವದಲ್ಲಿ ಜಾರಿಯಲ್ಲಿದ್ದವು. ಅದು ಶಾಸನಗಳ ಸೂಕ್ಷ್ಮ ಅಧ್ಯಯನದಿಂದ ತಿಳಿಯುತ್ತದೆ.

ಶಾಸನಗಳಲ್ಲಿ ಆಳುತ್ತಮಿರೆ; ತ್ರಿಭೋಗ; ಉಭಯಸ್ವಾಮ್ಯ; ಏಕಭೋಗ; ಅಥವಾ ಏಕಸ್ವಾಮ್ಯ; ಬೀಳಾನುವೃತ್ತಿ; ಕುಮಾರವೃತ್ತಿ; ಅಚಳವೃತ್ತಿ; ಆಣುಜೀವಿತ ಮತ್ತು ಕುಟ್ಟುಂಬಿಟಿ ಅಣುಗಜೀವಿತಃ ಎಂಬ ಶಬ್ದಗಳು ಶಾಸನಗಳಲ್ಲಿ ಪದೇ ಪದೇ ಗೋಚರಿಸುತ್ತವೆ. ಅವುಗಳನ್ನು ಸರಿಯಾಗಿ ಅರ್ಥೈಸಿಕೊಂಡರೆ ಸಾಮಂತ ಮತ್ತು ಆಡಳಿತವರ್ಗದ ಅಧಿಕಾರ, ಸ್ಥಾನಮಾನ ಮತ್ತು ಅವರ ಕಾರ್ಯವ್ಯಾಪ್ತಿಗಳ ಪರಿಚಯವಾಗುತ್ತದೆ.

**ಆಳುತ್ತಮಿರೆ:** ಶಾಸನಗಳಲ್ಲಿ ಅಧಿಕಾರಿ ವರ್ಗದವರನ್ನು ಕುರಿತು ಉಲ್ಲೇಖಿಸುವಾಗ 'ಆಳುತ್ತಮಿರೆ' ಎಂಬ ಶಬ್ದ ಹಲವು ಬಾರಿ ಬಳಸಲಾಗಿದೆ. ಈ ಶಬ್ದ ಇಲ್ಲಿ ಎರಡು ಅರ್ಥದಲ್ಲಿ ಬಳಸಲಾಗುತ್ತಿತ್ತು. ೧. ಪ್ರಭುವಾಗಿ ಆಳ್ವಿಕೆ ಮಾಡುವುದು. ೨. ಆಶ್ರಯದಲ್ಲಿ ಅಧಿಕಾರಿಯಾಗಿ ತನ್ನ ಕರ್ತವ್ಯವನ್ನು ನಿರ್ವಹಿಸುವುದು. ಚಕ್ರವರ್ತಿಯ ಪಾದಪದ್ಮೋಪಜೀವಿಗಳಾಗಿ ಆತನ ಕೈ ಕೆಳಗೆ ಸಾಮ್ರಾಜ್ಯದ ಬೇರೆ ಬೇರೆ ಆಡಳಿತ ವಿಭಾಗಗಳಲ್ಲಿ ವಂಶಪಾರಂಪರ್ಯವಾಗಿ ಮಹಾಮಂಡಳೇಶ್ವರ, ಮಹಾಸಾಮಂತ, ಸಾಮಂತ, ಮನ್ನೆಯ ಅರಸು ಮನೆತನಗಳ ಕೆಳಗೆ ಪ್ರಭುಗಾವುಂಡ ಅಥವಾ ಗಾವುಂಡರುಗಳು ಆಳ್ವಿಕೆ ನಡೆಸುತ್ತಿದ್ದರು. ಇಲ್ಲಿ ಇವರು ಅರಸನಂತೆ ಸ್ವತಂತ್ರರಾಗಿ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು. ರಾಜನ ಕರೆ ಬಂದಾಗ ಆತನ ಆಶ್ರಯಕ್ಕೆ ಸದಾ ಸಿದ್ಧರಾಗಿರುತ್ತಿದ್ದರು. ತ್ರಿಭುವನಮಲ್ಲ ಪಾಂಡ್ಯದೇವನ ಕೈಕೆಳಗೆ ಕದಂಬ ವಂಶದ ಘಟ್ಟಿದೇವ ಕೋಗಳಿ-೫೦೦ ವಿಭಾಗವನ್ನು ಆಳುತ್ತಿದ್ದ. ಈತನ

ಕೈಕೆಳಗೆ ಮಾಂಡಲೀಕ ಜಗದಳ ಮತ್ತು ತೀಕಮಯ್ಯನಾಯಕನು ಆಳುತ್ತಿದ್ದು, ಕೊಟ್ಟೂರಿನ ರಾಮೇಶ್ವರ ದೇವರಿಗೆ ದಾನ ಮಾಡಿರುವರು.[೨೯]

ಎರಡನೇ ವರ್ಗದಲ್ಲಿ ಮಹಾಪ್ರಚಂಡ ದಂಡನಾಯಕ, ಮಹಾಸಾಮಂತ, ಸುಂಕಾಧಿಕಾರಿ, ಸರ್ವಾಧ್ಯಕ್ಷ, ಮಹಾಪಸಾಯಿತ, ಮಹಾಮಾತ್ಯ, ಸುಂಕದ ಹೆಗ್ಗಡೆ, ಸಂಧಿವಿಗ್ರಹಿ ಮೊದಲಾದ ಅಧಿಕಾರಿ ವರ್ಗದವರು ಆಶ್ರಿತರ ಆದೇಶದ ಮೇರೆಗೆ ಸಾಮ್ರಾಜ್ಯದ ಒಳಪ್ರದೇಶದಲ್ಲಿ ಮತ್ತು ಗಡಿಪ್ರದೇಶಗಳಲ್ಲಿ ತಮ್ಮ ತಮ್ಮ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದರು. ಇವರಿಗೆ ಪ್ರಭುವರ್ಗದವರಂತೆ ಆಡಳಿತದ ಎಲ್ಲಾ ಅಧಿಕಾರಿಗಳು ಇರಲಿಲ್ಲ. ಕೇವಲ ತಾವು ಹೊಂದಿದ್ದ ಹುದ್ದೆಗೆ ಮಾತ್ರ ಸೀಮಿತವಾಗಿ ಆಡಳಿತ ನಡೆಸುತ್ತಿದ್ದರು.

ತ್ರಿಭುವನಮಲ್ಲ ಪಾಂಡ್ಯ ದೇವರು ನೊಳಂಬವಾಡಿ-೩೨೦೦೦ವನ್ನು ಆಳುತ್ತಿರುವಾಗ ಅಣುಕ ಪಲ್ಲವರಾಯ ನೊಳಂಬವಾಡಿ-೩೨೦೦೦ದ ಹೆರ್ಜುಂಕದ ಅಧಿಕಾರಿಯಾಗಿ ಆಳುತ್ತಿದ್ದ.[೩೦] ಮಹಾಸಾಮಂತ ಸಿಂಧರಸರು ನೊಳಂಬವಾಡಿ-೩೨೦೦೦ ವಡ್ಡರಾವುಳದ ಸುಂಕಮನಾಳುತ್ತಿರಲು.[೩೧] ಇವರು ಪ್ರಭುಗಳಾಗಿ ರಾಜ್ಯಭಾರ ಮಾಡದೇ ಕೇವಲ ಪಾಂಡ್ಯ ಅರಸರ ಸುಂಕದ ಇಲಾಖೆಯನ್ನು ಮಾತ್ರ ನೋಡಿಕೊಳ್ಳುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ. ಸಾಮಂತರಷ್ಟೇ ಅಲ್ಲದೇ ಕೆಲವು ದಂಡನಾಯಕರು ಕೂಡ ಸುಂಕದ ಅಧಿಕಾರಿಗಳಿಗೆ ಕರ್ತವ್ಯ ನಿರ್ವಹಿಸಿದ್ದಾರೆ. ವೀರಪಾಂಡ್ಯನು ಉಚ್ಚಂಗಿಯಿಂದ ಆಳುತ್ತಿರುವಾಗ ಕದಂಬಳಿಗೆ-೧೦೦೦, ಕೋಗಳಿ-೫೦೦ರ ಸುಂಕದ ಅಧಿಕಾರಿಯಾಗಿ ಕಲಿಮಯ್ಯ ದಂಡನಾಯಕ ಆಳುತ್ತಿದ್ದ. ಸರ್ವಾಧಿಕಾರಿ ಹೆರ್ಗ್ಗಡೆ ಸೋವರಸರು ಬಿಕ್ಕಿಗನೆಪ್ಪತ್ತರೊಳಗಣ ದುಗ್ಗತ್ತಿಯ ದೇವರಿಗೆ ದಾನ ಬಿಡುತ್ತಾರೆ.[೩೨] ಹೀಗೆ ಅಧಿಕಾರಿಗಳು ತಾವು ಹೊಂದಿದ್ದ ಹುದ್ದೆಯ ಕರ್ತವ್ಯಗಳನ್ನು ಮಾತ್ರ ನೋಡಿಕೊಳ್ಳುತ್ತಿದ್ದರು.

ಈ ಎರಡು ಪ್ರಕಾರಗಳಲ್ಲಿ ಅಧಿಕಾರದ ವ್ಯಾಪ್ತಿ ತಮ್ಮ ಶಕ್ತಿ ಸಾಮರ್ಥ್ಯದ ಮೇಲೆ ಅಧಿಕಾರ ದ್ವಿಗುಣಗೊಂಡಿರುವ ಉದಾಹರಣೆಗಳು ಶಾಸನದಲ್ಲಿ ಸಿಗುತ್ತವೆ. ಅಧಿಕಾರಿ ವರ್ಗಕ್ಕೆ ತಾವು ಹೊಂದಿದ್ದ ಪದವಿಯ ಅಧಿಕಾರ ಶಾಶ್ವತವಾಗಿಯಾಗಲೀ, ವಂಶಪಾರಂಪರ್ಯ ವಾಗಿಯಾಗಲೀ ಇದ್ದಂತೆ ಕಾಣಿಸುವುದಿಲ್ಲ. ಅರ್ಹತೆಯ ಆಧಾರದ ಮೇಲೆ ನೇಮಕಾತಿ ಪ್ರಕ್ರಿಯೆ ನಡೆಯುತ್ತಿದ್ದಂತೆ ತೋರುತ್ತದೆ. ಸಾರ್ವತ್ರಿಕವಾಗಿರದೆ ಅಪರೂಪಕ್ಕೊಮ್ಮೆ ತಂದೆ ಹೊಂದಿದ್ದ ಪದವಿಯ ಅಧಿಕಾರವನ್ನು ಅವನ ಮರಣದ ನಂತರ ಅವನ ಮಗ ಅಥವಾ ಆ ವಂಶದವರು ಪಡೆದುಕೊಂಡಿದ್ದಾರೆ. ದಂಡಾಧೀಶ ಮಧುಸೂದನನ ಮಗ ಕಾಳಿದಾಸನು ದಂಡನಾಯಕನಾಗಿದ್ದನು. ಅಲ್ಲದೆ ಮಧುಸೂದನ ಅಣ್ಣ ಬಾಚಿರಾಜನೂ ಕೂಡ ಮಂತ್ರಿಯಾಗಿದ್ದನು.[೩೩] 'ಆಳುತ್ತಮಿರೆ' ಶಬ್ದವನ್ನು ಈ ಮೇಲಿನ ಚರ್ಚೆಯ ಹಿನ್ನೆಲೆಯಲ್ಲಿ ಮಾಡುವುದು ಹೆಚ್ಚು ಸೂಕ್ತವಾಗಿದೆ.

**ತ್ರಿಭೋಗ** : ಮೂರು ಶಬ್ದಗಳಿಂದ ಕೂಡಿದ ತ್ರಿಭೋಗ ಶಬ್ದವು ಇದರಲ್ಲಿ ತ್ರಿಭೋಗ, ಅಭ್ಯಂತರ, ಸಿದ್ಧಿ ಎಂಬ ಮೂರು ಪದಗಳು ಕಂಡುಬರುತ್ತವೆ. ತ್ರಿಭೋಗವಾಗಿ ಅಭ್ಯಂತರವಿಲ್ಲದೆ, ಸಂಪೂರ್ಣ ಸ್ವಾಮ್ಯವನ್ನು ಪಡೆಯುವುದು ಎಂದು ಅರ್ಥೈಸಬಹುದಾಗಿದೆ.[೩೪] ವಾಸ್ತವವಾಗಿ

ಮೂರು ತಲೆಮಾರುಗಳು ಅನುಭವಿಸುವ ಅಧಿಕಾರ(ದಾನ) ಎಂದು ಗ್ರಹಿಸಬಹುದಾಗಿದೆ ಎಂದು ಚಿದಾನಂದಮೂರ್ತಿ ಮತ್ತು ಫ್ಲೀಟರು ಅರ್ಥೈಸಿದ್ದಾರೆ.

ಪಾಂಡ್ಯರ ಶಾಸನಗಳು ಅವರ ಆಶ್ರಿತ ಸಾಮಂತರು ಮತ್ತು ಇತರೆ ಅಧಿಕಾರಿಗಳ ಅಧಿಕಾರವನ್ನು ಹೇಳುವಾಗ ಅವರು ತ್ರಿಭೋಗಾಭ್ಯಂತರ ಸಿದ್ಧಿಯೊಳು ಆಳುತ್ತಿದ್ದರೆಂದು ಹೇಳುತ್ತವೆ. ಮಹಾಪ್ರಚಂಡ ದಂಡನಾಯಕ ಘಟೆಯಂಕಾರ ಬ್ರಹ್ಮಾಧೀರಾಜರು ಪಾಪೆಕಲ್ಲಂ ತ್ರೈಭೋಗಾಭ್ಯಂತರ ಸಿದ್ಧಿಯೊಳಾಳುತ್ತಿದ್ದನು ಎಂದು ತೆಕ್ಕಲಕೋಟೆಯ ಶಾಸನ ಉಲ್ಲೇಖಿಸುತ್ತದೆ.[೨೫] ಕ್ರಿ.ಶ. ೧೧೨೫ರ ಚನ್ನಗಿರಿಯ ಶಾಸನ ಮಹಾಮಂಡಳೇಶ್ವರ ತ್ರಿಭುವನಮಲ್ಲ ರಾಯಪಾಂಡ್ಯದೇವನು ನೊಳಂಬವಾಡಿ-೩೨೦೦೦, ಸಾಂತಳಿಗೆ-೧೦೦೦ಗಳನ್ನು ತ್ರಿಭೋಗಾಭ್ಯಂತರದಿಂದ ಆಳುತ್ತಿದ್ದನೆಂದು ತಿಳಿಸುತ್ತದೆ.[೨೬]

ದಾನದತ್ತಿಗಳನ್ನು ನೀಡುವ ಸಂದರ್ಭದಲ್ಲಿಯೂ ಈ ತ್ರಿಭೋಗಾಭ್ಯಂತರ ಸಾರ್ವಬಾದಾ ಪರಿಹಾರವಾಗಿ ಬಿಡಲಾಗಿದೆ ಎಂದು ಕಂಡುಬರುತ್ತದೆ. ಇಲ್ಲಿ ಮೂರು ತಲೆಮಾರು ಎಂಬುದು ಸ್ಪಷ್ಟವಾಗುತ್ತದೆ. ದಾನಗಳನ್ನು ನೀಡುವವರು ಮತ್ತೆ ಕೆಲಕಾಲದ ನಂತರ ಪುನರ್ದತಿಯಾಗಿ ನೀಡುವ ಪರಿಪಾಠವಿತ್ತು. ಹೀಗಾಗಿ ಅರಸರ ಮೂರು ತಲೆಮಾರುಗಳು ಕಳೆದ ನಂತರ ಈ ದಾನದ ಅವಧಿ ಮುಗಿದ ಕಾರಣ ಹೀಗೆ ಮಾಡಲಾಗುತ್ತಿತ್ತು. ಆದ್ದರಿಂದ ತ್ರಿಭೋಗಾಭ್ಯಂತರ ಸಿದ್ಧಿಯಿಂದ ಅಂದರೆ ಮೂರು ತಲೆಮಾರುಗಳ ಆಡಳಿತವಿರುವವರೆಗೆ ಅವರ ಆಳ್ವಿಕೆಗೆ ಅಥವಾ ದಾನವನ್ನು ಅನುಭವಿಸಲು ಯಾವುದೇ ನಿರ್ಬಂಧ ಇದ್ದಿಲ್ಲವೆನ್ನಬಹುದು. ಅವರ ನಿಷ್ಠೆಯ ಆಧಾರದ ಮೇಲೆ ಇನ್ನೂ ಹೆಚ್ಚು ಕಾಲ ಮುಂದುವರಿಯುತ್ತಿತ್ತು.

**ಉಭಯಸ್ವಾಮ್ಯ**

ಉಭಯಸ್ವಾಮ್ಯ ಶಬ್ದದ ಅಕ್ಷರಶಃ ಅರ್ಥ ಎರಡು ಒಡೆತನ ಎಂದಾಗುತ್ತದೆ. ಅಂದರೆ ಇಬ್ಬರಿಂದ ಒಡೆತನದ ಮಾನ್ಯತೆ ಪಡೆದು ಆಳುತ್ತಿರುವುದಾಗಿದೆ. ಚಕ್ರವರ್ತಿ ಮತ್ತು ಆತನ ಮಂಡಳೇಶ್ವರಿನಿಂದ ಮಾನ್ಯತೆ ಪಡೆದು ಇಬ್ಬರ ಸಾಮಂತರಾಗಿ ಆಡಳಿತದಲ್ಲಿರುವ ಅರ್ಥವನ್ನು ಇದು ನೀಡುತ್ತದೆ. ಕ್ರಿ.ಶ. ೧೧೨೧ರ ಕೊಂಚಗೆರೆ ಶಾಸನದ ಪ್ರಕಾರ ಕುರುಗೋಡು ಸಿಂದರ ಮಹಾಮಂಡಳೇಶ್ವರ ಸೋವಿದೇವನು ಬಲ್ಲಕುಂದೆ-೩೦೦ನ್ನು ಉಭಯಸ್ವಾಮ್ಯದಿಂದ ಆಳುತ್ತಿದ್ದನು.[೨೭] ಅಂದರೆ ಸಿಂದರು ಚಾಳುಕ್ಯರು ಮತ್ತು ಅವರ ಸಾಮಂತರಾದ ಉಚ್ಚಂಗಿ ಪಾಂಡ್ಯರ ಅಧೀನರಾಗಿ ಆಳ್ವಿಕೆ ಮಾಡಿದ್ದು ಕಂಡುಬರುತ್ತದೆ.

**ಏಕಭೋಗ ಅಥವಾ ಏಕಸ್ವಾಮ್ಯ**

ಏಕಭೋಗ ಅಥವಾ ಏಕಸ್ವಾಮ್ಯ ಎಂಬ ಪದಗಳು ಅಧೀನವರ್ಗದವರಿಗೆ ಸಂಬಂಧಿಸಿದಂತೆ ಕಂಡುಬರುತ್ತದೆ. ಅಧಿಕಾರ ಪಡೆದ ವ್ಯಕ್ತಿಯು ತಾನು ಜೀವಂತವಾಗಿರುವವರೆಗೆ ಮಾತ್ರ ಅದನ್ನು ಅನುಭವಿಸುವುದಾಗಿದೆ. ಅನಂತರ ಈ ಅಧಿಕಾರ ಅವನ ವಂಶಸ್ಥರಿಗೆ ಮುಂದುವರಿಯುತ್ತಿದ್ದಿಲ್ಲ. ಒಂದುವೇಳೆ ಮುಂದುವರಿಯಬೇಕಾದರೆ ಪುನಃ ಅದನ್ನು ಪಡೆಯಬೇಕಾಗುತ್ತದೆ. ಕ್ರಿ.ಶ. ೧೧೨೧ರ

ಸೋಗಿ ಶಾಸನ, ಕೊಟ್ಟೂರಿನ ಕದಂಬ ವಂಶದ ಮಹಾಮಂಡಳೇಶ್ವರ ಘಟ್ಟಿಯರಸನು ಕೋಗಳಿಯಯ್ನೂರರ ಮನ್ನೆಯ ಮನೇಕಾಧಿಷ್ಟತಂ ಸುಖದಿನಾಳುತ್ತಿದ್ದನೆಂದು ತಿಳಿಸುತ್ತದೆ.[೨೭೮] ಕ್ರಿಶ. ೧೦೯ ಸಿರುಗಪ್ಪ ಶಾಸನ ಮಹಾಸಾಮಂತ ಮನ್ನೆಯ ಚೋಕರಸನು ಮನ್ನೆಯ ಏಕಸ್ವಾಮ್ಯಮುಮಂ ಆಳುತ್ತಿದ್ದನೆಂದು ಉಲ್ಲೇಖಿಸುತ್ತದೆ. ಸಾಮಂತ ಹಾಗೂ ಅಧಿಕಾರಿ ವರ್ಗದವರು ಆರಂಭದಲ್ಲಿ ಏಕಸ್ವಾಮ್ಯ ಅಧಿಕಾರವನ್ನು ಪಡೆದು ಸ್ವಾಮಿನಿಷ್ಠೆಗೆ ಪಾತ್ರರಾಗಿ ತಮ್ಮ ಅಧಿಕಾರವನ್ನು ಹೆಚ್ಚಿಸಿಕೊಂಡು ವಂಶಪಾರಂಪರ್ಯ ಆಡಳಿತಕ್ಕೆ ಮುನ್ನುಡಿ ಬರೆದಿದ್ದಾರೆ.

**ಬೀಳಾನುವೃತ್ತಿ**

ಶಾಸನಗಳಲ್ಲಿ ಕಂಡುಬರುವ ಬೀಳಾನುವೃತ್ತಿ ಅಥವಾ ಬೀಳುವೃತ್ತಿ ಎಂಬ ಶಬ್ದ ಅನೇಕ ಕುತೂಹಲಕ್ಕೆ ಕಾರಣವಾಗಿದೆ. ಚಿದಾನಂದಮೂರ್ತಿಯವರು ಬೀಳುವೃತ್ತಿಯು ಅಧಿರಾಜ ಮತ್ತು ಸಾಮಂತರ ಸಂಬಂಧವನ್ನು ಸೂಚಿಸುತ್ತದೆ ಎಂದು ಹೇಳಿದ್ದಾರೆ. ಬೀಳ್ ಎಂದರೆ ಕೆಳಗೆ ಬೀಳು, ಸೋಲು ಎಂದರ್ಥ ಬೀಳವೃತ್ತಿಯು ಸಾಮಂತನು ಅಧಿರಾಜನಿಗೆ ಸೋತು ಅವನಿಗೆ ತೋರಿಸುತ್ತಿದ್ದ ಗೌರವವನ್ನು ಸೂಚಿಸುತ್ತಿರುವಂತೆ ಕಾಣುತ್ತದೆ. ಚಕ್ರವರ್ತಿಯ ನಿಷ್ಠಾವಂತ ಸೇವಕರು, ಗೌಡರು, ಮನ್ನೆಯರು ಈ ರೀತಿಯ ಬೀಳಾನುವೃತ್ತಿಯಿಂದ ಆಳಿದವರಾಗಿದ್ದಾರೆ.

ಚಾಳುಕ್ಯ ತ್ರೈಲೋಕಮಲ್ಲನ ಸಾಮಂತನಾದ ತ್ರೈಲೋಕಮಲ್ಲ ನೊಳಂಬ ಪೆರ್ಮಾಡಿದೇವರು ಕೋಗಳಿ-೫೦೦, ಬಲಕುಂದೆ-೩೦೦, ಕದಂಬಳಿಗೆ-೧೦೦೦ಗಳನ್ನು ಬೀಳವೃತ್ತಿಯಿಂದ ಆಳುತ್ತಿದ್ದುದಾಗಿ ತಿಳಿದುಬರುತ್ತದೆ. ಕ್ರಿ.ಶ. ೧೦೮೧ರಲ್ಲಿ ಚಾಳುಕ್ಯ ವಿಕ್ರಮಾದಿತ್ಯನ ದೇಶಣಗರುಡನಾದ ಮಹಾಮಂಡಳೇಶ್ವರ ಜೋಯಿಮಯ್ಯರಸನು ಸಿಂದವಾಡಿ-೧೦೦೦ನ್ನು ಬೀಳಾನುವೃತ್ತಿಯಿಂದ ಆಳುತ್ತಿದ್ದುದಾಗಿ ಶಾಸನ ದಾಖಲಿಸಿದೆ.[೨೭೯]

**ಅಚಳ ವೃತ್ತಿ**

ಮಹಾಮಂಡಳೇಶ್ವರ ಅಥವಾ ಸಾಮಂತರು ಅಚಳವೃತ್ತಿಯಿಂದ ಚಕ್ರವರ್ತಿಯ ಕೈಕೆಳಗೆ ಆಳ್ವಿಕೆ ನಡೆಸಿರುವುದು ಶಾಸನಗಳಿಂದ ತಿಳಿಯುತ್ತದೆ. ಆಶ್ರಿತ ರಾಜನಲ್ಲಿರುವ ಅಚಲವಾದ ಭಕ್ತಿ, ಗೌರವಗಳನ್ನಿಟ್ಟುಕೊಂಡು ಆಳ್ವಿಕೆ ನಡೆಸುವುದು ಎಂದು ಭಾವಿಸುವುದು ಅಥವಾ ರಾಜನಿಂದ ಪ್ರಾಪ್ತವಾಗಿರುವ ಅಧಿಕಾರವು ಶಾಶ್ವತವಾದುದು ಎಂಬುದನ್ನು ಸೂಚಿಸಬಹುದು ಎಂದು ಚಿದಾನಂದಮೂರ್ತಿಯವರು ಅಭಿಪ್ರಾಯಪಡುತ್ತಾರೆ.[೨೮೦] ಮೋರಗೇರಿ ಶಾಸನ ಮಹಾಮಂಡಳೇಶ್ವರ ತ್ರೈಲೋಕಮಲ್ಲ ನನ್ನಿನೊಳಂಬ ಪಲ್ಲವನು ಚಾಳುಕ್ಯ ಅಹವಮಲ್ಲದೇವನ ಸಾಮಂತನಾಗಿ ಅಚಳವೃತ್ತಿಯಿಂದ ಆಳುತ್ತಿರುವುದಾಗಿ ಉಲ್ಲೇಖಿಸುತ್ತದೆ.[೨೮೧]

**ಅಣುಗಜೀವಿತ ಮತ್ತು ಕುಟ್ಟುಂಬಿಟಿಅಣುಗಜೀವಿತ**

ಅಣುಗ ಎಂದರೆ ಪ್ರೀತಿ ಪಾತ್ರ ಎಂದರ್ಥ. ಅಣುಗಜೀವಿತವೆಂದರೆ ಪ್ರೀತಿಪಾತ್ರರಿಗೆ ಕೊಟ್ಟಕೊಡುಗೆ ಎಂದರ್ಥವಾಗುತ್ತದೆ.[೨೮೨] ಕುಟ್ಟುಂಬಿಟಿ ಎಂಬ ಶಬ್ದವು ಕುಟುಂಬವನ್ನು ನಿರ್ದೇಶಿ

ಸುತ್ತದೆ. ಕುಟ್ಟುಂಬಿಟಿ ಅಣುಗಜೀವಿತದ ಒಟ್ಟು ಅರ್ಥ ಕುಟುಂಬದ ನಿರ್ವಹಣೆಗಾಗಿ ಕೊಟ್ಟ ಕೊಡುಗೆ ಎಂದಾಗುತ್ತದೆ.

ಅಣುಗವೃತ್ತಿ ರಾಜ ಮತ್ತು ತ್ಬಾಶ್ರಿತ ವರ್ಗಕ್ಕೆ ಇದ್ದಂತಹ ಪ್ರೀತಿಪೂರ್ವಕ ಸಂಬಂಧವನ್ನು ಸೂಚಿಸುತ್ತದೆ. ಮಹಾಮಂಡಳೇಶ್ವರನಾದ ದಂಡನಾಯಕ ತೀಕಣ್ಣನು ಆರು ಗ್ರಾಮಗಳನ್ನು ಅಣುಗಜೀವಿತವಾಗಿ ಆಳುತ್ತಿದ್ದನು. ಚಾಳುಕ್ಯ ತ್ರೈಲೋಕಮಲ್ಲನ ಮಂಡಳೀಕನಾದ ಲಕ್ಷ್ಮಣನೆಂಬುವನ್ನು ಚಕ್ರವರ್ತಿಯ ಅಣುಗಜೀವಿತ ಎಂದು ಉಲ್ಲೇಖಿಸಲಾಗಿದೆ. ರಾಷ್ಟ್ರಕೂಟರ ಸಾಮಂತನಾದ ಗಂಗಮಾರಸಿಂಘ, ಪೆರ್ಮಾಡಿಯು ಅನೇಕ ನಾಡುಗಳನ್ನು ಅಣುಗಜೀವಿತವಾಗಿ ಆಳುತ್ತಿದ್ದನು ಎಂದು ಶಾಸನ ತಿಳಿಸುತ್ತದೆ.[೨೮೩]

ಆಡಳಿತ ವ್ಯವಸ್ಥೆಗೆ ಸಂಬಂಧಿಸಿದಂತೆ ವಿವಿಧ ಪ್ರಕಾರದ ಅಧಿಕಾರದ ರೂಪಗಳು ಜಾರಿಯಲ್ಲಿರುವುದನ್ನು ಪಾಂಡ್ಯರ ಶಾಸನಗಳು ತಿಳಿಸುತ್ತವೆ. ಈ ಅಧಿಕಾರ ಪ್ರಕಾರಗಳು ಕೇವಲ ಮಹಾಮಂಡಳೇಶ್ವರ, ಮಹಾಸಾಮಂತ, ಸಾಮಂತ, ಮನ್ನೆಯರಿಗೆ ಸೀಮಿತವಾಗಿರದೆ ಎಲ್ಲಾ ಬಗ್ಗೆಯ ಅಧಿಕಾರಿಗಳು ಈ ವ್ಯವಸ್ಥೆಯಲ್ಲಿ ಸೇರಿಕೊಂಡಿದ್ದರು. ಉಚ್ಚಂಗಿ ಪಾಂಡ್ಯರ ಸಂಘಟಿತ ಶ್ರೇಣೀಕೃತ ಆಡಳಿತದಲ್ಲಿ ಮಹಾಮಂಡಳೇಶ್ವರ, ಮಾಂಡಲೀಕ, ಮಹಾಸಾಮಂತ, ಸಾಮಂತ, ದಂಡನಾಯಕ, ಸುಂಕಾಧಿಕಾರಿ, ಸಂಧಿವಿಗ್ರಹಿ ಪೆರ್ಗ್ಗಡೆ ಅಥವಾ ಹೆಗ್ಗಡೆ, ಪ್ರಭುಗಾವುಂಡ, ಗಾವುಂಡ, ಸೇನಭೋವ, ತಳಾರರು ಮೊದಲಾದ ಆಡಳಿತ ವರ್ಗವನ್ನು ಇಲ್ಲಿ ಚರ್ಚಿಸಲಾಗಿದೆ.

**ಮಹಾಮಂಡಳೇಶ್ವರ**

ಮಹಾಮಂಡಳೇಶ್ವರರು ತಮ್ಮ ಆಶ್ರಿತ ಅರಸರ ಪಾದಪದ್ಮೋಪಜೀವಿಗಳಾಗಿ ತಮ್ಮ ಆಳ್ವಿಕೆಯ ಭೂಪ್ರದೇಶವನ್ನು ಆಳಲು ಇವರು ಸ್ವತಂತ್ರರಾದರೂ ತಮ್ಮ ಮೇಲಿನ ಪ್ರಭುಗಳಿಗೆ ಅಧೀನರಾಗಿಯೂ, ವಿಧೇಯರಾಗಿಯೋ ಇರುತ್ತಿದ್ದರು. ಇವರ ಕೆಳಗೆ ಮತ್ತೆ ಮಹಾಮಂಡಳೇಶ್ವರ, ಮಹಾಸಾಮಂತ, ಸಾಮಂತ ಗಾವುಂಡರು ಮಹಾಮಂಡಳೇಶ್ವರರಿಗೆ ಅಧೀನರಾಗಿ ಸಣ್ಣ ಸಣ್ಣ ಆಡಳಿತ ವಿಭಾಗಗಳಲ್ಲಿ ಆಳುತ್ತಿದ್ದರು.

'ಮಹಾಮಂಡಳೇಶ್ವರ' ಪದದ ಶಬ್ದದ ಅರ್ಥ ವಿಸ್ತಾರವಾದ ಭೂಮಿಗೆ ಅಥವಾ ವಿಭಾಗಕ್ಕೆ ಒಡೆಯ ಎಂದಾಗುತ್ತದೆ. ಕಿಟ್ಟಲ್‌ರ ಶಬ್ದಕೋಶದಲ್ಲಿ ಮಂಡಲದ ಅರ್ಥವನ್ನು ಪ್ರಾಂತ, ಪ್ರದೇಶ ಎಂದು ನೀಡಿದ್ದಾರೆ.[೨೮೪] ವಿಸ್ತಾರವಾದ ಸಾಮ್ರಾಜ್ಯದ ಆಡಳಿತವನ್ನು ಚಕ್ರವರ್ತಿಯೊಬ್ಬನೇ ನಡೆಸುವುದು ಅಸಾಧ್ಯ ಎಂಬ ಕಾರಣಕ್ಕೆ ಸಾಮ್ರಾಜ್ಯವನ್ನು ಅನೇಕ ಪ್ರಾಂತ/ಮಂಡಲಗಳಾಗಿ ವಿಭಾಗಿಸುತ್ತಿದ್ದರು. ಈ ಮಂಡಲಗಳನ್ನು ಆಳುತ್ತಿದ್ದವರನ್ನೇ ಮಹಾಮಂಡೇಶ್ವರ, ಮಂಡಳೇಶ್ವರ ಎಂದು ಕರೆಯಲಾಗುತ್ತದೆ. ಮಂಡಲಾಧಿಪತಿ, ಮಾಂಡಲೀಕ, ಮಂಡಳೇಶ ಎಂಬ ಪರ್ಯಾಯ ಪದಗಳಿಂದ ಕರೆದಿರುವುದು ಶಾಸನಗಳಲ್ಲಿ ಕಂಡುಬರುತ್ತದೆ. ಒಂದು ಕೆಲವೊಮ್ಮೆ ಒಂದಕ್ಕಿಂತ ಹೆಚ್ಚು ವಿಭಾಗಗಳನ್ನು ಆಳುತ್ತಿದ್ದರು. ಮಂಡಳೇಶ್ವರರು ಒಂದೇ ವಿಧವಾದ ಗೌರವ ಸ್ಥಾನಮಾನಗಳನ್ನು ಹೊಂದಿರದೇ ಅವರು ತಮ್ಮ ಅಧಿಕಾರ ಮತ್ತು ಕಾರ್ಯವ್ಯಾಪ್ತಿಗೆ ಅನುಗುಣವಾಗಿ ಬೇರೆ ಬೇರೆ ಸ್ಥಾನಮಾನಗಳನ್ನು

ಹೊಂದಿರುತ್ತಿದ್ದರು. ಜೆ.ಎಂ. ನಾಗಯ್ಯ ಅವರು ಮೂರು ಪ್ರಕಾರದ ಮಹಾಮಂಡಳೇಶ್ವರರನ್ನು ಗುರುತಿಸಿದ್ದಾರೆ.

೧. ರಾಜವಂಶೀಯ ಮಹಾಮಂಡಳೇಶ್ವರರು; ಇದರಲ್ಲಿ ಮತ್ತೆ ಎರಡು ಪ್ರಕಾರಗಳು. ಅ) ಹಿಂದೆ ಚಕ್ರವರ್ತಿಗಳಾಗಿದ್ದವರು. ಆ) ಆರಂಭದಿಂದಲೂ ಮಹಾಮಂಡಳೇಶ್ವರಾಗಿದ್ದವರು.

೨. ಮಹಾಮಂಡಳೇಶ್ವರರ ಮಹಾಮಂಡಳೇಶ್ವರರು

೩. ಇತರೆ ಮಹಾಮಂಡಳೇಶ್ವರರು ಇವರು ಅರಸನ ಪ್ರೀತಿ, ಗೌರವ ಮತ್ತು ತಮ್ಮ ಶಕ್ತಿ ಶೌರ್ಯ ಗುಣದಿಂದಾಗಿ ಈ ಪದವಿಯನ್ನು ಪಡೆದುಕೊಂಡವರಾಗಿರುತ್ತಾರೆ.

ಮಹಾಮಂಡಳೇಶ್ವರರ ಅಧಿಕಾರ ವ್ಯಾಪ್ತಿ ಆಯಾ ಪ್ರಕಾರಕ್ಕೆ ಅನುಗುಣವಾಗಿ ಭಿನ್ನವಾಗಿರುತ್ತದೆ ಮತ್ತು ಇವರು ತಮ್ಮ ವಂಶಪಾರಂಪರವಾಗಿ ಬಂದಂಥ ರಾಜಚಿಹ್ನೆಗಳನ್ನು ಮತ್ತು ರಾಜ ಬಿರುದುಗಳನ್ನು ಹೊಂದಿದ್ದರು ಮತ್ತು ತಮ್ಮ ವಂಶಪಾರಂಪರ್ಯವಾಗಿ ಆಳಿದಂತಹ ಭೂಪ್ರದೇಶವನ್ನೇ ಆಳುತ್ತಿದ್ದರು. ಕೆಲವು ಸಂದರ್ಭದಲ್ಲಿ ಇದರ ವ್ಯಾಪ್ತಿ ಬದಲಾವಣೆ ಹೊಂದುತ್ತಿತ್ತು. ಅದು ಆಡಳಿತರೂಢ ಮಾಂಡಲೀಕನ ವೈಯಕ್ತಿಕ ಆಸಕ್ತಿ ಮತ್ತು ಆಶ್ರಿತ ರಾಜನ ಅಂತಃಕರಣವನ್ನು ಅವಲಂಬಿಸಿರುತ್ತಿತ್ತು. ಕೆಲವೊಮ್ಮೆ ವೈರಿಗಳನ್ನು ಹಿಮ್ಮೆಟ್ಟಿಸಿ ಅವರ ಆಳ್ವಿಕೆಯ ಪ್ರದೇಶವನ್ನು ಆಕ್ರಮಿಸಿ ತಮ್ಮ ಭೂ ಪ್ರದೇಶವನ್ನು ವಿಸ್ತರಿಸಿಕೊಂಡಿದ್ದಾರೆ. ಅಲ್ಲದೆ ಚಕ್ರವರ್ತಿಗಳು ಅಸಮರ್ಥ ರಾದಾಗ ಮತ್ತು ಅವರ ಆಡಳಿತದಲ್ಲಿ ಭಿನ್ನತೆಗಳು ಕಂಡ ಬಂದಂತಹ ಸಂದರ್ಭದಲ್ಲಿ ಅದರ ಸದುಪಯೋಗ ಪಡೆದು ಸ್ವತಂತ್ರ ರಾಜ್ಯ ಸ್ಥಾಪನೆಗೆ ಅಡಿಗಲ್ಲು ಹಾಕಿದ್ದಾರೆ. ಕಲ್ಯಾಣದ ಚಾಳುಕ್ಯ ಅರಸರ ಸದುಪಯೋಗ ಪಡೆದುಕೊಂಡು ಕಳಚೂರಿ ಮತ್ತು ಹೊಯ್ಸಳ ಮಂಡಳೇಶ್ವರರು ಸ್ವತಂತ್ರ ಅರಸರಾಗಿ ಕರ್ನಾಟಕದ ಚರಿತ್ರೆಯಲ್ಲಿ ದಾಖಲಾಗಿದ್ದಾರೆ.

ಮಂಡಳೇಶ್ವರರು ಚಕ್ರವರ್ತಿಗಳಂತೆ ತಮ್ಮ ಆಳ್ವಿಕೆಯ ಭೂಭಾಗದಲ್ಲಿ ಸ್ವತಂತ್ರರಾಗಿದ್ದು ಅವರಷ್ಟೇ ಗೌರವ ಪ್ರತಿಷ್ಠೆಯ ಸ್ಥಾನಮಾನಗಳನ್ನು ಹೊಂದಿದ್ದರು. ತಮ್ಮದೇ ಆದ ಸೈನ್ಯ ಮತ್ತು ಆಡಳಿತ ವ್ಯವಸ್ಥೆಯನ್ನು ಸಂಘಟಿಸಿಕೊಂಡಿದ್ದರು. ಆರ್ಥಿಕವಾಗಿ ಬಲಿಷ್ಠರಾಗಿದ್ದರು. ಚಕ್ರವರ್ತಿಗೆ ಶತ್ರುಗಳಿಂದ ಆಪತ್ತುಗಳು ಉಂಟಾದಾಗ ಮಹಾಮಂಡಳೇಶ್ವರರು ತಮ್ಮ ಕೋಟೆಗಳಲ್ಲಿ ಅವರಿಗೆ ಆಶ್ರಯ ನೀಡುತ್ತಿದ್ದರು. ತಮ್ಮ ಸೇನೆಯ ಅವಶ್ಯಕತೆ ಉಂಟಾದಾಗ ಅರಸನಿಗೆ ಬೆಂಗಾವಲಾಗಿ ನಿಲ್ಲುತ್ತಿದ್ದರು. ಕಳಚೂರಿ ಬಿಜ್ಜಳ ಸ್ವತಂತ್ರನಾದಾಗ ರಾಜ್ಯ ಕಳೆದುಕೊಂಡ ೪ನೇ ಸೋಮೇಶ್ವರನಿಗೆ ಮಹಾಮಂಡಳೇಶ್ವರರಾದ ಹಾನಗಲ್ಲು ಕದಂಬರ ಆಶ್ರಯದಲ್ಲಿ ಬನವಾಸಿ ಕೋಟೆಯಲ್ಲಿ ಆಶ್ರಯ ಪಡೆದಿದ್ದ. ಇವರ ಜೊತೆ ಅನೇಕ ಮಹಾಮಂಡಳೇಶ್ವರರು ಸೋಮೇಶ್ವರನ ಬೆನ್ನು ತಟ್ಟಿದ್ದರು ಎಂಬುದು ಚಾಳುಕ್ಯರ ಶಾಸನದಿಂದ ಗೊತ್ತಾಗುತ್ತದೆ. ಉಚ್ಚಂಗಿ ಪಾಂಡ್ಯರ ಶಾಸನಗಳನ್ನು ಗಮನಿಸಿದರೆ ಅವರ ಆಡಳಿತದಲ್ಲಿ ರಾಜವಂಶೀಯ ಮತ್ತು ರಾಜವಂಶೀಯರಲ್ಲದ ಇತರೆ ಮಹಾಮಂಡಳೇಶ್ವರರು ಪಾಂಡ್ಯರ ಅಧೀನದಲ್ಲಿ ಆಳಿರುವುದು ತಿಳಿಯುತ್ತದೆ.

## ಕೊಟ್ಟೂರಿನ ಕದಂಬರು

ಕರ್ನಾಟಕದ ರಾಜಕೀಯ ಇತಿಹಾಸ ಆರಂಭಿಸಿದ ಕದಂಬರು ಎರಡು ಶತಮಾನಕ್ಕೂ ಹೆಚ್ಚು ಅಂದರೆ ಕ್ರಿ.ಶ. ೩೨೫ರಿಂದ ೫೪೦ರವರೆಗೆ ಚಕ್ರವರ್ತಿಗಳಾಗಿ ಆಳಿದರು.

ಜಯಂತಿಪುರ (ಬನವಾಸಿ) ರಾಜಧಾನಿಯಲ್ಲಿದ್ದ ಇವರು ತಮ್ಮ ಆಳ್ವಿಕೆಯ ಕಾಲದಲ್ಲಿಯೇ ಸಾಮ್ರಾಜ್ಯದ ವಿವಿಧ ಭಾಗಗಳ ಆಡಳಿತವನ್ನು ನೋಡಿಕೊಳ್ಳಲು ತಮ್ಮ ವಂಶದವರನ್ನೇ ನೇಮಿಸಿದ್ದರು. ಇವರೇ ಮುಂದೆ ಚಕ್ರವರ್ತಿಗಳಾದ ಬಾದಾಮಿ ಚಾಳುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಳುಕ್ಯ ಅರಸ ಆಡಳಿತದಲ್ಲಿ ಅವರ ಅಧೀನದಲ್ಲಿ ಮಹಾಮಂಡಳೇಶ್ವರರಾಗಿ ಆಳ್ವಿಕೆ ನಡೆಸಿದರು. ಡಾ.ಬಿ.ಆರ್. ಗೋಪಾಲ ಅವರು ಮಹಾಮಂಡಳೇಶ್ವರರಾಗಿ ಆಡಳಿತ ನಡೆಸಿದ ಕದಂಬ ವಂಶದ ಆರು ಮನೆತನಗಳನ್ನು ಗುರುತಿಸಿದ್ದಾರೆ. ೧. ಹಾನಗಲ್ಲು ಕದಂಬರು, ೨. ಗೋವೆಯ ಕದಂಬರು, ೩. ಬಯಲುನಾಡಿನ ಕದಂಬರು, ೪. ನೂರುಂಬಾಡದ ಕದಂಬರು, ೫. ಕರಡಿಕಲ್ಲಿನ ಕದಂಬರು, ೬. ಚಂದವಾರದ ಕದಂಬರು, ಜೆ.ಎಂ. ನಾಗಯ್ಯ ಅವರು ತಮ್ಮ ಸಂಶೋಧನ ಪ್ರಬಂಧದಲ್ಲಿ ಕೋಗಳಿ-೫೦೦ ವಿಭಾಗವನ್ನು ಆಳುತ್ತಿದ್ದ ಇನ್ನೊಂದು ಕದಂಬ ವಂಶವನ್ನು ಗುರುತಿಸಿದ್ದಾರೆ. ಈ ಶಾಖೆಯನ್ನು ಕೋಗಳಿ ನಾಡಿನ ಕದಂಬರು ಎಂದು ಕರೆದಿದ್ದಾರೆ. ಇವರು ಕೋಗಳಿ-೫೦೦ ವಿಭಾಗವನ್ನು ಕೊಟ್ಟೂರು ಪಟ್ಟಣದಿಂದ ಆಳುತ್ತಿದ್ದರು. ಇವರ ಶಾಸನಗಳಲ್ಲಿ ಕೊಟ್ಟೂರಿನ ಕದಂಬರು ಎಂದು ಕರೆಯಲಾಗಿದೆ. ಇವರು ನೊಳಂಬ ಪಲ್ಲವರ ಕಾಲದಲ್ಲಿ ಈ ಪ್ರದೇಶವನ್ನು ಮನ್ನೆಯ ಸಾಮಂತರಾಗಿ ಆಳುತ್ತಿದ್ದರು. ಕ್ರಿ.ಶ. ೧೦೭೬ರ ನಂತರ ನೊಳಂಬವಾಡಿಯ ಆಡಳಿತ ಉಚ್ಚಂಗಿ ಪಾಂಡ್ಯರಿಗೆ ದೊರೆತಾಗ ಮನ್ನೆಯ ಸಾಮಂತರಾಗಿದ್ದವರು ಮಹಾಮಂಡಳೇಶ್ವರರಾಗಿ ನೇಮಕಗೊಳ್ಳುತ್ತಾರೆ. ಈ ವಂಶದ ಘಟ್ಟಿಯರಸ ಕ್ರಿ.ಶ. ೧೦೭೯ರ ವೇಳೆಗೆ ತ್ರಿಭುವನಮಲ್ಲ ಪಾಂಡ್ಯದೇವನ ಮಹಾಮಂಡಳೇಶ್ವರನಾಗಿ ಶಾಸನಗಳಲ್ಲಿ ಕಾಣಿಸಿಕೊಳ್ಳುತ್ತಾನೆ. ಹರಿಹರ ಶಾಸನ ಈ ವಂಶದ ವಂಶಾವಳಿಯ ವಿವರವನ್ನು ನೀಡುತ್ತದೆ.

### ಘಟ್ಟಿಯರಸ (ಕ್ರಿ.ಶ. ೧೦೭೧ರಿಂದ ೧೧೨೨)

ಕದಂಬ ಘಟ್ಟಿಯರಸ ಪಾಂಡ್ಯರು ಅಧಿಕಾರಕ್ಕೆ ಬರುವ ಪೂರ್ವದಲ್ಲಿ ಚಾಳುಕ್ಯ ಚಕ್ರವರ್ತಿಗಳು ಮತ್ತು ನೊಳಂಬ ಪಲ್ಲವರ ಮನ್ನೆಯ ಸಾಮಂತನಾಗಿ ಕೋಗಳಿ ನಾಡಿನ ಆಡಳಿತವನ್ನು ನೋಡಿಕೊಳ್ಳುತ್ತಿದ್ದ. ಪಾಂಡ್ಯರ ಕಾಲದ ಈತನ ಶಾಸನಗಳು ಕೊಟ್ಟೂರಿನ ಘಟ್ಟಿಯರಸ ಎಂದು ಉಲ್ಲೇಖಿಸುತ್ತವೆ. ಈ ವಂಶದ ಮಾಳಯ್ಯ ರಾಷ್ಟ್ರಕೂಟ ಅರಸ ನಿತ್ಯವರ್ಷ ಇಂದ್ರವಲ್ಲಭನ ಕಾಲದಲ್ಲಿ ಸಾಮಂತ ಬಿಜ್ಜ ಎಂಬುವವನು ಕೋಗಳಿ-೫೦೦, ಮಾಸವಾಡಿ-೧೪೦ನ್ನು ಆಳುತ್ತಿರುವಾಗ ಆತನ ಕೈಕೆಳಗೆ ಕದಂಬ ಮಾಳಯ್ಯ ಅಧಿಕಾರಿಯಾಗಿದ್ದ.

ಕಡಬಗೆರೆ ಶಾಸನ[೨೫] ಕದಂಬವಂಶೋದ್ಭವ ಮುತಾಂದ ಬಿರುದುಗಳನ್ನು ಧರಿಸಿದ ಕಣ್ಣವಾರ ಮುದುದರದೇವಯ್ಯನ ಮಗ ಮಾಳಯ್ಯನೆಂದು ಉಲ್ಲೇಖಿಸುತ್ತದೆ. ಕ್ರಿ.ಶ. ೯೮೨ರ ಕೋಗಳಿ ಶಾಸನ ಈ ವಂಶದ ಆದಿತ್ಯವರ್ಮರಸನು ಮಹಾಸಾಮಂತನಾಗಿ ನೊಳಂಬರ ಅಧೀನತೆಯಲ್ಲಿ

ಆಳ್ವಿಕೆ ಮಾಡುತ್ತಿರುವುದನ್ನು ತಿಳಿಸುತ್ತದೆ. ಕ್ರಿ.ಶ. ೧೦೫೩ರ ನಂದಿಕಂಬ ಶಾಸನ.[೨೮೬] ಕದಂಬ ವಂಶದ ನಾಗತ್ಯರಸ ಚಾಳುಕ್ಯ ಒಂದನೇ ಸೋಮೇಶ್ವರನ ಸಾಮಂತನಾಗಿ ಕೋಗಳಿ-೧೦೦೦ವನ್ನು ಆಳುತ್ತಿದ್ದ ಎಂದು ಹೇಳುತ್ತದೆ. ಬನವಾಸಿಪುರವರೇಶ್ವರಮ್ರಿಗೇಂದ್ರಲಾಂಛನ ಮಯೂರವರ್ಮ ವಂಶೋದ್ಭವ ಮುಂತಾದ ಬಿರುದುಗಳನ್ನು ಧರಿಸಿದ ಈತ ಕೊಟೇಯ ನಾಗತ್ಯರಸನೆಂದು ವರ್ಣಿಸಲಾಗಿದೆ.

ಈತನ ನಂತರ ಕೊಟ್ಟೂರಿನ ಘಟ್ಟಿದೇವ ಅಧಿಕಾರಕ್ಕೆ ಬಂದ ಕ್ರಿ.ಶ. ೧೦೬೨ ಮತ್ತು ೧೦೭೧ರ ಹೂವಿನಹಡಗಲಿ ಶಾಸನಗಳು ಕದಂಬ ವಂಶದ ಘಟ್ಟಿದೇವ ಚಾಳುಕ್ಯ ಸೋಮೇಶ್ವರನ ಸಾಮಂತನಾಗಿ ಅಧಿಕಾರದಲ್ಲಿದ್ದ ಎಂಬುದನ್ನು ದಾಖಲಿಸಿವೆ. ಕ್ರಿ.ಶ. ೧೦೭೬ರಲ್ಲಿ ತ್ರಿಭುವನಮಲ್ಲದೇವ ಚಾಳುಕ್ಯ ಸಿಂಹಾಸನಕ್ಕೆ ಬಂದಾಗ ಈತ ಉಚ್ಚಂಗಿ ಪಾಂಡ್ಯರ ಕೈಕೆಳಗೆ ಮಹಾಮಂಡಳೇಶ್ವರನಾಗಿ ಉನ್ನತಿ ಪಡೆದುಕೊಂಡು ಕೋಗಳಿ-೫೦೦ರ ಆಡಳಿತವನ್ನು ನೋಡಿಕೊಳ್ಳುತ್ತಾನೆ. ಕದಂಬ ಘಟ್ಟಿದೇವ ತ್ರಿಭುವನಮಲ್ಲಪಾಂಡ್ಯ ದೇವನ ಅಧೀನವಾಗಿ ಮಹಾಮಂಡಳೇಶ್ವರನಾಗಿ ಆಳಿರುವುದನ್ನು ಹೂವಿನಹಡಗಲಿ, ಕೊಟ್ಟೂರು, ಅಂಬಳಿ, ಹರಿಹರ, ಸೋಗಿ ಗ್ರಾಮದ ಶಾಸನಗಳು ಮಾಹಿತಿ ನೀಡುತ್ತವೆ.

ಹೂವಿನಹಡಗಲಿಯ ಕ್ರಿ.ಶ. ೧೦೭೧ರ ಶಾಸನದಲ್ಲಿ,[೨೮೭] ಚಕ್ರವರ್ತಿಯ ಪಾದಪದ್ಮೋಪಜೀವಿಯಾಗಿದ್ದ ಈತನ ಪ್ರಶಸ್ತಿಯನ್ನು ಹೀಗೆ ಕೊಡಲಾಗಿದೆ. ಮಹಾಸಾಮಂತಂ, ವೀರ ಶ್ರೀಕಾನ್ತಂ, ಬನವಾಸಿಪುರವರೇಶ್ವರಂ, ವೀರಮಾಹೇಶ್ವರಂ, ಕದಂಬರಾಭರಣ, ವೈರಿಮದ ನಿವಾರಣ, ಶ್ರೀಸಾಮನ್ತ ಗರುಡಪಾದಪಂಕಜ ಭ್ರಮರ ಇತ್ಯಾದಿ. ಚಕ್ರಿಯು ದಂಡನಾಯಕನ ಚಿದ್ದಯ್ಯನ ಮೇಲೆ ಜಯಸಾಧಿಸಿ ಉತ್ಸಾಹದಲ್ಲಿರುವಾಗ ಹೂವಿನಹಡಗಲಿಯ ಮಹಾಜನರ ಬಿನ್ನಹದ ಮೇರೆಗೆ ಕಲಿದೇವಸ್ವಾಮಿಗೆ ಕೋಗಳಿ ೫೦೦ಕ್ಕೆ ಸಂಬಂಧಿಸಿದ ಹಾಲ್ವೊಳ ೧೨ರ ಕೊಟ್ಟಿಗನೂರನ್ನು ದತ್ತಿ ಬಿಡುತ್ತಾನೆ. ಆ ಗ್ರಾಮಕ್ಕೆ ಮನ್ನೆಯನಾಗಿದ್ದ ಘಟ್ಟಿಯರಸನೂ ಧಾರಾಪೂರ್ವಕವಾಗಿ ಗ್ರಾಮವನ್ನು ಬಿಟ್ಟುಕೊಡುತ್ತಾನೆ. ಇದೇ ಹೂವಿನಹಡಗಲಿಯ ಇನ್ನೊಂದು ಶಾಸನದಲ್ಲಿ.[೨೮೮] ಈತನನ್ನು 'ಶ್ರೀಮನ್ಮಹಾಸಾಮಂತಂ ಗರುಡಂ X ಟ್ಟೂರ ಘಟ್ಟಿಯರಸರು' ಎಂದು ಕರೆಯಲಾಗಿದೆ. ಕ್ರಿ.ಶ. ೧೧೦೬ ಜನೇವರಿ ೭ರ ಸುಮಾರಿಗಾಗಲೇ ಈತನು ಮಹಾಮಂಡಳೇಶ್ವರನಾಗಿದ್ದನೆಂದು ಅಂಬಳಿಯ ಶಾಸನದಿಂದ ತಿಳಿದುಬರುತ್ತದೆ. ಮಹಾಮಂಡಳೇಶ್ವರ ತ್ರಿಭುವನಮಲ್ಲ ಪಾಂಡ್ಯದೇವನಿಗೆ ಅಧೀನನಾಗಿ ಕೊಟ್ಟೂರಿನಲ್ಲಿದ್ದು ರಾಜ್ಯವಾಳುತ್ತಿದ್ದ ಉಲ್ಲೇಖವಿದೆ. ಕೊಟ್ಟೂರಿನ ಕಲ್ಲೇಶ್ವರ ದೇವಾಲಯದ ಶಾಸನದಲ್ಲಿ ಈತನ ಪ್ರಶಸ್ತಿಯನ್ನು ಹೀಗೆ ಕೊಡಲಾಗಿದೆ.[೨೮೯] ಬನವಾಸಿ ಪುರವರಾಧೀಶ್ವರ, ಭೂಮ್ಯೇಂದುಶೇಖರ ಪ್ರಸಾದೋತ್ಪತ್ತಿ ತ್ರಿಲೋಚನ, ಮಯೂರವರ್ಮ ಕದಂಬಾನ್ವಯ ವಿಭೂಷಣ, ಪೆರ್ಮ್ಮಟ್ಟಿತೂರ್ಯ್ಯ ನಿರ್ಗ್ಗೋಶಣ, ಹಿಮವದ್ಗಿರೀಂದ್ರರುಂದ್ರ ಶಿಖರೀಶಿಖರಸ್ಫಟಿಕ ಶಿಲಾಸ್ತಂಭ ಬದ್ಧಮದಗಜ, ಮಹಾಮಹಿಮಾಭಿರಾಮಂ, ಸಂಗ್ರಾಮಭೀಮ, ಅಷ್ಟದಶಾಶ್ವಮೇಧಾ ದೀಕ್ಷಿತಂ,

ಚತುರಾಶೀತಿ ನಗರಾಧಿಷ್ಠಿತ, ಉಚ್ಚಂಗಿದೇವೀಲಬ್ಧವರಪ್ರಸಾದ, ಮ್ರಿಗಮದಾಮೋದ, ಗಾಯಿಗ ಮನ್ನೆಯ, ಮ್ರಿಗ ಬೇಂಟೆಕಾರ, ಅಲ್ಲಹುಲಿದೇವನಂಕಕಾರ, ಶ್ರೀಚಂದ್ರೇಶ್ವರದೇವರ ಪಾದಾಬ್ಜಭ್ರಿಂಗ, ಸಾಹಸೋತ್ತುಂಗ, ಮಹಾಮಂಡಳೇಶ್ವರ ಘಟ್ಟಿಯರಸರ ಉಲ್ಲೇಖವಿದೆ. ಘಟ್ಟಿದೇವನು ತನ್ನದೇ ಆದ ಮಂತ್ರಿಮಂಡಲವನ್ನು ಹೊಂದಿದ್ದನೆಂಬುದಕ್ಕೆ ಮೇಲೆ ಸೂಚಿಸಿದ ಕೊಟ್ಟೂರ ಶಾಸನವೇ ಆಧಾರವಾಗಿದೆ. ಆ ಶಾಸನವನ್ನು ಬರೆದ ಮಲ್ಲಪರಾಜನು ಘಟ್ಟಿದೇವನಿಗೆ ಸಂಧಿವಿಗ್ರಹಿಯಾಗಿದ್ದನು.

ಕೋಗಳಿ-೫೦೦ಕ್ಕೆ ರಾಜಧಾನಿ ಕೋಗಳಿಯೇ ಆಗಿದ್ದರೂ ಅದರಿಂದ ಸುಮಾರು ೨೦ ಕಿಲೋಮೀಟರ್ ದೂರದಲ್ಲಿರುವ ಕೊಟ್ಟೂರಿನಲ್ಲಿ ಈತನು ವಾಸ್ತವ್ಯವನ್ನು ಹೊಂದಿರಬೇಕು. ಆದುದರಿಂದಲೇ ಈತನನ್ನು ಕೊಟ್ಟೂರಿನ ಘಟ್ಟಿಯರಸ ಎಂದು ಕರೆಯಲಾಗಿದೆ. ಸೋಗಿ.[೨೯೦] ಗ್ರಾಮದ ಕ್ರಿ.ಶ. ೧೧೨೧ ಡಿಸೆಂಬರ್ ೨೫ರ ಶಾಸನದಲ್ಲಿ "ಶ್ರೀಮನ್ಮಹಾವಣ್ಡಳೇಶ್ವರಂ ಘಟ್ಟಿಯರಸರು ಕೋಗಳಿಯಯ್ನೂರರ ಮನ್ನೆಯನೇಕಾಧಿಷ್ಠಿತಂ ಸುಖದಿನಾಳುತ್ತಮಿರೆ" ಎಂದಿದೆ. ಸೋಗೆಯಲ್ಲಿ ಊರೊಡೆಯ ನಾಗವರ್ಮನಾಯಕನು ಕೇಶವದೇವರನ್ನು ಪ್ರತಿಷ್ಠಾಪಿಸಿ ತಮ್ಮಂದಿರಾದ ಕಾಳಿಮಯ್ಯನಾಯಕ, ಮಹಾದೇವಯ್ಯ ನಾಯಕರೊಂದಿಗೆ ಕೂಡಿ ಭೂಮಿಯನ್ನು ದಾನ ಬಿಡುತ್ತಾನೆ. ಈ ಧರ್ಮವನ್ನು ಮಹಾಮಂಡಳೇಶ್ವರ ಘಟ್ಟಿಯರಸನು ಪಾಲಿಸಬೇಕು. ಇದನ್ನು ಉಪೇಕ್ಷಿಸಿದರೆ ಆ 'ಉಪೇಕ್ಷಾದೋಷ'ವು ಘಟ್ಟಿಯರಸರಿಗೆ ಬರುತ್ತದೆ ಎಂದು ಶಾಸನ ಹೇಳುತ್ತದೆ. ಘಟ್ಟಿದೇವರಸನು ಮದುವೆಯ ಹಂದರ ಹಣವನ್ನು ಶ್ರೀಸ್ವಯಂಭೂ ಕಲಿದೇವಸ್ವಾಮಿದೇವರ (ಊರು?) ನಂದಾದೀವಿಗೆ ಬಿಟ್ಟ ಉಲ್ಲೇಖ ಈ ಶಾಸನದಲ್ಲಿದೆ. ಈತನು ಕ್ರಿ.ಶ. ೧೧೨೨ರವರೆಗೆ ಆಡಳಿತ ನಡೆಸಿರಬೇಕು.

**ನಾಚಿದೇವರಸ (ಕ್ರಿ.ಶ. ೧೧೧೩ ರಿಂದ ೧೧೬೯)**

ಘಟ್ಟಿದೇವನ ನಂತರ ಆತನ ಮಗನಾದ ನಾಚಿದೇವರಸ ಅಧಿಕಾರಕ್ಕೆ ಬಂದ. ತಂದೆಯ ಕಾಲದಲ್ಲಿಯೇ ಆಡಳಿತದಲ್ಲಿ ತೊಡಗಿಕೊಂಡಿದ್ದ. ನಾಚಿದೇವರಸ ಪಾಂಡ್ಯ ಅರಸರಾದ ತ್ರಿಭುವನಮಲ್ಲ ಪಾಂಡ್ಯ, ರಾಯಪಾಂಡ್ಯ, ಜಗದೇಕಮಲ್ಲ ವೀರಪಾಂಡ್ಯ ದೇವನ ಪಾದಪದ್ಮೋಪಜೀವಿಯಾಗಿ ಆಡಳಿತ ನಡೆಸಿದನು. ಕ್ರಿ.ಶ. ೧೧೪೮ರ ಬೆಣ್ಣೆಹಳ್ಳಿ ಶಾಸನ.[೨೯೧] ಮಂಡಳಿಕ ಗಂಡಬೇರುಂಡ ಬಿರುದಮಂಡಳಿಕಗರ್ವ್ವಸರ್ವ್ವಸ್ವ ಸೂರೆಕಾರ ಘಟ್ಟಿದೇವನಂಕಕಾರಂ ಶ್ರೀಮನ್ಮಹಾಮಂಡಳೇಶ್ವರ ನಾಚಿದೇವರಸರು ಕೊಟ್ಟೂರಲು ರಾಜ್ಯಂಗೆಯುತ್ತಮಿರೆ ಎಂದು ತಿಳಿಸುತ್ತದೆ. ಕಾಲದ ಉಲ್ಲೇಖವಿಲ್ಲದ ಕೊಟ್ಟೂರಿನ ಶಾಸನ ಕೂಡ ನಾಚಿದೇವರಸ ಘಟ್ಟಿದೇವನ ಮಗ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಕ್ರಿ.ಶ. ೧೧೧೩ರ ಕೊಟ್ಟೂರಿನ ಶಾಸನ.[೨೯೨] ನಾಚಿದೇವ ತಂದೆಯ ಅವಧಿಯಲ್ಲಿ ಕೊಟ್ಟೂರು-೧೨ ಮತ್ತು ಕೋಗಳಿ-೫೦೦ನ್ನು ಆಳುತ್ತಿರುವುದನ್ನು ಹೇಳುತ್ತದೆ.

ಇದೇ ಶಾಸನ ಕದಂಬ ನಾಚಿದೇವರಸ ಪಿರಿಯಪಟ್ಟ ಮಹಾದೇವಿ ಶ್ರೀಯಾದೇವಿಗೆ ಕುಮಾರಕಣ್ಠೀರವ ಘಟ್ಟಿದೇವರಸ ಮತ್ತು ವಿರೂಪಾಕ್ಷದೇವನೆಂಬ ಇಬ್ಬರು ಪುತ್ರರಿದ್ದರು ಎಂಬುದನ್ನು ದಾಖಲಿಸುತ್ತದೆ. ಕ್ರಿ.ಶ. ೧೧೨೨ರಿಂದ ೧೧೪೩ರವರೆಗೂ ಈ ಪ್ರದೇಶದ ಆಡಳಿತದಲ್ಲಿ ಕದಂಬ

ವಂಶದ ಆಡಳಿತಕ್ಕೆ ಸಂಬಂಧಿಸಿದಂತೆ ಯಾವುದೇ ದಾಖಲೆಗಳು ಲಭ್ಯವಾಗುವುದಿಲ್ಲ. ಹಾಗಾಗಿ ಈ ೨೦ ವರ್ಷಗಳ ಅವಧಿಯಲ್ಲಿ ಅವರ ಚರಿತ್ರೆ ಮೌನವಾಗಿದೆ.

ಘಟ್ಟಿದೇವನ ಮರಣದ ನಂತರ ಆತನ ಮೂರು ಜನ ಮಕ್ಕಳಲ್ಲಿ ಅಧಿಕಾರಕ್ಕಾಗಿ ಆಂತರಿಕ ಕಲಹಗಳು ಏರ್ಪಟ್ಟಿರಬೇಕು. ಹಾಗಾಗಿ ಈ ಅವಧಿಯಲ್ಲಿ ಅವರ ಚರಿತ್ರೆ ಮೌನವಾಗಿರಬೇಕು ಅನ್ನಿಸುತ್ತದೆ. ಘಟ್ಟಿದೇವನ ಮೂರು ಜನ ಮಕ್ಕಳಾದ ನಾಚಿದೇವರಸ, ಚಿಬಿದೇವರಸ, ಮಾಚಿದೇವರಸ ಇವರ ಆಡಳಿತವನ್ನು ಶಾಸನಗಳು ತಿಳಿಸುತ್ತವೆ. ಕ್ರಿ.ಶ. ೧೧೪೫ರ ಅಂಬಳಿಯ ಶಾಸನ,[೨೯೩] ಘಟ್ಟಿದೇವನ ಮಗ ಚಿಬಿದೇವರಸ ಕೊಟ್ಟೂರು ಆಳುತ್ತಿರುವುದಾಗಿ ತಿಳಿಸುತ್ತದೆ. ಆದರೆ ಯಾವ ಪ್ರದೇಶ ಎಂಬುದರ ಬಗ್ಗೆ ಸ್ಪಷ್ಟತೆ ಇಲ್ಲ. ಕ್ರಿ.ಶ. ೧೧೪೬ರ ಉಲುವತ್ತಿ ಶಾಸನ ಘಟ್ಟಿದೇವನ ಮಗ ಮಹಾಮಂಡಳೇಶ್ವರ ಮಾಚಿದೇವ ಕೋಗಳಿ-೫೦೦ ಮನ್ನೆಯನ್ನು ಆಳುತ್ತಿರುವುದಾಗಿ ಉಲ್ಲೇಖಿಸುತ್ತದೆ.[೨೯೪] ಕ್ರಿ.ಶ. ೧೧೧೫ರ ಕೊಟ್ಟೂರಿನ ಶಾಸನ ನಾಚಿದೇವರಸ ತಂದೆಯ ಆಡಳಿತದಲ್ಲಿ ಕೊಟ್ಟೂರು-೧೨, ಕೋಗಳಿ-೫೦೦ ಆಳುತ್ತಿರುವುದನ್ನು ಹೇಳುತ್ತದೆ. ಹಾಗಾಗಿ ನಾಚಿದೇವನ ತಂದೆಯ ಕಾಲದಲ್ಲಿ ಆಡಳಿತದಲ್ಲಿ ಇದ್ದರಿಂದ ಅವನ ಮರಣದ ನಂತರ ಆತನ ಆಡಳಿತ ಮುಂದುವರಿಯಬೇಕಿತ್ತು. ಆದರೆ ತಂದೆಯ ಮರಣದ ನಂತರ ಆತನ ಆಡಳಿತದ ದಾಖಲೆಗಳು ಕಾಣಿಸುವುದಿಲ್ಲ. ಬದಲಾಗಿ ಚಿಬಿದೇವ ಮತ್ತು ಮಾಚಿದೇವರ ಆಡಳಿತದ ದಾಖಲೆ ಬರುವುದರಿಂದ ಸಹೋದರರ ಮಧ್ಯೆ ಅಧಿಕಾರಕ್ಕಾಗಿ ಆಂತರಿಕ ಕಲಹಗಳು ನಡೆದಿರಬೇಕು ಎಂಬ ನನ್ನ ಊಹೆ ಸ್ಪಷ್ಟವಾಗುತ್ತದೆ. ಅಲ್ಲದೆ ಕ್ರಿ.ಶ. ೧೧೨೨ರ ರಾಮಘಟ್ಟದ ಶಾಸನ,[೨೯೫] ಶ್ರೀಮನ್ಮಹಾಮಂಡಳೇಶ್ವರ ಸಾಯಿರನಾಡ ಮನ್ನೆಯ ಭಟ್ಟರಸರು ರಾಮಘಟ್ಟದಲು ತಮಗೆ ನಡೆವ ಮನ್ನೆಯದ ಹೊನ್ನೂಳಗೆ ದೇವರ ದೀಪಕ್ಕೆ ಗದ್ಯಾಣವನ್ನು ದಾನ ನೀಡುವ ಉಲ್ಲೇಖವಿದೆ.

ಸಹೋದರರ ಕಲಹದ ಕಾರಣಕ್ಕೆ ಈ ನಾಡಿನ ಆಡಳಿತವನ್ನು ಮನ್ನೆಯ ಭಟ್ಟರಸರು ನಿರ್ವಹಿಸಿದಂತೆ ಈ ಶಾಸನ ಉಲ್ಲೇಖಿಸುತ್ತದೆ. ಕ್ರಿ.ಶ. ೧೧೪೭ರ ವೇಳೆಗೆ ನಾಚಿದೇವ ಪುನಃ ಕದಂಬ ವಂಶದ ಅಧಿಕಾರವನ್ನು ಮರಳಿ ಪಡೆದುಕೊಂಡಿರುವುದನ್ನು ಅಂಬಳಿ ಶಾಸನ ಹೇಳುತ್ತದೆ. ಅಧಿಕಾರಕ್ಕೆ ಬಂದ ನಾಚಿದೇವರ ಪಾಂಡ್ಯ ಅರಸರಾದ ಜಗದೇಕಮಲ್ಲ ವೀರಪಾಂಡ್ಯ ಮತ್ತು ತ್ರಿಭುವನಮಲ್ಲ ವಿಜಯಪಾಂಡ್ಯನ ಪಾದಪದ್ಮೋಪಜೀವಿಯಾಗಿ ಕೋಗಳಿ-೫೦೦ನ್ನು ಕ್ರಿ.ಶ. ೧೧೬೯ವರೆಗೂ ಮಹಾಮಂಡಳೇಶ್ವರನಾಗಿ ಆಳಿರುವುದು ಶಾಸನಗಳಿಂದ ತಿಳಿಯುತ್ತದೆ.

ನಾಚಿದೇವರಸನ ಪ್ರಶಸ್ತಿಯನ್ನು ಕ್ರಿ.ಶ. ೧೧೫೪ರ ಹಳ್ಯಾ ಶಾಸನ[೨೯೬] ವರ್ಣಿಸುತ್ತದೆ.

“ಮಹಾಮಂಡಳೇಶ್ವರಂ ಬನವಾಸಿ ಪುರವರಾಧೀಶ್ವರಂ ಭೂಮ್ಯೇಂದುಶೇಕರಹರವರ ಪಸಾದೋತುಪತ್ತಿ ತ್ರಿಲೋಚನ ನಿರತಿಶಯ ದಾನವೈರೋಚನ ಕದಂಬಕುಲಾನ್ವಯ ಮಯೂರ

ವರ್ಮ್ಮವಂಶ ವಿಭೂಷಣಂ ಚತು(ರಾ) ಸೀತಿನಗರಾಧಿಷ್ಠಿತ ಹಿಮವಂತಸ್ಥಾಪಿತ ಜಯಸ್ತಂಬಾನ್ವಯ ಪವಿತ್ರ ಪರಾಂಗನಾಪುತ್ರ ಕದಂಬ ಕುಳಾಚಳೋದಯ ಶಿಖರಿಶೇಖರ ಮಾರ್ತ್ತಂಡ ರಿಪುಮಂಡಳಿಕ ಪಂನಗವಜ್ರತುಂಡನ ಪುರ್ಬ ರೂಪಕಂದರ್ಪ್ಪ ಮಂಡಳಿಕ ಘಟಸರ್ಪ್ಪ ಅರಿರಾಯಗರ್ಬಸರ್ಬ ಸ್ವಸೂರೆಕಾರ ಮಂಡಳಿಕ ಜಗದ್ದಳ ಶ್ರೀಮಲ್ಲಿಕಾರ್ಜುನದೇವ ಚರಣಸ್ಮರಣ ಪರಿಣತ್ಯಾಂತಃ (ಕರಣ) ಉಚ್ಚಂಗಿಯ ದೇವಿಯಲಬುಧಿವರಪ್ರಸಾದರುಮಪ್ಪ ನಚಿದೇವರಸರು" ಎಂದು ಹೇಳಲಾಗಿದೆ. ಕ್ರಿ.ಶ. ೧೧೬೯ರ ಹೊಳಗುಂದಿ ಶಾಸನ,[೨೯೭] ನಾಚಿದೇವರಸರು ಕೋಗಳಿ-೫೦೦ನ್ನು ತ್ಯಾಗ, ಭೋಗಿ ಮನ್ನೆಯನಾಗಿ ಆಳುತ್ತಿರುವುದಾಗಿ ತಿಳಿಸುತ್ತದೆ. ಈತನ ಆಡಳಿತದ ಮಾಹಿತಿ ನೀಡುವ ಕೊನೆಯ ಶಾಸನ ಇದಾಗಿದೆ.

**ಚಬಿದೇವರಸ ಕ್ರಿ.ಶ. ೧೧೪೩**

ಘಟ್ಟಿದೇವನ ಮಗನಾದ ಚಬಿದೇವರಸನನ್ನು ಕ್ರಿ.ಶ. ೧೧೪೩ರ ಅಂಬಳಿ ಶಾಸನ,[೨೯೮] ಮಹಾಮಂಡಳೇಶ್ವರ ಜಗದೇಕಮಲ್ಲ ವೀರಪಾಂಡ್ಯದೇವರು ನೊಳಂಬವಾಡಿ-೩೨೦೦೦ವನ್ನು ಆಳುತ್ತಿರುವಾಗ ಸ್ವಸ್ತಿ ಸಮಧಿಗತ ಪಂಚಮಹಾಶಬ್ಧ ಶ್ರೀಮನ್ಮಹಾಮಂಡಳೇಶ್ವರ ಬನವಾಸಿ ಪುರವರಾಧೀಶ್ವರ ಕದಂಬಕುಳಕಮಳಾರ್ಕ ನುಡಿದಂತೆ ಗಂಡ ಘಟ್ಟಿದೇವನ ಕುಮಾರ ಶ್ರೀಮನ್ಮಹಾ ಮಂಡಳೇಶ್ವರ ಚಬಿದೇವರಸರು ಕೊಟ್ಟೂರೊಳು ಸುಖದಿಂದ ಆಳುತ್ತಿರುವಾಗ ಎಂದು ತಿಳಿಸುತ್ತದೆ. ಈ ಶಾಸನ ಹೊರತುಪಡಿಸಿ ಬೇರೆ ದಾಖಲೆಗಳು ಈತನ ಬಗ್ಗೆ ದೊರೆಯುವುದಿಲ್ಲ.

**ಮಾಚಿದೇವರಸ ಕ್ರಿ.ಶ. ೧೧೪೬**

ಜಗದೇಕಮಲ್ಲ ಪಾಂಡ್ಯದೇವನ ಸಾಮಂತನಾಗಿ ಮಾಚಿದೇವರಸನು ಕೋಗಳಿ-೫೦೦ನ್ನು ಆಳುತ್ತಿರುವ ಅಂಶವನ್ನು ಉಲುವತ್ತಿ ಶಾಸನ ತಿಳಿಸುತ್ತದೆ. ಸಮಸ್ತಪ್ರಶಸ್ತಿಸಹಿತಂ ಶ್ರೀಮನ್ಮಹಾ ಮಂಡಳೇಶ್ವರ ಜಗದೇಕಮಲ್ಲ ಪಾಂಡ್ಯದೇವರು ಆಳುತ್ತಿರುವಾಗ ತತ್ಪಾದಪದ್ಮೋಪಜೀವಿ ಸಮದಿಗತ ಪಂಚಮಹಾಶಬ್ದ ಮಹಾಮಂಡಳೇಶ್ವರ ಬನವಾಸಿಪುರವರಾಧೀಶ್ವರ ಮಯೂರವರ್ಮ್ಮ ಕದಂಬಾನ್ವಯಂ ಚೆನ್ನೆಮನ್ನೆಯಸೂರೆಕಾರ ಘಟ್ಟಿದೇವನಂಕಾಕರಂ ಶ್ರೀಮನ್ಮಹಾಮಂಡಳೇಶ್ವರ ಕೋಗಳಿಯ್ಯೆನೂರರ ಮನ್ನೆಯಂ ಮಾಚಿದೇವರಸರು ಆಳುತ್ತಿರುವಾಗ ಉಲುವತ್ತಿಯ ಸಿಂಗಗಾವುಂಡನ ಮಗ ಅಜ್ಜಗಾವುಂಡರು ಶ್ರೀ ರಾಮೇಶ್ವರ ದೇವರಿಗೆ ದಾನ ನೀಡಿದ ವಿವರವಿದೆ.[೨೯೯] ಈತನ ಬಗ್ಗೆ ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ. ಮತ್ತೆ ಅಧಿಕಾರಕ್ಕೆ ಬಂದ ನಾಚಿದೇವರಸ ಇವರ ಆಡಳಿತವನ್ನು ಸಂಪೂರ್ಣವಾಗಿ ದೂರವಿಟ್ಟಂತೆ ತೋರುತ್ತದೆ.

**ನಾಗತಿಯರಸ (ಕ್ರಿ.ಶ. ೧೧೭೧)**

ನಾಚಿದೇವರಸನ ಆಡಳಿತದ ನಂತರ ಕ್ರಿ.ಶ. ೧೧೬೯ರಿಂದ ೧೧೭೧ರವರೆಗೆ ಯಾರು ಆಳಿದರು ಎಂಬುದು ಸ್ಪಷ್ಟವಾಗುವುದಿಲ್ಲ. ಹರಿಹರದ ಶಾಸನ ಕೇತರಸನ ಮಗನಾದ ನಾಗತಿಯರಸನ ಆಡಳಿತವನ್ನು ವರ್ಣಿಸುತ್ತದೆ.

ಈ ವೇಳೆಗೆ ವಿಜಯಪಾಂಡ್ಯ ಸ್ವತಂತ್ರನಾಗಿ ಕಳಚೂರಿಗಳ ಆಡಳಿತದಿಂದ ದೂರವಿದ್ದ. ಈ ಅವಧಿಯಲ್ಲಿ ನಾಗತಿಯರಸ ಪಾಂಡ್ಯದೇವನಿಂದ ಕೋಗಳಿ-೫೦೦ರ ಜೊತೆಗೆ ಸಾಯಿರನಾಡ ಮನ್ನೆಯ ಅಧಿಕಾರವನ್ನು ಪಡೆದುಕೊಳ್ಳುತ್ತಾನೆ. ಕ್ರಿ.ಶ. ೧೧೭೧ರ ಹರಿಹರದ ಶಾಸನ,[೩೦೦] ನಾಗತಿಯರಸನ ಆಡಳಿತ ಜೊತೆಗೆ ಕದಂಬ ವಂಶದ ವರ್ಣನೆಯನ್ನು ನೀಡುತ್ತದೆ. ವಿಜಯಪಾಂಡ್ಯ ಆತನ ಪಾದಪದ್ಮೋಪಜೀವಿ ಪೆರ್ಮಾಡಿ ದಂಡನಾಥನ ವಿವರಣೆಯ ನಂತರ ಕದಂಬ ನಾಗತಿಯರಸನನ್ನು ತಿಳಿಸುತ್ತದೆ.

ಸಮಧಿಗತ ಪಂಚಮಹಾಶಬ್ದ ಮಹಾಮಂಡಳೇಶ್ವರ; ಬನವಾಸಿ ಪುರವರಾಧೀಶ್ವರ; ವಾನರಧ್ವಜ; ಸಿಂಹಲಾಂಛನ; ಪೆರ್ಮಟ್ಟಿತೂರ್ಯನಿರ್ಘೋಷವುಳ್ಳವನು; ಎಂಬತ್ತುನಾಲ್ಕು ನಗರಗಳಲ್ಲಿ ಸ್ಥಾಪಿಸಿದ ಶಿವವಿಷ್ಣುಮೂರ್ತಿಗಳುಳ್ಳವನು; ಲೋಕವಿಖ್ಯಾತ ಹದಿನೆಂಟು ಅಶ್ವಮೇಧಯಾಗಗಳ ದೀಕ್ಷೆಯುಳ್ಳವನು; ಹಿಮವತ್ ಪರ್ವತದ ವಿಸ್ತಾರವಾದ ಗಿರಿಶಿಖರದಲ್ಲಿ ತನ್ನ ವಂಶದ ಕೀರ್ತಿಯ ಪ್ರತಾಪವನ್ನು ಪ್ರಕಟಿಸುವ ಶಿಲಾಸ್ತಂಭವನ್ನು ನೆಟ್ಟವನು; ಮದಿಸಿದ ಆನೆಗಳನ್ನು ಬಂಧಿಸುವುದರಲ್ಲಿ ಸಂತೋಷಗೊಳ್ಳುವವನು; ಕದಂಬ ಚಕ್ರವರ್ತಿ ಮಯೂರವರ್ಮನ ವಂಶೋದ್ಭವ; ಉಚ್ಚಂಗಿದುರ್ಗದ ಆದಿನಾಥ; ಶ್ರೀಶಂಕರನಾರಾಯಣದೇವರ ಅನುಗ್ರಹವನ್ನು ಪಡೆದವನು ಎನಿಸಿದ ಕೇತರಸನಿಗೂ, ಅವನ ಮನಸ್ಸು ಮತ್ತು ಕಣ್ಣೆಂಬ ಚಕೋರ ಕನ್ನೈದಿಲೆಗಳಿಗೆ ಬೆಳುದಿಂಗಳಂತಿದ್ದ ಕನಕಬ್ಬೆಯರಸಿಗೂ-ಮದಲೇಖೆಯಿಂದ ಸೊಗಸುಗೊಂಡ ದೇವಗಜ (ಐರಾವತ)ಕ್ಕೆ ಸೊಕ್ಕು (ಮದ) ಏರುವಂತೆ, ಶತ್ರುಗಳೆಂಬ ಕಮಲವನ್ನು ಸೀಳುವುದರಲ್ಲಿ ಸಮರ್ಥನಾದ ಅವನ ಕೀರ್ತಿ ದಿಕ್ಕುಗಳನ್ನು ವ್ಯಾಪಿಸಿರಲು ನಾಗತಿಯರಸನು ಜನ್ಮವೆತ್ತಿದನು. ಅವನ ಗುಣದ ಮಹಿಮೆ ಹೇಗಿತ್ತೆಂದರೆ-

ಕೈಯಲ್ಲಿ ಹೊಳೆಯುತ್ತಿರುವ ಆಯುಧದ ತುದಿಯಿಂದ ಶತ್ರುರಾಜರ ಸಮೂಹವನ್ನು ನಾಶಪಡಿಸಿದವನು; ಪ್ರಸಿದ್ಧರಾದ ಸಮಸ್ತಕವಿಗಳಿಗೆ ಪ್ರಿಯವನ್ನುಂಟುಮಾಡುವವನು; ಕಮಲಗಳನ್ನು ಅರಳಿಸುವ, ಅಭಿವೃದ್ಧಿಗೆ ಬರುವ ಬಾಲಸೂರ್ಯ ನಾಗತಿಯರಸನೆಂದು ಈ ಲೋಕ ನಾಗತಿಯರಸನನ್ನು ಹೊಗಳುತ್ತದೆ. ನಾಗತಿಯರಸನ ಅತಿಶಯವಾದ ತೋಳಿನ ಬಲವೆಂಬ ಸರ್ಪ ಸಮಸ್ತ ವಿದ್ವಾಂಸರ ದಾರಿದ್ರ್ಯವೆಂಬ ಮಾಂಸವನ್ನೂ, ಶತ್ರುರಾಜರ ಮನೋಹರವಾದ ಭೂಮಂಡಲವನ್ನೂ ಯಾಚಿಸುತ್ತದೆ.(ಭೂವಲ್ಲಭನಾದ ನಾಗತಿಯರಸ ವಿದ್ವತ್ಪಕ್ಷಪಾತಿ, ದಾನಿ, ಶೂರ ಎಂದು ಅರ್ಥ.) ಅವನು ತಮ್ಮ ಹೋಲಿಕೆಗೆ ಮೀರಿದ ಪರಾಕ್ರಮ ಗುಣಗಳಿಂದ ಕೂಡಿದವನು ಶತ್ರುಗಳೆಂಬ ಪತಂಗಗಳ ಸಮೂಹದಿಂದ ದೀಪ್ತಗೊಂಡ ತೇಜೋಗ್ನಿಯೆನಿಸಿದವನೂ ಆದ ಹರಿಯರಸ. ಆ ನಾಗತಿಯರಸನಿಗೆ ಸೂರ್ಯನಿಗೆ ಕರ್ಣನು ಹುಟ್ಟಿದಂತೆ ಉನ್ನತ ದಾನಗುಣವುಳ್ಳವನೂ, ಸತ್ಯಕ್ಕೆ ಆಶ್ರಯಸ್ಥಾನನೂ, ವಿದ್ವಾಂಸರೊಡನೆ ಸರಸಿಯೂ ಆದ ಕೇತರಸನು ಹುಟ್ಟಿದನು. ಇದಲ್ಲದೆ ಆ ನಾಗತಿಯರಸನಿಗೆ ಮಾಚರಸನೆಂಬುವನು ಸಮಸ್ತ ಕಲೆಗಳಲ್ಲಿ

ಚತುರನೆನಿಸಿ ಮಗನಾಗಿ ಹುಟ್ಟಿ ಕೀರ್ತಿ ಪಡೆದನು. ಮಾಚರಸನಾದರೋ ರಾಜ ಶ್ರೇಷ್ಠನೆನಿಸಿ ಯಾಚಕರ ಸಮೂಹಕ್ಕೆ ಕರ್ಣನೆನಿಸಿದನು.

ಹೀಗೆ ಹೊಗಳಿಕೆಗೂ ಪ್ರಸಿದ್ಧಿಗೂ ಆಶ್ರಯಸ್ಥಾನವೂ ಸಾವಿರನಾಡಿನ ಮನ್ನೆಯನೂ ಆದ ನಾಗತಿಯರಸ, ಅವನ ಚಿಕ್ಕಪ್ಪ ಹಂಪರಸ, ಸತ್ತಿಯರ, ನಾಗತಿಯರಸನ ತಮ್ಮ ಹರಿಯರಸ ಮತ್ತು ಮಕ್ಕಳು ಕೇತರಸ ಮಾಚರಸರು ಸುಖಸಂಕಥಾವಿನೋದದಿಂದ ಇರುತ್ತ ಒಂದು ದಿವಸ ಆದಿರಾಜರ ಚರಿತ್ರೆಯಲ್ಲಿ ಉಕ್ತವಾದ ಧರ್ಮಸಂಬಂಧವಾದ ಕಥೆಗಳನ್ನು ಕಿವಿಗೊಟ್ಟು ಕೇಳಿದವರಾಗಿ, ಶತ್ರುರಾಜರ ವಿಜಯಲಕ್ಷ್ಮಿಯನ್ನು ಅಪಹರಿಸಲು ಉದ್ಯುಕ್ತರಾದವರಂತೆ ಧರ್ಮಾಸಕ್ತರಾಗಿ ಶ್ರೀಸ್ವಯಂಭುಶಂಕರನಾರಾಯಣದೇವರ ಪುರಾತನ ಅಗ್ರಹಾರವಾದ ಕೂಡಲೂರಿನ ತಮ್ಮ ನಿಬಂಧಿಯ (ದತ್ತಿಯ) ಕಾಣಿಕೆಯೊಡನೆ ಗ್ರಾಮದ ಸ್ವಾಮ್ಯವನ್ನು ವೃತ್ತಿಯಾಗಿ ಮತ್ತು ಆ ಊರಿನ ಉಪಗ್ರಾಮ(ಕಾಲ್ವಳ್ಳಿ)ವೆನಿಸಿದ ಬೆಳ್ವಡಿ(ಬೆಳ್ಳೂಡಿಯ)ಯ ತಮ್ಮ ನಿಬಂಧಿಯ (ದತ್ತಿಯ) ಕಾಣಿಕೆ ಸಹಿತ ಗ್ರಾಮದ ಸ್ವಾಮ್ಯವನ್ನು ವೃತ್ತಿಯಾಗಿ ಶ್ರೀಸ್ವಯಂಭು ಶಂಕರನಾರಾಯಣದೇವರ ದಿವ್ಯಪಾದಪದ್ಮಗಳಿಗೆ ಆಚಂದ್ರಾರ್ಕಪೂರ್ವಕವಾಗಿ ಕೊಟ್ಟರು.[೩೦೧]

ಉಚ್ಚಂಗಿ ಪಾಂಡ್ಯರು ಹೊಯ್ಸಳ ವೀರಬಲ್ಲಾಳನ ದಾಳಿಗೆ ಸಿಕ್ಕು ಅವರಿಗೆ ಶರಣಾಗಿ ನಂತರದಲ್ಲಿ ಅವರ ಸಾಮಂತರಾಗಿ ಉಳಿದುಕೊಳ್ಳುತ್ತಾರೆ. ಹಾಗಾಗಿ ಪಾಂಡ್ಯ ಅರಸರ ಸಾಮಂತರಾಗಿದ್ದ ಕದಂಬರು ಕೂಡ ಪಾಂಡ್ಯರಂತೆ ಹೊಯ್ಸಳರ ಸಾಮಂತರಾಗಿ ಮುಂದುವರಿದರು.

ನಾಗತಿಯರಸನ ನಂತರ ಆತನ ಸಹೋದರ ಹರಿಯರಸ ಹೊಯ್ಸಳ ಅರಸರ ಸಾಮಂತರಾಗಿ ಆಳಿರುವುದು ಬಾಗಳಿ ಶಾಸನದಿಂದ ತಿಳಿಯುತ್ತದೆ.[೩೦೨] ಕ್ರಿ.ಶ. ೧೨೨೧ರ ಕೊಟ್ಟೂರಿನ ಶಾಸನ ಕದಂಬ ವಂಶದ ಆಡಳಿತವನ್ನು ತಿಳಿಸುವ ಕೊನೆಯ ಶಾಸನವಾಗಿದೆ. ಹರಿಯರಸನ ಪುತ್ರ ಬಮ್ಮಿದೇವನ ಮಕ್ಕಳನ್ನು ತಿಳಿಸುತ್ತದೆ. ಹೊಯ್ಸಳ ವೀರನರಸಿಂಹನ ಆಳ್ವಿಕೆಯ ಕಾಲದಲ್ಲಿ ದಂಡನಾಯಕ ಕೇಶವ ದಂಡಾಧಿಪನು ಶಂಕರನಾರಾಯಣಭಟ್ಟ ಅಚ್ಚುತಭಟ್ಟ ಮತ್ತು ನಾಗ ಎಂಬುವವರಿಗೆ ಮಾವಿನಹಳ್ಳಿಯನ್ನು ದಾನ ಕೊಟ್ಟನು. ಈ ಧರ್ಮವನ್ನು ಕಾಪಾಡಲು ಮುಮ್ಮುರಿದಂಡ ಪಟ್ಟಣಸ್ವಾಮಿಗಳೊಂದಿಗೆ ಮಂಡಳಿಕ ಜಗದ್ದಳ ಬಮ್ಮಿದೇವನ ಸುಪುತ್ರರಾದ ಸೋವಿದೇವ ಘಟ್ಟಿದೇವರನ್ನು ನೇಮಕ ಮಾಡಿರುವುದನ್ನು ಉಲ್ಲೇಖಿಸುತ್ತದೆ.[೩೦೩] ಆನಂತರದಲ್ಲಿ ಈ ಪ್ರದೇಶದಲ್ಲಿ ಕದಂಬರ ಶಾಸನಗಳು ಕಾಣಿಸುವುದಿಲ್ಲ. ಹೊಯ್ಸಳ ಮತ್ತು ಸೇವುಣರ ರಾಜಕೀಯ ಸಂಘರ್ಷದಲ್ಲಿ ಕದಂಬರ ಆಡಳಿತ ಕಣ್ಮರೆಯಾಯಿತು.

ವಾಸುದೇವ ಬಡಿಗೇರ ಅವರು "ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ" ಭಾಗ-೧ರಲ್ಲಿ ಮೊದಲ ಬಾರಿಗೆ ಕೊಟ್ಟೂರಿನ ಕದಂಬರ ವಂಶಾವಳಿಯನ್ನು ನೀಡಿದ್ದಾರೆ.[೩೦೪]

ವಂಶಾವಳಿ ಇಂತಿದೆ.




ಕದಂಬರ ಶಾಸನಗಳನ್ನು ಪರಿಶೀಲಿಸಿದಾಗ ಅವರ ವಂಶಾವಳಿಯಲ್ಲಿ ಕೆಲವು ಅಂಶಗಳನ್ನು ಗುರುತಿಸಿ ಪರಿಷ್ಕೃತ ವಂಶಾವಳಿಯನ್ನು ಈ ಕೆಳಕಂಡಂತೆ ನೀಡಲಾಗಿದೆ. ಅಂಬಳಿ, ಕೊಟ್ಟೂರು, ಉಲುವತ್ತಿ ಮತ್ತು ಹರಿಹರದ ಶಾಸನಗಳು ಕದಂಬರ ವಂಶಾವಳಿಯ ಬಗ್ಗೆ ಬೆಳಕು ಚೆಲ್ಲುತ್ತವೆ.


ಮಾಳಯ್ಯ (ಕ್ರಿ.ಶ.೬೭೨)
ಆದಿತ್ಯವರ್ಮರಸ (ಕ್ರಿ.ಶ.೯೯೨)
ನಾಗಾತ್ಯರಸ (ಕ್ರಿ.ಶ.೧೦೫೩)
ಘಟ್ಟಿಯರಸ (ಕ್ರಿ.ಶ.೧೦೭೨-೧೧೨೧)
ನಾಚಿದೇವರಸ
(ಕ್ರಿ.ಶ.೧೧೨೧-೧೧೬೯)
ಚಿಬಿದೇವರಸ
(ಕ್ರಿ.ಶ.೧೧೪೩)
ಮಾಚಿದೇವರಸ
(ಕ್ರಿ.ಶ.೧೧೪೬)
ಘಟ್ಟಿದೇವರಸ
ವಿರೂಪಾಕ್ಷದೇವ
ಕೇತರಸ
ಹಂಪರಸ
ನಾಗತಿಯರಸ
(ಕ್ರಿ.ಶ.೧೧೮೧)
ಹರಿಯರಸ
(ಕ್ರಿ.ಶ.೧೨೧೨)
ಕೇತರಸ
ಮಾಚರಸ
ಬಂಮಿದೇವ
(ಕ್ರಿ.ಶ.೧೨೧೨)
ಸೋವಿದೇವ
(ಕ್ರಿ.ಶ.೧೨೨೧)
ಘಟ್ಟಿದೇವ
(ಕ್ರಿ.ಶ.೧೨೨೧)

ಪಾಂಡ್ಯರ ಅವಧಿಯಲ್ಲಿ ಮಹಾಮಂಡಳೇಶ್ವರರಾಗಿ ಅವರ ಆಳ್ವಿಕೆಯ ಅಂತ್ಯದವರೆಗೂ ಅವರ ನಿಷ್ಠಾವಂತ ಮಾಂಡಲೀಕರಾಗಿದ್ದರು. ಪಾಂಡ್ಯರ ನಂತರ ಹೊಯ್ಸಳರ ಕಾಲದಲ್ಲಿ ಅವರ ಸೈನ್ಯದಲ್ಲಿ ಸೇವೆ ಪಡೆದು ಕ್ರಿ.ಶ. ೧೨೨೧ರ ನಂತರ ಚರಿತ್ರೆಯ ಪುಟದಿಂದ ಕಣ್ಮರೆಯಾದರು. ದೀರ್ಘಕಾಲ ಕೋಗಳಿ ನಾಡಿನ ಆಡಳಿತದಲ್ಲಿ ಕಾಣಿಸಿಕೊಳ್ಳುವ ಕದಂಬರ ಈ ಶಾಖೆಯ ಕುರಿತು ಈವರೆಗೂ ಅಧ್ಯಯನ ನಡೆದಿಲ್ಲ. ಸೂಕ್ಷ್ಮ ನೆಲೆಯಲ್ಲಿ ಅಧ್ಯಯನ ಕೈಗೊಳ್ಳಲು ಇಲ್ಲಿ ಮುಕ್ತ ಅವಕಾಶವಿದೆ.

**ಗುತ್ತರು**

ಮಹಾಸಾಮಂತರಾಗಿ ಸೇವೆಯನ್ನು ಆರಂಭಿಸಿದ ಗುತ್ತರು ತಮ್ಮ ಶಾಸನಗಳಲ್ಲಿ ಚಂದ್ರಗುಪ್ತ ವಂಶೋದ್ಭವ, ವಿಕ್ರಮಾದಿತ್ಯವಂಶೋದ್ಭವ, ಗುಪ್ತವಂಶತ್ರಿನೇತ್ರ ಉಜ್ಜಯನೀಪುರವಾರಧೀಶ್ವರ, ಪಾಟಲೀಪುರಾವರಾಧೀಶ್ವರ ಎಂದು ಹೇಳಿಕೊಂಡಿದ್ದಾರೆ. ಇವರು ಗುಪ್ತ ವಂಶದ ಎರಡನೆಯ ಚಂದ್ರಗುಪ್ತನ ವಂಶದವರೆಂದೂ ಇವರು ಮೊದಲು ಉಜ್ಜನಿಯಲ್ಲಿ ಆಳುತ್ತಿದ್ದರೆಂದು ಕೆಲವು ವಿದ್ವಾಂಸರು ಹೇಳುತ್ತಾರೆ. ವಿಕ್ರಮ ಶಕೆಯನ್ನು ಸ್ಥಾಪಿಸಿದ ವಿಕ್ರಮಾದಿತ್ಯನೇ ಗುಪ್ತರ ಮೂಲ ಪುರುಷ. ಮೌರ್ಯ ದೊರೆ ಚಂದ್ರಗುಪ್ತನ ವಂಶಜರಾಗಿದ್ದಿರುವ ಸಾಧ್ಯತೆ ಇದೆ ಎಂದು ಕೆಲವರು ಹೇಳುತ್ತಾರೆ.[೨೦೫] ಕ್ರಿ.ಶ. ೧೧೨೪ರ ಸುಮಾರಿಗೆ ಮಲ್ಲದೇವರಸನ ಕಾಲಕ್ಕಾಗಲೇ ಗುತ್ತರು ಬಡ್ತಿ ಹೊಂದಿ ಚಕ್ರವರ್ತಿ ಚಾಳುಕ್ಯ ವಿಕ್ರಮಾದಿತ್ಯನಿಗೆ ಮಹಾಮಂಡಳೇಶ್ವರಾಗಿದ್ದರು. ಈಗಿನ ರಾಣೆಬೆನ್ನೂರು, ಕರಜಗಿ ಮುಂತಾದ ಪ್ರದೇಶಗಳನ್ನೊಳಗೊಂಡ ಗುತ್ತವೊಳಲು ಪ್ರಾಂತ್ಯಕ್ಕೆ ಗುತ್ತವೊಳಲು ರಾಜಧಾನಿಯಾಗಿತ್ತು. ಇಂದು 'ಗುತ್ತಲ'ವೆಂದು ಕರೆಯುತ್ತಾರೆ. ಇದು ತುಂಗಭದ್ರೆಯ ದಡದ ಮೇಲೆ ಹಾವೇರಿ ಜಿಲ್ಲೆಯಲ್ಲಿದೆ.

ಮಹಾಗುತ್ತ ಈ ಮನೆತನದ ಮೊದಲ ಅರಸ ಚಾಳುಕ್ಯರ ಸಾಮಂತನಾಗಿದ್ದ. ಚಾಳುಕ್ಯರ ಮಹಾಮಂಡಳೇಶ್ವರರಾಗಿದ್ದ ಬನವಾಸಿ ಕದಂಬ ವಂಶದ ಸಾಮಂತರಾಗಿ ಗುತ್ತರಸರು ಆರಂಭದಿಂದ ಆಡಳಿತ ನಡೆಸುತ್ತಿದ್ದರು. ಆನಂತರ ನೊಳಂಬ ಪಲ್ಲವರು ಕ್ರಿ.ಶ. ೧೦ನೇ ಶತಮಾನದಲ್ಲಿ ಪ್ರವರ್ಧಮಾನಕ್ಕೆ ಬಂದ ಮೇಲೆ ಅವರ ಅಧೀನಕ್ಕೆ ಬಂದರು. ನಂತರ ಈ ವಂಶದ ವಿಕ್ರಮಾದಿತ್ಯ ಉಚ್ಚಂಗಿ ಪಾಂಡ್ಯ ಅರಸರ ಸಾಮಂತನಾಗಿ ಮಸಳೆವಾಡ-೧೨ನ್ನು ಮನ್ನೆಯ ಮಂಡಳೇಶ್ವರನಾಗಿ ಆಳುತ್ತಿದ್ದ. ಇವರು ಪಾಂಡ್ಯ ವಂಶದ ಅರಸರೊಂದಿಗೆ ವೈವಾಹಿಕ ಸಂಬಂಧಗಳನ್ನು ಬೆಳೆಸಿಕೊಂಡು ಅವರ ಅಧೀನದಲ್ಲಿದ್ದರು. ಇವರು ರಾಯಪಾಂಡ್ಯನ ಕಾಲದಲ್ಲಿ ಅವರ ಸಾಮಂತರಾಗಿ ವೀರಪಾಂಡ್ಯನ ಕಾಲದಲ್ಲಿ ತಮ್ಮ ಸಂಬಂಧವನ್ನು ಮತ್ತಷ್ಟು ಗಟ್ಟಿಗೊಳಿಸಿಕೊಂಡು ವಿಜಯಪಾಂಡ್ಯನ ಕಾಲದವರೆಗೂ ಇವರೊಂದಿಗೆ ಇದ್ದು ಪಾಂಡ್ಯನಾಡಿನಲ್ಲಿ ದಾನದತ್ತಿಗಳನ್ನು ನೀಡಿದ್ದಾರೆ. ಗುತ್ತ ವಂಶದ ಇಮ್ಮಡಿ ವಿಕ್ರಮಾದಿತ್ಯ ಪಾಂಡ್ಯರ ಅಧೀನದಲ್ಲಿ ಮಹಾಮಂಡಳೇಶ್ವರನಾಗಿ ಆಡಳಿತ ನಡೆಸಿರುವುದು ಕುರುವತ್ತಿ ಮತ್ತು ಮಾನ್ಯರಮಸಲವಾಡ

ಶಾಸನದಿಂದ ತಿಳಿಯುತ್ತದೆ. ಗುತ್ತರು ಪಾಂಡ್ಯರ ಅವನತಿಯ ನಂತರ ಸೇವುಣರ ಸಾಮಂತರಾಗಿ ಕ್ರಿಶ. ೧೩೦೬ರವರೆಗೂ ಈ ಪ್ರದೇಶದಲ್ಲಿ ಆಳಿರುವ ಬಗ್ಗೆ ದಾಖಲೆಗಳು ಇವೆ.

**ಇಮ್ಮಡಿ ವಿಕ್ರಮಾದಿತ್ಯ ಕ್ರಿಶ. ೧೧೮೧-೮೩**

ಗುತ್ತ ವಂಶದ ಇಮ್ಮಡಿ ವಿಕ್ರಮಾದಿತ್ಯ ವಿಜಯಪಾಂಡ್ಯದೇವನ ಸಾಮಂತನಾಗಿ ಬೆಳಹುಗೆ-೭೦, ಬೆಣ್ಣೆವೂರು-೧೨, ಮೊಸಳೆವಾಡ-೧೨ ಪ್ರದೇಶಗಳನ್ನು ಆತನ ಪಾದಪದ್ಮೋಪಜೀವಿಯಾಗಿ ಮಹಾಮಂಡಳೇಶ್ವರ ಪದವಿಯಿಂದ ಆಳುತ್ತಿದ್ದನು. ಪಾಂಡ್ಯ ನಾಡಿನ ಎರಡು ಶಾಸನಗಳು ಈತನ ಆಡಳಿತದ ಬಗ್ಗೆ ಮಾಹಿತಿ ನೀಡುತ್ತವೆ. ಕ್ರಿಶ. ೧೧೮೧ರ ಕುರುವತ್ತಿ ಶಾಸನ.[೩೦೬] ಮಹಾಮಂಡಳೇಶ್ವರ ಉಜ್ಜನೀಪುರವರಾಧೀಶ್ವರ ಗುಪ್ತವಂಶಾನ್ವಯಧ್ಯುಮಣಿ ಸುಭಟಚೂಡಾಮಣಿ, ವಟಕಲ್ಪವೃಕ್ಷಲಾಂಛನ ವಿಜಯಸ್ತಂಭಂ ವೀರಾವಷ್ಟಂಭಂ ಪನ್ನಿರ್ವ್ವರಗಂಡಂ ಪಡೆಮೆಚ್ಚೆಗಂಡು ಮಂಡಳಿಕಭೈರವ ಶ್ರೀಮದ್ವಿಕ್ರಮಾದಿತ್ಯ ದೇವರ್ ಬೆಳಹುಗೆ-೭೦, ಬೆಣ್ಣೆವೂರು-೧೨ ಮನಾಳುತ್ತವಿರಲು ಮಾಹಮಂಡಳೇಶ್ವರ ವಿಜಯಪಾಂಡ್ಯರಸರ ಆಜ್ಞೆಯಂತೆ ಬೆಣ್ಣೆವೂರ ಬಾಚರಸ ಮತ್ತು ಕುರುವತ್ತಿಯ ಮಹಾಜನಗಳ ಎದುರಿನಲ್ಲಿ ಮೊದಲ ಹಿರಿಯ ವಿಕ್ರಮಾದಿತ್ಯನು ಕೊಟ್ಟ ವ್ರಿತ್ತಿಭೂಮಿ ಸಮೇತ ಆಹವಮಲ್ಲೇಶ್ವರ ದೇವರಿಗೆ ದಾನ ಬಿಡುತ್ತಾನೆ.

ಕ್ರಿಶ. ೧೧೮೩ರ ಮಾನ್ಯರಮಸಲವಾಡ ಶಾಸನ.[೩೦೭] ಮಹಾಮಂಡಳೇಶ್ವರ ವಿಜಯಪಾಂಡ್ಯ ದೇವರು ಕೋಗಳಿಯಯ್ನೂರಮಂ. ನೊಣಂಬವಾಡಿ ಮೂವತ್ತಿಚ್ಛಾಸಿರಮುಮಂ ಆಳುತ್ತಿರುವಾಗ ತತ್ಪಾದಪದ್ಮೋಪಜೀವಿ ಸ್ವಸ್ತಿ ಸಮಸ್ತಸುಜನಜನಸ್ತುತ್ಯನಹಿಹಮಾನ್ವಯ ಪ್ರಸೂತ ಸಹಸ್ರಬಾಹು ಪ್ರತಾಪನಯ್ಯನಾದಿತ್ಯ ಸಕಲವಾರವನಿತಾಜನ ಕುಚಳಸಕು ಮುದಕುವಳಿಯ ಬಾನ್ದವನಾಹವಧೀರ ಪರಬಳಸಾಧಕ ಒಪ್ಪನಂಕಕಾರ ಚತುಸ್ಸಮಯ ಸಮುದ್ಧರಣ ಶ್ರೀಮನ್ಮಮಹಾಮಂಡಳೇಶ್ವರ ಮೊಸಳೆವಾಡ-೧೨ರ ಮನ್ನೆಯ ವಿಕ್ರಮಾದಿತ್ಯರಸ ಆಳುತ್ತಿದ್ದನು ಎಂದು ಹೇಳುತ್ತದೆ.

ಆ ನಂತರದಲ್ಲಿ ಪಾಂಡ್ಯ ದೇವನು ಹೊಯ್ಸಳ ವೀರಬಲ್ಲಾಳನಿಗೆ ಸೋತಿದ್ದರಿಂದ ಪಾಂಡ್ಯರ ಆಡಳಿತ ಕ್ಷೀಣಿಸತೊಡಗಿದಾಗ ಗುತ್ತರು ಸೇವುಣರ ಸಾಮಂತರಾಗಿ ತಮ್ಮ ಆಡಳಿತ ಪ್ರದೇಶದಲ್ಲಿ ಮುಂದುವರಿದರು.

**ಬೆಳಗುತ್ತಿ ಸಿಂದರು**

ಬೆಳಗುತ್ತಿ ಇಂದಿನ ದಾವಣಗೆರೆ ಜಿಲ್ಲೆಯ ಹೊನ್ನಾಳಿ ತಾಲೂಕಿನಲ್ಲಿದೆ. ನಿಡುದೊಳ ಸಿಂದನ ವಂಶದ ಒಂದು ಶಾಖೆ ಈ ಪಟ್ಟಣದಿಂದ ಆಡಳಿತ ನಡೆಸಿದೆ. 'ಬೆಳಗುತ್ತಿ' ಸಿಂದರ ರಾಜಧಾನಿಯಾದ ಕಾಲ ಯಾವುದು ಎಂಬುದು ತಿಳಿಯುವುದಿಲ್ಲ. ಇವರು ರಾಷ್ಟ್ರಕೂಟರ ಕಾಲದಿಂದಲೂ ಮಾಂಡಲೀಕರಾಗಿಯೇ ಆಳಿದ್ದಾರೆ. ಇವರು ಪಣಿರಾಜ ವಂಶದವರು, ತಾವು ಮಾಳಚಿದೇವಿ ವರಪ್ರಸಾದರೆಂದು ಹೇಳಿಕೊಂಡಿದ್ದಾರೆ. ನೀಲಧ್ವಜದ ಮೇಲೆ ಹುಲಿಯ ಲಾಂಛನವಿತ್ತೆಂದು ತಿಳಿಯುತ್ತದೆ. ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ತಾಲೂಕಿನ ಗುಂಡೇರಿಯ

ಶಾಸನದಲ್ಲಿ ಹೇಳಿರುವ ಸನ್ನಿಯ ಸಿಂದನು ಬೆಳಗುತ್ತಿ ಅರಸರ ಮೂಲ ಪುರುಷನೆಂದು ದಿನಕರ ದೇಸಾಯಿ ಹೇಳುತ್ತಾರೆ.[೩೦೮] ಬೆಳಗುತ್ತಿ ಸಿಂದರು ಧಾರವಾಡ, ಶಿವಮೊಗ್ಗ, ಚಿತ್ರದುರ್ಗ, ಬಳ್ಳಾರಿ ಜಿಲ್ಲೆಯ ಸ್ವಲ್ಪ ಭಾಗವನ್ನು ಚಾಲುಕ್ಯರು ಮತ್ತು ಕಳಚೂರಿಗಳ ಅಧೀನದಲ್ಲಿ ಆಳುತ್ತಿದ್ದರು. ವಿಜಯಪಾಂಡ್ಯ ದೇವನ ಕಾಲದಲ್ಲಿ ಇವರು ಪಾಂಡ್ಯ ಅರಸರ ಸಾಮಂತರಾಗಿ ಎಡೆವಟ್ಟೆ ಎಪ್ಪತ್ತನು ಹಳವೂರಿನಿಂದ ಆಳುತ್ತಿದ್ದರು. ಪಾಂಡ್ಯರ ನಂತರ ಸೇವುಣರ ಸಾಮಂತರಾಗಿ ಕರ್ನಾಟಕದ ಚರಿತ್ರೆಯಲ್ಲಿ ಕಾಣಿಸಿಕೊಳ್ಳುತ್ತಾರೆ.

**ಈಶ್ವರದೇವ (ಕ್ರಿ.ಶ. ೧೧೫೫ - ೬೫)**

ಬೆಳಗುತ್ತಿ ಸಿಂದ ವಂಶದ ಇಮ್ಮಡಿ ಈಶ್ವರ ದೇವನು ವಿಜಯಪಾಂಡ್ಯನ ಅಧೀನದಲ್ಲಿ ಆಳುತ್ತಿರುವುದು ಹರಿಹರದ ಶಾಸನದಿಂದ ತಿಳಿಯುತ್ತದೆ. ಕ್ರಿ.ಶ. ೧೧೬೪ರ ಈ ಶಾಸನ.[೩೦೯] ಬೆಳಗುತ್ತಿ ಸಿಂದ ವಂಶದ ವಂಶಾವಳಿಯನ್ನು ಮತ್ತು ಇಮ್ಮಡಿ ಈಶ್ವರದೇವನ ವ್ಯಕ್ತಿತ್ವವನ್ನು ವರ್ಣಿಸುತ್ತದೆ. ಆರಂಭದಲ್ಲಿ ಯುದ್ಧವೀರನೂ ಆದ ವಿಜಯಪಾಂಡ್ಯ ಆ ಪಾಂಡ್ಯಮಂಡಲಾಧೀಶ್ವರನು ನೊಳಂಬವಾಡಿ ಮುವ್ವತ್ತೆರಡು ಸಾವಿರವನ್ನು ತನ್ನ ಸ್ವಧರ್ಮದಿಂದ ಅಂದರೆ ಕ್ಷೇತ್ರಿಯ ಧರ್ಮದಿಂದ ಕಾಪಾಡುತ್ತಿರಲು ಅವನಿಗೆ ವಿಧೇಯವಾದ ಸಿಂದ ವಂಶದ ಉದಯ ಹೇಗಾಯಿತೆಂದರೆ ಮುಂದೆ ಇಮ್ಮಡಿ ಈಶ್ವರದೇವನವರೆಗೆ ಸಿಂದ ವಂಶಾವಳಿಯನ್ನು ನೀಡಲಾಗಿದೆ.

ರಾಯ ಮತ್ತು ಬೂಚಲದೇವಿ ದಂಪತಿಗಳಿಗೆ ಕ್ಷೀರ ಸಮುದ್ರದಿಂದ ಚಂದ್ರ, ಉದಯ ಪರ್ವತದಿಂದ ಸೂರ್ಯ, ಮಹಾವಿಷ್ಣುನಿಂದ ಬ್ರಹ್ಮ ಜನ್ಮತಳೆದಂತೆ ಈ ಲಕ್ಷ್ಮೀಗೆ ಆವಾಸಸ್ಥಾನನಾದ ಈಶ್ವರ ನೃಪಾಳನು ಜನ್ಮವೆತ್ತಿದನು.

ಅತ್ಯಂತ ಪ್ರೀತಿಯಿಂದ ಶಂಕರನು ದೇವಗಂಗೆ, ಪಾರ್ವತಿ, ಗಣಪತಿಯರೊಡನೆ ಬಂದು ಈಶ್ವರದೇವನಿಗೆ ಆಯುಸ್ಸನ್ನೂ ಐಶ್ವರ್ಯವನ್ನೂ ಅನುಗ್ರಹಿಸಿದರು. ಬೇಸಿಗೆಯಲ್ಲಿ ಮೇಘದಂತಿರುವ, ಹಿಮಕಾಲದಲ್ಲಿ ದೇಹಕ್ಕೆ ಶಾಖವನ್ನು ಕೊಡುವ, ಎಲ್ಲ ಕಾಲಗಳಲ್ಲಿ ಸಮುದ್ರದಲ್ಲಿ ಮಲಗಿ, ಮೂರು ಋತುಗಳ ಕೆಲಸಗಳನ್ನು ಸಂತತವಾಗಿ ನೆರವೇರಿಸುವ ಕೌಸ್ತುಭಧಾರಿಯಾದ ವಿಷ್ಣು, ಈಶ್ವರದೇವನ ಇಷ್ಟಾರ್ಥಗಳನ್ನು ಕೈಗೂಡಿಸಲಿ, ಮರೆಹೊಕ್ಕವನಿಗೆ 'ನಿನ್ನನ್ನು ರಕ್ಷಿಸುತ್ತೇನೆ' ಎಂದು ಪ್ರೀತಿಯಿಂದ ಈಶ್ವರದೇವನು ಆಡುವ ಮಾತು ಅಮೃತಕ್ಕೆ ಸಮಾನವಾದುದು. 'ದಾನ ಕೊಡುತ್ತೇನೆ' ಎನ್ನುವ ಅವನ ಮಾತು ದೇವತಾವಚನದಂತೆ ಯಾಚಕನಿಗೆ ಪುಣ್ಯವೇ ಕಣ್ತೆರೆದುದೋ ಎಂಬಂತೆ ಒಪ್ಪುತ್ತದೆ. ಯುದ್ಧ ಮಾಡುತ್ತೇನೆಂದು ಬಂದ ಶತ್ರುಗಳ ಕುದುರೆಗಳಿಗೆ ಮೃತ್ಯು ಸಮನಾದ ಮಂತ್ರ ಅವನ ಹೆಸರು.

ಕಳೆದ ಮೂರು ಯುಗಗಳಲ್ಲಿ ಆಗಿ ಹೋದ ರಾಜರನ್ನು ಹೊಗಳುವುದು ಬೇಡ. ಏಕೆಂದರೆ ಆ ಯುಗಗಳು ಶ್ರೇಷ್ಠ ಗುಣಗಳನ್ನು ಹೊಂದಿರತಕ್ಕವು. ದೋಷಯುಕ್ತವಾದ ಈ ಕಲಿಕಾಲದಲ್ಲಿಯೂ ಕೂಡ ಮನುಮಾರ್ಗವರ್ತಿಯೂ ಮಹಾತ್ಮನೂ ಆದ ಈಶ್ವರ ಭೂಭುಜನನ್ನು

ಹೊಗಳತಕ್ಕದ್ದು. ಜಟ್ಟಿಗಳಿಗೆ ಶೂರನಾದ ಯೋಧ, ಶತ್ರುಸೈನ್ಯಕ್ಕೆ ಸಿಂಹಪ್ರಾಯನಾದವನು, ಬಿರುದುಳ್ಳವರಿಗೆ ಬಿರುದುಳ್ಳವನು ಎಂದು ಯುದ್ಧದಲ್ಲಿ ಮೊಳಗುವ ಈಶ್ವರನೃಪಾಲನ ಕಹಳೆಯ ಶಬ್ದ ಸಾರುತ್ತದೆ. ಈಶ್ವರನೃಪಾಲನ ಖಡ್ಗ ವೈರಿಗಳ ನೆತ್ತಿಯ ಗರಗಸ. 'ಸಿಂದಕುಲದ ದೊರೆಯಾದ ಈಶ್ವರ ಭೂಪನೇ, ನಿನ್ನ ಖಡ್ಗ ಶತ್ರುಗಳ ಪ್ರಾಣವಾಯುಗಳನ್ನು ಹೀರುತ್ತದೆ. ಇದೊಂದು ಆಶ್ಚರ್ಯ. ಭುಜಬಲದಲ್ಲಿ ಭೀಮ, ನೋಡಲು ಸುಂದರ, ಪ್ರೇಮಪ್ರದರ್ಶನದಲ್ಲಿ ಕಾಮ, ಸೂರ್ಯನಂತೆ ತೇಜಸ್ವಿ' - ಹೀಗೆಂದು ಈಶ್ವರ ನರೇಂದ್ರನು ಕೀರ್ತಿತನಾಗಿದ್ದಾನೆ. ಈಶ್ವರ ಭೂಪತಿ ಮಾಂಡಲೀಕರಲ್ಲಿ ಅಗ್ರಗಣ್ಯ. ಅಲ್ಲದೆ ಶತ್ರುರಾಜರ ನೆತ್ತಿಯ ಕೊಬ್ಬನ್ನು ಇಳಿಸುವವನು ಈತ. ಇವನ ಪಾದಪದ್ಮವನ್ನು ಕಂಡು ಶರಣು ಎಂದವರನ್ನು ರಕ್ಷಿಸುವವನು ಈಶ್ವರದೇವ. ಹೀಗಿರುವ ಚಂಡಪರಾಕ್ರಮಿಯಾದ ಇವನನ್ನು ಎದುರಿಸಿ ಬದುಕುವರಾರಿದ್ದಾರೆ? ಹಿಮಾಚಲಕ್ಕೆ ಮಿಗಿಲಾದ ಸ್ಥೈರ್ಯ, ಕಾಮಧೇನುವಿಗಿಂತ ಅತಿಶಯವಾದ ಔದಾರ್ಯ, ಪರಾಕ್ರಮದಲ್ಲಿ ಶ್ರೀರಾಮನಿಗಿಂತ ಹಿರಿಮೆ, ದಾನಗುಣದಲ್ಲಿ ಕರ್ಣನನ್ನು ಮೀರಿಸುವಿಕೆ ಇವು ಈಶ್ವರಭೂಪನಲ್ಲಿ ಚೆನ್ನಾಗಿ ಒಪ್ಪುತ್ತಿವೆ.

ಇಲ್ಲಿಂದ ಮುಂದೆ ಶಾಸನ ಇನ್ನೂ ಹೆಚ್ಚು ತ್ರುಟಿತವಾಗಿದ್ದು ಅಲ್ಲಹುಲಿ ಎಂಬ ವ್ಯಕ್ತಿಯ ಹೆಸರು ಬರುತ್ತದೆ. ಈತನಾರೆಂಬುದು ತಿಳಿದುಬರುವುದಿಲ್ಲ.

ಮನೋಹರವಾದ ತೋಟಗಳು, ಸುಂದರವಾದ ಉಪ್ಪರಿಗೆಗಳು ಇವುಗಳಿಂದ ಕೂಡಿ, ಬನವಾಸಿ ಮಂಡಲದಲ್ಲಿದ್ದ ಎಡೆವಟ್ಟೆ ಎಪ್ಪತ್ತರ ಹಳ್ಳವೂರಿನಲ್ಲಿ ಈಶ್ವರದೇವರಸನು ದುಷ್ಟ ನಿಗ್ರಹ ಶಿಷ್ಟ ಪರಿಪಾಲನೆ ಕ್ರಮವನ್ನು ಅನುಸರಿಸಿ, ಸುಖಸಂಕಥಾ ವಿನೋದದಿಂದ ರಾಜ್ಯಭಾರ ಮಾಡುತ್ತಿದ್ದು, ಶ್ರೀಮನ್ಮಹಾಮಂಡಲೇಶ್ವರ ಈಶ್ವರದೇವರಸನು ಶ್ರೀ ದಕ್ಷಿಣಗಂಗೆ, ಕಾಶಿ(ಯೆನಿಸಿದ ಹರಿಹರದ) ಸ್ವಯಂಭೂ ಶಂಕರನಾರಾಯಣದೇವರ ಶ್ರೀಕಾರ್ಯಕ್ಕೆ ನೈವೇದ್ಯಕ್ಕೆ ಷೋಡಶೋಪಚಾರಕ್ಕೆ ಭ್ರಾಂತಿ ಮುವತ್ತರ ತಮ್ಮ ಮನ್ನೆಯರ ನಿಬಂಧಿಯೊಳಗೆ ಊರಲೊಂದು ಹೊನ್ನನ್ನು ಉತ್ತರಾಯಣ ಸಂಕ್ರಾಂತಿ ಸೂರ್ಯಗ್ರಹಣ ವ್ಯತೀಪಾತದಂದು ಅಲ್ಲಿಯ ಸಮಸ್ತನೂರನಾಲ್ವರು ಮಹಾಜನರು ನಡೆಸುವುದರ ಸಲುವಾಗಿ ಅವರ ಕಾಲನ್ನು ತೊಳೆದು ಧಾರಾಪೂರ್ವಕವಾಗಿ ಮಾಡಿಕೊಟ್ಟನು.

ಈಶ್ವರದೇವನು ಪಟ್ಟಕ್ಕೆ ಬಂದದ್ದು ಕ್ರಿ.ಶ. ೧೧೫೫ ಎಂದು ಊಹಿಸಲಾಗಿದೆ. ಇವನು ಪಟ್ಟಕ್ಕೆ ಬಂದಾಗ ಎಡವಟ್ಟೆ ೭೦ ಮತ್ತು ಅದರ ಸುತ್ತಮುತ್ತಲ ಪ್ರದೇಶಗಳು ಇವನ ಆಳ್ವಿಕೆಗೆ ಒಳಪಟ್ಟಿದ್ದವು. ಆದರೆ ಮುಂದಿನ ಹತ್ತು ವರ್ಷಗಳಲ್ಲಿ ಎಂದರೆ ಕ್ರಿ.ಶ. ೧೧೬೫ರ ನಿಡನೇಗಿಲು ಶಾಸನದ ಪ್ರಕಾರ ಈಶ್ವರದೇವನ ರಾಜ್ಯ ಈ ಪ್ರದೇಶಗಳನ್ನು ಒಳಗೊಂಡಿತ್ತು. ಬನವಾಸಿ ನಾಡಿನಲ್ಲಿ ಮಾಸವೂರು ೧೨, ಎಡವಟ್ಟೆ ೭೦, ಬಳ್ಳಾವೆ ೭೦ ಮತ್ತು ನರಿಯಳಿಗೆ ೭೦; ಸಂತಲಿಗೆ ಸಾವಿರದಲ್ಲಿ ಮಲೆ ೭೦, ಮುಡುವರೆ ೩೦; ಮಂಡಲಿನಾಡಿನಲ್ಲಿ ಹೊಳಲೂರು, ಆಸಂದಿನಾಡಿನಲ್ಲಿ ಮನುಜವೊಳಲು ೧೨, ಕೊಳ್ಳಿಗ ೭೦, ಅರಕೆರೆ ೧೨, ಭ್ರಾಂತಿ ೩೦, ಕುಂದೂರು ೭೦, ಐವತ್ತಾರು ಬಾಡ (ಬಾಡ-ಗ್ರಾಮ), ಅತ್ತಿಗೇರೆ ೧೨, ಪಡುಗಲು ೧೨,

ಅರಬಳ ೭೦ ಕಳಿಕಟ್ಟೆ ೧೨. ಈ ಪ್ರದೇಶಗಳನ್ನು ಸಂಪಾದಿಸುವುದರಲ್ಲಿ ಈಶ್ವರದೇವನಿಗೆ ಮಾವನ ಸಹಾಯವಿತ್ತು. ಇಂಥ ಶೂರಸಾಮಂತನನ್ನು ಪಡೆದ ಅಧಿರಾಜನೇ ಪುಣ್ಯವಂತ!

ಬೆಳಗುತ್ತಿ ಸಿಂದರು ಪಾಂಡ್ಯರ ನಂತರ ಸೇವುಣರ ಜೊತೆ ಸ್ನೇಹ ಸಂಬಂಧಗಳನ್ನು ಬೆಳೆಸಲು ಪ್ರಯತ್ನಿಸಿದರು. ಆದರೆ ಅದು ಫಲ ನೀಡಲಿಲ್ಲ. ಕ್ರಿಶ. ೧೨೪೫-೪೭ರ ಸುಮಾರಿನಲ್ಲಿ ಸಿಂದ ವಂಶದ ಮಂಡಳಿಕ ಹರಬೀರದೇವನ ಮೇಲೆ ಸೇವುಣ ಅರಸರ ದಂಡನಾಯಕ ಶ್ರೀಧರನು ಬೆಳಗುತ್ತಿಗೆ ಮುತ್ತಿಗೆ ಹಾಕಿ ಹರಬೀರದೇವನನ್ನು ಹೊಡಿಸಿದನು. ಇಲ್ಲಿಂದ ಬೆಳಗುತ್ತಿ ಸಿಂದರ ಆಡಳಿತ ಕೊನೆಗೊಂಡಿತು.

**ಕುರುಗೋಡ ಸಿಂದರು**

ಬಳ್ಳಾರಿ ಜಿಲ್ಲೆಯ ಕುರುಗೋಡನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಡಳಿತ ನಡೆಸಿದ ಸಿಂದ ವಂಶದ ಒಂದು ಶಾಖೆಯನ್ನು ಇತಿಹಾಸಕಾರರು ಕುರುಗೋಡ ಸಿಂದರೆಂದು ಕರೆದಿದ್ದಾರೆ.

ಸಿಂದು ವಂಶದ ಈ ಶಾಖೆಯವರು ರಾಷ್ಟ್ರಕೂಟ, ಚಾಳುಕ್ಯ, ನೊಳಂಬ ಪಲ್ಲವ, ಕಳಚೂರಿ ಅರಸರಗೆ ಸಾಮಂತರಾಗಿದ್ದು ಉಚ್ಚಂಗಿಪಾಂಡ್ಯ ಮಹಾಮಂಡಳೇಶ್ವರರಿಗೂ ವಿಧೇಯರಾಗಿದ್ದರು. ವಿಕ್ರಮಾದಿತ್ಯನ ಕಾಲದಲ್ಲಿ ಸ್ವತಂತ್ರರಾಗಲು ಪ್ರಯತ್ನಿಸುತ್ತಿದ್ದ ಮಹಾಮಂಡಳೇಶ್ವರ ಹೊಯ್ಸಳರನ್ನು ಹತ್ತಿಕ್ಕಲು ಈ ವಂಶದ ಅರಸರನ್ನು ನೇಮಿಸಿದ್ದನು. ಇವರು ಪಾಂಡ್ಯರ ಸಾಮಂತರಾಗಿದ್ದು ಕಳಚೂರಿ ಬಿಜ್ಜಳನ ಕಾಲದಲ್ಲಿ ಆತನ ಸಾಮಂತರಾಗಿ ಪಾಂಡ್ಯ ಅರಸ ವಿಜಯಪಾಂಡ್ಯನ ಆಡಳಿತವನ್ನು ತಿರಸ್ಕರಿಸಿದ್ದರು.

ಕುರುಗೋಡು ಸಿಂದರು ಪಾಂಡ್ಯರ ಸಾಮಂತರಾಗಿದ್ದರು ಎಂಬುದನ್ನು ಬಳ್ಳಾರಿ ಜಿಲ್ಲೆಯ ಕೆಲವು ಶಾಸನಗಳು ಸ್ಪಷ್ಟಪಡಿಸುತ್ತವೆ. ಕ್ರಿಶ. ೧೧೦೨ರ ಸಿರುಗಪ್ಪ ಶಾಸನ.[೩೧೦] ಮಹಾಮಂಡಳೇಶ್ವರ ತ್ರಿಭುವನಮಲ್ಲ ಪಾಂಡ್ಯ ದೇವರು ಕುತ್ತುಂಬಿತ್ತಿ, ಭತ್ತಗಾಮೆ, ನೊಳಂಬವಾಡಿ-೩೨೦೦೦ವನ್ನು ಆಳುತ್ತಿರುವಾಗ ಬಲ್ಲಕುಂದೆಯ ಮನ್ನೆಯ ಬೀವರಸ, ಲೋಕರಸ, ತೆಕ್ಕೆಕಲ್ಲ ಚೊಕ್ಕರಸ, ಜಗ್ಗರಸನು ಸಮಸ್ತ ಪ್ರಜೆಗಾವುಂಡರುಗಳು ಇದ್ದು ಬಲ್ಲಕುಂದೆಮೂನೂರರಲ್ಲಿ ಮೂರಲೊಂದು ಪಣವನ್ನು ದಾನ ಬಿಡುತ್ತಾರೆ.

ಕ್ರಿಶ. ೧೧೨೯ರ ದೊಡ್ಡಬಾಣಗೆರೆ ಶಾಸನ.[೩೧೧] ಮಹಾಮಂಡಳೇಶ್ವರ ವೀರಪಾಂಡ್ಯ ದೇವ ಕಣೆಕಲ್ಲು-೩೦೦, ಸಿಂದವಾಡಿ-೩೦೦ ಮತ್ತು ನೊಳಂಬವಾಡಿ-೩೨೦೦೦ನ್ನು ಆಳುತ್ತಿರುವುದಾಗಿ ಹೇಳುತ್ತದೆ. ಹಿರೇಹಡಗಲಿ ಶಾಸನ.[೩೧೨] ಜಗದೇಕಮಲ್ಲ ವೀರಪಾಂಡ್ಯ ಕದಂಬಳಿಗೆ-೧೦೦೦, ಬಲ್ಲಕುಂದೆ-೩೦೦, ಕೋಗಳಿ-೫೦೦ನ್ನು ಆಳುತ್ತಿರುವುದಾಗಿ ತಿಳಿಸುತ್ತದೆ. ಈ ಶಾಸನಗಳ ಹಿನ್ನೆಲೆಯಲ್ಲಿ ಕುರುಗೋಡ ಸಿಂದರು ಉಚ್ಚಂಗಿ ಪಾಂಡ್ಯರ ಅಧೀನದಲ್ಲಿರುವುದು ಸ್ಪಷ್ಟವಾಗುತ್ತದೆ.

ಈ ವಂಶದ ಎರಡನೇ ರಾಜಮಲ್ಲ ವಿಜಯಪಾಂಡ್ಯನ ಆಡಳಿತದಿಂದ ದೂರಸರಿದು ಕಳಚೂರಿ ಅರಸರ ಸಾಮಂತನಾಗಿ ಉಳಿದುಕೊಂಡ ಆನೇ ಸೋಮೇಶ್ವರನ ಕಾಲಕ್ಕೆ ಪುನಃ

ಸಿಂದರು ಚಾಳುಕ್ಯ ಅರಸರ ಸಾಮಂತರಾಗಿ ಬಂದರು. ನಂತರದಲ್ಲಿ ಹೊಯ್ಸಳ ಮತ್ತು ಸೇವುಣರ ಮಧ್ಯೆ ಸಾಮ್ರಾಜ್ಯ ವಿಸ್ತರಣೆಗಾಗಿ ನಡೆದ ಕದನದಲ್ಲಿ ಸಿಕ್ಕಿಕೊಂಡ ಸಿಂದರು ಈ ನಾಡಿನ ಚರಿತ್ರೆಯಿಂದ ಕಣ್ಮರೆಯಾದರು.

**ಇತರೆ ಮಹಾಮಂಡಳೇಶ್ವರರು**

ಇವರು ಯಾವ ಪ್ರಾಚೀನ ರಾಜ ವಂಶಕ್ಕೆ ಸೇರಿದವರು ಎಂಬುದು ತಿಳಿದುಬರುವುದಿಲ್ಲ. ಹಾಗಾಗಿ ಅವರ ಚರಿತ್ರೆಯ ಮೂಲ ಅಸ್ಪಷ್ಟವಾಗಿರುತ್ತದೆ. ಇಲ್ಲಿ ಅರಸನ ಕೈಕೆಳಗೆ ಇದ್ದಂತಹ ಅಧಿಕಾರಿಗಳು ತಾವು ಹೊಂದಿದಂತ ಸ್ವಾಮಿನಿಷ್ಠೆ, ಅವರ ಶೌರ್ಯ, ಪರಾಕ್ರಮ ಗುಣಗಳಿಂದ ಕಾಣಿಕೆ ಅಥವಾ ಬಡ್ತಿ ರೂಪದಲ್ಲಿ ಮಹಾಮಂಡಳೇಶ್ವರರಾಗಿ ನೇಮಕವಾಗಿರುತ್ತಿದ್ದರು. ಆನಂತರ ಅರ್ಹತೆಯ ಆಧಾರದ ಮೇಲೆ ಈ ಹುದ್ದೆ ವಂಶಪಾರಂಪರ್ಯವಾಗಿ ಮುಂದುವರಿಯುತ್ತಿತ್ತು. ಇವರನ್ನು ರಾಜವಂಶೀಯರಲ್ಲದ ಮಹಾಮಂಡಳೇಶ್ವರರೆಂದು ಕರೆಯಬಹುದಾಗಿದೆ. ಉಚ್ಚಂಗಿ ಪಾಂಡ್ಯರ ಕಾಲದಲ್ಲಿ ಇಂತಹ ಮಂಡಳೇಶ್ವರರು ಅವರ ಅಧೀನದಲ್ಲಿ ಕೆಲವು ಭಾಗಗಳನ್ನು ಆಳುತ್ತಿದ್ದ ಅಂಶ ಅವರ ಶಾಸನಗಳಿಂದ ತಿಳಿಯುತ್ತದೆ.

**ಜಗದಳ ಹಂಪರಸ**

ವಿಜಯಪಾಂಡ್ಯದೇವನ ಕಾಲದಲ್ಲಿ ಜಗದಳ ಹಂಪರಸನು ಮಹಾಮಂಡಳೇಶ್ವರನಾಗಿ ಆಳುತ್ತಿದ್ದ. ಈತನ ವಂಶ ಮತ್ತು ಪೂರ್ವಿಕರ ಬಗ್ಗೆ ಯಾವುದೇ ಮಾಹಿತಿ ದೊರೆಯುವುದಿಲ್ಲ. ಕ್ರಿ.ಶ. ೧೧೭೧ರ ಮಾಡಲಗೇರಿ ಶಾಸನ.[೩೧೩] ತ್ರಿಭುವನಮಲ್ಲ ವಿಜಯಪಾಂಡ್ಯದೇವನು ನೊಳಂಬವಾಡಿ-೩೨೦೦೦ವನ್ನು ಉಚ್ಚಂಗಿ ನೆಲೆವೀಡಿನಿಂದ ಆಳುತ್ತಿರುವಾಗ ಶ್ರೀಮನ್ಮಹಾಮಂಡಳೇಶ್ವರ ಜಗದಳ ಹಂಪರಸರು ತಂಮಯರಸಿಯ ಕೆರೆಯ ಹೊಲದೊಳಗೆಯಾ ಮಾದನೇಶ್ವರ ದೇವರಿಗೆ ದಾನ ಬಿಟ್ಟಿರುವುದನ್ನು ತಿಳಿಸುತ್ತದೆ.

**ಗಂಗರಸ**

ಮಹಾಮಂಡಳೇಶ್ವರ ಗಂಗರಸರು ತ್ರಿಭುವನಮಲ್ಲ ಪಾಂಡ್ಯದೇವನ ಪಾದಪದ್ಮೋಪಜೀವಿಯಾಗಿ ಕುಕ್ಕವಾಡ-೩೦೦ನು ಆಳುತ್ತಿದ್ದ ತಲಕಾಡು ಗಂಗವಂಶದವನ್ನು ಮತ್ತು ಮದಗಜ ಲಾಂಛನವನ್ನು ಹೊಂದಿದ್ದನು. ಪ್ರಾಚೀನ ಗಂಗ ಮನೆತನದವರು ಪಾಂಡ್ಯರ ಕಾಲದವರೆಗೂ ಮುಂದುವರಿದಿರುವುದು ಇಲ್ಲಿ ತಿಳಿಯುತ್ತದೆ. ಕ್ರಿ.ಶ. ೧೧೨೬ರ ಗುಂಜಗನೂರು ಶಾಸನ.[೩೧೪]

ಯದ್ವಂಸಾಂಬರದ್ಯುಮಣಿಸುಭಟಚೂಡಾಮಣಿನಿಜಕುಳಕಮ | ಳೆಮಾರ್ತ್ರಂಡಂಪರಿಚ್ಛೇದಿ ಗಂಡಂರಾಜಿಗಚೋಳಮನೋಭಂಗಂಶ್ರೀಮತ್ರಿ | ಭುವನಮಲ್ಲಪಾಂಡ್ಯದೇವರು ನೊಳೆಂಬವಾಡಿ ಮೂವತ್ತಿರ್ಚ್ಚಾಸಿ | ರಮುಮಂಸುಕಶಂಕಥಾವಿನೋದದಿಂರಾಜ್ಯಂಗೆಯ್ಯುತ್ತಮಿ | ರೆಸ್ಯಸ್ತಿವಸ್ಮತೀತಳ ಖ್ಯಾತಂಗಂಗಾನ್ವಯಪ್ರಸೂತಂಕೊಂಗುಣಿವ | ರ್ಮ್ಮಂಧರ್ಮ್ಮಮಹಾರಾಜಾಧಿರಾಜವಂದಿ ಜನಕಲ್ಪಭೂಜ ಕೋಳಾ |ಲಪುರವರಾಧೀಶ್ವರಂ . . ಪಮಹೇಸ್ಯರಂನನ್ದಗಿರಿನಾಥ |ಮನುಜಮಾನ್ಧಾತನಂನಿಯ

ಗಂಗಜಿಯ ದುತ್ತ ರಂಗಮದಗಜೇಂ | ದ್ರಲಾಂಚನವಿನಿಯೋಗಕಾಂಡನ ಪದ್ಮಾವತೀಲಬ್ಧವರಸಪ್ರಸಾದ| ಮೃಗಲಾಂಚನವಿನಿಯೋಗಕಾಂಡನಪದ್ಮಾವತೀಲಬ್ಧವರಪ್ರಸಾದ| ಮೃಗಮದಾಮೋದ . . ಕುಳಕಮಳ ಮಾರ್ತ್ತಣ್ಣ ಆಣಿಯೊಡಗಂಡಕೋ | ದಂಡವಾರ್ತ್ಥರ. .. ರ್ತ್ತಸರಣಾಗತವಜ್ರಪಂಜಿರವೈರಿದಿಕ್ಕುಂಜಿ| ರಂಕ್ಷತ್ರಿಯ . . . ತ್ರಪರಾಂಗನಾಪುತ್ರಚತು ಸಮಯಮುದ್ಧರಣಂ. ಯಾಭರಣಂರಿವುಗಳ ಕಾಳಪಾಸನಯ್ಯನಚಂದ್ರಹಾಸ | ನಾಮಾದಿಪ್ರಸಸ್ತಿಸಹಿತಂ ಶ್ರೀಮಹಾಮಂಡಳೇಶ್ವರ್ರ ಗಂಗರಸರು| ತತ್ಪಾದಪದ್ಮೋಪಜೀವಿ ಗುಂಜಿಗನೂರಪ್ರಭುಗಾವುಂಡುಗಳು| ಕುಂಬಾರಬಮ್ಮಣಂ ತಲೆಪೊಸದಂನ ಮಣದ ವೀರಬ್ರತಮಕಯ್ಕೊ | ಣ್ಡುಪ್ರತಿಷ್ಟೆಯಂಮಾಡಿಸಿದ ಕುಂಭೇಸ್ವರದೇವರಂಗ ಭೋಗಕ್ಕಂನನ್ದಾದೀ| ಗೆಗಂನಿವೇದ್ಯಕ್ಕಂಸರ್ವ್ವಬಾದಾ ಪರಿಹಾರಮಾಗಿ ಅರಕೆಟೆಯಕೆಳಗೆ| ಬಿಟ್ಟಗೆಡ್ಡೆಕಮ್ಮವಿಂ ನೊಱು ೨೦೦|

ಗಂಗರಸನ ಈ ಶಾಸನವನ್ನು ಹೊರತುಪಡಿಸಿ ಈ ವಂಶಕ್ಕೆ ಸಂಬಂಧಿಸಿದಂತೆ ಯಾವುದೇ ದಾಖಲೆಗಳು ದೊರೆಯುವುದಿಲ್ಲ. ಗಂಗರಸನ ನಂತರ ಕುಕ್ಕವಾಡ-೩೦೦ರ ಒಡೆತನವನ್ನು ಯಾರು ವಹಿಸಿಕೊಂಡರೂ ಎಂಬುದು ಸ್ಪಷ್ಟವಾಗುವುದಿಲ್ಲ. ಈತ ತ್ರಿಭುವನಮಲ್ಲಪಾಂಡ್ಯ, ರಾಯಪಾಂಡ್ಯನ ಕಾಲದಲ್ಲಿ ಈ ನಾಡಿನ ಆಡಳಿತವನ್ನು ನೋಡಿಕೊಳ್ಳುತ್ತಿದ್ದ ಎಂಬುದು ಸ್ಪಷ್ಟವಾಗುತ್ತದೆ.

ಉಚ್ಚಂಗಿ ಪಾಂಡ್ಯರ ಅಧೀನದಲ್ಲಿ ರಾಜವಂಶೀಯ ಮಂಡಳೇಶ್ವರರು, ಮಹಾಮಂಡಳೇಶ್ವರರ ಮಹಾಮಂಡಳೇಶ್ವರರು ಹಾಗೂ ರಾಜವಂಶೀಯರಲ್ಲದ ಮಾಂಡಳಿಕರು ಪಾದಪದ್ಮೋಪಜೀವಿಗಳಾಗಿ ಇದ್ದ ಅಂಶ ಈ ಚರ್ಚೆಯಿಂದ ತಿಳಿಯುತ್ತದೆ. ಈ ಮಂಡಳೇಶ್ವರರ ಕೈಕೆಳಗೆ ಕೆಲವು ಸಾಮಂತ, ಮನ್ನೆಯರು ಮಹಾಸಾಮಂತರು ಪಾಂಡ್ಯರ ಅಧೀನದಲ್ಲಿದ್ದರು.

**ಸಾಮಂತರು / ಮನ್ನೆಯರು**

ಸಾಮಂತ ಎಂದರೆ ಒಬ್ಬರಾಜನಿಗೆ ಅಧೀನರಾಗಿರುವ ರಾಜ, ಮಂಡಳೇಶ್ವರ ಮೊದಲಾದವರು. ಈ ಅರ್ಥದಲ್ಲಿಯೇ ಸೇರಿಕೊಳ್ಳುತ್ತಾರೆ. ಮಹಾಸಾಮಂತ ಎಂಬುದರಲ್ಲಿ ಎರಡು ಪದಗಳಿವೆ. 'ಮಹಾ' ಮತ್ತು 'ಸಾಮಂತ' ಸಾಮಂತ ಎಂಬುದು ಸ್ವಾಮ್ಯವಂತ (ಒಡೆಯ, ಒಡೆತನ ಪಡೆದವ) ಸಾಮಂತ>ಸಾವಂತ ಎಂಬ ರೂಪಾಂತರ ಹೊಂದುತ್ತ ಬಂದಿದೆ. ಇದಕ್ಕೆ ಕೇವಲ ಗೌರವಾಚಿಯಾಗಿ "ಮಹಾ" ವಿಶೇಷಣ ಸೇರಿ ಮಹಾಸಾಮಂತ ಎಂಬ ಪದವಾಗಿದೆ. ಸಾಮಂತ ಮತ್ತು ಮಹಾಸಾಮಂತ ಶಬ್ಧದ ಅರ್ಥ ಒಂದೇ ಆಗಿರುವುದರಿಂದ ಇದು ಹುದ್ದೆಯನ್ನು ಸೂಚಿಸುವ ಪದವಾಗಿದೆ.[೨೧೫]

ಮಹಾಮಂಡಳೇಶ್ವರರು ದೊಡ್ಡ ಅಥವಾ ಚಿಕ್ಕ ಆಡಳಿತ ವಿಭಾಗಗಳ ಒಡೆಯರಾಗಿದ್ದರೆ ಅವರ ಕೈಕೆಳಗೆ ಮಹಾಸಾಮಂತ ಅಥವಾ ಸಾಮಂತ ಅರಸರು ಆಳುತ್ತಿದ್ದರು. ಇವರ ಅಧಿಕಾರ ವ್ಯಾಪ್ತಿ ಮಹಾಮಂಡಳೇಶ್ವರ, ಮಹಾಪ್ರಚಂಡ ದಂಡನಾಯಕರ ಹುದ್ದೆಗಿಂತ ಕಡಿಮೆಯಾಗಿತ್ತು. ಅರಸನ ಗೌರವಕ್ಕೆ ಪತ್ರರಾದವರು ಮಹಾಮಂಡಳೇಶ್ವರ ಪದವಿಗೆ ಬಡ್ತಿ

ಹೊಂದುವ ಅವಕಾಶ ಸಾಮಂತರಿಗಿತ್ತು. ಮಹಾಸಾಮಂತರನು ಶಾಸನಗಳಲ್ಲಿ ಮನ್ನೆಯರೆಂದು ಕರೆಯಲಾಗಿದೆ. 'ಮನ್ನೆಯ' ಎಂದರೆ ಗೌರವಕ್ಕೆ ಪಾತ್ರನಾದವನು ಮನ್ನಣೆಗೆ ಯೋಗ್ಯನಾದವನು ಎಂದು ಅರ್ಥ. ಚಕ್ರವರ್ತಿಯಿಂದಲೋ ಅಥವಾ ಮಹಾಮಂಡಳೇಶ್ವರನಿಂದಲೋ ಮಾನ್ಯತೆಯನ್ನು ಗಳಿಸಿಕೊಂಡು ಆಳುತ್ತಿದ್ದವರನ್ನು 'ಮನ್ನೆಯ'ರೆಂದು ಕರೆಯುತ್ತಿರಬೇಕು. ಇವರನ್ನು ನೇಮಿಸುವ ಅಧಿಕಾರ ಚಕ್ರವರ್ತಿಗೆ ಮೀಸಲಾಗಿತ್ತು.[೩೧೬] ಹೂವಿನಹಡಗಲಿಯ ಶಾಸನ ಮಹಾಸಾಮಂತ ಮನ್ನೆಯಂ ಘಟ್ಟರಸರು ಎಂದು, ಚನ್ನಗಿರಿ ಶಾಸನ ಮಹಾಸಾಮಂತ ಸೋಮರಸನು ಬಿಳಿಚೆ-೭೦ರಲ್ಲಿ ಮನ್ನೆಯವನ್ನು ಸಧರ್ಮದಿಂದ ಪ್ರತಿಪಾಳಿಸುತ್ತಿದ್ದನೆಂದು ಹಿರೆತೊಗಲೇರಿಯ ಶಾಸನ ಸಾಸಿರನಾಡ ಮನ್ನೆಯ ಅಣ್ಣಮರಸ, ೨೪ ಬಾಡದ ಮನ್ನೆಯ ಮಾಕರಸ ಎಂಬ ಉಲ್ಲೇಖಗಳು ಪಾಂಡ್ಯರ ಶಾಸನಗಳಲ್ಲಿ ಕಂಡುಬರುತ್ತವೆ.

ಈ ಮೇಲಿನ ಆಧಾರಗಳಿಂದ 'ಮನ್ನೆಯ' ಎಂಬ ಶಬ್ದವು ಮಹಾಸಾಮಂತರಿಗೆ ಅನ್ವಯಿಸುತ್ತಿದ್ದುದು ಸ್ಪಷ್ಟವಾಗುತ್ತದೆ. ಇವರು ಮಹಾಮಂಡಳೇಶ್ವರ ಪದವಿಯನ್ನು ಪಡೆದುಕೊಂಡ ನಂತರದಲ್ಲೂ ಮೊದಲು ರೂಢಿಯಲ್ಲಿದ್ದ ಹೆಸರನ್ನು ತಪ್ಪಿಸಲು ಬರುವುದಿಲ್ಲ. ಹಾಗಾಗಿ ಅಂಥವರನ್ನು 'ಮನ್ನೆಯ'ರೆಂದು ಶಾಸನಗಳಲ್ಲಿ ಕರೆದಿದ್ದಾರೆ.

ಜೆ.ಎಂ. ನಾಗಯ್ಯ ಅವರ ಸಾಮಂತ, ಮಹಾಸಾಮಂತರನು ಎರಡು ಪ್ರಕಾರದಲ್ಲಿ ವಿಂಗಡಿಸಿದ್ದಾರೆ.

೧. ಆಳುವ ಸಾಮಂತರು ಇದರಲ್ಲಿ ಎರಡು ಪ್ರಕಾರ

ಎ. ರಾಜವಂಶೀಯ ಸಾಮಂತರು

ಬಿ. ಇತರೆ ಸಾಮಂತರು

೨. ಸುಂಕದ ಸಾಮಂತರು

ಆಳುವ ಸಾಮಂತರು ಆಡಳಿತ ವಿಭಾಗದಲ್ಲಿ ವಂಶಪಾರಂಪರಿಕವಾಗಿ ಆಡಳಿತ ನಡೆಸುತ್ತಿದ್ದರು. ವೀರರಾದ ಇವರು ತಮ್ಮದೇ ಆದ ಸೈನ್ಯ ಮತ್ತು ಆಡಳಿತವನ್ನು ಹೊಂದಿದ್ದು ರಾಜ ಲಾಂಛನ ಮೊದಲಾದ ಚಿಹ್ನೆಗಳನ್ನು ಧರಿಸಿರುತ್ತಿದ್ದರು. ಎರಡನೇ ವರ್ಗದ ಸುಂಕದ ಸಾಮಂತ ಅರಸರು, ಮಂಡಳೇಶ್ವರರು, ಸಾಮಂತರ ಕೈಕೆಳಗೆ ಸುಂಕ ಸಂಗ್ರಹಿಸುವ ಅಧಿಕಾರಿಗಳಾಗಿ ಸೇವೆ ಸಲ್ಲಿಸುತ್ತಿದ್ದರು. ಇವರ ಸೇವೆ ಶಾಶ್ವತ ರೂಪವನ್ನು ಹೊಂದಿರಲಿಲ್ಲ. ಸುಂಕ ಸಂಗ್ರಹದ ಒಂದು ಭಾಗ ಇವರ ವೇತನವಾಗಿ ಬಳಕೆಯಾಗುತ್ತಿತ್ತು. ಉಚ್ಚಂಗಿ ಪಾಂಡ್ಯರ ಶಾಸನದಲ್ಲಿ ಅವರ ಅಧೀನರಾಗಿ ಸೇವೆ ಸಲ್ಲಿಸಿದ ಸಾಮಂತ/ಮನ್ನೆಯರ ಪರಿಚಯವನ್ನು ಇಲ್ಲಿ ಮಾಡಲಾಗಿದೆ.

**ಉದಯಾದಿತ್ಯ**

ತ್ರಿಭುವನಮಲ್ಲಪಾಂಡ್ಯ ನೊಳಂಬವಾಡಿ-೩೨೦೦೦ವನ್ನು ಆಳುತ್ತಿರುವಾಗ ಮಹಾಸಾಮಂತ ಉದಯಾದಿತ್ಯ ಅರಹಟ-೧೨, ಜಗಳವುರು-೭೦, ಹಡವಗೆರೆ-೫೦೦ ಆಡಳಿತ ವಿಭಾಗಗಳನ್ನು

ಬೆಮ್ಮಚನೂರು ನೆಲೆವೀಡಿನಿಂದ ಪಾದಪದ್ಮೋಪಜೀವಿಯಾಗಿ ಆಳುತ್ತಿದ್ದನು. ಸುವರ್ಣಗರುಡುಧ್ವಜ ಮತ್ತು ಮೂರ್ತಿ ಮಕರಧ್ವಜವನ್ನು ಹೊಂದಿದ್ದನು. ಚಿತ್ರದುರ್ಗ ಮತ್ತು ಗಾರೇಹಟ್ಟಿ ಶಾಸನಗಳು ಉದಯಾದಿತ್ಯನಾಯಕನ ಬಗ್ಗೆ ಮಾಹಿತಿ ನೀಡುತ್ತವೆ. ಈತನ ಮರಣದ ನಂತರ ಮಗ ಕಾಮಯ್ಯಾನಾಯಕ ಪಾಂಡ್ಯ ಅರಸರ ಅಧೀನತೆಯಲ್ಲಿ ಈ ಪ್ರದೇಶದ ಆಡಳಿತವನ್ನು ಮುಂದುವರಿಸಿದನು.

ಕ್ರಿಶ. ೧೧೨೪ರ ಗಾರೇಹಟ್ಟಿ ಶಾಸನ.[೪೯] ಮಹಾಮಂಡಳೇಶ್ವರ ತ್ರಿಭುವನಮಲ್ಲ ಪಾಂಡ್ಯದೇವರು ನೊಳಂಬವಾಡಿ ಮೂವತ್ತಿರ್ಚ್ಛಾಸಿರಮುಮಂದುಷ್ಟನಿಗ್ರಹದಿಂದ ಆಳುತ್ತಿರುವಾಗ ಸಮದಿಗತ ಪಂಚ ಮಹಾಸಬ್ಧ ಮಹಾಸಾಮಂತ –

ವಿಜೆಯಲಕ್ಷ್ಮೀಕಾನ್ತಂ| ನಹಿತಕ್ರಿತಾನ್ತಂ| ರಿಪುಸುದತೀವದನಕುವಳೆಯತೀಬ್ರಕಿರಣಂವಿದಿತಕೀರ್ತ್ಯಂಗನಾ
ಭರಣಂ
ಕೋದಂಡಖಾಂಡಾಸಿಮಂಡಿತದೋರ್ದ್ದಂಡಪ್ರಚಂಡಂಕಲಹದೊಳತಿಕ್ರಮಿಸಿಮಲೆದಾನ್ತರಿಪುಕಾಳದಣ್ಡಂ |
ಮುನಿವರ ಗಣ್ಡಂ | ದಕ್ಷಿ
ಣದಿಶಾವಿಷಯಗಡಿಯಂಕಮಲ್ಲಂ| ವಿಬುಧಸಂದೋಹಕ್ಕೆನಲ್ಲಂ| ಪರಬಳಫಣಿವೈನತೇಯಂ |
ಸೌಚಗಾಂಗೆಯಂ | ಕಾ
ಯ್ಯರಭೀಮಂ| ಸಂಗ್ರಾಮರಾಮ| ಅಳಿಂಗಬಳಂಜಿಗಂ | ನೊಳಂಬನಗರುಡಂ |
ಮಾರ್ತ್ತಣ್ಡದೇವವಾದಾರಾಧಕಂ ಪರಬಳಸಾಧ
ಕಂ| ಸುವರ್ಣ್ನಗರುಡಧ್ಯಜಂ| ಮೂರ್ತ್ತಿಮಕರಧ್ಯಜಂ| ಚತುರಪರಾಯಣಂ ಕೀರ್ತ್ತಿಪರಾಯಣಂ|
ರಣಮೂರ್ಕ್ಷಕು
ಳಪ್ರದೀಪಂ| ವಿಷಮಪ್ರತಾಪಂ| ಶ್ರೀಚೋಳೇಶ್ವರದೇವಲಬ್ಧವರಪ್ರಸಾದಂನಾಮಾದಿಸಮಸ್ತಪ್ರಸಸ್ತಿ ಸಹಿತನ
ಪ್ಪಶ್ರೀಮನ್ಮಹಾಸಾಮನ್ತಂಉತ್ತುದರ್ಯಾದಿತ್ಯನುಭುಜಬಳಪ್ರತಾಪಮೆಂ(ತೆಂ)ದಡೆ ||ಕಂದ||
ಶ್ರೀಮಂನಿಜಕುಳಕಮಳಾದಿ
ತ್ಯಪ್ರತಾಪನಹಿತಬಲಕೆಕ್ರಿತಾನ್ತಂಸಾಮಾನ್ಯನೆಸಾಮನ್ತಸಿಖಾಮಣಿಸಂಗ್ರಾಮಭೀಮನುದಯಾದಿತ್ಯಂ||
ವೃತ್ತ || ವನಿತಾನೀಕದಮುಂದೆಪೊಟ್ಟಳಿಸಿಗೇಣಂಕಿರ್ತ್ತುತೂಟ್ಟಿಟ್ಟಗಿಜೆ)ನಲೀಡಾಡಿಕುರುಳ್ಚಿಕುಪ್ಪುಳಿಸಿಮುಂತುಂ
ಬಂತುಮಂನೋಡಿಭೋಂಕೆನೆಸಿಂಹಧ್ವನಿಯಿಂದೆಗರ್ಜ್ಜಿಪಸಭಾಸೂರರ್ಭ್ಯರಂಗೆಯ್ದುಉದಯಾದಿತ್ಯಂಗೆಬ
ಯಲ್ಗೆವರ್ಪ್ಪರೊಳರೇವಿಶ್ವಂಭರಾಚಕ್ರದೊಳ್ || ಕದನದೊಳಾನ್ತರಾತಿಬಲವಂತವಿಪಲ್ಲಿಗಿವಂಕ್ರಿತಾಂತನೆಂಬು
ದುನರನೆಂಬುದಕಂದಕಪೀಶ್ವರನೆಂಬುದುಕಾಳಸೇನನೆಂಬುದುನೆಱ್ದುರ್ದ್ದವೀರರೊಳಗಗ್ಗದಸೂದ್ರುಕನೀತನೆಂ
ಬುದಕಣವೀರನೆಂಬುದುಧರಾತಳದೊಳ್‌ಕಲಿಯೊದ್ದಿಗಾಂಕನ ||ವಚನ|| ಇನ್ತುಜನಂಪೊಗಳೆಪೊಗಜ್ತೆಗಂನೆ
ಗರ್ತ್ತಗಂತಾನೆನೆಲೆಯಾಗಿಶ್ರೀಮನ್ಮಹಾಸಾಮಸ್ತನುದಯಾದಿತ್ಯಂಅರಹಟಹನ್ನೆರಡುಮಂಜಗಳವುರ
ವೆಳ್ಪತ್ತುಮಂಹಡುವಗರೆಐನೂಱುಮಂದುಷ್ಟನಿಗ್ರಹಶಿಷ್ಟಪ್ರತಿಪಾಳದಿಂದಾಳ್ದುಬೆಮ್ಮಚನೂರೊ
ಳ್‌ಸುಖಸಂಕಥಾವಿನೋದದಿಂರಾಜ್ಯಂಗೆಯ್ಯುತ್ತಮಿರ್ದ್ದುಧರ್ಮ್ಮಕಥಾಪ್ರಸಂಗದಿಂಲಿಂಗಪ್ರತಿಷ್ಠೆಯ(ಮ)
ಮಹಾತ್ಮ್ಯ ಮಂ
ಕೇಳ್ದುಸದುಭಕ್ತಿಯಿಂಲಿಂಗಪ್ರತಿಷ್ಠೆಗೆಯ್ದು ಉತ್ತುಂಗಪ್ರಾಸಾದಮಪ್ಪಕಲ್ಲದೇಗುಲಮಾಡಿಸಿಶ್ರೀ
ಚೋಳೇಶ್ವರದೇವರಂಗಭೋಗಕ್ಕಂಸ್ನಾನನಿವೇದ್ಯಕ್ಕಂಚೈತ್ರಪವಿತ್ರಕ್ಕಂಪಾತ್ರರಾವುಳಕ್ಕಂತಪೋಧನರಾಹಾರ
ದಾನಕ್ಕಂಖಂಡಸ್ಫುಟಿತಜೀರ್ಣ್ನೋದ್ಧಾರಕ್ಕಂಪುರಾಣಮಂಪೇಳ್ಯಬ್ರಾಹ್ಮರ್ಣ್ಗಂವಿದ್ಯಾದಾನಕ್ಕಮೆಂನ್ದುಸ್ಯ

ಸ್ತಿಶ್ರೀಮಚ್ಚಾಳ್ಕ್ಯವಿಕ್ರಮಕಾಲದ ೪ನೆಯಸೋಭಕ್ರಿತುಸಂವತ್ಸರದವೈಶಾಖಸುದ್ಧ ೨ | ಬೃಹಸ್ಪತಿವಾರಸಂಕ್ರಾನ್ತಿವ್ಯತೀಪಾತಂಕೂಡಿದಂದುಸ್ವಸ್ತಿಯಮನಿಯಮಜಪಸ ಮಾಧಿಶೀಲಗುಣಸಂಪನ್ನರುಂ |ಸೌಚಾಂಜನಯರುಂ |ಮನುಮಾರ್ಗ್ಗಚರಿತರುಂ |ಲೋಕವಿಖ್ಯಾತರುಂ| ಮಪ್ಪಶ್ರೀಮತ್‌ರುದ್ರಶಕ್ತಿಪಣ್ಡಿತರಕಾಲಂಕರ್ಚ್ಚಿಧಾರಾಪೂರ್ವ್ವಕಂಮಾಡಿಹಡುವಗರೆಐನೂಱ ಜೊಳಗಣಕಂಪಣಂಚೂಳುಂಗಲ್ಲುಎಳ್ಪತ್ತುಱಬಳಿಯಬಾಡಂನಿಡುಗುಱುತೆಒನ್ದುಮಂಧಾರಾ ಪೂರ್ವ್ವಕಂಮಾಡಿನಿಧಿನಿಧಾನನಿಕ್ಷೇಪಂಸಹಸ್ರದಣ್ಡದೋಷಂಮೊದಲಾಗೆಸರ್ವ್ವಾಯಸುದ್ಧಿಯಾಗಿ ಬಿಟ್ಟರು.

ಚಿತ್ರದುರ್ಗದ ಶಾಸನ,[೩೯] ಪಾಂಡ್ಯದೇವನ ಕಾಲದಲ್ಲಿ ಉದಯಾದಿತ್ಯನಾಯಕರು ಬೆಮ್ಮತ್ತನೂರ ನೆಲೆವೀಡಿನಲ್ಲಿ ಆಳುತ್ತಿರುವಾಗ ಅವರ ಸುಪುತ್ರ ಮಾಚದೇವನಂ| ಕಾಮಯ್ಯನಾಯಕ ಚೋಳಯ್ಯ ನಾಯಕರು ಸಹಿತಮಿರ್ದ್ದು ಹಿಡುಂಬೇಶ್ವರ ದೇವರ ನಂದಾದೀಪಕ್ಕೆ ಧಾರಾಪೂರ್ವಕಂ ಮಾಡಿ ಭೂಧಾನ ಮಾಡಿದ ವಿವರವಿದೆ. ಉದಯಾದಿತ್ಯನಾಯಕ ತ್ರಿಭುವನಮಲ್ಲ ಪಾಂಡ್ಯ ಹಾಗೂ ರಾಯಪಾಂಡ್ಯನ ಸಾಮಂತನಾಗಿ ಆಳುತ್ತಿರುವಾಗ ಮಗ ಕಾಮಯ್ಯನಾಯಕ ಆಡಳಿತದಲ್ಲಿ ಜೊತೆಯಾಗಿದ್ದ. ಹಾಗಾಗಿ ತಂದೆಯ ಮರಣದ ನಂತರ ಕಾಮಯ್ಯ ನಾಯಕ ಈ ವಿಭಾಗದ ಸಾಮಂತನಾಗಿ ಮುಂದುವರಿದ.

**ಕಾಮಯ್ಯನಾಯಕ**

ತಂದೆ ಉದಯಾದಿತ್ಯನಂತೆ ಶೂರ, ಪರಾಕ್ರಮಿಯಾದ ಕಾಮಯ್ಯನಾಯಕ ಪಾಂಡ್ಯ ಅರಸರಾದ ವೀರಪಾಂಡ್ಯ ಮತ್ತು ವಿಜಯಪಾಂಡ್ಯನ ಸಾಮಂತನಾಗಿ ತಂದೆಯ ಆಡಳಿತವನ್ನು ಮುಂದುವರಿಸಿದನು. ಚಿತ್ರದುರ್ಗ, ಗಾರೇಹಟ್ಟಿ ಮತ್ತು ಮದಕೆರೆಪುರ ಶಾಸನಗಳು ಕಾಮಯ್ಯನಾಯಕನ ಆಡಳಿತ ಮತ್ತು ಶೌರ್ಯ ಗುಣಗಳನ್ನು ವಿಶೇಷವಾಗಿ ವರ್ಣಿಸುತ್ತವೆ. ಕಾಮಯ್ಯನಾಯಕ ತಂದೆಯ ಆಡಳಿತ ಅವಧಿಯಲ್ಲಿಯೇ ಪಾಂಡ್ಯ ಅರಸರ ಸೇವೆಯಲ್ಲಿರುವುದು ಶಾಸನಗಳಿಂದ ತಿಳಿಯುತ್ತದೆ. ಮದಕೆರೆಪುರಶಾಸನ.[೩೯] ತ್ರಿಭುವನಮಲ್ಲಪಾಂಡ್ಯ ಆಳುತ್ತಿರುವಾಗ ಉದಯಾದಿತ್ಯನಾಯಕ ಪುತ್ರ, ಶ್ರೀಮನ್ಮಹಾಸಾಮಸ್ತ ಬೆಮ್ಮತ್ತನೂರ ಕಾಮಯ್ಯನಾಯಕ ಸೋಮೇಶ್ವರದೇವರ ದೇವಾಲ್ಯ ಮನುತ್ತುಂಗ ಪ್ರಾಸಾದ ಶಿಖರಕಳಸಂಬರಂಕಲುವೆಸನಿರ್ಬ್ಬಾಣವಾಗಿ ಮಾಡಿಸಿ ದೇವರಿಗೆ ದಾನ ನೀಡಿದ ಬಗ್ಗೆ ತಿಳಿಸುತ್ತದೆ.

ಕ್ರಿ.ಶ. ೧೧೮೪ರ ಗಾರೇಹಟ್ಟಿ ಶಾಸನ,[೪೦] ಕಾಮಯ್ಯನಾಯಕನ ಪ್ರಶಸ್ತಿಯನ್ನು ವರ್ಣಿಸುತ್ತದೆ.

ಪರಿಛೇದಿಗಂಡರಾಜಿಕಚೋಳಮನೋಭಂಗಂಶ್ರೀಮತ್ತ್ರಿಭುವನಮಲ್ಲ ದೇವಪಾದಾಬ್ಜಭಿ)ಂಗನಾಮಾದಿಸಮಸ್ತಪ್ರಶಸ್ತಿಸಹಿತಂಶ್ರೀಮ ನ್ಮಹಾಮಂಡಳೇಶ್ವರವಿಜಯಪಾಂಡ್ಯದೇವರುನೊಳಂಬವಾಡಿಮೂವರ್ತ್ತಿತ್ಸಾ ಸಿರಮುಮನುಚ್ಚಂಗಿಯನೆಲವೀಡಿನೊಳುದುಷ್ಟನಿಗ್ರಹಶಿಷ್ಟಪ್ರತಿ ಪಾಲನೆಯಿಂದಾಳ್ದುಸುಖಸಂಕಥಾವಿನೋದದಿಂರಾಜ್ಯಂಗೆಯ್ಯುತ್ತ ಮಿರೆ ‖ ತತ್ಪಾದಪದ್ಮೋಪಜೀವಿಕಾಮರಸದೇವನಪಾದಾಬ್ಜಭ್ರಿಂ ಗನಾಮಾದಿಸಮಸ್ತಪ್ರಶಸ್ತಿಸಹಿತಂಶ್ರೀಮನ್ಮಹಾಸಾಮಂತವಿಜ

ಯಲಕ್ಷ್ಮೀಕಾಂತನಹಿತಕ್ರತಾಂತರಿಪುಸುದತೀವದನಕುವಳಯ
ತೀಬ್ರಕಿರಣಂವಿದಿತಕೀರ್ತ್ತಾಂಗನಾಭರಣಂಶೌಚಗಾಂಗೇಯಪರಬಳ
ಸಾಧಕಂಪರಮಮಾಹೇಶ್ವರಂಮಾಹೇಶ್ವರದೇವರಪಾದಾರಾಧಕಶ್ರೀ
ಮನ್ಮಹಾಸಾಮನ್ತಕಾಮೆಯನಾಯಕನಪ್ರಶಸ್ತಿಯೆಂತೆಂದಡೆ
ಸ್ವಸ್ತಿಸಮಸ್ತವಾ. . . ತ್ಸುವರ್ಣ್ಣಪದಸಂಘಟ್ಟಿತಮಾಣಿಕ್ಯಮಯೂಖಮಂಜರೀ
ರಾಜಿತಚರಣಾಂಭೋಜನುಂ . . ಸಾಮಂತದಂತಾವಳಕುಂಭಭೇದನಪ್ರಕಟಿತಪಂ
ಚಾನನಪರಾಕ್ರಮನುಂಪ್ರಾ್ಯರಾಜ್ಯಾಭರಣನುಂಪ್ರಪಂನಾಪಂನವಿಪಂನಶರಣನುಂ
ಶರಣಾಗತಸಂತ್ರಾಣಸಮರ್ತ್ಥನುಂಸಕಲಕಲಾವಲೋಕನಕುಶಲನುಂವೀರಲಕ್ಷ್ಮೀ
ವಶಾಬಂಧನಭುಜಾಳಾನ್ತಂಭನುಂಕಾಮಿನೀಜನಪುಷ್ಪಚಾಪನುಂಪರಕಾನ್ತಾ
ಸಹೋದರನುಂಪವಿತ್ರ ಕೀರ್ತ್ತಿಚಂದ್ರಿಕಾವದಾತಸಕಲಾಶಾವಿಭಾಗನುಂಹಿಡಿಂಬೇ
ಶ್ವರದೇವರಪಾದಾಂಬುಜಚಂಚರೀಕನುಂಸತ್ತ್ರಿಂಗಪದ್ಮಾಕರನುಂವಿಜಯಪಾಂ
ಡ್ಯದೇವರಪಾದಪದ್ಮ್ಯೆಯಶರಣನುಂಸೌಜನ್ಯಕತೀರ್ತ್ಥಾಕರನುಂದಾನವಿನೋ
ದನುಮಿತ್ಯಾದ್ಯಖಿಳನಾಮಾವಳೀಸಮಾಳಂಕ್ರಿತರಪ್ಪ
ಶ್ರೀಮನ್ಮಹಾಸಾಮಂತಕಾಮಯ್ಯನಾಯಕನುಬಿಂಮ್ಮಚ್ಚ -
ನೂರನೆಲವೀಡಿನೊಳುದುಷ್ಟನಿಗ್ರಹಶಿಷ್ಟಪ್ರತಿಪಾಲನೆಯಿಂ
ದಾಳ್ದುಸುಖಸಂಕಥಾವಿನೋದದಿಂರಾಜ್ಯಂಗೆಯ್ಯುತ್ತಮಿರೆ ‖ ತಂಮ್ಮಜ್ಜನು
ದಯಾದಿತ್ಯನಾಯಕರಹೆಗ್ಗಡೆಮಾಚಯನಮಗಳುಗೋ
ತ್ರಪವಿತ್ರೆಯುಂಪವಿತ್ರೀಕ್ರಿತಶರೀರೆಯುಂಪಂಚಮಗಾಲಹವನೆಯುಂ
ಮೆನಿಸಿದಂಗೌವಶಿವಧರ್ಮ್ಮೋತ್ತರದಲ್ಲಿಲಿಂಗಪ್ರತಿಷ್ಠೆಯಮಾಹಾ
ತ್ಮೆಯಕೇಟ್ಟುಲಿಂಗಪ್ರತಿಷ್ಠೆಯಂಮಾಡಿಕಾಮಯ್ಯನಾಯ
ಕನಬೇಡಿಕೊಂಡುಸಕವರ್ಶ ೧೧೦೮ಪ್ಲವಂಗಸಂವತ್ಸರ
ಅಶ್ವಯುಜಸುದ್ಧಪೌರ್ಣ್ನಮಿಂವಾರಸೋಮಗ್ರಹಣದಂದು
ಸ್ವಸ್ತಿಯ(ಮ)ನಿಯಮಜಪಸಮಾಧಿಶೀಲಗುಣಸಂಪನ್ನರುಂ
ಮನುಮಾರ್ಗ್ಗಚರಿತರುಮಪಸೋವರಾಶಿಪಂಡಿತರ
ಕಾಲಂಕರ್ಚ್ಚಿದಾರಾಪೂರ್ವ್ವಕಂಮಾಡಿಬಿಟ್ಟಭೂಮಿ

ಈ ಸಾಮಂತರು ನೊಳಂಬನ ಗರುಡ ಎಂದು ಕರೆದುಕೊಂಡಿದ್ದಾರೆ. ಹಾಗಾಗಿ ಇವರು ನೊಳಂಬ ಪಲ್ಲವರ ಕಾಲದಲ್ಲಿ ಅವರ ಆಡಳಿತದಲ್ಲಿ ಅಧಿಕಾರಿಗಳಾಗಿದ್ದು ಪಾಂಡ್ಯರ ಕಾಲದಲ್ಲಿ ಮಹಾಸಾಮಂತ ಪದವಿಗೆ ಬಂದರು. ಉಚ್ಚಂಗಿ ಪಾಂಡ್ಯರ ನಂತರ ಈ ಸಾಮಂತರು ಎಲ್ಲಿ ಹೋದರು ಎಂಬುದು ತಿಳಿಯುವುದಿಲ್ಲ. ಹೊಯ್ಸಳರು ಈ ಪ್ರದೇಶದ ಮೇಲೆ ಹಿಡಿತ ಸಾಧಿಸಿದ್ದರಿಂದ ಅವರ ಅಧೀನಕ್ಕೆ ಬಂದಿರಬೇಕು. ಈ ಸಾಮಂತರು ಹಿಂದಿನ ಯಾವ ರಾಜ್ಯವಂಶದ ಮೂಲದವರು ಎಂಬುದು ಸ್ಪಷ್ಟವಾಗಿ ತಿಳಿಯುವುದಿಲ್ಲ.

**ಡಾಕರಸ**

ಡಾಕರಸ ಹಿರೇತೋಗಲೇರಿ ಶಾಸನದಲ್ಲಿ ಉಲ್ಲೇಖಿಸಿರುವ ಅತ್ತಿಗೆರೆ-೧೨ರ ಆಡಳಿತ ವಿಭಾಗವನ್ನು ತ್ರಿಭುವನಮಲ್ಲಪಾಂಡ್ಯ ದೇವನ ಪಾದಪದ್ಮೋಪಜೀವಿಯಾಗಿ ಮಹಾಸಾಮಂತ ಪದವಿಯಿಂದ ಆಳುತ್ತಿದ್ದ. ದಾವಣಗೆರೆ ತಾಲ್ಲೂಕಿನ ಬಾಡ ಗ್ರಾಮದ ಕ್ರಿ.ಶ. ೧೧೦೦ ಶಾಸನ,[೨೯] ಮಹಾಸಾಮಂತ ಡಾಕರಸನ ಬಗ್ಗೆ ಮಾಹಿತಿ ನೀಡುತ್ತದೆ.

ಶ್ರೀಮತ್ತ್ರಿಭುವನಮಲ್ಲಪಾಂಡ್ಯದೇವ । ನೊಳಂಬವಾಡಿಮೂವತ್ತಿರ್ಚ್ಛಾಸಿರಮುಮಂಸುಖ । ಸಂಖಥಾವಿನೋದದಿಂರಾಜ್ಯಂಗೆಯುತ್ತಿರೆತತ್ಪಾ । ದಪದ್ಮೋಪಜೀವಿ ॥ ಸ್ವಸ್ತಿಸಮಧಿಗತ ಪಂಚಮಹಾಶಬ್ದ ಮಹಾಸಾಮನ್ತವಿಜಯ . . ಕಾಮಿನೀಕಾನ್ತಂನಟನ । ಗ್ನಕಥಕಗಾಯಕ . . ನಾಮಕ . ಸನ್ದೋಹ . . ಭೂ । ಷಿತಜಗತೀತಳಖ್ಯಾತನ . . ಭುಜಬಳಾವಳೇವಾ ಟೋಪೋದ್ದಿತ್ತರಿಪುನಿ ಕುರುಂಬ ಕಬಂಧನರ್ತ್ತನಸೂತ್ರಧಾರ । ಸಂಗ್ರಾಮಧೀರಪತಿಹಿತಾಂಜನೆಯಸತ್ಯ ರಾಯಧೇಯನಿಜ। ಕುಳಸರಸಿಜಾಕರತರಣಿಕಿರಣಕುಸುಮಾಭರಣಬಿಚ್ಚೇ । ಶ್ವರಬರ್ದ್ದೆಗೇಶ್ವರ ದೇವರಾದಾಬ್ಜ । ಭ್ರಿಂಗನಣ್ಣನ ಸಿಂಗನಾಮಾದಿ । ಸಮಸ್ತಪ್ರಶಸ್ತಿಸಹಿತಂಶ್ರೀಮನ್ಮಹಾ ಸಾಮಂತಡಾಕರಸರು। ಶ್ರೀಮದಗ್ರಹಾರಂ ಬಾಡದಲ್ಲಾಲೇಸ್ವರ ದೇವರಂಗ ಭೋಗಕ್ಕೆ ।ಗ್ರಾಮದ ಅಡಕೆಯೆಲೆ ಯದವಸಾಯದ ಹೆಚ್ಚುಂಕದ ದಸವನ್ದಪೊನ್ನನು ದಾನ ನೀಡಿದ ಉಲ್ಲೇಖವಿದೆ.

**ಪಡವಳದುಗಯ್ಯ**

ದಾವಣಗೆರೆ ತಾಲೂಕಿನ ಆಲೂರು ಶಾಸನ ಮಹಾಸಾಮಂತ ಪಡವಳ ದುಗಯ್ಯನ ಬಗ್ಗೆ ಮಾಹಿತಿ ನೀಡುತ್ತದೆ. ಈತ ತನ್ನ ಸ್ವತೋಳಬಲದಿಂದ ಪಾಂಡ್ಯದೇವನ ಸಾಮಂತನಾಗಿ ಅಧಿಕಾರಕ್ಕೆ ಬಂದ. ತ್ರುಟಿತವಾಗಿರುವ ಆಲೂರು ಶಾಸನ,[೩೦] ಮಹಾಮಂಡಳೇಶ್ವರ ಕುಡುಂಬಪುರವರೇಶ್ವರ ತ್ರಿಭುವನಮಲ್ಲ ಪಾಂಡ್ಯದೇವರು ಆಳುತ್ತಿರುವಾಗ ತತ್ಪಾದಪದ್ಮೋಪಮಪಜೀವಿಕಲಿತನದ ತೋಳಬಾಳಂ ಮಲೆ ದೊಡ್ಡಿದ ಮಲೆಯಗಂಗನಾನಾ... ಮಹಾಮಣ್ಡಳನೇಕಾಂಗವೀರಕಾಮಿನೀ ಜನ ಸಹಕಾರ ಕಂದರ್ಪ ಕೆಳೆಗೆಯ್ದೆಕೂರ್ಪ್ಪ ರಣಂಗವೀರ . . . ತ್ರಿಯಂಬಕದೇವ ಪಾದಾರಾಧಕ ವೈರಿಭಳಸಾಧಕ ಪದಾಬ್ಜಭ್ರಿಂಗನಾಮಾದಿಸಮಸ್ತ ಪ್ರಶಸ್ತಿಸಹಿತಂ ಶ್ರೀಮನ್ಮಹಾಸಾಮಂತ ಪಡವಳದುಗಯ್ಯ ಸದಾಶಿವಪಂಡಿತರ ಕಾಲನು ತೊಳೆದು ದೇವರಿಗೆ ದಾನ ಬಿಟ್ಟ ಮಾಹಿತಿ ಇದೆ.

**ಮಲ್ಲರಸ**

ಮಹಾಸಾಮಂತ ಮಲ್ಲರಸ ನೊಳಂಬವಾಡಿ-೩೨೦೦೦ದ ಹೆಜ್ಜುಂಕದ ಸುಂಕದ ಸಾಮಂತನಾಗಿ ತ್ರಿಭುವನಮಲ್ಲ ಪಾಂಡ್ಯದೇವನ ಕಾಲದಲ್ಲಿ ತನ್ನ ಕರ್ತವ್ಯವನ್ನು ನಿರ್ವಹಿಸುತ್ತಿದ್ದ. ಕ್ರಿ.ಶ. ೧೧೧೦ರ ಅಸಗೋಡ ಶಾಸನ.[೩೧] ತ್ರಿಭುವನಮಲ್ಲ ಪಾಂಡ್ಯದೇವ ನೊಳಂಬವಾಡಿ-೩೨೦೦೦ವನ್ನು ಆಳುತ್ತಿರುವಾಗ ತತ್ಪಾದಪದ್ಮೋಪಜೀವಿ ಮಹಾಸಾಮಂತ ಮಲ್ಲರಸರು ನೊಳಂಬವಾಡಿ ಮೂತ್ತಿರ್ಚ್ಛಾಸಿರದ ಪೆರ್ಜ್ಜುಂಕ ಮನಾಳುತ್ತಿರುವಾಗ, ಪೆರ್ಗ್ಗಡೆ ಹೆಮ್ಮಸೆಟ್ಟಿಯರ ಜೊತೆ ಸೇರಿ ದೇವರಿಗೆ ದಾನ ಮಾಡುತ್ತಾರೆ.

**ಸಿಂದರಸ**

ನೊಳಂಬವಾಡಿ-೩೨೦೦ದ ಸುಂಕದ ಮಹಾಸಾಮಂತರಾಗಿ ಸಿಂದರಸರು ಆಳುತ್ತಿದ್ದರು. ಈತನ ಬಗ್ಗೆ ಅಸಗೋಡ ಶಾಸನ ಮಾಹಿತಿ ನೀಡುತ್ತದೆ.[೨೮] ಶ್ರೀಮನ್ಮಹಾಸಾಮಂತ ಸಿಂದರಸರು ನೊಳಂಬವಾಡಿ-೩೨೦೦೦ದ ವಡ್ಡರಾವುಳದ ಸುಂಕಮನಾಳುತ್ತಮಿರೆ, ಅವರ ಬೆಸದಿ ಸಮಸ್ತ ರಾಜ್ಯಾಭಾರ ನಿರೂಪಿತ ಮಹಾಮಾತ್ಯ ಪದವಿವಿರಾಜಮಾನಮೌನಂ ಉತ್ಸಾಹಶಕ್ತಿ ಸಂಪನ್ನರಪ್ಪ ಶ್ರೀಮತ್ಪೆರ್ಗ್ಗಡೆ ರಾಜಮಯ್ಯನಾಯಕ ಕದಂಬಳಿಗೆ ಸಾಸಿರ ಕೋಗಳಿ-೫೦೦ನ್ನು ಹೆಗ್ಗಡೆತನದಿಂದ ಆಳುತ್ತಿರುವಾಗ ಅಸಗೋಡ ಸ್ವಯಂಭುಕಲಿದೇವಸ್ವಾಮಿಗೆ ದಾನ ನೀಡಿರುವುದಾಗಿ ಹೇಳುತ್ತದೆ.

**ನಾಕರಸ**

ಮಾಡಲಗೇರಿ ಶಾಸನ,[೨೯] ಪಂಚಮಹಾಶಬ್ಧ ಮಹಾಸಾಮನ್ತಂ, ಸುಭಟಚೂಡಾಮಣಿ, ವಿನಯಶೀಲಸಂಪನ, ಜ್ಞಾನಲಕ್ಷ್ಮೀಕಾನ್ತ.. ಹತ್ತಪರಮೇಶ್ವರ ಜಿನಗನ್ಧೋದಕ ಪವಿತ್ರಿಕ್ರಿತೋತ್ತ ಮಾನಸನುಂಸಂಮ್ಯುಕ್ತರತ್ನಾಕರನು ಚತುಸ್ಸಮಯ ಪೂಜಾದುರಂಧರನುಂ ಅಭಿನವ ಶ್ರೇಯಾಂಸನಂ ಪದ್ಮಾದೇವಿ ಲಬ್ಧವರಪ್ರಸಾರದನುಂ ಬಾಗುಳಿಯಯ್ವದಿಂದಬರವರಪುತ್ರನುಂ ಚಾಳುಕ್ಯಕುಲಕಮಳ ಮಾರ್ತ್ತಣ್ಡನಂ ಆಹಾರಾಭಯ ಭೈ ಕ್ಷಚಗತಶಾಸ್ತ್ರ ಆಗಮತರ ದಾನವಿನೋದನುಂ ವಿವೇಕಚೂಡಾ ಮಣಿಯಂ ಯೋಗಿ ನೇಮಿಭಟ್ಟಾರಕ ಗುರುಗಳ ಪ್ರಸಾದದ ಪರಬ್ರಹ್ಮ ಸ್ವರೂಪವಂಯರದು ಸದಾಸಿವನಲಿ ಮನವಂ ಸ್ಥಿರವಾಗಿಯೇ ನಿಲ್ಲಿಸಿದ ಪಾಯರಸಂಗಂ ಕಾಳಿಯಬರಸಿ ಪುಟ್ಟಿ ಶ್ರೀಮನ್ಮಹಾಸಾಮಂತಂ ನಾಕರಸನ ಅರ್ದ್ಧಾಂಗೆ ಲಕ್ಷ್ಮೀಯೆನಿಸಿದಳು ಆದಿತ್ಯ ಕಡಂಬಕುಲತಿಲಕ ಕಾಟರಸಂಗಂ ಉರುಗೊಳದ ಲಕ್ಕರಸನುಂಸತಿಯಪ್ಪ ಸುಗ್ಗಲದೇವಿಗಂ ಪುಟ್ಟಿದ ಆ ದೇವಿಯರು ಲಕ್ಷ್ಮೀವಲ್ಲಭೆ ನಾಕರಸಂ ಅತ್ತಿಮೇಶ್ವರದೇವರ್ಗ್ಗೆ ನಿವೇದ್ಯ ಅಂಗಭೋಗನನ್ದಾದೀವಿಗೆಗೆ ದಾನ ನೀಡುತ್ತಾರೆ.

**ಸೋಮರಸ**

ಉಚ್ಚಂಗಿ ಪಾಂಡ್ಯರ ಆಡಳಿತದಲ್ಲಿ ಬಿಳಿಚ್ಚೆ-೭೦ ಆಡಳಿತ ವಿಭಾಗವನ್ನು ಸೋಮರಸ, ಆನಂತರ ಮಗ ಎಡವರಿದೇವರಸ ಮಹಾಸಾಮಂತ ಪದವಿಯಿಂದ ಆಳುತ್ತಿದ್ದರು. ಸೋಮರಸ ರಾಯಪಾಂಡ್ಯದೇವನ ಅಧೀನದಲ್ಲಿ ಬಿಳಿಚ್ಚೆ-೭೦ ಜೊತೆಗೆ ದುಮ್ಮಿ-೧೨ ವಿಭಾಗವನ್ನು ಆಳುತ್ತಿದ್ದ. ಕ್ರಿ.ಶ. ೧೧೨೩ರ ಚನ್ನಗಿರಿ ಶಾಸನ,[೩೦] ತ್ರಿಭುವನಮಲ್ಲಪಾಂಡ್ಯದೇವರು ನೊಳಂಬವಾಡಿ ನಾಡನ್ನು ಆಳುತ್ತಿರುವಾಗ ಪಲ್ಲವರಾಯ ಬಿಳಿಚ್ಚೆಯಪ್ಪತ್ತು ಮತ್ತು ದುಮ್ಮಿಹನ್ನೆರಡನು ಮಂತ್ರಿಭೋಗಾಭ್ಯಂತರದಿಂದ ಪಾಳಿಸುತ್ತಮಿರೆ । ಧೀರಂ ಸೋಮನದೊರೆಗೊರೆಗಾರುಂ ನಿನ್ದಪರೀಕ್ರಿತಯುಗತ್ರೇತೆದ್ವಾಪಾರಂ, ಕಲಿಯುಗದೊಳಗಣಬೀರರುದಾರಪ್ರತಾಪಿಗಳು ಧರ್ಮಪರರ್ । ಕದನದೊಳಾನ್ತರಿಭೂಪರನದಿರದೆ ಬೆಂಕೊಣ್ಡತಂನಪೆಂಪೂರ್ವ್ಯರೆಯಂಪುದಿದಿರ ಪಾಳಿಸಿಧಾತ್ರಿಯನೊದವಿಸಿದಂಗುಣವಿಭಾಸ ಸೋವ ನೃಪಾಳಂ ॥ ಶ್ರೀಮನ್ಮಹಾಸಾಮಂತ ಸೋಮರಸರು ಬಿಳಿಚೆಯೆಳ್ಪತ್ತರಲ್ಲಿ ಮನ್ನೆಯಯಂ ಸಧರ್ಮದಿಂದ ಆಳುತ್ತಿದ್ದ. ಸೋಮರಸನ ಮರಣದ ನಂತರ ಮಗ ಎಡವರಿದೇವ ಈ ವಿಭಾಗದ ಆಡಳಿತವನ್ನು ಮುಂದುವರಿಸಿದ್ದನು.

**ಎಡವರಿದೇವ**

ಎಡವರಿದೇವ ವೀರಪಾಂಡ್ಯ ದೇವನ ಕಾಲದಲ್ಲಿ ಬಿಳಿಚ್ಚೆ-೭೦ರ ಮನ್ನೆಯ ಸಾಮಂತನಾಗಿ ಆಳುತ್ತಿದ್ದ. ಚನ್ನಗಿರಿ ತಾಲೂಕಿನ ಆಸ್ತಾಪನಹಳ್ಳಿಯ ಎರಡು ಶಾಸನಗಳು ಈತನ ಆಡಳಿತವನ್ನು ಉಲ್ಲೇಖಿಸುತ್ತವೆ. ಕ್ರಿ.ಶ. ೧೧೩೬ರ ಶಾಸನ,[೩೭] ತ್ರಿಭುವನಜನ ಸ್ತುತಂಜಗದೇಕಮಲ್ಲ ವೀರಪಾಂಡ್ಯ ದೇವಚಿತ್ತ ಸರೋವರರಾಜಹಂಸಂ ತ್ರಿಭುವನಪ್ರಸಂಸದಾಯಿಗಮಂ ಮನೆಯಮ್ರಿಗ ಬೇಂಟೆಕಾರರಿ ಪುಮಂಡ ಳಸೊರೆಕಾರಕೂಡಿಕಟ್ಟಕ್ಕೆತಪ್ಪುವ ಮಂನೆಯರಗಂಡ ಕದನ ಪ್ರಚಂಡ ಉದ್ದಂಡರಿಪುಮದ ನಿವಾರಣಂ ಅನ್ನಿನಗಂಧವಾರಣ ಚಂದ್ರಸೇಖರನಖಚಂದ್ರ ಚಂದ್ರಿಕಾಸ್ವಾದನ ಚಕೋರಂ ಕೊಸರಸಮ್ರಿದುಗೇಯಕರ್ಣ್ನ ಪೂರ ಸತ್ಯಹರಿಶ್ಚಂದ್ರ ಪ್ರಜಾಪಾಳ ನೋಪೆಂದ್ರ ಮನ್ನೆಯ ಎಡವರಿ ಯರಸರು ಸೂಸಲಗೆರೆಯಲ್ಲಿ ರಾಜ್ಯಂಗೆಯ್ಯುತ್ತವಿರುವಾಗ ಆಸ್ತಾಪನಹಳ್ಳಿಯ ಸೋಮೇಶ್ವರ ದೇವರ ರಂಗಭೋಗಕ್ಕೆ ದೇವಾಲ್ಯಕ್ಕೆ ತೋಟ ಮೊದಲಾದ ದಾನ ಮಾಡಿದನು.

ಆಸ್ತಾಪನಹಳ್ಳಿಯ ಇನ್ನೊಂದು ಶಾಸನ.[೩೮] ಪಾಳಿಸಿಕೀರ್ತ್ತಿಯನೊದವಿಸಿದಂಗುಣವಿಭಾಸಿ ಮನ್ನೆಯಸೋಮ ‖ ಆಮಹಾಸಾಮಂತ ಸೋವಿದೇ ವಗಂಸೋವಲದೇವಿಗಂಉದಯಿಸಿದ ಎಡವರಿದೇವ ‖ ಆತಂಸಮಸ್ತಗುಣ ವಿಖ್ಯಾತಂಭೂತಳದೊಳೆ ಸೆಯೆಧರ್ಮ್ಮಂಗಳನುದಿತೋದಿತದಿಂದಂ ಪ್ರತಿಪಾಳಿಸಲುದಿಯಿಸಿದಂ ಸೋಮದೇವನಣುಗಿನ ಪುತ್ರ ‖ ಧರೆಯುಂಮರ್ದ್ಧಿಗಳುಂಕುಳಾದ್ರಿಕುಳ ಮುಂದಿಗುದಂತಿಯುಂ ಚಂದ್ರಸೂರ್ಯ್ಯರು ಮುಳ್ಳಂನೆಗಮೆಯ್ದೆನಿಲ್ಕೆದಶೆಯುಂಸದ್ಧರ್ಮ್ಮ ಮುಂಕೀರ್ತ್ತಿ ಯುಂ(..........)ಸಾಮ್ರಾಜ್ಯಮಂಸತ್ಯಮಂ ಪಲದೊಂದುನ್ನತಿಯಂಶಿವಂದೆ ಯೆಯಿನಾ ಕಟ್ಟಾಂತರ ಸ್ಥಾಯುವ ‖ ನುಡಿದನುಡಿರಾವ-ಬಾಣಂತೊಡಟ್ಟೆಡೆಯೊಳುಭೀಮನಾರ್ತ್ತುಕುಡುವಡೆಕರ್ಣ್ನಂ ಪಡಿಯೆನಿಸಿನೆ ಗಟ್ಟಿನಮ್ಮಿಎಡವರಿದೇವಂಗೆ ಕುಚಿತಮನ್ನೆಯದ್ರೋರೆಯೆ ‖ ಬಡತನವಾದುದೆ ಸ್ಥುಬುಧಕೋಟ ವಿಮೋಹಿಸಿಬನ್ದುಮುನ್ದೆನಿನ್ದಡಿಗಿಡೆ ಬೇಡಲೀವನೆಮನಂಗಿಡಲೀವನೆಪೋಗಿಬಂ ನಿಮೆಂದೆಡೆಯುಡಿ ಯಾಡಲೀವನೆಮ ನೋಮುದದಿಂಕರೆದಿತ್ತು ಕಯ್ಗಳಂಬಿಡೆಮುಗಿವಾಚೆದಲ ನೆಗಟ್ಟಿನೀಧರೆಯೊಳ ಎಡೆವಾರಿದೇವನೆ ‖ ಸೂಸಲುಗೆರೆಯ ಮೂಲಸ್ಥಾನ(ದ) ಮಲ್ಲಿಕಾರ್ಜುನದೇವರಿಗೆ ಎಡವರಿಯರಸದೇವರಾಸಿಪಂಡಿತರಿಗೆಕಾಲಂಕರ್ಚ್ಚಿ ಧಾರಾಪೂರ್ವ್ವಕಂಮಾಡಿಬಿಟ್ಟಧರ್ಮ್ಮ ಎಡವರಿ ದೇವನ ನಂತರ ಈ ವಂಶದ ಚರಿತ್ರೆಗೆ ಯಾವುದೇ ದಾಖಲೆಗಳು ದೊರೆಯುವುದಿಲ್ಲ.

**ಬೆನವಯನಾಯಕ**

ವಿಜಯಪಾಂಡ್ಯದೇವನ ಪಾದಪದ್ಮೋಪಜೀವಿ ಬೆನವಯನಾಯಕ ಮಹಾಸಾಮಂತನು ಕೂಕ್ಕಲೂರನ್ನು ಆಳುತ್ತಿದ್ದನು. ಹರಿಹರ ತಾಲೂಕಿನ ವಾಸನ ಶಾಸನ,[೩೯] ಮಹಾಸಾಮಂತ ಲಕ್ಷ್ಮೀಕಾಂತಂ, ತೊಂಡನಿಭಾಡಂ, ತೊಡರೆಬಲ್ಲಗಣ್ಡಂ ಅಣ್ಣಗಂಧವಾರಾಣಂ ಬರಸಿಡಿಲು ಬಿಗಿದಪ್ಪುವಂರಿಪುಸಾಮನ್ತ ಮದನ ಮಹೇಸ್ವರಂ ಅರಿಬಿರುದ ಸಾಮಂತರ ಶಿರವಜ್ರದಂಡ ಅಯ್ಯನ... ಮೆಚ್ಚಗಂಡಂ ಕಟ್ಟಿಬಿಡುವ ಸಾಮಂತರಗಂಡಂ ಮಂಡಳಿಕಸಾಮಂತತೀರ್ತ್ತ... ಸಾಮಂತಜಗದೊಳು ದುಟ್ಟಸಾಮಂತರ ನಿಟಿಲ್ಯಮುರೆವಂಮಿರುವ ಸಾಮನ್ತರಮಿದುಳಸೂಸುವಂಗಡಿ ಯಂಕಭೀಮಂ

ಉಶನೀಶ್ವರ ದೇವರ ಪಾದಾರಾಧಕಂಬುಜಬಳಸಾಧಕಂ ವಿನಾಯಕದೇವರಲಬ್ಧ ವರಪ್ರಸಾದಂ ಬಾಯಕುಳತಿಳಕಂ ಓಸನದ ಸಾಮಂತ ಚಟ್ಟಯನಾಯಕನ ಮಗ ಸಾಮಂತ ಬೆನವಯನಾಯಕ ಕೂಕ್ಕಲೂರುಮಂ ಹೊಗೆಯ..ಯ ಸುಖಸಂಖಥಾ ವಿನೋದದಿಂ ರಾಜ್ಯಂಗೆಯ್ಯುತ್ತಮಿರೆ ಆವೂರ ಸೂಳೆಯ ಕಾಳೆಯಮಗ ಹಡವಳಬೆಯನಂ ಚಂಡೆಯನುಂ ಕೆರೆಯನುಂಬಾಳನವಂ ಮಾಡಿ ನಾಲ್ವರು ಸತ್ತಲಿಗೆ ದಾನ ಬಿಡುತ್ತಾರೆ.

**ಸೋವಿದೇವ**

ಮಹಾಸಾಮಂತ ಸೋವಿದೇವನು ವಿಜಯಪಾಂಡ್ಯದೇವನ ಕಾಲದಲ್ಲಿ ಚದುರುಗೋಳ ಪ್ರದೇಶದಲ್ಲಿ ಆಳುತ್ತಿದ್ದ. ಚದರುಗೋಳ ಶಾಸನ,[೩೩೦] ಮಹಾಸಾಮಂತ ಒಮನಸತ್ಯರಾಧೇಯ ಸೌಚಗಂಗೇಯ ನುಡಿದಪುಸಿ, ಗೋಜಕಾರಮಾರ್ಕೋರ್ಲಭೈರವ ತತ ವಿತತವಾದ್ಯಘನಸಂ ಕೀರ್ಣ್ನರಾಗಸಮುಧರಣಂರಸಂಗೀತ, ಕಾರಸುಧದೇಶಳಪಂ ಬಳವಿಶಮ ಅಭಿನವಭಾರತ 'ಹಯವತ್ಸ ರಾಜಮಹೇಶ್ವರ ಗಣಾವತಾರಸರ್ವ್ವಾಭುದ್ಯಯಮಪ್ಪ ಸಾಮನ್ತ ಸೋವಿದೇವನಾಯಕಂ ಬರ್ಮ್ಮದೇವ ನಾಯಕನುಂ ಇರ್ದ್ದು. ಆಶೇಷಮಹಾಜನಂಗಳ ಸಂನಿಧಾನದೊಳು ದೇವರಿಗೆ ಭೂದಾನ ನೀಡಿರುವುದನ್ನು ತಿಳಿಸುತ್ತದೆ.

**ಪಡವಳ ಭೊಮಯ್ಯ**

ಮಹಾಸಾಮಂತ ಪಡವಳ ಭೊಮಯ್ಯ ರಾಯಪಾಂಡ್ಯದೇವನ ಕೈಕೆಳಗೆ ದೊಡ್ಡ ಅಬ್ಬಿಗೆರೆ ಪರಿಸರದಲ್ಲಿ ಆಳ್ವಿಕೆ ನಡೆಸುತ್ತಿದ್ದ. ದೊಡ್ಡ ಅಬ್ಬಿಗೇರ ಶಾಸನ.[೩೩೧] ತ್ರಿಭುವನಮಲ್ಲ ರಾಯಪಾಂಡ್ಯ ದೇವರು ನೊಳಂಬವಾಡಿ-೩೨೦೦೦ವನ್ನು ಆಳುತ್ತಿರುವಾಗ ಮಹಾಸಾಮಂತ ಶೌರ್ಯ... ತ್ರಿಯಂಬಕದೇವ ಪಾದಾರಾಧಕ ವೈರಿಬಳಸಾಧಕ... ಸಾಮಾಧಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನ್ಮಹಾಸಾಮನ್ತ ಪಡವಳ ಭೊಮಯ್ಯ ಚಾಳುಕ್ಯ ವಿಕ್ರಮ ಕಾಲದ ೪೭ನೆ ಪೂವಸಂವತ್ಸರದಲ್ಲಿ ಅಬ್ಬೆಯಗೆರೆಯ ಕಲಿದೇವರ್ಗೆ ರುದ್ರಸಿವ ಪಂಡಿತದೇವರ ಸಿಸ್ಸರು ಜ್ಞಾನಶಿವ ಪಂಡಿತರ ಕಾಲಂಕರ್ಚಿ ಧಾರಾಪೂರ್ವಕಂ ಮಾಡಿಬಿಟ್ಟರು ಎಂದು ಹೇಳುತ್ತದೆ.

ಉಚ್ಚಂಗಿ ಪಾಂಡ್ಯರ ಆಡಳಿತದ ಆರಂಭದಿಂದ ಅಂತ್ಯದವರೆಗೂ ಮಹಾಸಾಮಂತರು/ಸಾಮಂತರು/ಮನ್ನೆಯರು ನೊಳಂಬವಾಡಿ ನಾಡಿನೊಳಗೆ ಬೇರೆ ಬೇರೆ ಚಿಕ್ಕ ವಿಭಾಗಗಳಲ್ಲಿ ಸಾಮಂತರಾಗಿ ಆಳುತ್ತಿದ್ದರು. ಮತ್ತೆ ಕೆಲವರು ಕೆಲವು ಸುಂಕದ ವಿಭಾಗಗಳಲ್ಲಿ ಸುಂಕದ ಸಾಮಂತರಾಗಿ ಅವರ ಆಡಳಿತ ವ್ಯವಸ್ಥೆಯಲ್ಲಿ ಸೇವೆ ಪಡೆದಿರುವುದು ಪಾಂಡ್ಯರ ಶಾಸನದಿಂದ ತಿಳಿಯುತ್ತದೆ. ಈ ಸಾಮಂತರು ಮಹಾಮಂಡಳೇಶ್ವರರ ಮಟ್ಟಿಗೆ ಸ್ವತಂತ್ರರಲ್ಲದಿದ್ದರೂ ಈ ಪದವಿ ಪಡೆಯುವಷ್ಟು ಅರ್ಹತೆಯನ್ನು ಹೊಂದಿದ್ದರು. ರಾಜ್ಯದ ರಕ್ಷಣೆ, ಅಭಿವೃದ್ಧಿಯಲ್ಲಿ ಸಾಮಂತರ ಪಾತ್ರ ಮಹತ್ವದ್ದಾಗಿತ್ತು.

**ದಂಡನಾಯಕರು**

ಉಚ್ಚಂಗಿ ಪಾಂಡ್ಯರ ಆಡಳಿತ ವ್ಯವಸ್ಥೆಯಲ್ಲಿ ಕಾಣಿಸಿಕೊಳ್ಳುವ ದಂಡನಾಯಕ ಎಂಬ ಶಬ್ದವು ಕೇವಲ ಸೈನಿಕ ಇಲಾಖೆಗೆ ಸೀಮಿತವಾಗಿರಲಿಲ್ಲ. ಮಹಾಮಂಡಳೇಶ್ವರ ಆಡಳಿತದ

ಬೇರೆ ಬೇರೆ ಇಲಾಖೆಗಳ ಮುಖ್ಯಸ್ಥರನ್ನು ಅಥವಾ ಒಡೆಯನನ್ನು ದಂಡನಾಯಕ ಎಂದು ಕರೆಯಲಾಗಿದೆ. ಸಮರ್ಥರಾದ ಸೈನಿಕರನ್ನು ವಿವಿಧ ಇಲಾಖೆಗಳ ನಿರ್ವಹಣೆಗೆ ನೇಮಿಸಿದ್ದರಿಂದ ದಂಡನಾಯಕ ಎಂಬ ಶಬ್ದ ಇಲಾಖೆಯ ಶಬ್ದದೊಂದಿಗೆ ಸೇರಿ ಉಚ್ಚರಣೆಯಲ್ಲಿ ಇದ್ದಂತೆ ತೋರುತ್ತದೆ. ಉದಾ:- ಮಹಾಪಸಾಯಿತ ಶಂಕರದಂಡನಾಯಕ, ಸಂಧಿವಿಗ್ರಹಿ ಶಂಕರದೇವ ದಂಡನಾಥ; ಆದರೆ ಇಲ್ಲಿ ದಂಡನಾಯಕ ಎಂದರೆ ಮುಖ್ಯಸ್ಥ, ಒಡೆಯ ಎಂದು ಅರ್ಥೈಸಬಹುದು.

ಸೋಮದೇವನು ತನ್ನ ಯಶಸ್ತಿಲಕದಲ್ಲಿ ದಂಡನಾಯಕನಾದವನು ಶೂರನು, ಯುದ್ಧ ಚತುರನು, ಅರ್ಥಶಾಸ್ತ್ರವನ್ನು ಬಲ್ಲವನು, ತನ್ನ ಒಡೆಯನಿಗೆ ಆಜ್ಞಾರಾಧಕನಾಗಿದ್ದು ಸೈನಿಕರ ಸಭೆಯಲ್ಲಿ ಪ್ರೀತಿ ವಾತ್ಸಲ್ಯವನ್ನು ಪಡೆದವನಾಗಿರಬೇಕು ಎಂದು ಉಲ್ಲೇಖಿಸುತ್ತಾನೆ.[೩೨] ಇಂತಹ ಗುಣಗಳಿಂದ ಕೂಡಿದವರನ್ನು ಅರಸನು ತನ್ನ ಸೈನ್ಯಕ್ಕೆ ಸೇರಿಸಿಕೊಳ್ಳುತ್ತಿದ್ದ. ರಾಜ್ಯದ ರಕ್ಷಣೆ ಈತನ ಜವಾಬ್ದಾರಿಯಾಗಿತ್ತು.

ಶಾಸನಗಳು ದಂಡನಾಯಕರನ್ನು ಕುರಿತು ಹೇಳುವಾಗ ದಂಡನಾಯಕ ಮಹಾಪ್ರಚಂಡ ದಂಡನಾಯಕ, ಮಹಾಸಾಮಂತಾಧಿಪತಿ ಎಂದು ಉಲ್ಲೇಖಿಸುತ್ತವೆ. ದಂಡನಾಯಕರು ಮಹಾಮಂಡಳೇಶ್ವರ, ಮಹಾಸಾಮಂತ. ಮನ್ನೆಯರು ಸಂಘಟಿಸಿಕೊಂಡಿರುವಂಥ ಆಡಳಿತ ವರ್ಗ ಅಥವಾ ಸೈನ್ಯಕ್ಕೆ ಸೇರಿದವರಾಗಿರುತ್ತಾರೆ. ಮಹಾಪ್ರಚಂಡ ದಂಡನಾಯಕ, ಮಹಾಸಾಮಂತಾಧಿ ಪತಿ ಎಂಬ ಉಲ್ಲೇಖಿತರು ಚಕ್ರವರ್ತಿಯಿಂದ ನೇಮಕಗೊಂಡು ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ನಿಂತು ಆಳುತ್ತಿದ್ದರು. ಚಕ್ರವರ್ತಿಯ ಅಧೀನದಲ್ಲಿದ್ದ ಮಹಾಮಂಡಳೇಶ್ವರರು, ಸಾಮಂತರು ಆಡಳಿತದ ವಿರುದ್ಧ ದಂಗೆ ಏಳದಂತೆ, ಅವರಿಂದ ಕಪ್ಪಕಾಣಿಕೆಗಳನ್ನು ಸಂಗ್ರಹಿಸುವುದರ ಜೊತೆಗೆ ಅವರ ಚಲನವಲನಗಳನ್ನು ನಿಯಂತ್ರಿಸುವ ಕೆಲಸವನ್ನು ಮಾಡುತ್ತಿದ್ದರು. ಇವರು ಮಹಾಮಂಡಳೇಶ್ವರರಿಗೆ ಸಮನಾದ ಅರ್ಹತೆಯನ್ನು ಹೊಂದಿದ್ದರು. ಇವರು ಅರಸನಿಗೆ ಹತ್ತಿರದಲ್ಲಿ ಇರುತ್ತಿದ್ದರು.

ದಂಡನಾಯಕರು ಸಾಮಂತ ಅರಸರಂತೆ ಯಾವುದೇ ಭೂಪ್ರದೇಶದ ಆಡಳಿತವನ್ನು ನಿರ್ವಹಿಸುತ್ತಿರಲಿಲ್ಲ. ಇವರು ಅರಸನ ಪ್ರತಿನಿಧಿಗಳಾಗಿ ಮತ್ತು ಕೆಲವು ಇಲಾಖೆಗಳ ಅಥವಾ ಅಧಿಕಾರದ ಮಾನ್ಯತೆಯನ್ನು ಮಾತ್ರ ಪಡೆದುಕೊಂಡಿದ್ದರು. ತಮ್ಮ ನಿಷ್ಠೆಯ ಕಾರಣದಿಂದ ಸಾಮಂತ ಹುದ್ದೆಯ ಬಡ್ತಿ ಹೊಂದಲು ಇವರಿಗೆ ಅವಕಾಶವಿತ್ತು. ಉಚ್ಚಂಗಿ ಪಾಂಡ್ಯರು ೧ನೇ ಸೋಮೇಶ್ವರನ ಕಾಲದಲ್ಲಿ ಸೈನಿಕರಾಗಿದ್ದು ವಿಕ್ರಮಾದಿತ್ಯನ ಕಾಲದಲ್ಲಿ ನೊಳಂಬವಾಡಿ ನಾಡಿನ ಮಹಾಮಂಡಳೇಶ್ವರರಾದರು.

ದಂಡನಾಯಕ ಶಬ್ದದ ವಿಶ್ಲೇಷಣೆ ಭಿನ್ನಾಭಿಪ್ರಾಯವನ್ನು ಹೊಂದಿದೆ. ಇವರು ಕೇವಲ ಸೈನ್ಯಾಧಿಕಾರಿಗಳು ಎಂದು ಮತ್ತು ಸುಂಕ ಸಂಗ್ರಹದ ಉಲ್ಲೇಖಗಳನ್ನು ಗಮನಿಸಿ ಇವರು ಸುಂಕದ ಅಧಿಕಾರಿಗಳೆಂದು ವಿದ್ವಾಂಸರು ಭಿನ್ನವಾಗಿ ಭಾವಿಸಿದ್ದಾರೆ.[೩೩೩] ಶಾಸನಗಳು ತಿಳಿಸುವಂತೆ ದಂಡನಾಯಕರು ಏಕಕಾಲದಲ್ಲಿ ಎರಡಕ್ಕಿಂತ ಹೆಚ್ಚಿನ ಹುದ್ದೆಯ ಕರ್ತವ್ಯಗಳನ್ನು ನಿರ್ವಹಿಸಿದ್ದಾರೆ.

ವಿಜಯ ಪೆರ್ಮಾಡಿ, ಸರ್ವಾಧ್ಯಕ್ಷ, ಮಹಾಪಸಾಯಿತ, ಮಹಾಪ್ರಧಾನ ಮತ್ತು ದಂಡನಾಯಕ ವಿಜಯಪಾಂಡ್ಯನ ರಾಜ್ಯಕಾರ್ಯಗಳನ್ನು ನಿರ್ವಹಿಸುವ ಅಧಿಕಾರವನ್ನು ಹೊಂದಿದ್ದ. ಶಂಕರದಂಡ ನಾಯಕ ಮೂರಕ್ಕೂ ಹೆಚ್ಚು ಪದವಿಗಳನ್ನು ಪಡೆದಿದ್ದ.

ಶಾಸನಗಳಲ್ಲಿ ಬರುವ ಇನ್ನೊಂದು ಶಬ್ದ 'ಮಹಾಸಾಮಂತಾಧಿಪತಿ'; ಈ ವಿಶೇಷಣವು ಸುಂಕದ ಮಹಾಸಾಮಂತರ ಅಧಿಪತಿಗಳೆಂಬುದರ ಸೂಚನೆಯಾಗಿದೆಯೇ ಹೊರತು ಆಳುವ ಮಹಾಸಾಮಂತರ ಅಧಿಪತಿಗಳೆಂಬುದರ ಸೂಚನೆಯಲ್ಲ. ಸಾಮಂತ, ಅರಸರ ಆಡಳಿತ ಅಥವಾ ಮಂತ್ರಿ ಪರಿಷತ್ತು ಚಿಕ್ಕದಾಗಿರುತ್ತಿತ್ತು. ಅವರು ಹೊಂದಿದಂತಹ ಆಡಳಿತದ ಭೂಪ್ರದೇಶ ಮತ್ತು ಅವರ ಆರ್ಥಿಕ ಅಂಶಗಳು ಅದರ ಮೇಲೆ ಪರಿಣಾಮವನ್ನು ಬೀರುತ್ತವೆ. ಈ ಕಾರಣಕ್ಕೆ ಸಾಮಂತ ಅರಸರುಗಳು ಒಬ್ಬ ಸಮರ್ಥ ವ್ಯಕ್ತಿಗೆ ಎರಡು ಅಥವಾ ಮೂರಕ್ಕಿಂತ ಹೆಚ್ಚಿನ ಹುದ್ದೆ ಕರ್ತವ್ಯಗಳನ್ನು ನೀಡಿ ರಾಜ್ಯದ ಆಡಳಿತವನ್ನು ಕ್ರಿಯಾಶೀಲವಾಗಿರಿಸಿದ್ದರು. ಇವರು ತಾವು ಹೊಂದಿರುವ ತಕ್ಕಮಟ್ಟಿನ ಸೈನ್ಯವನ್ನು ಚಕ್ರವರ್ತಿಯು ಅಪೇಕ್ಷಿಸಿದಾಗ ಅವರ ಬೆನ್ನಿಗೆ ನಿಂತು ಹೋರಾಡುತ್ತಿದ್ದರು. ಪಾಂಡ್ಯರ ಶಾಸನಗಳಲ್ಲಿ ಕಂಡುಬರುವ ದಂಡನಾಯಕರನ್ನು ಇಲ್ಲಿ ಗುರುತಿಸುವ ಪ್ರಯತ್ನ ಮಾಡಲಾಗಿದೆ.

**ಅಣುಕ ಪಲ್ಲವರಾಯ**

ದಂಡನಾಯಕ ಅಣುಕ ಪಲ್ಲವರಾಯ ನೊಳಂಬವಾಡಿಯ ವಡ್ಡರಾವುಳ ಹೆರ್ಜ್ಜುಂಕವನ್ನು ನೋಡಿಕೊಳ್ಳುತ್ತಿದ್ದ. ಕ್ರಿಶ. ೧೧೦೬ರ ಅಂಬಳಿ ಶಾಸನ,[೩೩೪] ತ್ರಿಭುವನಮಲ್ಲ ಪಾಂಡ್ಯದೇವರು ನೊಳಂಬವಾಡಿ-೩೨೦೦೦ವನ್ನು ಸುಖದಿಂದ ಆಳುತ್ತಿರುವಾಗ ಆತನ ಕೈಕೆಳಗೆ ಶ್ರೀಮನ್ಮಹಾಪ್ರಾಧಾನ ನೊಣಂಬವಾಡಿ-೩೨೦೦೦ದ ವಡ್ಡರಾವುಳ ಹೆರ್ಜ್ಜಂಕದ ದಿಷ್ಠಾಯಕನುಣುಕಪಲ್ಲವರಾಯ ದಂಡನಾಯಕರ ಬೆಸದಿಂ ದೇವ ಸುಂಕದ ಹೆಗ್ಗಡೆ ಕೇಸಿರಾಜನುಂ ಕಾಳಿಯರಸರು ಅಮ್ಮಳೆಯ ಐವತ್ತು ಮಹಾಜನರ ಕಾಲನ್ನು ತೊಳೆದು ಹಿರಿಯಕೆರೆಯ ಜೀರ್ಣೋದ್ಧಾರಕ್ಕಾಗಿ ಎಲೆಯ ಹೇರಿನ ಸುಂಕವನ್ನು ಬಿಡುತ್ತಾರೆ.

**ಅನ್ತಪಾಳ ದಂಡನಾಯಕ**

ಚಾಳುಕ್ಯ ಚಕ್ರವರ್ತಿ ವಿಕ್ರಮಾದಿತ್ಯ ಜಯಂತೀಪುರದ ನೆಲೆವೀಡಿನಲ್ಲಿದ್ದಾಗ ಆತನ ಜೊತೆಯಲ್ಲಿ ದಂಡನಾಯಕ ಮಹಾಪ್ರಧಾನಿ, ಬಾಣಸವೆರ್ಗಡೆ ಮನೆವೆರ್ಗ್ಗಡೆ ಹುದ್ದೆಗಳನ್ನು ಹೊಂದಿದ ಅನ್ತಪಾಳ ನೆಚ್ಚಿನ ದಂಡನಾಯಕನಾಗಿದ್ದ ವಿಕ್ರಮಾದಿತ್ಯ ತನ್ನ ಅಧೀನದಲ್ಲಿದ್ದ ಸಾಮಂತ ಅರಸರ ಮೇಲೆ ನಿಯಂತ್ರಣ ಸಾಧಿಸಲು ಮತ್ತು ಅವರ ರಾಜ್ಯದ ಸುಂಕವನ್ನು ಸಂಗ್ರಹಿಸಲು ಈತನನ್ನು ನೇಮಿಸಿದ್ದ. ಹಾಗಾಗಿ ಅನ್ತಪಾಳ ದಂಡನಾಯಕನಿಗೆ ಸಂಬಂಧಿಸಿದ ಶಾಸನಗಳು ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ದೊರೆತಿವೆ. ವಿಕ್ರಮಾದಿತ್ಯ ಜಯಂತೀಪುರದಲ್ಲಿದ್ದಾಗ ಅನ್ತಪಾಳಯ ನೊಳಂಬವಾಡಿ ನಾಡಿನ ಆಡಳಿತವನ್ನು ನೋಡಿಕೊಳ್ಳುತ್ತಿದ್ದ. ಕ್ರಿಶ. ೧೦೮೩ರ ಅಂಬಳಿ ಶಾಸನ,[೩೩೫] ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನ್ಮಹಾಪ್ರಾಧಾನ, ಬಾಣಸವೆರ್ಗ್ಗಡೆ, ಮನೆವೆರ್ಗ್ಗಡೆ

ಪನ್ನಾಯದಧಿಷ್ಠಾಯಕನನನ್ತ ಪಾಳಯ್ಯದಣ್ಣನಾಯಕರು ಶ್ರೀಕಲಿದೇವಸ್ವಾಮಿಯ ವೀಳೆಯದ ಪುಣ್ಯದಿಂದ ತಿಂಗಳಿಂಗೊಂದಲೆಯ ಹೇರೆ ಪನ್ನಾಯದ ಸುಂಕಮಂ ಸರ್ವ್ವಾಯಶುದ್ಧಿಯಿಂ ಬಿಟ್ಟರು ಎಂದು ವಿವರಣೆ ನೀಡುತ್ತದೆ.

**ಮುದ್ದರಸ**

ದಂಡನಾಯಕ ಮುದ್ದರಸ ಪಾಂಡ್ಯದೇವನ ಕಾಲದಲ್ಲಿ ನೊಳಂಬವಾಡಿ ನಾಡಿನ ಪನ್ನಾಯದ ಸುಂಕವನ್ನು ಆಳುತ್ತಿದ್ದ. ಕ್ರಿಶ. ೧೧೧೦ರ ಹೂವಿನಹಡಗಲಿ ಶಾಸನ,[೩೩೬] ತ್ರಿಭುವನಮಲ್ಲ ಪಾಂಡ್ಯದೇವನು ನೊಳಂಬವಾಡಿ ವಿಭಾಗವನ್ನು ಕುಮಾರವೃತ್ತಿಯಿಂದ ಆಳುತ್ತಿರುವಾಗ ಮಹಾಮಾತ್ಯಪಧವೀವಿ ರಾಜಮಾನ ಮಾನೋನ್ನತ ಪ್ರಭು ಮನ್ತ್ರೋತ್ಸಾ... ಸಂಪನ್ನರಪ್ಪ ಶ್ರೀಮದಚ್ಚು ಪನ್ನಾಯದಧಿಷ್ಠಾಯಕಂ ದಣ್ಣನಾಯಕ ಮುದ್ದರಸರು ನೊಳಂಬವಾಡಿ ಮೂವತ್ತಿರ್ಚ್ಛಾಸಿರದ ಪನ್ನಾಯದ ಸುಂಕುಮಂನು ಆಳುತ್ತಿರುವಾಗ, ಹಡಗಲಿಯ ಮಹಾಜನಗಳ ಸಮ್ಮುಖದಲ್ಲಿ ತುಂಗಭದ್ರೆಯ ತೆಂಕಣದಂಡೆಯ ಸೋಮೇಶ್ವರ ದೇವರಿಗೆ ದಾನ ಬಿಡುತ್ತಾರೆ. ಕ್ರಿಶ. ೧೧೧೦ರ ಸೋಗಿ ಶಾಸನ,[೩೩೭] ದಂಡಾಧಿಪ ಮುದ್ದರಸ ಅಥವಾ ಮುದ್ದರಾಜನು ಸೋಗಿಯ ಬಳಿಯ ನಾಗಸಮುದ್ರ ಕೆರೆಗಾಗಿ ಕೆಲವು ದಾನ ಬಿಡುತ್ತಾನೆ. ನೀಲಗುಂದ ಶಾಸನ,[೩೩೮] ತ್ರಿಭುವನಮಲ್ಲ ಪಾಂಡ್ಯದೇವನ ದಂಡನಾಯಕರಾದ ಅನಂತಪಾಲಯ್ಯ ಮತ್ತು ಮುದ್ದರಸರು ಕಿರ್ಬ್ಬಟ್ಟೆಯ ಸುಂಕವನ್ನು ಪಡೆದು ಆಳುತ್ತಿರುವಾಗ ನೀರ್ಗ್ಗುಂದದ ಭೀಮೇಶ್ವರ ದೇವರ ಸೇವೆಗಾಗಿ ಕೆಲವು ತೆರಿಗೆಗಳನ್ನು ದಾನ ಬಿಟ್ಟಿರುವ ಮಾಹಿತಿ ಇದೆ.

**ತಿಕ್ಕಭಟ್ಟ**

ಬ್ರಾಹ್ಮಣ ಕುಲದ ತಿಕ್ಕಭಟ್ಟನು ತ್ರಿಭುವನಮಲ್ಲ ಪಾಂಡ್ಯದೇವನ ಕಾಲದಲ್ಲಿ ಮಹಾಪ್ರಧಾನ ಮತ್ತು ಪನ್ನಾಯದ ದಂಡನಾಯಕ ಹುದ್ದೆಯ ಕರ್ತವ್ಯಗಳನ್ನು ನೋಡಿಕೊಳ್ಳುತ್ತಿದ್ದ. ಕ್ರಿಶ. ೧೧೧೫ರ ಬಾಗಳಿಯ ಶಾಸನ,[೩೩೯] ಮಹಾಸಾಮಂತಾಧಿಪತಿ ಮಹಾಪ್ರಚಂಡ ದಂಡನಾಯಕ ಸಿಷ್ಟೇಷ್ಟಜನಾಭೀಷ್ಟ ಫಲಪ್ರದಾಯಕಂ ಹರಚರಣಸರಸೀರುಹಮಧುಕರಂ ವಿನಿಯರತ್ನಾಕರಂ ನಿಯೋಗಯೋಗನ್ಧರಂ ಪತಿಕಾರ್ಯ್ಯಧುರಸ್ಥರಂ ಚತುಸ್ಸಮಯ ಸಮುದ್ಧರಣ ವಿಶ್ವಾಮಿತ್ರಗೋತ್ರ ಪವಿತ್ರ ನಾಮಾದಿಸಮಸ್ತಪ್ರಶಸ್ತಿತಂ ಮಹಾಪ್ರಧಾನನಚ್ಚುಪನಾಯದದಿಷ್ಠಾಯಕಂ ದಂಡನಾಯಕ ತಿಕ್ಕಭಟ್ಟರು ಬಾಗಳಿಯ ೫೦ ಮಹಾಜನರ ಮತ್ತು ಶಿವಶಕ್ತಿ ಪಂಡಿತರ ಸನ್ನಿಧಾನದಲ್ಲಿ ದಾನ ಬಿಟ್ಟರು.

**ಬನ್ನಿಗೋಳದ ಸೋವರಸ**

ದಂಡನಾಯಕ ಬನ್ನಿಗೋಳದ ಸೋವರಸ ನೊಳಂಬವಾಡಿ-೩೨೦೦೦ದ ವಡ್ಡರಾವುಳದ ಸುಂಕವನಾಳುತ್ತಿದ್ದ. ಕ್ರಿಶ. ೧೧೨೨ರ ಬಾಗಳಿಯ ಶಾಸನ,[೩೪೦] ಮಹಾಪ್ರಚಂಡ ದಂಡನಾಯಕ ಸಿಷ್ಟೇಷ್ಟಜನತುಷ್ಟಿದಾಯಕ ಹರಚರಣ ಸರಸೀರುಹಮಧುಕರಂ ವಿನಿಯರತ್ನಾಕರಂ ವಿಯೋಗ

ಯೋಗನ್ಧರಂ ಪತಿಕಾರ್ಯ್ಯಧುರಂಧರಂ ನಾಮಾಧಿಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನ್ಮಹಾಪ್ರಧಾನಂ ದಂಡನಾಯಕಂ ಬನ್ನಿಗೋಳದ ಪ್ರಭುವ ಸೋವರಸರ್ ನೊಳಂಬವಾಡಿ ಮೂವತ್ತಿರ್ಚ್ಛಾಸಿರದ ವಡ್ಡರಾವುಳದ ಸುಂಕಮನಾಳ್ದು ಸುಖದಿನಿರೆ. ದೇವರಗ್ರಾಸನದ ಸತ್ರಕ್ಕೆ ವಡ್ಡರಾವುಳದ ಸುಂಕ ಲಕ್ಷಕ್ಕೆ ಆರುಪಣ ಮುಪ್ಪಾಗದಲ್ಲಿ ಒಂದು ಪಾಗಾ ಬಿಟ್ಟಿರುವುದನ್ನು ಉಲ್ಲೇಖಿಸುತ್ತದೆ.

**ಮಹಾದೇವರಸ**

ದಂಡನಾಯಕ ಮಹಾದೇವರಸನನ್ನು ಕ್ರಿ.ಶ. ೧೧೧೯ರ ಬಾಗಳಿ ಶಾಸನ,[೩೪೧] ತ್ರಿಭುವನಮಲ್ಲ ಪಾಂಡ್ಯದೇವನ ಪಾದಾಬ್ಜಭ್ರಿಂಗಂ ಮಹಾಸಾಮಂತಾಧಿಪತಿ, ಮಹಾಪ್ರಚಂಡದಂಡನಾಯಕ ಶಿಷ್ಟೇಷ್ಟ ಜನಾಭೀಷ್ಟಪದಪ್ರದಾಯಕಂ, ನಿಯೋಗಯೋಗನ್ಧರಂ ಪತಿಕಾರ್ಯ್ಯಧುರಸ್ಥರಂ ಸಾಹಸಸೋತ್ತುಗಂ ತ್ರಿಭುವನಮಲ್ಲದೇವಪಾದಾಬ್ಜಭ್ರಿಂಗಂ ನಾಮಾಧಿಸಮಸ್ತಪ್ರಶಸ್ತಿ ಸಹಿತಂ ಶ್ರೀಮನ್ಮಹಾಪ್ರಧಾನನಚ್ಚು ಪನ್ನಾಯದಧಿಷ್ಠಾಯಕಂ ದಂಡನಾಯಕದಂಣ್ಣಾಯದ ಮಹದೇವರಸ ಬೆಸದಿಂ ಸಮಸ್ತರಾಜ್ಯಭರ ನಿರೂಪಿತ ಮಹಾಮಾತ್ತ್ಯ ಪದವೀವಿರಾಜಮಾನಮಾಸೋನ್ನತ ಪ್ರಭುಮಂತ್ರೋತ್ಸಾ ಹಶಕ್ತಿಪಯ ಸಂಪನ್ನರಪ್ಪ ಶ್ರೀಮದಂಡನಾಯಕ ರಿಕ್ಷಿಯಣ್ಣಭಟ್ಟರು ಭಕ್ತಜನಚಿಂನ್ತಾಮಣಿಯಪ್ಪ ಶ್ರೀ ಮದ್ದಿಬ್ಯಲಿಂಗಂ ನೀಲೇಶ್ವರದೇವರ ನಿವೇದ್ಯಕ್ಕೆ ದಾನ ಮಾಡಿರುವುದನ್ನು ತಿಳಿಸುತ್ತದೆ.

**ರವಿಗದೇವನ**

'ಆಹವಮಲ್ಲ'ನೆಂಬ ಬಿರುದುಳ್ಳ ಸೋಮೇಶ್ವರ ದೇವನ ಮಗ ವಿಕ್ರಮಾದಿತ್ಯ ಚಾಳುಕ್ಯ 'ಕುಲತಿಲಕ'ನಾಗಿ ವಿಜಯರಾಜ್ಯವನ್ನಾಳಿದ. ಅವನ ಆಳ್ವಿಕೆಯ ೧೩ ಜನ ಮಹಾಮಂತ್ರಿಗಳಲ್ಲಿ ಧೀರನೂ, ಧೀಮಂತನೂ ಸಂಧಿವಿಗ್ರಹಿಯೂ ಆದ ರವಿಗ ಇದ್ದನು. ಇವನನ್ನು ರವಿಯಣ್ಣ, ರವಿದೇವ ರವಿಗ ಎಂದು ಕರೆಯಲಾಗುತ್ತಿತ್ತು. ಈತ ತ್ರಿಭುವನಮಲ್ಲ ಪಾಂಡ್ಯದೇವ ನೊಳಂಬವಾಡಿಯನ್ನು ಆಳುತ್ತಿರುವಾಗ ಹೂವಿನಹಡಗಲಿಯ ಅಗ್ರಹಾರದಲ್ಲಿ ನೆಲೆನಿಂತು 'ರಬ್ಬಲದೇವಿ'ಯನ್ನು ಮದುವೆ ಮಾಡಿಕೊಳ್ಳುತ್ತಾನೆ. ಈ ರಬ್ಬಲದೇವಿ ಅಲ್ಲಿ ಕೇಶವ ದೇವಸ್ಥಾನವನ್ನು ನಿರ್ಮಿಸುತ್ತಾಳೆ.

ರವಿಗ ದೊರೆನಾಡಿನ ಕಿರುತೊರೆಯ ದಡದಲ್ಲಿದ್ದ ವಿಪ್ರಗ್ರಾಮ ಮುಕುಂದೆಯಲ್ಲಿ ಹುಟ್ಟಿ ಬೆಳೆದಿರಬೇಕು. ತಂದೆ ಕಶಪ್ಯ ಗೋತ್ರದ ಕೊಪ್ಪದೇವ ತಾಯಿ ಪೆಂಪಕಬ್ಬೆ ಚಾಳುಕ್ಯ ದೊರೆ ಎರಡನೇ ಜಯಸಿಂಹನ ಆಳ್ವಿಕೆಯ ಕಾಲದಲ್ಲಿ ಅವನನ್ನು ನಯದೊಂದು ಉಪದ್ರಾವಿಶುದ್ಧಿಯಿಂದ ಮೆಚ್ಚಿಸಿ ಅಕ್ಷಯ ನಿಧಿ ಭಂಡಾರ ಗರಣತನದ ಆಸ್ಪದವನ್ನು ಕಪ್ಪದೇವ ಪಡೆದನೆಂದು ಶಾಸನ ಉಲ್ಲೇಖಿಸುತ್ತದೆ.[೩೪೨] ಆ ಕಾಲಕ್ಕಾಗಲೇ ರವಿಗ ಕೊಪ್ಪದೇವನ ಐದನೇ ಮಗನಾಗಿ ಹುಟ್ಟಿ ಬೆಳೆಯುತ್ತಿರಬೇಕು. ಆಹವಮಲ್ಲ ಸೋಮೇಶ್ವರನ ಆಳ್ವಿಕೆಯ ಆರಂಭವಾದಾಗ ಈ ಶೂರ ಬ್ರಾಹ್ಮಣ ಯುವಕ ತಾರುಣ್ಯದ ಮೆಟ್ಟಿಲೇರಿದಂತೆ ಕಾಣುತ್ತದೆ. ರವಿಗ ಸಕಲ ವಿದ್ಯಾಪಾರಂಗತನಾಗಿದ್ದ ಹಾಗಾಗಿ ಸೋಮೇಶ್ವರ ಈತನ ನಿಜ ವಿದ್ಯಾವೈಭವವನ್ನು ಮೆಚ್ಚಿ ಲಾಳ ಸಂಧಿವಿಗ್ರಹಿ ಪದವಿಯನ್ನು

ನೀಡುತ್ತಾನೆ. ನಂತರದಲ್ಲಿ ವಿಕ್ರಮಾದಿತ್ಯನ ಕಾಲದಲ್ಲಿ ಬೇರೆ ಬೇರೆ ಪದವಿಗಳನ್ನು ಮತ್ತು ರಾಜ ಚಿಹ್ನೆಗಳನ್ನು ಪಡೆದುಕೊಳ್ಳುತ್ತಾನೆ. ರವಿಗ ದಂಡನಾಯಕ ನೊಳಂಬವಾಡಿಯ ನಾಡಿನೊಳಗೆ ಹುಟ್ಟಿದ್ದರಿಂದ ಸಹಜವಾಗಿಯೇ ತ್ರಿಭುವನಮಲ್ಲ ಪಾಂಡ್ಯದೇವನ ಪ್ರೀತಿ ವಿಶ್ವಾಸಕ್ಕೆ ಪಾತ್ರನಾಗಿದ್ದ. ಆದ್ದರಿಂದಲೇ ತನ್ನ ಆಡಳಿತ ಭಾಗದಲ್ಲಿ ಕೇಶವ ದೇವಾಲಯ ನಿರ್ಮಾಣಕ್ಕೆ ಮುಕ್ತ ಅವಕಾಶ ನೀಡಿದ್ದ ಹಾಗೂ ಉದಾರವಾಗಿ ದಾನ ಮಾಡುತ್ತಾನೆ.

ಕ್ರಿ.ಶ. ೧೦೯೦, ೧೦೯೨, ೧೧೨೬, ೧೧೨೮ ಹೀಗೆ ಬೇರೆ ಬೇರೆ ಕಾಲದ ಮಾಹಿತಿ ನೀಡುವ ಹೂವಿನಹಡಗಲಿಯ ಶಾಸನ,[೩೪೩] ರವಿಗ ದಂಡನಾಯಕನ ಶೌರ್ಯ ಗುಣಗಳನ್ನು ವರ್ಣಿಸುತ್ತದೆ. ಮಹಾಮಂಡಳೇಶ್ವರ ಕುಳಂಬಪುರದೊಡೆಯರೂ ಆದ ತ್ರಿಭುವನಮಲ್ಲ ಪಾಂಡ್ಯದೇವರು ನೊಳಂಬವಾಡಿ-೩೨೦೦೦ ಮತ್ತು ಮಾಸವಾಡಿ-೧೪೦ನ್ನು ಆಳುತ್ತಿರುವಾಗ ಶಂಕ ಚಕ್ರ ಗದಾಪಾಣಿಯಾದ ಕೇಶವನು ರವಿಗ ಸೇನಾಪತಿಗೆ ಆಶೀರ್ವದಿಸಿ ಹರಸಿದನು. ದಕ್ಷಿಣ ದಿಗ್ ಭಾಗದ ಭೂಮಂಡಲದಲ್ಲಿ ಕುಂತಳದೇಶ ಅದನ್ನು ಹೊತ್ತ ಆದಿವರಾಹಮೂರ್ತಿ ಹಾಗೂ ಜನಾರ್ಧನನಾದ ಕೇಶವನು ರವಿಗನಿಗೆ ಸಕಲ ಇಷ್ಟಾರ್ಥ ಸಿದ್ಧಿಯನ್ನು ಕರುಣಿಸಿದನು. ಕಮಲನಾಭನ ಗರ್ಭಕಮಲದಿಂದ ಬ್ರಹ್ಮ ಹುಟ್ಟಿದಂತೆ ರವಿಗ ಚಮೂಪತಿಯ ಪಿತಾಮಹ ತ್ರಿವೇದಿ ಭಟ್ಟರು ಹುಟ್ಟಿದರು. ಕಶ್ಯಪ ಗೋತ್ರದ ಈ ಮೂಲಪುರುಷನಿಂದ ರವಿಗನ ವಂಶಾವಳಿ ಬೆಳೆಯಿತು. ಮೂಲಪುರುಷ ತ್ರಿವೇದಿಭಟ್ಟರ ಮಗ ಶಂಕರಭಟ್ಟ. ಅವರ ಮಗ ಕೊಪ್ಪಣನಂದನ ಹೆಂಡತಿ ಜಗದೇಕಮಾತೆ, ವಿನೀತೊತ್ತಮೆಯಾದ ಪೆಂಪಕಬ್ಬೆ.. ಕೊಪ್ಪದೇವನ ಅನುಗ್ರಹದಿಂದಾಗಿ ಈ ದಂಪತಿಗಳಿಗೆ ಐದು ಜನ ಮಕ್ಕಳಾದರು. ಹಿರಿಯವನು ವಾವಣಯ್ಯ, ಅವನ ತಮ್ಮ ಶಂಕರಭಟ್ಟ, ಇವರ ತಮ್ಮ ರೇವಣ್ಣಭಟ್ಟ, ನಾಲ್ಕನೆಯವನೇ ಮಾಚೇಯಭಟ್ಟ, "ಈ ನಾಲ್ವರಿಂದಂ ಕಿರಿಯ" ಶಸ್ತ್ರ ಶಾಸ್ತ್ರ ಸಾಹಿತ್ಯ ಕಲಾ ಜ್ಞಾನಧಿಯೆನಿಸಿದ ರವಿದೇವ. ಇಂತಹ ಗುಣ ಸಂಪನ್ನನಾದ ರವಿಗನಿಗೆ ಚಾಳುಕ್ಯ ಚಕ್ರವರ್ತಿ ತ್ರೈಲೋಕ್ಯಮಲ್ಲದೇವನು 'ಸಂಧಿವಿಗ್ರಹಿ' ಎಂಬ ಪದವಿಯನ್ನು ದಯಪಾಲಿಸಿದ. ಚಕ್ರವರ್ತಿಯ ಕೀರ್ತಿಯನ್ನು ಸಾಮ್ರಾಜ್ಯವನ್ನು ಊರ್ಜಿತಗೊಳಿಸಿದ ರವಿಗನ ವರ್ಚಸ್ಸು ೧೩ ಜನ ಮಹಾಮಂತ್ರಿಗಳಿಗಿಂತಲೂ ಇಮ್ಮಡಿಯಾಗಿ ವೃದ್ಧಿಸಿತು. ಸಂಧಿವಿಗ್ರಹ ರತ್ನನೆನಿಸಿಯೂ ಮಹಾಮಂತ್ರಿಗೆ ಸಮಾನನಾಗಿಯೂ ರವಿಗ ಮೆರೆದ. ಅವನಿಂದಾಗಿ ವಿಕ್ರಮಾದಿತ್ಯನ ಸಾಮ್ರಾಜ್ಯ ಸುಗಮವಾಗಿ ನಡೆದಿತ್ತು. ಆದ್ದರಿಂದಲೇ ಚಕ್ರವರ್ತಿ ಅವನಿಗೆ ಬೆಳ್ಗೊಡೆ, ಪಾವುಡಂಬರ, ಚಾಮರ, ಓರ್ಜರ, ಕುರುಳ ಕುಂತವೆಂಬ ರಾಜಚಿಹ್ನೆಗಳನ್ನು ಕೊಟ್ಟು ಗೌರವಿಸಿದ. ಬೇಡುವವರ ಕಾಮಧೇನುವಾಗಿ ಕೀರ್ತಿಗೆ ಆಗರವಾಗಿ ರವಿಗ ಚಾಳುಕ್ಯ ಚಕ್ರವರ್ತಿ ಶಕಪುರುಷ ೬ನೇ ವಿಕ್ರಮಾದಿತ್ಯನ ಆಳ್ವಿಕೆಯಲ್ಲಿ ಆದಿತ್ಯನಂತೆ ಬೆಳಗಿದನು. ಸ್ವಸಾಮರ್ಥ್ಯದಿಂದ ಸಾಮ್ರಾಜ್ಯವನ್ನು ವಿಸ್ತರಿಸಲು ನೆರವಾದನು. ತನ್ನಂತೆ ಈ ಜಗತ್ತಿನಲ್ಲಿ ಅತ್ಯುಪಕಾರಿಗಳು, ಅತ್ಯುದಾರರು, ಮತ್ತೊಬ್ಬರಿಲ್ಲ ಎಂಬ ಹೆಗ್ಗಳಿಕೆಗೆ ಭಾಜನನಾದನು. ಚಾಳುಕ್ಯ ರಾಜ್ಯದ ಮೂಲ ಸ್ಥಂಬವಾಗಿ ವಿಕ್ರಮ ಭೂಪಾಲನ

ಬಲಗೈ ಬಂಟನೆನಿಸಿದನು. ಪರಮ ವೈರಿ ಮಾಳವ ರಾಜನನ್ನು ಸೋಲಿಸಿ ಆ ಸಾಮ್ರಾಜ್ಯದಲ್ಲಿ ವಿಜಯ ಪತಾಕೆಯನ್ನು ಹಾರಿಸಿದನು. ಅದಕ್ಕಾಗಿ ರಾಜನ ಕೃಪೆಗೆ ಪಾತ್ರನಾಗಿ ರಾಜ ಸಭಾವನೆಯಿಂದ ಸಂಜೆಮಠ, ಪ್ರಪಗೋಪ್ರಚಾರ, ವಿಶಾವಸಥ, ಮುರಾರಿ ಭವನ, ಬ್ರಾಹ್ಮಣ ಛತ್ರಗಳನ್ನು ನಿರ್ಮಿಸಿ ಧರ್ಮ ಕಾರ್ಯಗಳ ಪೂರೈಸಿದನು. ಧರಣಿಯ ಮೇಲೆಲ್ಲ ಎಲ್ಲಿ ನೋಡಿದರಲ್ಲಿ ಇವನ ಧರ್ಮಕಾರ್ಯಗಳೇ ಕಾಣಿಸುವಂತಾದವು..... ಅಷ್ಟೆ ಅಲ್ಲ ನರ್ಮದಾ, ಸಿಂಧು, ಯಮುನಾ ನದಿಗಳ ದಂಡೆಯ ಮೇಲೆ ದೇವಾಲಯಗಳನ್ನು ನಿರ್ಮಿಸಿ ಕೀರ್ತಿವಂತ ನಾದನು. ನಾಯಕನಾಗಿ ಧರ್ಮ ವಿನೋದಿಯಾಗಿ ಕೀರ್ತಿ ಸಂಪನ್ನನಾಗಿ ಧಾರ್ಮಿಕ ನಂದನನಾಗಿ ಪುಣ್ಯಮೂರ್ತಿಯಾಗಿ ಮೆರೆದ ರವಿ ದಂಡನಾಯಕನಿಗೆ ದಯೆ, ಧರ್ಮ, ವಿನಯಗಳ ಖಣಿಯಂತಿದ್ದ ಮಾನವತೆಯ ಸಾಕಾರ ಮೂರ್ತಿಯಾಗಿದ್ದ ರಬ್ಬಲದೇವಿಯಂತಹ ಹೆಂಡತಿ ವಿಕ್ರಮಾದಿತ್ಯನಂತಹ ಚಕ್ರವರ್ತಿ ದೊರಕಿರುವಾಗ ಅವನ ಭಾಗಕ್ಕೆ ಎಣೆಯೇ ಇರಲಿಲ್ಲ. ರವಿಗನಿಗೆ ಕೊಪ್ಪಣನಂದನನಂತಹ ತಂದೆ, ಪಂಪಕಬ್ಬೆಯಂತಹ ತಾಯಿ, ರಬ್ಬಲದೇವಿಯಂತಹ ಹೆಂಡತಿಯಿರುವಾಗ ಅವನಿಗೆ ಸರಿಸಾಟಿ ಯಾರೂ ಇಲ್ಲಯೆನಿಸಿತ್ತು. ಸುಮನೆ, ಶಾಂಡಿಲ, ಸೀತೆಗೆ ಸಮಾನಳಾದ ರಬ್ಬಲದೇವಿಗೆ ಪತಿವೃತಾಧರ್ಮದಲ್ಲಿ ಯಾರು ಸರಿಸಮಾನರಿರಲಿಲ್ಲ. ಹರಿಯ ವಕ್ಷಸ್ಥಳವನ್ನಲಂಕರಿಸಿದ್ದ ಲಕ್ಷ್ಮಿಯಂತೆ, ಶಿವನ ಅರ್ಧ ದೇಹವನ್ನು ಆವರಿಸಿಕೊಂಡಿದ್ದ ಪಾರ್ವತಿಯಂತೆ, ದೇವೇಂದ್ರನ ತೊಡೆಯೇರಿದ ಶಚಿದೇವಿಯಂತೆ ಅವಳು ಕಾಣಿಸುತ್ತಿದ್ದಳು.

ರವಿಗನ ಅರ್ಧಾಂಗಿ ರಬ್ಬಲದೇವಿ ಪುಣ್ಯ ಬಾಗಿನಿ, ಪತಿಹಿತವೃತೆ, ಆರುಂದತಿ, ದಾನವಿನೋದಿನಿ, ಪ್ರತಿಭಾ ಸರಸ್ವತಿ, ಸತ್ಯವೃತಾಪತಾಕೆ, ದಯಾಪರಳೂ, ವೀರವನಿತೆಯೂ, ಸದಾಚಾರ ಶೀಲೆಯೂ, ಸೌಂದರ್ಯತಿಲೋತ್ತಮೆಯೂ, ಮೃದು ಮಧುರವಾದಿನಿ, ಸಕಲಕಲಾ ಪ್ರವೀಣೆ, ತ್ಯಾಗಮಯಿಯಾದ ರಬ್ಬಲದೇವಿ ಶ್ರೀವತ್ಸಗೋತ್ರ ಸಂಭೋವದ್ಭವಳು. ತಂದೆ ದ್ವೇದಿ ಕುಮಾರಸ್ವಾಮಿ ಎಂಬ ವಿಪ್ರಶ್ರೇಷ್ಠ. ಅವಳು ಹುಟ್ಟಿದ ತೆಂಕನಾಡಿನಲ್ಲಿ ಬಗೆ ಬಗೆ ಹೂ ಬನಗಳಿದ್ದವು. ಇಂತಹ ಹೂ ಬನಗಳ ನಾಡೇ ಹೂವಿನಹಡಗಲಿಯೆಂಬುದು. ಅಲ್ಲಿ ೧೨೦ ಜನ 'ಮಹಾಜನ'ಗಳಿದ್ದರು. ರಾಜನಾಜ್ಞೆಯಂತೆ ಹಡಗಲಿಯ ಎಲ್ಲ ಹವಿ-ಕವಿಗಳನ್ನು ನೋಡಿ ಕೊಳ್ಳುತ್ತಿದ್ದರು. ರಬ್ಬಲದೇವಿಯಂತಹ ವೀರ ಮಹಿಳೆ, ರವಿಗನಂತಹ ತರುಣ ಬ್ರಾಹ್ಮಣ ಶೂರ ಯುವಕ, ವಿಕ್ರಮಾದಿತ್ಯನಂತಹ ಜಗದ್ವಿಖ್ಯಾತ ಚಕ್ರವರ್ತಿಯಿರುವಾಗ ಆ ನಾಡಿನ ಕೀರ್ತಿ ವೈಭವ ವರ್ಣಿಸಲಾಗದು. ಅಲ್ಲಿಯ ಮಹಾಜನರು ಹಾಗೆಯೇ ವಿಚಾರಪರರು ವೀರರು ಆಗಿದ್ದರು.[೩೪೪]

ಗಡಿಭಾಗದ ೭೦ ಮತ್ತರು ಭೂಮಿಯನ್ನು, ಅಡಕೆಯ ತೋಟದ ಹಾಗೂ ಗದ್ದೆಯ ನಡುವಿರುವ ಹೂವಿನತೋಟವನ್ನು ನಾನಾ ಜಾತಿಯ ಹೂ ಬೆಳೆಸಲು ದಾನ ಕೊಡಲಾಯಿತು. ಈ ದಾನ ಆಚಂದ್ರಾರ್ಕವಾಗಿ ನಿಲ್ಲಲಿಯೆಂಬ ಆಶಯದಿಂದ ೧೨೦ ಜನರ ಕಣ್ಣಾವಲಿನಲ್ಲಿ ಶ್ರೀಕೇಶವ ದೇವರಿಗೆ ಬಿಟ್ಟು ಕೊಡಲಾಯಿತು.

**ಕೆಂಗಣ**

ಕೆಂಗಣನು ತ್ರಿಭುವನಮಲ್ಲರಾಯ ಪಾಂಡ್ಯದೇವನ ಕಾಲದಲ್ಲಿ ಆತನ ಸೈನ್ಯದ ಆನೆಯ ಪಸಾಯತ ಹುದ್ದೆಯಲ್ಲಿದ್ದ. ಕ್ರಿ.ಶ. ೧೧೨೨ರ ರಾಮಘಟ್ಟದ ಶಾಸನ,[೩೪೫] ಮಹಾಮಂಡಳೇಶ್ವರ ರಾಯಪಾಂಡ್ಯ ನೊಳಂಬವಾಡಿಯನ್ನು ಆಳುತ್ತಿರುವಾಗ ಆನೆಯ ಸಾಹಣಿ ಪಸಾಯ್ತ ಕೆಂಗಣನು ಪಾಲಮ ಅಥವಾ ಹಾಲಮರಸನು ಸ್ವಂತ ಹಣದಲ್ಲಿ ಕಟ್ಟಿಸಿದ ದೇವಾಲಯಕ್ಕೆ ಆನೆಯ ಪಾಸಯ್ತ ಕೆಂಗಣನು ನಿವೇದಿಸಿ ರಾಮಘಟ್ಟದ ರಾಮೇಶ್ವರದೇವರಿಗೆ ಭೂದಾನ ನೀಡುತ್ತಾನೆ. ಇದೇ ಸಮಯದಲ್ಲಿ ರಾಮಘಟ್ಟದ ಊರೊಡೆಯ ತಿಕಮಯ್ಯನು ರಾಮೇಶ್ವರದೇವರಿಗೆ ತ್ರಿಕೂಟ ದೇವಾಲಯವನ್ನು ಸ್ವಂತ ಹಣದಿಂದ ಮಾಡಿಸಿ ಹಾಲಮರಸನ ಪಾದ ತೊಳೆದು ದಾನ ಬಿಡುತ್ತಾನೆ. ಇದೇ ಅವಧಿಯಲ್ಲಿ ಮಹಾಮಂಡಳೇಶ್ವರ ಸಾಯಿರನಾಡ ಮನ್ನೆಯ ಭಟರಸನು ಕೂಡ ಕೆಲವು ದತ್ತಿಗಳನ್ನು ನೀಡಿರುವುದನ್ನು ಹೇಳುತ್ತದೆ.

**ಆದಿತ್ಯ**

ಆದಿತ್ಯ ದಂಡನಾಥ ರಾಯಪಾಂಡ್ಯದೇವನ ಕಾಲದಲ್ಲಿ ಸರ್ವಾಧ್ಯಕ್ಷ ನಿಯೋಗಾಧಿಕಾರಿ ಮತ್ತು ಸೈನ್ಯಾಧಿಕಾರಿ ಹುದ್ದೆಗಳ ಕರ್ತವ್ಯಗಳನ್ನು ಪಡೆದಿದ್ದ. ಕ್ರಿ.ಶ. ೧೧೨೩ರ ಕುಂದವಾಡದ ಶಾಸನ,[೩೪೬] ರಾಯಪಾಂಡ್ಯ ಉಚ್ಚಂಗಿಯ ನೆಲೆವೀಡಿನಲ್ಲಿ ಆಳುತ್ತಿರುವಾಗ ತ್ರಿಭುವನಮಲ್ಲ ಮಹಾಮಾನವ ಚಕ್ರವರ್ತಿವರ್ದಿತ ವಿಭವೋದ್ಧಾಮಂನೆಗಳ್ದ ಮಂತ್ರಿಶಿರೋಮಣಿ ಆದಿತ್ಯದಣ್ಣನಾಥಂ ಧರೆಯೊಳು॥ ಶ್ರೀಕರಣಂ ಮೊದಲಾಗಿರನೇ ಕನಿಯೋಗಾಧಿಕಾರಿ ಸರ್ವಾಧ್ಯಕ್ಷಂರಾಕೇಂದುವಶದ ಕೀರ್ತಿಲತಾಕಂದಂ ಸಂದನೆಳೆಯೊಳಾದಿ ತ್ಯಾಂತಂ॥ ತ್ರಿಭುವನಮಲ್ಲವಿವರ್ದ್ಧಿತ ವಿಭವಂ, ಭೂಲೋಕ ಮಲ್ಲಮಾನಿತಮಹಿಮಂ ವಿಭವ ಜಗದೇಕಮಲ್ಲ ಪ್ರಭುಭಾವಿತಭಾರ್ಯಾನೆನಿಪನೆಸೆವಾದಿತ್ಯಂ॥ ಪೂಜ್ಯರೇಬಗೆ ಗೊಳೆಮೂಯಿಂ ರಾಜ್ಯದೊಳಂತಂನಮಾತೆ. ಮಾತನೆ ಪಡೆದಂ ಪ್ರಾಜ್ಯಪ್ರಧಾನಗುಣ ಸಾಮ್ರಾಜ್ಯ ಮನಾದಿತ್ಯನಹಿತ ಕುಮುಕುಮುದಾದಿತ್ಯಂ ಇಂದ್ರನೂರ್ಜ್ಜಿತ ಪದದೊಳುಪೇಂದ್ರ ನಿಲಪಂತೆನಿಲಿಸಿದ ನಿಜಪದದೊಳೆರುಂದ್ರ ಯಶೋನಿಧಿ ಪಾಂಡ್ಯನುಪೇಂದ್ರನನಾದಿತ್ಯ ದಂಡನಾಥ ಲಲಾಮಂ॥ ಪ್ರತ್ಯಕ್ಷ ಧರ್ಮಪುತ್ರನಮಾತ್ಮಶಿರೋಮಣಿ ಮನುಪ್ರಶಸ್ತಿ ಚರಿತ್ರಂ ಸತ್ಯಗುಣಾಳಂಕ್ರುತನಮಾತ್ಮ ಶಿರೋಮಣಿ ಮನುಪ್ರಶಸ್ತಿಚರಿತ್ರಂ ಸತ್ಯಗುಣಾಳಂಕ್ರುನಾದಿ ಪತ್ಯಂದ್ರವಿಳಾನ್ವಾಯ ಕಮಳಾದಿತ್ಯಂ॥ ವಚನ ಅಂತುನೆಗಳ್ತವೆತ್ತಾದಿತ್ಯ, ದಂಡನಾಥಂ ತ್ರಿಭುವನರಾಯ ಪಾಂಡ್ಯನಿಂದ ತಾಮ್ರಶಾಸನವನ್ನು ಪಡೆದು ಕುಂದವಾಡದ ಸೋಮನಾಥ ದೇವರಿಗೆ ದಾನ ಬಿಟ್ಟ ಉಲ್ಲೇಖವಿದೆ.

**ಉಯ್ಯವಂದ**

ಉಯ್ಯವಂದ ದಂಡನಾಯಕ ಜಗದೇಕಮಲ್ಲ ವೀರಪಾಂಡ್ಯದೇವನ ಕಾಲದಲ್ಲಿ ಗಣ್ಡರಾದಿತ್ಯನ ಹೊಳಲು ಪ್ರದೇಶದ ಸುಂಕದ ದಂಡನಾಯಕನಾಗಿ ಸೇವೆ ಸಲ್ಲಿಸುತ್ತಿದ್ದ. ಈತನ ಮಗ ಸಾವಿದೇವ ಕೂಡ ಆಡಳಿತದಲ್ಲಿ ಜೊತೆಗಿದ್ದ. ಕ್ರಿ.ಶ. ೧೧೪೨ರ ಹೊಳಲು ಶಾಸನ,[೩೪೭] ವೀರಪಾಂಡ್ಯದೇವರ ಅಧಿಕಾರಿ ವೀರಪಾಂಡ್ಯ ಅಣುಕ ಪಲ್ಲವರಾಯರೂಂ ಉಯ್ಯವಂದ

ದಂಡನಾಯಕರು ಮಗ ಸಾವಿದೇವನಂ ಗಣ್ಡರಾದಿತ್ಯನ ಹೊಳಲು ಗವರೇಶ್ವರ ದೇವರ್ಗ್ಗೆ ಮೂರು ಲಕ್ಷ ಅಡಕೆಯ ಸುಂಕ ವಡ್ಡಲಾಉಳಹೆಜ್ಜುಂಕಮಂ ಬಿಟ್ಟ ಮಾಹಿತಿ ನೀಡುತ್ತವೆ.

**ಕಲಿಮಯ್ಯ**

ಕಲಿಮಯ್ಯ ದಂಡನಾಯಕ ವೀರಪಾಂಡ್ಯದೇವನ ಕಾಲದಲ್ಲಿ ಕೋಗಳಿ-೫೦೦, ಕದಂಬಳಿಗೆ-೧೦೦೦ದ ಸುಂಕಾಧಿಕಾರಿಯಾಗಿ ಆಳುತ್ತಿದ್ದನು. ಉತ್ತಂಗಿ, ದುಗ್ಗವತಿ ನೀಲಗುಂದ ಗ್ರಾಮದ ಶಾಸನಗಳು ಈತನ ಬಗ್ಗೆ ಮಾಹಿತಿ ನೀಡುತ್ತದೆ.

ಕ್ರಿ.ಶ. ೧೧೫೦ರ ಉತ್ತಂಗಿ ಶಾಸನ,[೩೪೮] ವೀರಪಾಂಡ್ಯದೇವರು ಆಳುತ್ತಿರುವಾಗ ಕುತ್ತಂಗಿಯಲ್ಲಿ ಸೌದರ ಬಸವಯ್ಯನು ಕಟ್ಟಿಸಿದ ಬಸವೇಶ್ವರ ದೇವಾಲಯದ ಸೇವಕಾರ್ಯಗಳಿಗೆ ಶ್ರೀಮತು ಪಗಾನಂ ಸೇನಾವರಯದಂಣ್ಡನಾಕರು ಗಾಣದೆರೆಯ ಸುಂಕವನುಯೇಳುಗಾಣದ ತೆರೆಯಂ ಬಿಟ್ಟರು. ಸುಂಕವೇರ್ಗ್ಗಡೆ ಕಲಿಮಯ್ಯ ದಂಡನಾಯಕರು ಈಯೂರ ಗಾಣವಾಗಿ ಬಿಟ್ಟರು. ಅಯಿನೂರ್ಬ್ಬರುಂ ತಳದ ಒಳಜಗರುಂ ಹೊರಗಣಿ ಬಂದ ಹೇರೆಂಗೆ ಮೂವೆವತ್ತಮಾನವೆರಡು ಐವತ್ತೊಕ್ಕಲುತ್ತೆಲ್ಲಿಗರಲ್ಲಿ ದೀವಿಗೆಗೆ ಸೊಟಿಗೆಯೆಣ್ಣೆಯಂ ಬಿಟ್ಟ ಉಲ್ಲೇಖವಿದೆ. ಕ್ರಿ.ಶ. ೧೧೬೭ರ ದುಗ್ಗವತಿ ಶಾಸನ,[೩೪೯] ಕಲಿಮಯ್ಯ ದಂಡನಾಯಕರು ಕೋಗಳಿ-೫೦೦ರ ಸುಂಕಾಧಿಕಾರಿಯಾಗಿ ಆಳುತ್ತಿರುವಾಗ ಆ ಅವಧಿಯಲ್ಲಿ ಸರ್ವಾಧಿಕಾರಿ ಹೆಗ್ಗಡೆ ಸೋವರಸರು ಬಿಕ್ಕಿಗ-೭೦ರಲ್ಲಿನ ದುಗ್ಗವತಿಯ ದೇವರುಗಳಿಗೆ ದಾನ ನೀಡುತ್ತಾರೆ. ಕ್ರಿ.ಶ. ೧೧೬೭ರ ನೀಲಗುಂದ ಶಾಸನ,[೩೫೦] ಕಲಿಮಯ್ಯ ದಂಡನಾಯಕರು ಕೋಗಳಿ-೫೦೦, ಕದಂಬಳಿಗೆ-೧೦೦೦ದ ಸುಂಕವನ್ನು ಆಳುತ್ತಿರುವ ಬಗ್ಗೆ ಸ್ಪಷ್ಟನೆ ನೀಡುತ್ತದೆ.

**ವತ್ಸರಸ**

ಕಮ್ಮೆ ಕುಲದ ಸರ್ಬ್ಬಜ್ಞ ದಂಣ್ಡಾದಿಪ ದೇವಲಕ್ಷ್ಮೀ ನಾಗಲದೇವಿಯವರ ಮಗನಾದ ವತ್ಸರಸ ದಂಡನಾಯಕರು ವೀರ ಪಾಂಡ್ಯನ ಅವಧಿಯಲ್ಲಿ ಸಾಂತಳಿಗೆ-೧೦೦೦ ನಾಡ ಮನ್ನೆಯನ್ನು ನೋಡಿಕೊಳ್ಳುತ್ತಿದ್ದ. ಕ್ರಿ.ಶ. ೧೧೪೮ರ ಬೆಣ್ಣೆಹಳ್ಳಿ ಶಾಸನ,[೩೫೧] ವೀರಪಾಂಡ್ಯ ಉಚ್ಚಂಗಿ ನೆಲೆವೀಡಿನಿಂದ ನೊಳಂಬವಾಡಿ ಪ್ರದೇಶವನ್ನು ಆಳುತ್ತಿರುವಾಗ ಅನುಪಮಮಪ್ಪ ಕಮ್ಮೆಕುಲವೆಂಬ ಸರೋರುಹಹಶಣ್ಡ ದೊಳ್ಕನತ್ಕನಕಸ ರೋಜವುಳ್ಳಲರ್ದ್ದುರಂಜಿಸುವಂ ವಶವಲ್ಲತನ್ನನೆ ಮರೆಯುತ್ತವಿಪ್ಪುಭಯ ಪಕ್ಷವಿಶುದ್ಧತೆವೆತ್ತ ರಾಜಹಂಸನ ತೆರೆನೆನ್ನುಟನ್ತೆ ಜನಸಂಸ್ತುತಿಸಾದುರೇಸರ್ಬ್ಬ ದೇವನ ॥ ಮಲೆಯಂ ಕೀಳ್ಮಲೆ ಮಾಡಿ ಸಾಂತಳಿಗೆಯಂ ನಿಶ್ಚಿಂತದಾಳ್ವನಾಮತಿ ಪಂಮನ್ನೆಯರಾದಿಯಾದಖಿಳರಂ, ನಿಷ್ಕಂಟಕ ಮಾಡಿ ದೋರ್ಬ್ಬಲಮಂ ತೋರೆದ ನಿನ್ನರಾರೆನಿಸಿದಂ ಸರ್ಬ್ಬಜ್ಞದಂಣ್ಡಾದಿಪಂ ನೆಲನುಂನೇಸರು ಮುಳ್ಳಿನಂ ನಿಲಿಸಿದಂ ಲೋಕೈಕವಿಖ್ಯಾತಿಯಿಂ ಆ ವಿಭುವಿನ ಕಾನ್ತೆ ಜಗತ್ಪಾವನೆ ಸುಚರಿತ್ರೆ ಲಲಿತಗಾತ್ರೆ, ದೇವಕುಳಲಕ್ಷ್ಮೀ ನಾಗಲದೇವಿ ಪತಿಖ್ರತೆವದನಸೆದಳು ॥ ಅವರಿರ್ಬ್ಬಗರ್ಭಂ ಪುಟ್ಟಿ ದನವನೀಸ್ತುತ್ಯ ನಿತ್ಯಭಾಗ್ಯೋದಯ ನರ್ನ್ನವ ಗಂಭೀರಂ ಲಕ್ಷ್ಮೀಧರನಂ ಶ್ರೀವತ್ಸರಾಜ ದಣ್ಡಾದೀಶಂ

ಅತಿಚತುರ ಮಂತ್ರಿಮಂತ್ರ ಪ್ರತಿಭಾಖಣ್ಡನ ಸಮಗ್ರ ಶಕ್ತಿ ತ್ರಯಸನುಮಂತ್ರ ಚಾಣಿಕ್ಯ ಶ್ರೀಲೋಹಿಗೋತ್ರಪಾಣ್ಡ್ಯನ್ರಿಪನ ವತ್ಸಚಮೂಪಂ ॥ ಮಹಾಮಂಡಳೇಶ್ವರ ವೀರಪಾಂಡ್ಯದೇವರ ಮಹಾಪ್ರಧಾನಂ ಹಿರಿಯದಂಡನಾಯಕಂ ವತ್ಸರಸರ್ಗ್ಗೆ ಕೋಗಳಿಯೈನೂರರ ಕಂಪಣ ಮುತ್ತಗೆ ಮೂವತ್ತರೊಳಗಣ ಬೆಣ್ಣೆಗನೂರುಂ ಶ್ರೀಸ್ವಯಂಭುದೇವರಿಗೆ ದಾರಾಪೂರ್ವ್ವಕಂ ಮಾಡಿ ಕೊಟ್ಟಿರುವ ಬಗ್ಗೆ ಉಲ್ಲೇಖವಿದೆ.

**ಕಲ್ಯಾಣ ಶಕ್ತಿ ಪಂಡಿತ**

ವಿಜಯಪಾಂಡ್ಯ ದೇವನ ಸೈನ್ಯದ ಮುಖ್ಯಸ್ಥ ಪದವಿಯನ್ನು ಪಡೆದಿದ್ದ ಕಲ್ಯಾಣ ಶಕ್ತಿ ಪಂಡಿತನನ್ನು ಶಾಸನದಲ್ಲಿ ಸೇನಾಪತಿ ಕಲ್ಯಾಣ ಶಕ್ತಿ ಪಂಡಿತ ಎಂದು ಕರೆಯಲಾಗಿದೆ. ಕ್ರಿ.ಶ. ೧೧೬೦ ಗಂಗನರಸಿ ಶಾಸನ,[೩೫೨] ಸೇನಪತಿ ಕಲ್ಯಾಣ ಶಕ್ತಿ ಪಂಡಿತನ ವಂಶಾವಳಿಯನ್ನು ಹೇಳುತ್ತದೆ. ಕಲಿದೇವ ಮತ್ತು ಮಾಕಿಕವ್ವೆ ಅವರಿಗೆ ವಾಮಶಕ್ತಿ ಪಂಡಿತರು ಮತ್ತು ಆದಿತ್ಯ ದಂಡಾಧಿಪರು ಜನಿಸಿದರು. ಕೀರ್ತಿಲಕ್ಷ್ಮೀವರನಾದಾದಿತ್ಯ ದಂಡಾಧಿಪನ ಮಹಿಮೆಯಂಬಣ್ಣಿಸಲು ಬಲ್ಲನಾವ ॥ ಗಿರಿಜಾದೇವಿಗ ಮಾತ್ರಿಲೋಕಗುರುಗಂ ಶ್ರೀಷಣ್ಮುಖಂಪಟ್ಟಿದನ್ತಿರೆ ಭೀಮವ್ಯಗೆವತ್ತ್ಯದಾರ ಚರಿತಂಸೂರ್ಯಂಗೆವೀ ಲೋಕನಿಸ್ತರಣಂ ಪುಟ್ಟಿದನಾತ್ಮವಂಶ ತಿಳಿಕಂವಿದ್ಯಿಡುಮದೇಭೇಂದ್ರ ಕೇಸರಿ ಸೇನಾಪತಿದಣ್ಣ ನಾಥನಖಿಳ ಶ್ರೀಕಾಮಿನೀವಲ್ಲಭ ॥ ಎಂದು ವರ್ಣಿಸುತ್ತದೆ.

**ಶಂಕರ ದಂಡನಾಯಕ**

ಶಂಕರ ದಂಡನಾಯಕನು ವಿಜಯಪಾಂಡ್ಯನ ಆಳ್ವಿಕೆಯಲ್ಲಿ ಮಹಾಪ್ರಧಾನ ದಂಡನಾಯಕ. ಮಹಾಪ್ರಧಾನಸರ್ಬ್ಬಾಧಿಕಾರಿ, ಮಹಾಪ್ರಧಾನಪಸಾಯಿತ ಹುದ್ದೆಯ ಕಾರ್ಯಗಳನ್ನು ನೋಡಿಕೊಳ್ಳುತ್ತಿದ್ದ. ಕ್ರಿ.ಶ. ೧೧೭೮ರ ಹೊಳಲು ಶಾಸನ,[೩೫೩] ಸತ್ಯವಾಕ್ಯ ನಿರ್ಬ್ಬಯ, ಹರಪಾದಪಕಂಜ, ಸಿಮುಖ ದಂಡನಾಥ್ ಪೆರ್ಮ್ಮಯೊಳ್‌ಕೊಂಡನಾ ವಿಜಯಪಾಂಡ್ಯ ಮಹೀಶ ಮಂತ್ರಾಮಂಡನಂ॥ ಮಹಾಮಂಡಳೇಶ್ವರ ವಿಜಯಪಾಂಡ್ಯದೇವರಸರ್ಗ್ಗೆ ಶ್ರೀಮನುಮಹಾಪ್ರಧಾನಂ ದಂಡನಾಯಕ... ವರಸರ ಮಗಂ ಮಹಾಪ್ರಧಾನಂ ಸರ್ಬ್ಬಾಧಿಕಾರಿ ಮಹಾಪಸಾಯಿತಂ ಶಂಕರದಂಡನಾಯಕರ ಧರ್ಮಪ್ರಭಾವಮೆಂದಲಿ ಪ್ರಸ್ಥಾವದಲಿಬಿಂನಪಂಗೆಯ್ಯಲದಂ ಸೌಚಿತ್ಯಬಾಳದಿಂ ಕೇಳ್ದು ಶ್ರೀಮದನಾದಿ ಯಗ್ರಹಾರಂ ಗಂಡರಾದಿತ್ಯನ ಹೊಳಲ ಶ್ರೀಗವರೇಶ್ವರ ದೇವರಂಗಭೋಗಕ್ಕೆ ವಾಸವಡಕೆಯ ಹೆರ್ಜ್ಜುಂಕದಲ್ಲಿ ಲಕ್ಕಕ್ಕೆ ಹಾಗವೊಂದರಂತೆ ದಾನ ಬಿಡುತ್ತಾರೆ.

**ಕೇತದಂಡನಾಥ**

ಕೇತದಂಡನಾಥನು ವಿಜಯಪಾಂಡ್ಯನ ಆಳ್ವಿಕೆಯಲ್ಲಿ ಬಿಕ್ಕಿಗ-೭೦ರ ಭಾಗದಲ್ಲಿದ್ದ. ಕ್ರಿ.ಶ. ೧೧೬೯ರ ಅಲಗಿಲವಾಡ ಶಾಸನ,[೩೫೪] ಎರಗದ ವಿರೋಧಿ ವರ್ಗ್ಗಮನೆರಗಿಸಿನಿಜಪತಿಗೆ ವಿಜಯ ಪಾಂಡ್ಯ ಮಹಿಪಂಗೆರೆಗಿಸಿದ ಸಾಮ್ರಾಜ್ಯ ಮನೆರೆಯೇ ಜಗವಿಜಯ ಪೆರ್ಮ್ಮಾಡಿ ದಣ್ಣಾದೀಶಂ॥ ಸುರುಚಿರ ಚಕ್ರನತ್ಯಮಳಚಂಡಿಕೆಯೊಳ್ ಮದ್ದಚಾರುಲಕ್ಷ್ಮೀಯೊಳ ಸುರಕರಿದುಗ್ದವಾರ್ಧಿ ನವವಿದ್ರುಮಂ ವಲ್ಲರಿಯೋಳುಶಶಾಂಕಭಾಸುರ ಮಣಿಕಾಂತಕಾಂತಿನವ ಮಂಜರಿಯೊಳ್ ನೆರೆದೊಪ್ಪಿ ತೋರುವಂತಿದೆ

ಸೋರಮಿಪ್ಪನಾನತನ ಚಮೂಪತಿ ಕೇತ ದಂಡನಾಥಯೆನಿಸಿ, ತತ್ಪಾದಪದ್ಮೋಪಜೀವಿ ಪೆರ್ಗಡೆ ದಾಸಿಯಣ್ಣ ಹೆಂಡತಿ ಕೇತಲದೇವಿಯ ತಂಗಿಯೂ ಆದ ಅರಸಿಯಕ್ಕಳ ಮಗ ಬಮ್ಮದೇವನ ಬಗ್ಗೆ ಈ ಶಾಸನ ಮಾಹಿತಿ ನೀಡುತ್ತದೆ.

**ಗೋವಿಂದ**

ಹೀರೆಮ್ಯಾಗಳಗೇರಿ ಶಾಸನ ಗೋವಿಂದ ದಂಡಾಧಿಪತಿಯನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೧೭೩ರ ಈ ಶಾಸನ,[೩೫] ಶ್ರೀಕಾನ್ತಾದರ್ಪಣಂ ಪ್ರಕ್ರೇಷ್ಮಬಳಿವಿಕ್ಷಿಪ್ತಾವದುನ್ನೋತಂ ಭೂಕಾನ್ತಭ್ಯುದೆಯ ಪ್ರದಪ್ರವರಂ ದೋರ್ದ್ದಂಣ್ಣಾವತೆಪಾನ್ವಿತಲೋಕಸ್ತುತ್ಯವನಿ ತ್ರಿಮಾರ್ಗ್ಗನಿರುತಂ ವಿಷ್ಣುಪು...ವಾದಿ ರಾಕೇನ್ದುದ್ಯುಕೀರ್ತಿಗೋತ್ರಧರನೀ ಗೋವಿಂದ ದಂಢಾದಿಪ ವಿಜಯಶ್ರೀ ಶ್ರಿವಧೂದರ ಪಣ ನಳಿ, ವಿಜಯಶ್ರೀಪಾಂಡ್ಯದೇವಂ ಬೆಸಸಲ್ ಹಣುವಂ ತಾನೆ ವಿಕ್ರಾನ್ತದಿಂದದೊಪ್ಪಿಮಿರ್ಪ್ಪ ದಂಡಾದಿರಿ ಪುನಿದಿಪರಿಳ ಚೇದಿತಸ್ಥನಾಥ ಧ್ವಜನಿಸನ್ನಾಹನುಗ್ರಾಹವದೊಳೆನಿಸುವಂ ವೀರ ಗೋವಿಂದದೇವಂ ಎಂದು ವರ್ಣಿಸುತ್ತದೆ.

**ವಿಜಯ ಪೆರ್ಮಾಡಿ**

ವಿಜಯ ಪೆರ್ಮಾಡಿಯು ಪರಾಕ್ರಮಿ, ಶೂರ, ಚಾಣಕ್ಷ ದಂಡನಾಯಕನಾಗಿದ್ದ. ಈತ ವಿಜಯಪಾಂಡ್ಯ ದೇವನ ಆಡಳಿತದಲ್ಲಿ ಸರ್ವಾಧಿಕಾರಿ, ಮಹಾಪ್ರಧಾನ ಮಹಾಪಸಾಯತ ಮತ್ತು ದಂಡನಾಯಕ ಪದವಿಗಳನ್ನು ಏಕಕಾಲದಲ್ಲಿ ನೋಡಿಕೊಳ್ಳುತ್ತಿದ್ದ. ವಿಜಯಪಾಂಡ್ಯ ಬಾಲ್ಯದಲ್ಲಿ ಅಧಿಕಾರಕ್ಕೆ ಬಂದಾಗ ಆತನ ಸಮಸ್ತ ರಾಜ್ಯಭಾರದ ಕರ್ತವ್ಯಗಳನ್ನು ವಿಜಯ ಪೆರ್ಮಾಡಿ ನೋಡಿಕೊಳ್ಳುತ್ತಿದ್ದ. ಹಾಗಾಗಿ ಪಾಂಡ್ಯದೇವನ ಒಂಬತ್ತು ಶಾಸನಗಳಲ್ಲಿ ಪೆರ್ಮಾಡಿ ದಂಡನಾಥನ ಉಲ್ಲೇಖ ಕಂಡುಬರುತ್ತದೆ. ವಿಜಯಪಾಂಡ್ಯ ಸ್ವತಂತ್ರನಾಗಿದ್ದಾಗ ಈ ಪೆರ್ಮಾಡಿ ಪಾಂಡ್ಯ ಸಮಸ್ತ ರಾಜ್ಯದ ಹೊಣೆಗಾರಿಕೆಯನ್ನು ಹೊತ್ತಿದ್ದ.

ಕ್ರಿ.ಶ. ೧೧೦೮ರ ಬಾಗಳಿ ಶಾಸನ,[೩೬] ವೀರಪಾಂಡ್ಯದೇವರು ಆಳುತ್ತಿರುವಾಗ ಮಹಾಪ್ರಧಾನಂ ಶ್ರೀಕರಣಂ ಸರ್ವಾಧ್ಯಕ್ಷಂತಂತ್ರಾಧಿಷ್ಠಾಯಕಂ ಮನೆವೆರ್ಗ್ಗಡೆ ಮಹಾಪಸಾಯಿತಂ ವಿಜಯ ಹೆಮ್ಮಾಡಿ ದಂಡನಾಯಕರು. ಶ್ರೀಮದ್ವಿಜಯ ಪಾಂಡ್ಯದೇವರ ಮಹಾರಾಜಕಾರ್ಯ್ಯಕ್ರಿಯಾವಿ.... ಸುಖವಿರಲು ಎಂದು ತಿಳಿಸುತ್ತದೆ. ಕ್ರಿ.ಶ. ೧೧೪೨ರಲ್ಲಿ ವಿಜಯಪಾಂಡ್ಯ, ಪಾಂಡ್ಯ ವಂಶದ ಸಿಂಹಾಸನಕ್ಕೆ ಬಂದಾಗ ಇಡೀ ರಾಜ್ಯಾಡಳಿತದ ಹೊಣೆಗಾರಿಕೆ ಹೊತ್ತು ಆಡಳಿತದಲ್ಲಿ ಮುಂದುವರಿಯುತ್ತಾನೆ. ಕ್ರಿ.ಶ. ೧೧೬೮ರ ಹರಿಹರ ಶಾಸನ,[೩೭] ಶತ್ರುಗಳಲ್ಲಿ ಕೆಲವರು ಸಮುದ್ರವನ್ನು ದಾಟುವಂತೆ ಕೆಲವರಿಗೆ ಕೌಪಿನ ಮಾತ್ರ ಉಳಿಯುವಂತೆ. ಕೆಲವರು ಕೇವಲ ಕಾಡಿನ ಕಂದಮೂಲಫಲಗಳನ್ನು ತಿಂದುಕೊಂಡಿರುವಂತೆ ಕೆಲವರು ಸೂರ್ಯನಿಗೆ ಇದಿರಾಗಿ ಹೋಗುವಂತೆ ಮಾಡಿದ ಕಾರಣಗಳಿಂದ ಹನುಮಂತನ ವ್ಯಾಪಾರವನ್ನು ತೋರಿಸಿದ ಪಾಂಡ್ಯರಾಜನಿಗೆ ಪ್ರಿಯಹನುಮಂತನಂತಿರುವ ವಿಜಯ ಪೆರ್ಮಾಡಿ ದಂಡಾಧಿಪನಿಗೆ ಜಯವಾಗಲಿ ಎಂದು ಹೇಳುತ್ತದೆ. ಈತ ಮಹಾಪ್ರಧಾನ,

ಮಹಾಪಸಾಯಿತ, ಸಾರ್ವಧ್ಯಕ್ಷ, ಸುಂಕಾಧಿಕಾರಿ ಮೊದಲಾದ ಹುದ್ದೆಗಳನ್ನು ನಿರ್ವಹಿಸುತ್ತಿದ್ದರಿಂದ ತನಗೆ ಬೇಕಾದ ನಂಬಿಕಸ್ಥ ಅಧಿಕಾರಿಗಳನ್ನು ಹೊಂದಿದ್ದ ಅಲಗಿಲವಾಡ ಶಾಸನ ಈತ ಕೇತದಂಡನಾಥನನ್ನು ನೇಮಿಸಿಕೊಂಡಿರುವ ಬಗ್ಗೆ ಉಲ್ಲೇಖ ದೊರೆಯುತ್ತದೆ.

ವಿಜಯಪಾಂಡ್ಯದೇವನ ಆಡಳಿತದ ಆರಂಭದಿಂದ ಪಾಂಡ್ಯದೇವನ ಅಂತ್ಯ ಕಾಲದವರೆಗೂ ಜೊತೆಗಿದ್ದ. ಶೌರ್ಯ ಗುಣವಂತ ವಿಜಯ ಪೆರ್ಮಾಡಿಯ ಕೀರ್ತಿಯನ್ನು ಕ್ರಿ.ಶ. ೧೧೨೧ರ ಹರಿಹರದ ಶಾಸನ.[೨೪೮]

ವಿಜಯಪಾಂಡ್ಯನು ಇದೇನು ಪ್ರತಾಪಿಯೋ! ಮದವೇರಿ ಗೆಲ್ಲುವೆನೆಂಬ ಗರ್ವಕಾಣಿಸಿಕೊಂಡು, ಯುದ್ಧಾಸಕ್ತಿಯಿಂದ ತನ್ನ ಭುಜಬಲವನ್ನು ತೋರಬಂದ ಶತ್ರುವಿಗೆ ವಿಜಯಪಾಂಡ್ಯನು ಯಮನ ಕೋಪವನ್ನು ತೋರದಿರುವನೇ? ವಿಜಯಪಾಂಡ್ಯನ ಪಾದಪದ್ಮೋಪಜೀವಿಗೆ ಮಂಗಳವಾಗಲಿ, ಎಲ್ಲ ಮದಿಸಿದ ಸಾಮಂತರೆಂಬ ಆನೆಗಳ ಸಮೂಹಕ್ಕೆ ಸಿಂಹ, ರಣರಂಗದಲ್ಲಿ ಭೈರವ, ವಿಜಯಪಾಂಡ್ಯನ ಪಾದಕಮಲದ ಪರಾಗದಿಂದ ತಿಲಕಗೊಂಡ ಹಣೆಯುಳ್ಳವನು, ಸ್ವಾಮಿದ್ರೋಹರ ಸಮೂಹಕ್ಕೆ ಅರೆಯುವ ಕಲ್ಲು, ಶತ್ರುಭಟರೆಂಬ ರಾಕ್ಷಸಕೋಟೆಯನ್ನು ಉಚ್ಚಾಟನೆ ಮಾಡುವ ಶ್ರೇಷ್ಠತರವಾದ ಮಂತ್ರಪ್ರಯೋಗದಲ್ಲಿ ಚತುರನಾದ ಚಾಣಕ್ಯ, ಶತ್ರುರಾಜರ ಸೈನ್ಯವೆಂಬ ಸಾಗರವನ್ನು ದಾಟುವಲ್ಲಿ ಯುವಕ ಹನುಮಂತ, ದಿಕ್ಕೆಂಬ ಸ್ತ್ರೀಯ ಎತ್ತರವಾದ ಕುಚಸ್ಥಳದಲ್ಲಿ ಲೇಪಿಸಿದ ಕೀರ್ತಿಯೆಂಬ ಶ್ರೀಗಂಧ, ಶ್ರೀಕರಣದವನು, ತನ್ನ ಪ್ರಜೆಗಳ ವಿಷಯದಲ್ಲಿ ಅತಿಶಯವಾಗಿ ನಿರ್ವಹಿಸಿದ ಸಮಸ್ತ ಪ್ರಜೆಗಳ ರಕ್ಷಣೆಯ ಭಾರವುಳ್ಳವನು, ಸರ್ವಾಧ್ಯಕ್ಷ - ಇವೇ ಮೊದಲಾದ ಬಿರುದುಗಳಿಂದ ಶೋಭಿತನೂ, ಪ್ರಕಾಶಮಾನವಾದ ರಾಜತೇಜಸ್ಸಿನಿಂದ ಕೂಡಿದ ಶ್ರೀಮತ್ ವಿಜಯಪಾಂಡ್ಯದೇವನ ರಾಜ್ಯವನ್ನು ಸ್ಥಿರಪಡಿಸುವುದರಲ್ಲಿ ದಕ್ಷವಾದ ಬಲತೋಳಿನಿಂದ ಅಲಂಕೃತ ನಾದ ಪೆರ್ಮಾಡಿದಂಡನಾಥನು ವಿರಾಜಿಸುತ್ತಿರಲು -

ನಿನ್ನ ಅಪ್ಪಣೆಯೇನು ಎಂದು ಕೇಳದ ವೀರರಿಲ್ಲ; ಭಯಪಟ್ಟು ಮೂರು ಬಿಟ್ಟಿಗಳನ್ನು ಮಾಡಲು ಬಂದು ಜೀವಿಸದಿದ್ದ ಸೊಕ್ಕಿದವರಿಲ್ಲ; ಹೇಳಿದ ಅಪ್ಪಣೆಯನ್ನು ಪ್ರತಿಭಟಿಸಿ ಅದನ್ನು ಪಾಲಿಸದೆ ಬದುಕತಕ್ಕ ಭಯಂಕರರಾದ (ಉಗ್ರಾರಿ) ಶತ್ರುಗಳಿಲ್ಲ ಎನ್ನುಲು ಶ್ರೀವಿಜಯಪಾಂಡ್ಯರಾಜನಿಗೆ ರಾಜ್ಯವನ್ನು ಸಾಧಿಸಿಕೊಟ್ಟ ಪೆರ್ಮಾಡಿದಂಡಾಧಿಪನು ಏನು ಶೌರ್ಯನಿಧಿಯೋ! ತಲೆಭಾಗದ ಶತ್ರುಸಮೂಹ ತನ್ನ ಸ್ವಾಮಿಗೆ ತಲೆ ಬಾಗುವಂತೆ ಮಾಡಿ, ವಿಜಯಪಾಂಡ್ಯನಿಗೆ ಸಕಲಸಾಮ್ರಾಜ್ಯ ಲಕ್ಷ್ಮಿ ಕೈವಶವಾಗುವಂತೆ ಮಾಡಿದವನು ಲೋಕವನ್ನೇ ಗೆದ್ದ ಪೆರ್ಮಾಡಿದಂಡನಾಥ ಎಂದು ಚಿತ್ರಿಸುತ್ತದೆ. ಮುಂದೆ ಕದಂಬ ನಾಗತಿಯರಸನ ಬಗ್ಗೆ ವರ್ಣನೆಯಿದೆ. ಪುರಾತನ ಅಗ್ರಹಾರವಾದ ಕೂಡಲೂರಿನ ಮತ್ತು ಬೆಳ್ವಡಿಯ ತಮ್ಮ ನಿಬಂಧಿಯ ಕಾಣಿಕೆ ಸಹಿತ ಗ್ರಾಮದ ಸ್ವಾಮ್ಯವನ್ನು ವೃತ್ತಿಯಾಗಿ ಶ್ರೀಶಂಕರನಾರಾಯಣದೇವರ ದಿವ್ಯಪಾದಪದ್ಮಗಳಿಗೆ ಆ ಚಂದ್ರಾರ್ಕಪೂರ್ವಕವಾಗಿ ಕೊಟ್ಟರು.

**ಸಂಧಿವಿಗ್ರಹಿ ಶಂಕರದೇವ**

ಶಂಕರದೇವ ವೀರಪಾಂಡ್ಯದೇವನ ಕಾಲದಲ್ಲಿ ಸಂಧಿವಿಗ್ರಹಿ ಪದವಿಯನ್ನು ಪಡೆದು ಆಳುತ್ತಿದ್ದ. ಕೊಟ್ಟೆಕಲ್ಲು ಮತ್ತು ಹರಿಹರದ ಶಾಸನಗಳು ಶಂಕಳದೇವನ ಕುರಿತು ಮಾಹಿತಿ ನೀಡುತ್ತವೆ. ಕ್ರಿ.ಶ. ೧೧೪೮ರ ಕೊಟ್ಟೆಕಲ್ಲು ಶಾಸನ,[೩೯] ಶಂಕರದೇವ ವೀರಪಾಂಡ್ಯ ದೇವನ ರಾಧೀಶ್ವರಭವ ಸಂಧಿವಿಗ್ರಹಿಧುರಂಧರಂ ವಿಪ್ರವಂಶಚೂಡಾರತ್ನ ಎಂದು ಹೇಳುತ್ತದೆ ಹಾಗೂ ವೀರಪಾಂಡ್ಯನ ಈ ಶಾಸನವನ್ನು ಬರೆದವನು ಸಂಧಿವಿಗ್ರಹಿ ಶಂಕರದೇವ. ಕ್ರಿ.ಶ. ೧೧೪೭ರ ಹರಿಹರ ಶಾಸನ.[೪೦] ಶ್ರೀವೀರಪಾಂಡ್ಯದೇವಮಹೀಮಲ್ಲಭಮಹಿತ ಪಾದಪರಮಾರಾಧ್ಯ ಶ್ರೀವಿಭವವರ್ಮ್ಮಧುಸೂದನ ದೇವರ್ವ್ವಿ ರಚಿಸಿದರೆಸೆಯ ಶಾಸನಕೃತಿಯಂ ।ಬರೆದಂ ಶಾಸನಮಂ ಶಂಕರದೇವಂ ವೀರಪಾಂಡ್ಯದೇವನರಾಧೀಶ್ವರಭವನ ಸಂಧಿವಿಗ್ರಹಧುರಂಟಂ ಕಕಾಭಿರಾಮಂಸೋಮಂ॥ ಎಂದು ದಾಖಲಿಸಿದೆ.

ಉಚ್ಚಂಗಿ ಪಾಂಡ್ಯರ ಆಡಳಿತ ವ್ಯವಸ್ಥೆಯಲ್ಲಿ ದಂಡನಾಯಕ ಶಬ್ದದ ಅರ್ಥ ಸೈನ್ಯಕ್ಕೆ ಸೀಮಿತವಾಗಿರಲಿಲ್ಲ. ಇವರ ಆಡಳಿತದ ಬೇರೆ ಬೇರೆ ಇಲಾಖೆಗಳ ಮುಖ್ಯಸ್ಥನನ್ನು ದಂಡನಾಯಕ ಎಂದು ಕರೆಯಲಾಗಿದೆ. ಮಹಾಮಂಡಳೇಶ್ವರರ ಆಡಳಿತದ ಚೌಕಟ್ಟು ಸೀಮಿತ ವ್ಯಾಪ್ತಿಗೆ ಒಳಪಟ್ಟಿದ್ದರಿಂದ ಚಿಕ್ಕ ಸಂಘಟಿತ ಸೈನ್ಯವನ್ನು ವಿಕೇಂದ್ರೀಕರಿಸಿ ಆಡಳಿತದ ಬೇರೆ ಬೇರೆ ಇಲಾಖೆಗಳ ಆಂತರಿಕ ವ್ಯವಹಾರದಲ್ಲಿ ಸೈನ್ಯವನ್ನು ತೊಡಗಿಸಿಕೊಂಡಿದ್ದರು. ತ್ರಿಭುವನಮಲ್ಲ ಪಾಂಡ್ಯ ಮತ್ತು ವಿಜಯಪಾಂಡ್ಯ ಇವರ ಕಾಲದಲ್ಲಿ ಹೆಚ್ಚಿನ ಅಧಿಕಾರಿ/ದಂಡನಾಯಕರುಗಳು ಕಂಡು ಬರುತ್ತಾರೆ. ಇದು ಆಡಳಿತದ ಆರಂಭದ ಕಾಲ ಮತ್ತು ಆಡಳಿತದ ಅಂತ್ಯ ಕಾಲದಲ್ಲಿ ಪಾಂಡ್ಯರ ಸೈನ್ಯ ಹೆಚ್ಚು ಬಲಿಷ್ಠವಾಗಿತ್ತು ಎಂಬುದನ್ನು ತೋರಿಸುತ್ತದೆ.

**ಪೆರ್ಗ್ಗಡೆಗಳು**

ಪೆರ್ಗ್ಗಡೆಗಳು ಅರಸರಿಗೆ ಇಲ್ಲವೆ ಮಹಾಮಂಡಳೇಶ್ವರ, ಸಾಮಂತ ಅರಸರಿಗೆ ಹತ್ತಿರವಾಗಿ ಆಸ್ಥಾನದಲ್ಲಿರುತ್ತಿದ್ದರು. ಕೆಲವು ವೇಳೆ ಚಿಕ್ಕ ಚಿಕ್ಕ ಆಡಳಿತ ವಿಭಾಗದ ಅಧಿಕಾರಿಗಳಾಗಿದ್ದರು. ಕೆಲವರು ಆಡಳಿತ ವಿಭಾಗದ ಸುಂಕಾಧಿಕಾರಿಗಳಾಗಿ ಆಳುತ್ತಿದ್ದರು. ಇವರು "ಸಮಸ್ತ ರಾಜ್ಯಭಾರ ನಿರೂಪಿತ", "ಮಹಾಮಾತ್ಯಾ ಪದವಿವಿರಾಜಾಮಾನ' ದಂಡನಾಯಕ, ಮಹಾಮಾತ್ಯ, ಮಹಾಪ್ರಧಾನ ಎಂಬ ಬಿರುದುಗಳನ್ನು ಹೊಂದಿದ್ದರು. ಇವರು ಸಂಗ್ರಹಿಸುವ ಸುಂಕದಲ್ಲಿ ಕೆಲವು ಭಾಗ ಇವರು ಸಂಬಳವಾಗಿ ಸಲ್ಲುತ್ತಿತ್ತು. ಪಾಂಡ್ಯ ಅರಸರ ಶಾಸನಗಳಲ್ಲಿ ಕೆಲವು ಆಡಳಿತ ವಿಭಾಗಗಳಲ್ಲಿ ಪೆರ್ಗ್ಗಡೆಗಳು ಆಳುತ್ತಿರುವುದು ಕಂಡುಬರುತ್ತದೆ.

ಮದರಸ ಪೆರ್ಗ್ಗಡೆಗಳು ಅತ್ತಿಗೇರೆ-೧೨ರ ಬಳಿಯ ಬಾಡಂ ತೊಗಲೇರಿ ಉತ್ತರ ಭಾಗದ ಮೂಲಸ್ಥಾನ ದೇವರ ಸತ್ರದಲ್ಲಿರುವ ಮಾರ್ತ್ತಡೇಶ್ವರ ದೇವರಿಗೆ ಮೇಲೂರು ಅಳಿಯಣ್ಣ ಮತ್ತು ಸಮಸ್ತ ಪ್ರಭುಗಳ ಸಮುಖದಲ್ಲಿ ದಾನ ಬಿಡುತ್ತಾರೆ.[೪೧] ರಾಜಮಯ್ಯ ಪೆರ್ಗ್ಗಡೆ ಕೋಳಿಗ-೫೦೦, ಕದಂಬಳಿಗೆ-೧೦೦೦ವನು ನೋಡಿಕೊಳ್ಳುತ್ತಿದ್ದರು ಎಂದು ಅಸಗೋಡು ಶಾಸನ ಹೇಳುತ್ತದೆ.[೪೨]

ಚತುಸ್ಸಮಯ ಸಮುದ್ಧರಣಂ ವೈರಿಸಂಹರಣಂನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮತ್ಪೆರ್ಗ್ಗಡೆ ಹೆಮ್ಮಸೆಟ್ಟಿಯರು ಕದಂಬಳಿಗೆ ಸಾಸಿರದ ಹೆಜ್ಜುಂಕವನ್ನು ಆಳುತ್ತಿರುವುದಾಗಿ ಅಸಗೋಡು ಶಾಸನ ತಿಳಿಸುತ್ತದೆ.[೩೬೩] ಉಚ್ಚಂಗಿಯ ನಾಗೇಶ್ವರ ಪೆರ್ಗ್ಗಡೆದೇಪತಿಹಿತವಿನತೆಯ ನಮ್ಮ ಪೆರ್ಗ್ಗಡೆದೇವ ನಾಗೇಶ್ವರನುನ್ನತವೆನಿಪ ಎಂದು ಆಲೂರು ಶಾಸನ ಮಾಹಿತಿ ನೀಡುತ್ತದೆ.[೩೬೪] ಜನಕಂ ಪೆರ್ಗ್ಗಡೆ ಬೋಚಿರಾಜಮಹಿಮಂ ನನ್ನವ್ವೆ ಪೆತ್ತವ್ವೆ ಪಾಂಡ್ಯನ್ರಿಪಸ್ವಾಮಿ ಪತಿಬ್ರತಾಭರಣ, ಬಸವೇಶ್ವರದೇವರಿಗೆ ದಾನ ಬಿಡುತ್ತಾರೆ.[೩೬೫] ಉದಯಾದಿತ್ಯ ನಾಯಕರ ಹೆಗ್ಗಡೆ ಮಾಚಯ್ಯನ ಮಗಳು ಗಂಗೌವೆ ಲಿಂಗಪ್ರತಿಷ್ಠೆ ಮಾಡಿ ಕಾಮಯನಾಯಕನನ್ನು ಬೇಡಿಕೊಂಡಾಗ ಭೂಮಿ ದಾನ ಮಾಡಿದರು.[೩೬೬] ಕಲಿಮಯ್ಯ ದಂಡನಾಯಕರ ಸರ್ವಾಧಿಕಾರಿ ಹೆರ್ಗ್ಗಡೆ ಸೋವರಸರು ಬಿಕ್ಕಿಗನೆಪ್ಪತ್ತರೊಳಗಣ ದೇವರುಗಳಿಗೆ ದಾನ ಬಿಡುತ್ತಾರೆ.[೩೬೭] ಉಚ್ಚಂಗಿ ಪಾಂಡ್ಯರ ಆಡಳಿತದಲ್ಲಿ ಪೆರ್ಗ್ಗಡೆ ಅಥವಾ ಹೆಗ್ಗಡೆಗಳು ಆಡಳಿತ ವಿಭಾಗಗಳು ಮತ್ತು ವಿಭಾಗಗಳ ಸುಂಕದ ಅಧಿಕಾರಿಗಳಾಗಿ ಆಳಿರುವುದು ಹಾಗೂ ಇದರ ಜೊತೆಯಲ್ಲಿ ಕೆಲವರು ಸರ್ವಾಧಿಕಾರಿ ಹುದ್ದೆಗಳನ್ನು ಹೊಂದಿರುವುದು ಇಲ್ಲಿ ಸ್ಪಷ್ಟವಾಗಿ ತಿಳಿಯುತ್ತದೆ.

**ಗಾವುಂಡರು**

ಹಳ್ಳಿಗಳ ಆಡಳಿತದಲ್ಲಿ ಪ್ರಮುಖ ಪಾತ್ರವಹಿಸಿದವರು ಗಾವುಂಡರು. ಅವರ ಆಡಳಿತ ವಂಶಪರಂಪರೆಯಾಗಿ ಮುಂದುವರೆದುಕೊಂಡು ಬಂದಿತ್ತು. ಶಾಸನಗಳು ಇವರನ್ನು ಗಾವುಂಡರೆಂದು, ಪ್ರಭುಗಾವುಂಡರೆಂದು, ನಾಡಾಳ್ಪ್ರಭುಗಳೆಂದು ಕರೆಯಲಾಗಿದೆ. ಒಮ್ಮೊಮ್ಮೆ ಒಂದು ಹಳ್ಳಿಗಳಲ್ಲಿ ಒಬ್ಬನಿಗಿಂತ ಹೆಚ್ಚು ಗಾವುಂಡರು ಕಾಣಿಸಿಕೊಂಡಿದ್ದಾರೆ. ಒಬ್ಬ ಗಾವುಂಡನ ವಂಶ ಬೆಳೆದಾಗ ಅನೇಕ ಮನೆತನಗಳಾಗುವುದು ಸ್ವಾಭಾವಿಕ. ಆದರೆ ಆಳುವ ಗಾವುಂಡನು ಒಬ್ಬನೇಯಾಗಿದ್ದರೂ ಆತನೊಂದಿಗೆ ಇತರ ಗಾವುಂಡ, ಹಿರಿಯರು ಸಭೆ ಸಮಾರಂಭಗಳಲ್ಲಿ ಭಾಗವಹಿಸುತ್ತಿದ್ದರು. ಗ್ರಾಮಾಡಳಿತದಲ್ಲಿ ಗಾವುಂಡರೆ ಮುಖ್ಯರಾಗಿದ್ದರೂ ಯಾವುದೇ ತೀರ್ಮಾನಕ್ಕೆ ಬರಬೇಕಾದರೆ ಇತರೊಂದಿಗೆ ಚರ್ಚಿಸಿ ಹಳ್ಳಿಯ ಸಮಸ್ತ ರಕ್ಷಣೆ, ಹಿತಾಶಕ್ತಿ, ನ್ಯಾಯ ನಿಷ್ಪಕ್ಷಪಾತಿಗಳಾಗಿ ಅಲ್ಲಿಯ ಆಗುಹೋಗುಗಳಿಗೆ ಹೊಣೆಗಾರರಾಗುತ್ತಿದ್ದರು. ಹಳ್ಳಿಗಳು ರಾಜ್ಯಾಡಳಿತದಿಂದ ದೂರವಿದ್ದರೂ ಯುದ್ಧ ಗಲಭೆಗಳಂತಹ ಸಂದರ್ಭಗಳಲ್ಲಿ ರಾಜ್ಯ, ಕೇಂದ್ರ್ರಗಳೊಂದಿಗೆ ತಮಗೆ ಅವಶ್ಯವಾದುದನ್ನು ಪಡೆಯುವುದು ನಿರಂತರವಾಗಿ ನಡೆದು ಬಂದಿತ್ತು. ರಾಜ್ಯಾಡಳಿತಕ್ಕೆ ಸಲ್ಲಿಸಬೇಕಿದ್ದ ತೆರಿಗೆಯನ್ನು ಕೊಟ್ಟರೆ ವರ್ಷದುದ್ದಕ್ಕೂ ರಾಜ್ಯವೆಂಬಂತೆ ಸ್ವತಂತ್ರವಾಗಿರುತ್ತಿದ್ದವು. ದಾನ-ದತ್ತಿಗಳನ್ನು ಬಿಡುವ ಸಂದರ್ಭದಲ್ಲಿ ಗಾವುಂಡರು ಮತ್ತು ಹಳ್ಳಿಯ ಇತರ ಮುಖಂಡರು ಉಪಸ್ಥಿತರಿರುತ್ತಿದ್ದರು. ಇಲ್ಲಿ ಗಾವುಂಡರ ಜೊತೆಗೆ ತಮ್ಮ ಕುಟುಂಬದ ತಾಯಿ, ಮಡದಿ ಮತ್ತು ಸಹೋದರಿಯರು ಗಾವುಂಡನ ಆಡಳಿತದಲ್ಲಿ ಜೊತೆಗಿದ್ದು ತಮ್ಮ ಗ್ರಾಮದಲ್ಲಿ ದೇವಾಲಯವನ್ನು ಕಟ್ಟಿಸುವುದು ಮತ್ತು ಪೂಜ್ಯ ಕಾರ್ಯಗಳಿಗೆ ದಾನದತ್ತಿಗಳನ್ನು ನೀಡುತ್ತಿದ್ದರು. ಕೆಲವು ಸಮಯದಲ್ಲಿ ಇವರು ಸಾಮಂತ, ಮಹಾಮಂಡಳೇಶ್ವರ, ದಂಡನಾಯಕರ ಜೊತೆಗೆ ಯುದ್ಧದಲ್ಲಿ ಪಾಲ್ಗೊಳ್ಳುತ್ತಿದ್ದರು.

ಊರಿನ ಸುಲಿಗೆ, ಸ್ತ್ರೀ ಮತ್ತು ಗೋವು ಅಪಹರಣ ಕಾಲದಲ್ಲಿ ಹೋರಾಡಿ ಗ್ರಾಮವನ್ನು ರಕ್ಷಿಸುತ್ತಿದ್ದರು. ಅವರ ಶೌರ್ಯ ಸಾಹಸಗಳನ್ನು ಶಾಸನಗಳು ವರ್ಣಿಸುತ್ತವೆ.

ಶ್ರೀಮನ್ಮಹಾಸಾಮನ್ತ ಬೆಂಮತ್ತನೂರನಾಯಕರ ಪಾದಪದ್ಮೋಪಜೀವಿ ಹಡುವಂಗೆರೆಯಯ್ನಾರರ ಮಹಾಪ್ರಭು ಹರಿಯಮಗಾವುಂಡನೆತಂನಬೆಣ್ಣೆದೋಣೆಯೂರ ನಡುವಣ ಸೋಮನಾಥದೇವರ ದೇವಾಲ್ಯಮನುತ್ತುಂಗಪ್ರಾಸಾದಶಿಖರಕಳ ಸಂಬರಂಕಲುವೆಸನಿರ್ಬ್ಬಾಣವಾಗಿ ಮಾಡಿಸಿ ಕಾಮಯ್ಯ ನಾಯಕರ ಕಯ್ಯಲು ಬೆಣ್ಣೆದೊಣ್ಣೆಯ ಹರಿಯೆಂಬ ಗಾವುಂಡ ಭೂಮಿ ದಾನ ಬಿಡುತ್ತಾನೆ.[೩೬೮] ಅರಸಿಕೆರೆಯ ಮಹಾಪ್ರಭು ಕಲಿಯಮಗೌಡನ ಮಗಳು ಕಣಕ ಪಿರಿಯಾಡಪೆರ್ಗ್ಗಡೆ ಮನೋವಲ್ಲಭೆ ಯಭಿನವಪಾರ್ವ್ವತಿಯೆನಿಸಿದ ಬಾಚಲದೇವಿಯರು ಸ್ವಯಂಭುಕಲಿದೇವರಿಗೆ ಅರಸಿಕೆರೆಯ ಸೀಮೆಯಲ್ಲಿ ದಾನ ಬಿಡುತ್ತಾರೆ.[೩೬೯]

ಸಾಹಸೋತ್ತುಂಗಂತೆನ್ನಾಡ ತಿರುಕ್ಕಣಗೌಡ ಪರಿಚ್ಛೇದಿಗಣ್ಡ ಪಲ್ಲವ ರಾಯಪಡೆವೀಡಿನೊಳುತಾಂ ಮಾಡಿಸಿದ ವಾಸದೇವರ್ಗ್ಗೆ ದಾನ ಮಾಡುತ್ತಾನೆ.[೩೭೦] ಸೋಮೇಶ್ವರ ದೇವರ ನಿವೇದ್ಯಕ್ಕೆ ಮದದಿಯಮರಸರು ಪೆರ್ಗ್ಗಡೆ ಪಾಂನಾಂಡರು ಊರಡೆಯ ಚಂಡಿಮಯ್ಯನಾಯಕರು ನಾಗಭೂಷಣ ಪಂಡಿತರ ಕಾಲನು ತೊಳೆದು ದಾನ ಬಿಡುತ್ತಾರೆ.[೩೭೧] ಕೊಳ್ಳಹಾಳ ಶ್ರೀಯಾದೇಶ್ವರ ದೇವರ್ಗ್ಗೆ ಬಮ್ಮೆಯ ಹೆಗ್ಗಡೆಯ ಸುಪುತ್ರ ಬೆನಕವೆಗ್ಗಡೆ, ಬಮ್ಮಗೌಡನ ಪುತ್ರ ಮುದ್ದಗೌಡನು ದೇವರಕಂಠ ಸ್ಫುಟಿತಜೀರ್ನ್ನೋದ್ಧಾರಕೆ ದಾನ ನೀಡಿದ.[೩೭೨] ಸೇನಾಪತಿಯರಸಿಯಕೆರೆಯ ಅಬ್ಬಗಾಂವುಡ ನೊಳುವೆಸರಿಂದಂ ನೆಗಳ್ದಾ ಗಂಗಗಾಂವುಡನೆಂಬವಿಭುಗಂ ಲೋಕವ್ವೆಗಂ ಪುಟ್ಟಮಿಕ್ಕಗುಣಕ್ಕಾಗರ್ವಾದ ಬಮ್ಮಗಾವುಂಡನ ಮಹಾಸತಿಮಾಳವ್ವೆಗಂ ಪುಟ್ಟಗೋತ್ರ ಪವಿತ್ರ ಗುಣರತ್ನ ತಾನೆಯೆನಿಕುಂ ಗಂಗಗಾವುಂಡ ಪ್ರಭುಪೊಗಳ್ವಡೆಮಾಳಗೌಂಡನಮಹಂತಿಕೆಯಂ ನಿನಗೇನ ಪೇಳ್ಕೆನಾವಿಭುಗೆ ಉಮುದ್ದಿ ಗೌಡಿಗೆಯು ಪುಟ್ಟಿನೆಗರ್ತ್ತೆಯಸಾತಗೌಡನಾಸತಿ ಸಾತಿಕೌವ್ವೆಗಂಪುಟ್ಟಸುಪುತ್ರಕೊಲಕ್ಕೆ ಕಲ್ಲಗೌಡನ ವಧು ಸೋವಿಗೌಡಿಗೆವುಪುಟ್ಟಿದನಾ ಹರಿಯಮ್ಮಗಾಂವುಡನೊಳಮಿಕ್ಕಗೌಡುಗಳೇ ನಾರ್ತ್ತಪರೆಸಮಸ್ತ ಗುಣದೊಳುಸಂಸ್ತುತ್ಯದೊಳು ಸತ್ಯದೊಳು ಹರಚರಣಕಮಳಭ್ರಿಂಗಂಗುರುಕುಳಕುಳೆಯ ಸುಧಾಕರಂಕಲಿ ದೇವಸ್ಮರಣೆ ಪರಿಣತನಿಜಾಂತ್ತಃಕರಣಂ ಶ್ರೀವಾಮಶಕ್ತಿ ಪಂಡಿತದೇವರು.[೩೭೩]

ಉಲುವತ್ತಿಯ ಶಾಸನದಲ್ಲಿ ಯಗ್ಗವಟ್ಟಿ ಬೊಮ್ಮಗಾವುಂಡನನ್ನು "ಶ್ರೀಮನ್ಮಹಾದಾಳ್ಪ್ರಭು" ಎಂದು ಉಲುವತ್ತಿಯ ಅಜ್ಜಗಾವುಂಡನನ್ನು "ಸಮಸ್ತನಾಳಪ್ರಭು" ಎಂದು ಅರಸೀಕೆರೆಯ ಕಲಿಗೌಡನನ್ನು 'ಮಹಾಪ್ರಭು' ಎಂದು ಕರೆಯಲಾಗಿದೆ.[೩೭೪] ಶ್ರೀಮನ್ಮಹಾಮಂಡಳೇಶ್ವರ ವಿಕ್ರಮಾದಿತ್ಯ ರಸರುಂ ರಾಯರಸರುಂ ಹೆಗ್ಗಡೆಮೈಚೆಣನುಂ ಹೆಗ್ಗಡೆಯ ಹೊಲ್ಲಣನುಂ ಹಡವಳ ರಾಜಣನುಂ ಗೌಡರ ಗಟ್ಟಿಗಾವುಂಡನುಂ ಯಿಂಮ್ಮಡಿಗೇತಗಾವುಂಡನುಂ ಸಮಸ್ತ ಪ್ರಜೆಗಳ ಮುಂದೆ ಕಲಿದೇವರಿಗೆ ದಾನ ಬಿಡುತ್ತಾರೆ.[೩೭೫]

ವಿಜಯಪಾಂಡ್ಯದೇವನ ಕಾಲದಲ್ಲಿ ಹೊಳಗುಂದೆ ಗ್ರಾಮವನ್ನು ಆಳುತ್ತಿದ್ದ ಮಲ್ಲಿಗಾವುಂಡನನ್ನು ಅಲ್ಲಿ ಶಾಸನ ವರ್ಣಿಸುತ್ತದೆ. ಕ್ರಿ.ಶ. ೧೧೮೯ರ ಶಾಸನ,[೩೭೬] ವಿಜಯಪಾಂಡ್ಯ ಮಹಾಮಂಡಳೇಶ್ವರರು

ನೊಳಂಬವಾಡಿ-೩೨೦೦೦ವನ್ನು 'ಏಕಚತ್ರದಡಿಯಲ್ಲಿ ಆಚಂದ್ರಾರ್ಕತಾರಭರವಾಗಿ ಸುಖದಿಂ ದಾಳುತ್ತಿದ್ದರು'. ಲಲಿತ ಉತ್ತುಂಗ ಜೈನಗೃಹಗಳಿಂದಲೂ ಚೆಲುವಾದ ದೇವಾಲಯಗಳಿಂದಲೂ, ಸೊಳಿಗೇರಿಗಳಿಂದಲೂ, ಉದ್ಯಾನಗಳಿಂದಲೂ ಹೂವಿನ ಕೊಳಗಳಿಂದಲೂ, ಕೆರೆಗಳಿಂದಲೂ ಹೊಳಗುಂದಿ ಕಂಗೊಳಿಸುತ್ತಿತ್ತು. ಅನವರತ ತನ್ನ ಸದ್ವರ್ತನೆಗಳಿಂದ ಮಲ್ಲಿನಾಥ ಜಿನೇಂದ್ರರು ಗಣ್ಯ ಪುಣ್ಯ ಪ್ರಭಾವಶಾಲಿಗಳಾಗಿದ್ದರು. ಶ್ರೀಮತ್ ವೀರನಂದಿದೇವ ಯೋಗೀಶ್ವರ ಪಾದಾರಧಕನು ಜಿನಮಂತ್ರೋದ್ಧಾರಕನು ಧೂಪ ಧೂಮಗಳಿಂದಲು ಪವಿತ್ರವಾದ ಜಿನಗಂಧೋದ ಕಗಳಿಂದಲೂ ಪವೀತ್ರೀಕೃತನಾಗಿದ್ದನು. ದಾನಿಯೂ ಶ್ರೇಯೋಭಿಲಾಷಿಯೂ ಸಮ್ಯಕ್ತ ಚೂಡಾಮಣಿಯು ಶತಪತ್ರ ಮಿತ್ರನೂ ಗೋತ್ರಪವಿತ್ರನೂ ವಿಚಿತ್ರ ಚೈತ್ಯಾಲಯವನ್ನು ಉದ್ಧಾರ ಮಾಡಿದವನು 'ಸಾಂದಗೋಲ ಸಮುದ್ಧರಣ'ನೂ ಪರಾಂಗನೆಯರನ್ನು ದೂರೀಕರಿಸಿದವನು ವರಪುಂಡರೀಕನು ಯಕ್ಷದೇವಿಲಬ್ಧವರ ಪ್ರಸಾದನು ಗುಣಗಣ ಪ್ರಮೋದನು ಮೊದಲಾದ ಗುಣ ವಿಶೇಷಗಳಿಂದ ಕೂಡಿದ ಮಲ್ಲಿ ಗಾವುಂಡನು ಹೊಳಗುಂದೆಯಲ್ಲಿ ತನ್ನ ಪ್ರಭುತ್ವವನ್ನು ಮೆರೆದನು.

ಅನಂತ ಜ್ಯೋತಿರ್ಗಣದಿಂದ ನೂತನ ಮಣಿ ಶ್ರೇಣಿಗಳಿಂದ ಸುಧಾಸಾಗರ ಬೆಳಗುವಂತೆ ಅಖಿಳ ಗುಣ ಸಂಪನ್ನತೆಯಿಂದ ಮಲ್ಲಿನಾಥ ರಂಜಿಸಿದ. ಪ್ರಭು ಚೂಡಾಮಣಿಯನ್ನುವ, ಹೃತ್ಕಮಲಕ್ಕೆ ಸೂರ್ಯನೆನ್ನುವ, ಕೀರ್ತಿಪ್ರಿಯನೆನ್ನುವ, ಉದಾರತೆಗೆ ತವರೂರೆನ್ನುವ, ಉನ್ಮೆಷ ವಿಶೇಷನೆನ್ನುವ, ಮಹಿಮೆಗೆ ಅಷ್ಟಂಬನೆನ್ನುವ ಮಲ್ಲಿನಾಥನ ಕೃತಾರ್ಥನು ಧನ್ಯನಾದ. ಆಕಾಶದಿಂದ ನಕ್ಷತ್ರಗಳು ಉದುರಿದರೂ ಭೂಮಿಗೆರಗದಂತೆ ಮಲ್ಲಿನಾಥನ ಮನಸ್ಸು ಜನಪದಕ್ಕೆ ಮಾತ್ರ ನಮಿಸುತ್ತಿತ್ತಲ್ಲದೆ ಮತ್ತಿನ ದೈವಕ್ಕೆ ಎರುಗುತ್ತಿರಲ್ಲಿ ಮತ್ತಿನ ಮನುಜರ(ಕಡುಕರ) ಚಿತ್ತ ಸಮ್ಯಕ್ಷತೆ (ಜೈನ ಮತದ ಬಗೆಗಿರುವ ಸಂಪೂರ್ಣ ವಿಶ್ವಾಸ) ಚಂದ್ರನ ಬೆಳದಿಂಗಳಂತೆ ಇಳೆಗಾವರಿಸಿರಲು ಮಲ್ಲಿನಾಥನ ಸಮ್ಯಕ್ತತೆಯು ಸಾಗರದಂತೆ ಭೂಮಂಡಲವನ್ನು ಆವರಿಸಿತ್ತು.

ಜಿನನ ವಚನ ರುಚಿಯನ್ನು ಬಿಟ್ಟು ಅನ್ಯ ತತ್ವ ಸಿದ್ಧಾಂತಗಳನ್ನು ಮಲ್ಲಿನಾಥ ಸುಳ್ಳೆಂದು ಕಸವೆಂದು ತಿರಸ್ಕರಿಸುತ್ತಿದ್ದ. ಅವನ ಮನಸ್ಸು ಹೆಣ್ಣಿನ ಬಿಂಬಾದರವನ್ನಾಗಲಿ ಚುಂಬನವನ್ನಾಗಲಿ ತುಂಗ ಕುಚಾಲಿಂಗನವನ್ನಾಗಲಿ ಸುಲಿ ಪಲ್ಲನಾಗಲಿ ಕಣ್ಣಿಂದ ಕನಸಿನಲ್ಲಿಯೂ ನೋಡಿದವನಲ್ಲ. ಅವನ ಕಿವಿಗಳು ಕಾಮಿನಿಯರ ವೈಭೊವೋಪೇತ ವರ್ಣನೆಯನ್ನಾಗಲಿ, ಕರ್ಣರಸಾಯನವಾದ ಸರಸೊಕ್ತಿಗಳನ್ನಾಗಲಿ ಸೋತು ಕೇಳದು, ನಾಲಿಗೆ ಮನಸೋತು ನುಡಿಯದು. ಅವನು ಜನಕ್ಕೆ ನಲ್ಲನೆನಿಪೊಮಲ್ಲ. ಮೊರ ಹೊಕ್ಕವರನ್ನು ಕಾಪಾಡುತ್ತಿದ್ದ. ಎದುರಾದವರ ಮೇಲೆ ಎರಗಿ ಬಗ್ಗು ಬಡಿಯುತ್ತಿದ್ದ. ಬೇಡಿ ಬಂದವರಿಗೆ ಧಾರಾಳವಾಗಿ ದಾನ ಮಾಡುತ್ತಿದ್ದ. ರಣಭೂಮಿಯಲ್ಲಿ ಎದುರಿಗೆ ಮಾರಾಂತು ನಿಂದವರಿಗೆ ಹರನ ಹಣೆಗಣ್ಣಾಗಿ, ಕ್ರೂರಸಿಂಹವಾಗಿ ಕಲಿಭೀಮವಾಗಿ, ಸೋಲದ ರಾಮನಾಗಿ ಮನ್ನೆಯರಿಗೆ ಕಾಣಿಸುತ್ತಿದ್ದ. ಅವನನ್ನು ರಣರಂಗದಲ್ಲಿ ಕಂಡ ಶತ್ರು ಸೈನ್ಯ ತಲೆ ಕಾದುಕೊಳ್ಳಲು ನಡುಗುತ್ತಾ ಭೀತಿಯಿಂದ ಕೈಮುಗಿದು ಓಡುತ್ತಿತ್ತು.

ಎಲ್ಲರನ್ನು ಆಘೋಸನಗೊಳ್ಳುವಂತೆ ಕ್ರೌರ್ಯ ಪ್ರದರ್ಶನ ಮಾಡುತ್ತಿದ್ದ ರಕ್ತ-ಮಾಂಸಗಳಿಂದ ನಾರುವ ಯುದ್ಧಭೂಮಿ, ವೀರಾವೇಶದ ಆಕ್ರಮಣ ಮತ್ತು ಹೊಯ್ದುಟಗಳಲ್ಲಿ ಆಟ್ಟದ ಕರುಳಾಡುವ ರುಂಡವಿಲ್ಲದ ದೇಹಗಳು, ಚೆಲ್ಲಪಿಲ್ಲಿಯಾಗಿ ಬಿದ್ದಿರುವ ಹೆಣಗಳು, ಹರಿಯುತ್ತಿದ್ದ ರಕ್ತದ ಹೊಳೆ, ಒಡ್ಡುಗೊಂಡ ತಲೆಗಳು, ಬೊಬ್ಬಿಸುತ್ತಿದ್ದ ಪಿಶಾಚಿಗಳ ಕೂಟಿ ಮಲ್ಲಿನಾಥನ ಈ ರಣರಂಗ ಭಯವನ್ನುಂಟುಮಾಡುತ್ತಿತ್ತು. ಮನಬಂದಂತೆ ಒಲುಮೆಯಿಂದ ದೊಡ್ಡ ಕರುಳುಗಳನ್ನು ಮುಡಿದುಕೊಂಡು, ಪ್ರೀತಿಯಿಂದ ರಕ್ತ ತಿಲಕದ ಬೊಟ್ಟನ್ನಿಟ್ಟುಕೊಂಡು, ಮನದಣಿಯೆ ನೆತ್ತರನ್ನು ಕುಡಿದು ಖಂಡಮಾಂಸಗಳನ್ನು ಎಂಡ ಎಂಡದ ರಣರಂಗ ಮೇರುವೆನಿಸಿದ ಮಲ್ಲಿನಾಥನ ರಣರಂಗ ಕೌತುಕವನ್ನು ಬಣ್ಣಿಸುವರಾರು? ಆತನ ವಂಶಪರಂಪರೆ ಏನೆಂದರೆ-

ಶ್ರೀಮದ್ ಬಳಿಯ ವಂಶಕ್ಕೆ ಚೂಡಾಮಣಿಯೆನಿಸಿ, ವಂದಿಮಾಗದ ಜನರಿಂದ ಚಿಂತಾಮಣಿಯೆನಿಸಿ, ತೇಜೋಮಯನು ಗಣ್ಯರು, ಪುನರ್ ಉದ್ದಾಮನು ಆದ ದಡಗನೆಂಬ ರಾಜನಿದ್ದನು. ಅವನು ಸುಖವಾಗಿದ್ದನು. ಆದಡಿಗನಿಗೆ ಅವಿವೇಕ, ದುರ್ನಯಿ, ದುರ್ಮದಗಳು ಹತ್ತಿರ ಸುಳಿಯುತ್ತಿರಲಿಲ್ಲ. ಅವನಿಗೆ ವಡಪ, ಕೊಡೆ, ಚಾಮರವೆಂಬ ರಾಜಚಿನ್ಹೆಗಳನ್ನು ಕೊಡಲಾಗಿತ್ತು. ಅವನ ಹೆಂಡತಿ ರೇವಗೌಂಡಿ ಈ ಉಭಯರಿಗೆ 'ವಿಭು' ಎಂಬ ಮಗನಾದ ವಿಭುವಿನ ಹೆಂಡತಿ ಲಕ್ಷ್ಮೀದೇವಿ. ಇವರಿಗೆ ಪ್ರಭುಲಲಾಟ ಪಟ್ಟ ಹೊಂದಿದ 'ಚಟ್ಟ'ನಂಬರನ ಮಗನಾದನು. ಅವರ ಸರಿಸಮಾನರು ಯಾರೂ ಇರಲಿಲ್ಲ. ಈವ (ದಾನ ಮಾಡುವ) ಗಣದಲ್ಲಿ ಕಾವ, ಸಾಗರನಂತೆ, ಸೂರ್ಯನಂತೆ, ಕನಕಾಚಲದಂತೆ ಹೆಸರಾಗಿದ್ದನು. ಹೀಗೆ ಪ್ರಖ್ಯಾತನಾದ ಚಟ್ಟಿಗಾವುಂಡನ ಮಾನಿನಿ 'ಚಾಮಕವ್ವ' ಎಂಬ ಗಾವುಂಡಿ. ಇವಳು ಜಗತ್ತಿನ ಜನಕ್ಕೆ ವಿದ್ವಜ್ಜನಕ್ಕೆ ಮತ್ತು ಜಿನನ ಜನಕ್ಕೆ ಅನುಪಮ ಕಲ್ಪಲತೆಯಂತೆ ಬೆಳಗಿದಳು. ಇವಳ ಗುಣಾತಿಶಯಗಳನ್ನು ಕವಿ ವರ್ಣಿಸಿದ್ದಾನೆ.

ಅವಳನ್ನು ಚಂದ್ರಲೇಖೆಯಂತೆ, ಪ್ರಣಯ ಪ್ರದೆ ನೈದಿಲೆಯಂತೆ, ಉಜ್ವಳತರ ಧರ್ಮ ಪರಿಪಾಲನಾ ನಂದನ ಲಕ್ಷ್ಮಿಯಂತೆ, ಸದಾ ನಿರ್ಮಲವಾಗಿರುವ ಗಂಗೆಯಂತೆ, ಮೂರು ಲೋಕಗಳು ಹೊಗಳುವ ಜೀವನೆಯೆಂಬಂತೆ ಜಗತ್ತು ವರ್ಣಿಸುತ್ತಿತ್ತು. ಭಟ್ಟನ ಪುಣ್ಯಕಾಂತಿಯಾದ ಚಾಮಿಯಕ್ಕ ವಿನಯ, ಸತ್ಯ, ಉನ್ನತಿ, ಮಾಂತನದ, ಸಚ್ಚಾರಿತ್ರ, ನಿಜಗೋತ್ರ ರಕ್ಷಣೆಯ ಧರ್ಮದ ಹಿರಿಮೆಯನ್ನು ನೆಟ್ಟಗೆ ಲೋಕಕ್ಕೆ ಪರಿಚಯಿಸಿದ ಸಚ್ಚರಿತೆ, ಕುಳದೀಪಿಕೆಯಾಗಿದ್ದಳು. ಆ ದಂಪತಿಗಳು ಕಾಮ-ರತಿಯರಂತೆ ಸುಖ ನೆಮ್ಮದಿಯಿಂದಿದ್ದರು. ಜಿನ ಜನನಿಯ ತೆಳ್ ಬಸಿರಿನಲ್ಲಿ ಜಿನಕುಮಾರ ಹುಟ್ಟುವಂತೆ ಮಲ್ಲಿನಾಥ ಹುಟ್ಟಿದನು. ಅವನ ಬಾಲ್ಯದ ವರ್ಣನೆ ಬಂದಿದೆ. ಶೈಶವವನ್ನು ಕಳೆದು ದಡ್ಡಿಯ ನಿಟ್ಟಾಗತಿ ಅವನೊಂದಿಗೆ 'ಜನಪ್ರೀತಿ', 'ಜಿನಪ್ರೀತಿ' ಕೂಡ ನಿಟ್ಟಡಿಯಿಟ್ಟು ಬೆಳೆದು ಬಂತು. ಶೈಶವ ಕಳೆದು ಬಾಲ್ಯ-ಬಾಲ್ಯ ಕಳೆದು ಯೌವನ, ಅದರೊಂದಿಗೆ ಅವನ ಬಾಳಗೆಳತಿ ಲಕ್ಷ್ಮಿಯಲ್ಲಿಯೂ (ಮಲ್ಲವ್ವ) ಯೌವನೋದಯವಾಯ್ತು. ಮಲ್ಲಿನಾಥನಿಗೆ ಇದ್ದದ್ದು ಜಿನಪೂಜಾ ವ್ಯಸನ, ದಾನ ನೀಡುವ ವ್ಯಸನ, ಜಿನವಾಕ್ ಶ್ರವಣದ

ವ್ಯಸನ ಇವುಗಳನ್ನು ಬಿಟ್ಟು ಬೇರೆ ವ್ಯಸನಗಳಿಲ್ಲ. ಆತನ ಚಿತ್ತವೆಲ್ಲ ರಾಜನ ಏಳ್ಗೆಯಲ್ಲಿ, ವಿತ್ತವೆಲ್ಲ ದಾನದಲ್ಲಿ ಕೀರ್ತಿಯೆಲ್ಲ ದಶದಿಕ್ಕಿಗೂ ಪಸರಿಸುವಲ್ಲಿ ಸಾರ್ಥಕ್ಯವನ್ನು ಪಡೆಯುತ್ತಿತ್ತು.

ಸಿಂಹದ ಕೇಶವ, ಹುಲಿಯ ಮೈದೊಗಲು, ಉಗ್ರವಿಶೋರಗೇಂದ್ರನ ಉತ್ತುಂಗ ಪಣಿರತ್ನವೆನಿಸಿದವು. ಮುತ್ತಿನ ಮಂದಿರವೆಂಬ ಅರ್ಥವೆ ಅಸಂಗತವು ಮಲ್ಲಿನಾಥ ಜಿನಯೋಗಿಗೆ. ಹೀಗೆ ಜೈನಗೃಹದ ಉತ್ತುಂಗತೆಗೆ ಆಶ್ರಿತನಾದವನಿಗೆ ಸಿದ್ಧರ ರಸಂ ಸುಧಾರಸವಾಗಿತ್ತು. ದೇವತೆಗಳ ರಾಜನೆನಿಸಿದ ಮಲ್ಲಿಗಾವುಂಡನಿಗೆ ಕುಲವಧುವಾಗಿ ಮಲ್ಲಿಗಾವುಂಡಿ(ಮಲ್ಲವ್ವ)ಯೆಂಬ ಲಲನಾಮಣಿ ಕೈಹಿಡಿದಳು. ಜಿನಪೂಜಾ ಉತ್ಸವಗಳಲ್ಲಿ ಶಚಿರಮಣಿಯಂತೆ, ಸೌಭಾಗ್ಯದಲ್ಲಿ ಪಾರ್ವತಿಯಂತೆ, ದಾನಗುಣದಲ್ಲಿ ಅತ್ತಿಮಬ್ಬೆಯಂತೆ, ಶೀಲಗುಣದಲ್ಲಿ ಸೀತೆಯಂತೆ, ರೂಪಿನಲ್ಲಿ ಗಜಾಂಗನೆಯಂತೆ, ಸಮ್ಯಕ್ತದಲ್ಲಿ ಜಿನರಾಜರಾಂಬಿಕೆಯಂತೆ ಮಲ್ಲವ್ವ ಸಮನಾಗಿ ರಾರಾಜಿಸುತ್ತಿದ್ದಳು. ಛಲ, ಭುಜಬಲ, ಕಲಿತನ - ಇವುಗಳಿಗೆ ಆಶ್ರಯದಾತನಾದ, ಕುಲದೀಪಕನಾದ ನಿರ್ಮಲ ಚರಿತ್ರೆಯ ಹಿರಿಯ ಮಹಿಮೆಯಲ್ಲಿ ಹಿರಿಯಣ್ಣನಂತಿದ್ದವನು ಮಲ್ಲಿನಾಥ. ಜಿನರಾಜನ ಪದಕಮಲದ ಭ್ರಮರಸನಾಗಿದ್ದನು. ವಿನಯಾಭೋನಿದಿಯಾದವನು. ನಿಕುಲಶ್ರೀಗೆ ಭೂಷಣಪ್ರಾಯನು, ಭಾಚಣಮೂಕನೆಂಬ ತಮ್ಮಂದಿರು ಅವನ ಭುಜಬಲ ಶಕ್ತಿಯಾಗಿದ್ದರು. ಅವರಲ್ಲಿ ಬಾಚಣನೆಂಬುವನು ರಂಣರಂಗಧೀರನಾಗಿದ್ದ. ರಣಭೂಮಿಯಲ್ಲಿ ಎದುರಿಸಿ ಬಂದವನಿಗೆ ಯಮನಂತೆ, ಅಗ್ನಿಯಂತೆ, ದಾವಾನಳಂತೆ, ಸಿಂಹದಂತೆ, ರಾವಣನಂತೆ, ಮಾರಿಯ ಮಾರಿಯೆಂಬುದಲ್ಲದೆ ಉಗ್ರವಾಗಿದ್ದ.

ಮಲ್ಲಿನಾಥನ ತಮ್ಮ ಮಹಾಮಹಿಮನಾಗಿ "ಸಮಸ್ತಗುಣವಿಭೂಷಣನಾಗಿದ್ದವನಿಗೆ ವಿನಯೋದ್ಧಾಮೆಯೆನಿಸಿದ ಹಂಪಿ ಗೌಂಡಿಗೆ ಸರಿಸಮಾನರು ಇರಲಿಲ್ಲ. ಅವಳ ಜಿನಭಕ್ತಿ, ಸಜ್ಜನ ಪ್ರಿಯತೆ, ಶೀಲಗುಣ, ಮುನಿಜನ ಸೇವಕಿ, ದಾನವಿನೋದೆ - ಇವೆಲ್ಲ ಸದ್ಗುಣಗಳು ಅವಳಲ್ಲಿ ಆವರಿಸಿದ್ದವು. ಆದ್ದರಿಂದ ಅವಳಲ್ಲಿ ದರ್ಶನ ಶುದ್ಧಿಯುಂಟಾಗಿತ್ತು. ಹೀಗಿದ್ದ ಮಲ್ಲಿಗಾವಂಡಿಗೆ ಮಗನೊಬ್ಬ ಹುಟ್ಟಿದ. ಅವನ ಹೆಸರು ಚೋಮನೆಂಬುದು. ಅವನ ಪರಾಕ್ರಮ, ಪ್ರೀತಿ, ಕೀರ್ತಿಗಳು ಹೆಸರಾಗಿದ್ದವು. ಚೋಮನ ತಮ್ಮ ಏಕನೆಂಬುವನು. ಕಲಾವಂತನು, ವಿವೇಕಿಯು, ಶಿಷ್ಟಪಾಲಕನು, ಶ್ರೀ ಹಾಗೂ ಯಶಸ್ಸಿಗೆ ಭಾಜನನಾದವನಾಗಿದ್ದನು. ಈ ಪುಂಡರೀಕ ಏಕನ ಕುಲಾಂಗನೆ ದುಂಬಿಯಂತೆ ಮುಂಗುರುಳುಳ್ಳವಳು, ಕೋಗಿಲೆಯ ಕಂಠದವಳು, ಮದಗಜ ಗಮನೆಯಾಗಿ ಗುಣವಿಶೇಷಣಗಳನ್ನು ಹೊಂದಿದ್ದಳು".

ಬೆಳಿಗುಗೆ, ಕುಡಿಯೂರುಗಳೆರಡು ಜಿನಗೃಹ ಲಲಿತಾಂಗಳಾಗಿ ಮಲ್ಲಿನಾಥನಿಗೆ ಹೊಂದಿದ್ದವು. ಆತ ತನಗಿದ್ದ ಕೋಗನೂರು, ಬೈರಡು ಗ್ರಾಮಗಳನ್ನು ಪ್ರೀತಿಯಿಂದ ತಮ್ಮನಾದ ಏಕನಿಗೆ ಬಿಟ್ಟುಕೊಟ್ಟ ಪತ್ತೆಮ್ಮವಳ್ಳಿಯನ್ನು ಬಾಚಪ್ರಭುವಿಗೆ, ಎತ್ತಪಡಿಯನ್ನು ಮೂಕಗೌಂಡನಿಗೆ ಜಿನಹೊಗಳುವಂತೆ ಕೊಟ್ಟನು. ಇಷ್ಟೆ ಅಲ್ಲ ಸುಪುತ್ರರಿಗೆ ತಾನು ಸಂಪಾದಿಸಿದ ಹೊಳಗುಂದಿಯ ಜಮೀನಿನ ಭತ್ತ, ಮಾಮರ, ಹೊಂಗೆಮರ ಮತ್ತು ತಾಳೆಮರಗಳನ್ನು ಬಿಟ್ಟುಕೊಟ್ಟನು. ಮಗ

ಏಕನಿಗೆ ವಿಭುಗನ ತಮ್ಮನ ಮಗ ಅನುಪಮನೆನಿಸಿದ ಮಲ್ಲನಿಗೆ ನೆಗೆಳ್ದ ವಿಭುಮಲ್ಲ ಸಂಪಾದಿಸಿದ ಸಿರಿಯೂರೊಂದನ್ನು ಜಗ ಮೆಚ್ಚುವಂತೆ ಬಿಟ್ಟುಕೊಟ್ಟನು.

ಹೀಗೆ ಮಕ್ಕಳ ದಾಂಗುಡಿಯ ಸಿರಿ ಬೆಳೆದು ಹಬ್ಬಿರಲು ತೇಜಸ್ಸಿಗೆ ಮತ್ತು ಮಾನ್ಯ ವೃತ್ತಿಗೆ ಗಾಢಪ್ರಭು ಮಲ್ಲ ಒತ್ತಾಸೆಯಾಗಿ ಕೀರ್ತಿವಂತನಾದನು. ಆ ವಿಭು ಮಾಡಿಸಿದ ಜಿನೇಂದ್ರಾವಸತದ ಶಿಖರ ಕಳಸದ ಮೇಲೆ ಮಧ್ಯಾನ್ಹದ ಸೂರ್ಯನ ಬೆಳಕು ಚೆಲ್ಲಲು ರನ್ನಗನ್ನಡಿಯಂತೆ ಕಂಗೊಳಿಸುತ್ತಿತ್ತು. ಮಲ್ಲಿನಾಥ ಪ್ರಭುವಿನ ಮುಖ ಕಮಲವು ಆ ಜಿನಮಂದಿರದ ವೈಭವವನ್ನು ಮನದಲ್ಲಿ ನೆನೆದಾಗ ಮೈ ಉಬ್ಬುತ್ತಿತ್ತು. ಹೀಗೆ ಈ ಶಾಸನ ಮಲ್ಲಿಗಾವುಂಡನ ಮತ್ತು ಅವನ ಕುಟುಂಬದ ವ್ಯಕ್ತಿತ್ವವನ್ನು ವರ್ಣಿಸುತ್ತದೆ.

ಕ್ರಿ.ಶ. ೧೧೫೦ರ ಉತ್ತಂಗಿ ಶಾಸನ,[೨೭] ಉತ್ತಂಗಿ ಗ್ರಾಮದ ಗೌಡರ ಶೌರ್ಯ ಗುಣಗಳನ್ನು ವರ್ಣಿಸುತ್ತದೆ. ಜಗದೇಕಮಲ್ಲ ವೀರಪಾಂಡ್ಯ ದೇವರು ನೊಳಂಬವಾಡಿ-೩೨೦೦೦ವನ್ನು ದುಷ್ಟನಿಗ್ರಹ ಶಿಷ್ಟ ಪ್ರತಿಪಾಳನ ಮಾಡುತ್ತಾ ಉಚ್ಚಂಗಿ ಪುರದ ನೆಲೆವೀಡಿನಿಂದ ಆಳುತ್ತಿರುವಾಗ ಕುಂತಳವೆಂಬು ದೊಂದು ರಾಜಲಕ್ಷ್ಮೀನಿವಾಸದ ನಾಡು. ಆ ಭೂಭಾಗದಲ್ಲಿ ಭೂದೇವಿಯ ಮಂದಹಾಸದ ಮುಖದಂತಿರುವ ಕೋಗಳಿನಾಡು ಅದಕ್ಕೆ ತಿಲಕಪ್ರಾಯವಾಗಿರುವಂತೆ 'ಕುತ್ತಂಗಿ' ಗ್ರಾಮವಿತ್ತು. ಅದು ಬಣ್ಣನೆಗೆ ನಿಲುಕದಂತಿತ್ತು.

ಚಿತ್ತಜನ ಚಿತ್ರವನ್ನು ಪಡೆದು ಉತ್ತಮನೆನ್ನದ ಸುತ್ತಿ ಬಳಸಿದ ಬಲಿ ರಾಜ್ಯ ತೊಳಗಿ ಬೆಳಗುತ್ತಿತ್ತು. ಆದ್ದರಿಂದಲೇ ಆ ಕುತ್ತಂಗಿಯ ಸಿರಿಯನ್ನು ಬಣ್ಣಿಸಲು ಸಾಧ್ಯ. ಅಲ್ಲಿಯ ಗೌಡರು ಬಲ್ಲಿದರು, ಬಲಿಶಾಲಿಗಳು, ಸ್ನೇಹ ಬಯಸಿ ಬಂದವರಿಗೆ ಕರುಣೆ ತೋರಿಸುತ್ತಿದ್ದರು. ಗರ್ವದಿಂದ ಎದುರಿಸಿ ನಿಂತವರ ಶಿರವನ್ನು ಚಕ್ಕನೆ ಕಿತ್ತು ಬಿಸಾಡುವರು. ಅಲ್ಲಿಯ ಎಂತಹ ಹೇಡಿಯೂ ವೀರಾವೇಶದಿಂದ ಹೋರಾಡಬಲ್ಲವರಾಗಿದ್ದರು. ಇಂತಹ ವೀರಕಲಿಗಳ ತವರು ಕುತ್ತಂಗಿ. ತೊಂಡದ ಗಂಡನೆಂದು ಉಗ್ರಗಂಡರಿಗೆ ಗಂಡನೆಂದು ಅಷ್ಟೇ ಅಲ್ಲ ಉದ್ಧಂಡರ ಗಂಡ. ನಂಜುದರ ಗಂಡ, ಮಾರ್ಕೊಂಡರ ಗಂಡ ಬೀರಗಾವುಂಡನನ್ನು ಈ ಜಗತ್ತು ಅಕ್ಕರೆಯಿಂದ ಹೊಗಳುತ್ತಿತ್ತು. ಏಕೆಂದರೆ ಅವನು "ಪ್ರಜೆ ಮೆಚ್ಚೆಗಂಡ"ನಾಗಿದ್ದ. ಹೀಗೆ ಹೊಗಳಿಕೆ ಕೀರ್ತಿಗೆ ನೆಲೆಯಾದ ಗೌಡರ ಗ್ರಾಮ ಕುತ್ತಂಗಿ. ಇಂತಹ ಗ್ರಾಮದಲ್ಲಿ ಸೌದರ ಬಸವಯ್ಯನೆಂಬುವನು 'ಬಸವೇಶ್ವರ ಗುಡಿ'ಯನ್ನು ಕಟ್ಟಿಸಿದ. ಬಸವಯನ ತಂದೆ ಹೆಗ್ಗಡೆ ಭೋಜರಾಜ, ತಾಯಿ ಪತಿವ್ರತಾಭ್ಯರಣದಂತಿರುವ ಚಾಮಿಕಾಂತಿ, ಮಲ್ಲಣ, ಶಂಕರರೆನ್ನುವವರು ಮಕ್ಕಳು. ನಿಜವಾಗಿ ಬಸವಯ್ಯ ಕೃತಾರ್ಥವನು. ಅಸದಳವೆನಿಸುವ ದಾನಕಾರ್ಯದಲ್ಲಿ ಅಶುರರು, ಖೇಚರರು ಮತ್ತಿತರರು ಅವನಿಗಿಂತ ಅಧಿಕರಾಗಲಾರರು. ಬ್ರಾಹ್ಮಣರಿಗೆ ಹೊನ್ನನ್ನು ದಾನ ಕೊಡುವುದರಲ್ಲಿ ಬಸವನ ಹೆಸರು ಜನಜನಿತ. ಮನಸ್ಸನ್ನು ಶಂಕರನಲ್ಲಿ ದೃಢವಾಗಿರಿಸಿ ಪರಹಿತಾರ್ಥದಲ್ಲಿ ಪಾರಮಾರ್ಥವನ್ನು ಸಾಧಿಸಿದ ಬಸವಯ್ಯ ಕೃತಕತ್ಯನಲ್ಲದೆ ಮತ್ತೇನು? ಕುತ್ತಂಗಿಯಲ್ಲಿ ಸ್ಥಾಪಿಸಿದ ಬಸವೇಶ್ವರ ದೇವರಿಗೆ ಪೂಜೆ ಪುರಸ್ಕಾರ, ಅಂಗಭೋಗ, ನೈವೇದ್ಯ, ಚೈತ್ರ ಪವಿತ್ರಕ್ಕೆ ೧೦೭ನೇ

ಪ್ರಮೋದಿ ಸಂವತ್ಸರದ ಅಷ್ಟತ್ತದಿಗೆ ಅಮವಾಸೆ ಸೂರ್ಯಗ್ರಹಣ ವ್ಯತಿಪಾತ ಸಂಕ್ರಮದಲ್ಲಿ ಧಾರಾಪೂರ್ವಕವಾಗಿ ಮಾಡಿಬಿಟ್ಟರು.

ಕೆಲವು ಸಂದರ್ಭಗಳಲ್ಲಿ ಗಾವುಂಡರು ಆಶ್ರಿತ ಅರಸರ ಯುದ್ಧಗಳಲ್ಲಿ ಮತ್ತು ತಮ್ಮ ಗ್ರಾಮಕ್ಕೆ ಎದುರಾದ ಸಂಕಷ್ಟ ಕಾಲದಲ್ಲಿ ಹೋರಾಡಿ ಸಂರಕ್ಷಿಸಿಕೊಳ್ಳುತ್ತಿದ್ದರು ಎಂಬುದು ಇಲ್ಲಿ ಸ್ಪಷ್ಟವಾಗುತ್ತದೆ. ಗಾವುಂಡರ ಜೊತೆ ಕಾಣಿಸಿಕೊಳ್ಳುವ ಪ್ರಭುಗಾವುಂಡ ಶಬ್ದದ ಕುರಿತು ವಿದ್ವಾಂಸರು ಭಿನ್ನಾಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಜಿ.ಎಸ್. ದೀಕ್ಷಿತರು ಗ್ರಾಮದ ಗಾವುಂಡನನ್ನೇ ಪ್ರಭುಗಾವುಂಡನೆಂದು ಕರೆಯಲಾಗಿದೆಯೆಂದು ಹೇಳಿದ್ದಾರೆ. ಎಂ. ಚಿದಾನಂದಮೂರ್ತಿ ಅವರು ಇದೇ ಅಭಿಪ್ರಾಯವನ್ನು ಬೆಂಬಲಿಸಿದ್ದಾರೆ. ಚನ್ನಬಸವಯ್ಯ ಹಿರೇಮಠ ಅವರು ಪ್ರಭುಗಾವುಂಡರು ಊರಗಾವುಂಡರಿಗಿಂತಲೂ ಹೆಚ್ಚಿನ ಹುದ್ದೆಯವರಾಗಿದ್ದು, ಅವರ ಒಡೆತನಕ್ಕೆ ಒಂದಕ್ಕಿಂತ ಹೆಚ್ಚು ಗ್ರಾಮಗಳು ಇರುತ್ತಿದ್ದವೆಂದು ಹೇಳುತ್ತಾರೆ.[೩೭೮] ಶಾಸನಗಳಲ್ಲಿ ಗಾವುಂಡರ ವಂಶವಾಳಿಗಳನ್ನು ನೀಡುವಾಗ ಗೌವುಂಡನ ಮಗನನ್ನು ಪ್ರಭುಗಾವುಂಡನೆಂದು ಪ್ರಭುಗಾವುಂಡನ ಮಗನನ್ನು ಗಾವುಂಡ/ಗೌಡನೆಂದು ದಾಖಲಿಸಿವೆ. ಒಬ್ಬ ಗೌಡನನ್ನು ಒಂದು ಶಾಸನದಲ್ಲಿ ಗಾವುಂಡನೆಂದು ಇನ್ನೊಂದರಲ್ಲಿ ಪ್ರಭುಗಾವುಂಡನೆಂದು ಹೇಳುತ್ತವೆ. ಅಲ್ಲದೆ ಪ್ರಭುಗಾವುಂಡ ಮತ್ತು ಗಾವುಂಡರು ಇಂತಿಷ್ಟು ಹಳ್ಳಿಗಳ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು ಎಂಬ ಸ್ಪಷ್ಟ ಉಲ್ಲೇಖಗಳು ಯಾವ ಶಾಸನದಲ್ಲಿ ಕಾಣಿಸುವುದಿಲ್ಲ. ಅಲ್ಲದೆ ಕೆಲವು ಗಾವುಂಡರನ್ನು ಮಹಾಳ್ಪ್ರಭು, ಸಮಸ್ತನಾಳ್ಪ್ರಭು, ಮಹಾಪ್ರಭು ಎಂದು ಕರೆದಿರುವುದರಿಂದ ಡಾ. ಜಿ.ಎಸ್. ದೀಕ್ಷಿತ್ ಹಾಗೂ ಡಾ. ಎಂ. ಚಿದಾನಂದಮೂರ್ತಿಯವರ ಅಭಿಪ್ರಾಯವೇ ಸರಿಯೆನಿಸುತ್ತದೆ.

**ಸೇನುಬೋವ**

ಸೇನುಬೋವರು ಗಾವುಂಡರ ಕೈಕೆಳಗಿನ ಅಧಿಕಾರಿಗಳಾಗಿದ್ದಾರೆ. ಗ್ರಾಮಗಳ ಲೆಕ್ಕವನ್ನು ಬರೆಯುತ್ತಿದ್ದವನು ಸೇನುಬೋವ. ವಿದ್ಯಾವಂತರಾದ ಇವರು ಗ್ರಾಮಗಳ ಆಡಳಿತದಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿದ್ದರು. ಕೆಲವೊಮ್ಮೆ ಇವರು ಅರಸರು ಹೊರಡಿಸುವ ಶಾಸನಗಳನ್ನು ಬರೆಯುತ್ತಿದ್ದರು. ಪ್ರತಿ ಹಳ್ಳಿಗಳ ಗಾವುಂಡರು ಒಬ್ಬ ಸೇನುಬೋವನನ್ನು ನೇಮಕ ಮಾಡಿ ಕೊಂಡಿರುತ್ತಿದ್ದರು. ಇವರ ಅಧಿಕಾರ ವಂಶಪಾರಂಪರಿಕವಾಗಿತ್ತು. ಅಕ್ಷರ ವಿದ್ಯೆಯ ಕಲಿಕೆ ಅದನ್ನು ನಿರ್ಧರಿಸುತ್ತಿತ್ತು. ಆತ ಹಳ್ಳಿಯ ವಿರಳ ಸಾಕ್ಷರರಲ್ಲಿ ಒಬ್ಬನಾಗಿದ್ದ. ಪಾಂಡ್ಯ ಅರಸರ ಶಾಸನಗಳಲ್ಲಿ ಕೆಲವು ಸೇನಬೋವರ ಉಲ್ಲೇಖಗಳಿವೆ. ದಾನ-ದತ್ತಿಗಳನ್ನು ನೀಡುವಾಗ ಸೇನಬೋವ ಊರಿನ ಗಾವುಂಡ ಮಹಾಜನಗಳು ಮತ್ತು ಇತರ ಅಧಿಕಾರಿಗಳ ಜೊತೆ ಶಾಸನಗಳಲ್ಲಿ ಕಾಣಿಸಿಕೊಳ್ಳುತ್ತಾನೆ.

ರಾಯರಸರುಂ ಹೆಗ್ಗಡೆಯ್ಯೆಚೆಣನುಂ ಹೆಗ್ಗಡೆಯ ಹೊಲ್ಲಣನುಂ ಹಡವಳ ರಾಜಣನುಂ ಗೌಡರ ಗಟ್ಟಿಗಾವುಂಡನು ಯಿಂಮ್ಮಡಿಗೇತಗಾವುಂಡನುಂ ಸೇನಬೋವ ದುಗ್ಗಣ್ಣನುಂ ಸಮಸ್ತ ಪ್ರಜೆಗಳ ಮುಂದೆ ಮೂಲಸ್ಥಾನ ಕಲಿದೇವರಿಗೆ ದಾನ ಬಿಡುತ್ತಾರೆ.[೩೭೯] ಸೇನಬೋವ ಹೊನ್ನಬಾಚಯ್ಯ ಶ್ರೀ ಹೊನ್ನದೇವಿಯ ನೈವೇದ್ಯಕ್ಕಂ ನಂದಾದೀವಿಗೆಗಂಬಿಟ್ಟ.[೩೮೦] ಜಗತಿ ಮುಖ್ಯರಪ್ಪ ಶ್ರೀಮತು

ಮಾಚಬೋವನುಂ, ಸಿಂಗಬೋವನುಂ,[೩೮೧] ಕುರುವತ್ತಿಯ ಈಶ್ವರಭಟ್ಟರ ಪುತ್ರ ಸೇನುಬೋವ ಸಂಕಣ್ಣನು ಬಿಟ್ಟ ಹೂವಿನ ತೋಂಟದ ಗದ್ದೆಕಮ್ಮ ೧೩೦ ಮತಂ[೩೮೨] ಕಲ್ಯಾಣಸಕ್ತಿ ಪಂಡಿತರು ಈ ಶಾಸನವ ಸೇನಬೋವ ಬೊಪ್ಪೆಯ ಬರೆದ ಕಲುಕುಟ್ಟಿಗ ಮಳೋಜ ಹೊಯ್ದ ಗುರುಪ್ರಸಾದಂ.[೩೮೩] ಮಂಗಳಮಹಾಶ್ರೀಬರದಂ ಸೇನಬೋವಮುದ್ದೆಯ್ಯ ಶ್ರೀ ಶ್ರೀ.[೩೮೪] ಈ ಶಾಸನಮಂ ಬರೆದಂ ಸೇನಬೋವ ಮುದ್ದಣರಿಸಿದ ನೀಕ... ದೋಜ.[೩೮೫] ಈ ಶಾಸಮಂ ಬರೆದಂ ಸೇನಬೋವ ಚಾವರಾಜ ಕಂಡರಿಸಿದನಕ್ಕಸಾಲೆ ಮಾದಿಯೋಜ.[೩೮೬]

ಪಾಂಡ್ಯರ ಶಾಸನಗಳಲ್ಲಿ ಕಾಣಿಸಿಕೊಳ್ಳುವ ಈ ಸೇನಬೋವರು ಗ್ರಾಮದ ಗಾವುಂಡನ ಲೆಕ್ಕಪತ್ರದ ವ್ಯವಹಾರವನ್ನು ನೋಡಿಕೊಳ್ಳುತ್ತಿದ್ದರು ಮತ್ತು ಅರಸರು ಹೊರಡಿಸಿದ ಶಾಸನಗಳನ್ನು ಬರೆಯುತ್ತಿದ್ದರು ಎಂಬುದು ಸ್ಪಷ್ಟವಾಗಿ ಇಲ್ಲಿ ತೋರುತ್ತದೆ.

**ತಳಾರರು**

ತಳಾರರು ಹಳ್ಳಿಗಳ ಆಡಳಿತದ ಕೆಳಗಿನ ಅಧಿಕಾರಿಗಳಾಗಿ ಕಾರ್ಯನಿರ್ವಹಿಸುತ್ತಿದ್ದರು. ಇವರು ಗ್ರಾಮಗಳಲ್ಲಿಯ ಇಂದಿನ 'ತಳವಾರ'ರಾಗಿದ್ದಾರೆ. ಇವರನ್ನು ತಳಾರ, ತಳವುಕಾರ, ತಳವಾರ ಮುಂತಾಗಿ ಕರೆಯಲಾಗಿದೆ. ಇವರಲ್ಲಿ ಹಿರಿಯ ತಳಾರನಿದ್ದು, ಆತನನ್ನು ಮಹಾ ತಳವಾರನೆಂದು ಕರೆದಂತಿದೆ. ತಳವಾರನನ್ನು ಕಂಡ ಕೂಡಲೇ ಕಳ್ಳರು, ಪಾದರಿಗರು, ವಂಚಕರು, ಗಡಗಡ ನಡುಗಿ ಕುಸಿದುಬಿಡುತ್ತಿದ್ದರು. ದೊರೆಯ ವಿರುದ್ಧ ಪಿತೂರಿ ಮಾಡುವವರ ಮೇಲೆ ಕಣ್ಣಿಡುವ ಈತನಿಗೆ ಮತ್ತೊಬ್ಬನ ಪೊಲ್ಲಮೆಯನ್ನು ಹುಡುಕುವುದೆಂದರೆ ಬಹಳ ಇಷ್ಟ ಎಂದು ನಯಸೇನ ಆತನ ಕರ್ತವ್ಯದ ಪರಿಚಯವನ್ನು ಹೇಳುತ್ತಾನೆ.[೩೮೭] ವೀರರಾದ ಇವರು ಗ್ರಾಮದ ರಕ್ಷಣೆಗಾಗಿ, ತನ್ನ ಒಡೆಯನಿಗಾಗಿ, ಮಿತ್ರನಿಗಾಗಿ ಪ್ರಾಣವನ್ನು ಪಣಕ್ಕಿಟ್ಟು ಹೋರಾಡಿ ಮಡಿದ ಉಲ್ಲೇಖವೂ ಶಾಸನಗಳಲ್ಲಿ ದೊರೆಯುತ್ತದೆ. ಹಗಲು ರಾತ್ರಿ ಎನ್ನದೇ ಗ್ರಾಮವನ್ನು ರಕ್ಷಿಸುವ ಈತನಿಗೆ ಖಡ್ಗದ ಅಂದರೆ ತಲ್ವಾರದ ಅವಶ್ಯಕತೆ ಯಾವಾಗಲೂ ಇರುತ್ತಿತ್ತು. ಹೀಗಾಗಿ ಯಾವಾಗಲೂ ಖಡ್ಗಧಾರಿಯಾಗಿರುವ ಈತನನ್ನು 'ತಳಾರ'ನೆಂದು ಕರೆದಿರಬಹುದಾಗಿದೆ.[೩೮೮] ತಾಳರರು ಕೇವಲ ತನ್ನ ಗ್ರಾಮ ರಕ್ಷಣೆಗೆ ಮಾತ್ರ ಮೀಸಲಾಗಿದ್ದಿಲ್ಲ. ಕೆಲವೊಮ್ಮೆ ಬೇರೆ ಬೇರೆ ಸ್ಥಳಗಳ ರಕ್ಷಣಾ ಕಾರ್ಯವನ್ನು ಮಾಡುತ್ತಿದ್ದರು. ಪಾಂಡ್ಯ ಅರಸರ ಶಾಸನಗಳಲ್ಲಿ ತಳಾರ ಅಧಿಕಾರಿಗಳ ಉಲ್ಲೇಖ ಕಂಡುಬರುತ್ತದೆ.

ಕ್ರಿ.ಶ. ೧೦೯೯ ಕುರುವತ್ತಿ ಶಾಸನ[೩೮೯] ಕುರುವತ್ತಿಯ ಸೋಮೇಶ್ವರ ದೇವರಿಗೆ ಮತ್ತನ್ತಾಳಾರಂ ಚಂದಿಯಣ್ಣನಿಂ ಪಿರಿಯನುದಯಣ್ಣಂ ಗರ್ದೆ ಕಮ್ಮ ೧೨೭, ಬಿಟ್ಟ ಉಲ್ಲೇಖವಿದೆ. ಕ್ರಿ.ಶ. ೧೦೭೯ರ ನೀಲಗುಂದ ಶಾಸನ[೩೯೦] ಹಳೆಯ ಹಾಳು ಸ್ವಯಂಭುರಾಮೇಶ್ವರದೇವರ ಸೇವೆಗಾಗಿ ಉಪಹಾರಕ್ಕೆಂದು ಆದ ನೂರ ತಳವುಕಾರ ಇರುಳುನೀಕ್ಕಿಯಾಂಡರು ಬಿಟ್ಟ ತೋಟಸ್ಥಳ ಕಬ್ಬಲಗಟ್ಟದ ಕೆಳಗೆ ಶ್ರೀರುಳಂಗೊವೊಪ್ಪರಡ್ಡಕದ ತಲೆತರದ ಮೂಡಣ ಕಡೆ ಕಂಮ ೨೦೦. ಹೀಗೆ ತಲಾರರು ಹಿಂದೆ ಗ್ರಾಮ ಜೀವನದಲ್ಲಿ ಬಹುಮುಖ್ಯ ಪಾತ್ರವನ್ನು ವಹಿಸುತ್ತಿದ್ದರು.

ದುಷ್ಟರನ್ನು ಕಳ್ಳರನ್ನು ಹಿಡಿದು ಶಿಕ್ಷಿಸಿ ಗ್ರಾಮಜೀವನದ ನೆಮ್ಮದಿ ಹಾಳಾಗದಂತೆ ರಕ್ಷಣೆ ನೀಡಿ ಗ್ರಾಮ ರಕ್ಷಕರೆನಿಸಿದ್ದಾರೆ.

ಮಹಾಮಂಡಳೇಶ್ವರರಾದ ಉಚ್ಚಂಗಿ ಪಾಂಡ್ಯರ ಶ್ರೇಣೀಕೃತ ಆಡಳಿತ ವ್ಯವಸ್ಥೆಯಲ್ಲಿ ರಾಜವಂಶೀಯ, ರಾಜವಂಶೀಯರಲ್ಲದ ಇತರೆ ಕೆಲವು ವಂಶಗಳು ಆಡಳಿತದಲ್ಲಿ ಸ್ಥಾನ ಪಡೆದುಕೊಂಡಿದ್ದರು. ಇವರ ಆಡಳಿತದ ಅಧಿಕಾರದ ಹೆಚ್ಚಿನ ಭಾಗ ವಂಶಪಾರಂಪರ್ಯವಾಗಿತ್ತು. ಇಂತಹ ವಂಶಪಾರಂಪರ್ಯ ಆಡಳಿತದಲ್ಲಿ ಪಾಂಡ್ಯರಿಗೆ ಅಧೀನರಾಗಿ ಮಹಾಮಂಡಳೇಶ್ವರ, ಮಂಡಳೇಶ್ವರ, ಮಹಾಸಾಮಂತ, ಸಾಮಂತ ದಂಡನಾಯಕ, ಪೆರ್ಗ್ಗಡೆಗಳು ಮತ್ತು ಗ್ರಾಮೀಣ ಆಡಳಿತದಲ್ಲಿ ಗಾವುಂಡ/ಪ್ರಭುಗಾವುಂಡ ಸೇನಬೋವ ತಳಾರರು ವಿವಿಧ ಭಾಗಗಳಲ್ಲಿ ಆಳ್ವಿಕೆ ಮಾಡಿ ಪ್ರಜಾಪ್ರಾತಿನಿಧಿಕ ದೃಷ್ಟಿಯನ್ನು ಅಳವಡಿಸಿಕೊಂಡಿದ್ದರು. ತ್ರಿಭುವನಮಲ್ಲ ಪಾಂಡ್ಯ ಮತ್ತು ವಿಜಯಪಾಂಡ್ಯದೇವನ ಅವಧಿಯಲ್ಲಿ ಪಾಂಡ್ಯರ ಆಡಳಿತ ಹೆಚ್ಚು ಸಂಘಟಿತವಾಗಿತ್ತು. ಹಾಗಾಗಿ ಇವರ ಆಡಳಿತದಲ್ಲಿ ಹೆಚ್ಚಿನ ಸಂಖ್ಯೆಯ ಅಧಿಕಾರಿಗಳು ಕಾರ್ಯನಿರ್ವಹಿಸಿರುವುದು ಶಾಸನಗಳಿಂದ ತಿಳಿಯುತ್ತದೆ. ಇವರ ಪಾದಪದ್ಮೋಪಜೀವಿಗಳಾಗಿದ್ದ ಎಲ್ಲಾ ಬಗೆಯ ಆಡಳಿತವರ್ಗ ಪಾಂಡ್ಯ ಅರಸರಿಗೆ ಋಣಿಯಾಗಿದ್ದು ತಮ್ಮ ತಮ್ಮ ಜವಾಬ್ದಾರಿಗಳನ್ನು ಸರಿಯಾಗಿ ನಿರ್ವಹಿಸಿ ಆ ಕಾಲಘಟ್ಟದ ಸಾಂಸ್ಕೃತಿಕ ಏಳಿಗೆಯಲ್ಲಿ ಪಾಲುದಾರರಾಗಿದ್ದಾರೆ.

**ಆಡಳಿತ ವಿಭಾಗಗಳು**

ಗೋದಾವರಿ, ಭೀಮಾರಥೀ, ಕೃಷ್ಣಾ, ವೈಕ್ಯಾಥಮಂಜರಾ।
ತುಂಗಾಭದ್ರಾಸುಪ್ರಯೋಗಾ ಕಾವೇರಿಚ್ತಥಾಪಗಾ ।
ದಕ್ಷಿಣಾಪಥನದ್ಯಸ್ತುಸಹ್ಯಪಾದಾದ್ವಿನಿಸ್ತೃತಾ॥[೩೧]

ಗೋದಾವರಿ, ಭೀಮಾ, ಕೃಷ್ಣಾ, ಮಂಜರಾ, ತುಂಗಭದ್ರಾ ಮತ್ತು ಕಾವೇರಿಗಳು ದಕ್ಷಿಣ ಭಾರತದ ಪ್ರಮುಖ ನದಿಗಳಾಗಿದ್ದು, ದಕ್ಷಿಣ ಭಾರತದ ಕನ್ನಡ ನಾಡಿನ ಮೇರೆಯನ್ನು ಮತ್ತು ಅದರ ಭೌಗೋಳಿಕ ವಿಷಯವನ್ನು ವಾಯುಪುರಾಣ ಸಮರ್ಥಿಸುತ್ತದೆ. ಕಾವೇರಿಯಿಂದ ಗೋದಾವರಿವರೆಗೆ ವ್ಯಾಪಿಸಿರುವ ನಾಡು ಕನ್ನಡ. ನಾಡಿನೊಳಗಣ 'ಜನಪದವು' ಜಗತ್ತಿನ ವಿಷಯಗಳಿಗೆ ಮಿಗಿಲಾಗಿತ್ತೆಂದು ಹೇಳಿದ ವಿಷಯವನ್ನು ಗಮನಿಸಿದರೆ ಆಡಳಿತದ ಸಮರ್ಥ ನಿರ್ವಹಣೆಗಾಗಿ ಪ್ರಾಚೀನ ಕರ್ನಾಟಕದ ವಿಶಾಲ ಭೂಪ್ರದೇಶದ ಸುಗಮ ಆಡಳಿತಕ್ಕಾಗಿ ರಾಜ್ಯವನ್ನು ಪ್ರಾಂತಗಳಾಗಿ ವಿಭಜಿಸಿದ್ದನ್ನು ಕಾಣುತ್ತೇವೆ. ಬಲಾಢ್ಯ ರಾಜಕೀಯ ಪ್ರಭುತ್ವಗಳು ಗಟ್ಟಿಗೊಳ್ಳಬೇಕಾದರೆ, ವ್ಯವಸ್ಥಿತವಾದ ಆಡಳಿತ ಘಟಕಗಳು ಅತ್ಯವಶ್ಯಕ. ಪ್ರಾಚೀನ ಕರ್ನಾಟಕದಲ್ಲಿದ್ದ ಈ ಆಡಳಿತ ವಿಭಾಗಗಳನ್ನು ರಾಷ್ಟ್ರ, ಆಹಾರ, ಮಂಡಲ, ವಿಷಯ, ದೇಶ, ಕಂಪಣ, ನಾಡು, ಭಕ್ತಿ ಮುಂತಾಗಿ ಕರೆಯಲಾಗಿದೆ.[೩೨] ಕೌಟಿಲ್ಯನಿಂದ ನಿರೂಪಿತಗೊಂಡ ಮೌರ್ಯರ ಆಡಳಿತದ ಮಾದರಿ ಕರ್ನಾಟಕದ ಆಡಳಿತ ರಚನೆಗೆ ಪೂರಕವಾದ ತಳಹದಿಯನ್ನು ಒದಗಿಸಿತು ಎಂದರೆ ತಪ್ಪಾಗಲಾರದು. ಮೌರ್ಯರ ನಂತರ ಕರ್ನಾಟಕದಲ್ಲಿ ಅಸ್ತಿತ್ವಕ್ಕೆ ಬಂದ ಶಾತವಾಹನರು ಮೌರ್ಯರ

ಆಡಳಿತ ಮಾದರಿಯನ್ನೇ ಅನುಸರಿಸಿದರು. ಪ್ರಜಾಪರ ನೀತಿಯನ್ನು ಅನುಸರಿಸಿದ ಇವರ ಆಡಳಿತದ ವೈಶಿಷ್ಟ್ಯವೆಂದರೆ, ರಾಣಿಯರಿಗೂ ಆಡಳಿತದಲ್ಲಿ ಸಹಭಾಗಿತ್ವ ನೀಡಲಾಯಿತು. ರಾಜನು ಮಂತ್ರಿ ಪರಿಷತ್ತಿನ ಸಲಹೆ ಮೇರೆಗೆ ಆಡಳಿತ ನಡೆಸುತ್ತಿದ್ದನು. ನಂತರ ಹಲವು ಮಾರ್ಪಾಡುಗಳೊಂದಿಗೆ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯವರೆಗೆ ಇದೇ ಮಾದರಿಯ ಆಡಳಿತ ಮುಂದುವರೆಯಿತು.

ಚಾರಿತ್ರಿಕ ಭೂಗೋಳದ ಅರ್ಥ ಎನ್‌ಸೈಕ್ಲೋಪಿಡಿಕ್ ಡಿಕ್ಸನರಿ ಆಫ್ ಜಿಯಾಗ್ರಫಿಯಲ್ಲಿ ಉಲ್ಲೇಖಿಸಿದಂತೆ ಐತಿಹಾಸಿಕ ಭೌಗೋಳ ಎಂದರೆ, "ಗತಕಾಲದ ವಿಶಾಲವಾದ ಭೂಪ್ರದೇಶ ಹಾಗೂ ಗತಕಾಲದ ಪ್ರಾದೇಶಿಕ ಭೂಪ್ರದೇಶ"ವಾಗಿದೆ. ವಿಕಿಪಿಡಿಯಾ ಅಂತರ್ಜಾಲ ವಿಶ್ವಕೋಶದಲ್ಲಿ ಉಲ್ಲೇಖಿಸುವಂತೆ "ಪ್ರಾಚೀನ ಕಾಲದ ಇಲ್ಲವೆ ಕಾಲಘಟ್ಟದಲ್ಲಿ ಆದ ಸ್ಥಳ ಅಥವಾ ಪ್ರಾಂತ್ಯಗಳಲ್ಲಿನ ಭೌಗೋಳಿಕ ಅಧ್ಯಯನವಾಗಿದೆ".[೩೯೩]

ಮೌರ್ಯರು ಪ್ರಾಂತ್ಯಗಳನ್ನು 'ರಾಷ್ಟ್ರ' ಎಂದು ಕರೆದಿದ್ದನ್ನು ಕಾಣುತ್ತೇವೆ. ಸಾಹಿತ್ಯದಲ್ಲಿ ಇದನ್ನು 'ಜನಪದ'ದ ಸಮನಾರ್ಥಕವಾಗಿ ಬಳಸಲಾಗಿದೆ. ಕ್ರಿ.ಶ. ೬ನೇ ಶತಮಾನದ ನಂತರ ರಾಷ್ಟ್ರವನ್ನು 'ವಿಷಯ' ಅಥವಾ 'ಆಹಾರ'ಗಳನ್ನಾಗಿ ವಿಭಜಿಸಿ ಆಹಾರವನ್ನು 'ಪಥ' ಅಥವಾ 'ಪಥಕ' ಎಂದು ವಿಂಗಡಿಸಲಾಯಿತು. ಪಾಣಿನಿಯು 'ವಿಷಯ'ವನ್ನು ಒಂದು ಪ್ರಾಂತಿಯ ಘಟಕ ಎಂದು ಉಲ್ಲೇಖಿಸಿದ್ದಾನೆ.[೩೯೪]

ಅಶೋಕನ ಶಾಸನಗಳಲ್ಲಿ 'ಜನಪದ', 'ವಿಷಯ', 'ಆಹಾರ' ಮತ್ತು 'ಪ್ರದೇಶ' ಎಂಬ ಆಡಳಿತ ವಿಭಾಗಗಳು ಉಲ್ಲೇಖಗೊಂಡಿವೆ. ಆದರೆ 'ಮಂಡಲ'ಗಳ ಉಲ್ಲೇಖ ಕಂಡು ಬರುವುದಿಲ್ಲ. ಡಾ. ಸಂಕಾಲಿಯವರು ಸ್ವತಂತ್ರ ಅಥವಾ ಅರೆಸ್ವತಂತ್ರ ರಾಜ್ಯಗಳನ್ನು 'ಮಂಡಲ'ಗಳೆಂದು ಕರೆಯುತ್ತಿದ್ದರು ಎಂದು ಅಭಿಪ್ರಾಯಪಟ್ಟಿದ್ದಾರೆ.[೩೯೫] ಪುರಾಣ ಹಾಗೂ ಸಂಸ್ಕೃತ ಕೃತಿಗಳಲ್ಲಿ 'ಜನಪದ' ಪದವು ಉಲ್ಲೇಖಗೊಂಡಿದೆ. ಈ ಆಡಳಿತ ವಿಭಾಗಗಳನ್ನು ಸೂಚಿಸುವ ವಿವಿಧ ಪದಗಳ ನಿಶ್ಚಿತಸ್ಥಾನವನ್ನು ಅರಿಯುವುದು ಕಷ್ಟಸಾಧ್ಯವಾಗಿದೆ. 'ಅಮರಕೋಶ' ಕೃತಿಯಲ್ಲಿ ದೇಶ, ಜನಪದ ಮತ್ತು ವಿಷಯಗಳನ್ನು ಸಮನಾರ್ಥಕ ಪದಗಳನ್ನಾಗಿ ಉಲ್ಲೇಖಿಸಲಾಗಿದೆ. ಅದೇ ರೀತಿ ದಕ್ಷಿಣ ಭಾರತದಲ್ಲಿ ರಾಷ್ಟ್ರ, ವಿಷಯ, ಗ್ರಾಮ ಪದಗಳ ಸಮನಾಗಿ ಮಂಡಲ, ನಾಡು ಮತ್ತು ಊರ್ ಪದಗಳನ್ನು ಬಳಸಲಾಗಿದೆ.[೩೯೬]

ಗುಪ್ತರು ತಮ್ಮ ಸಾಮ್ರಾಜ್ಯವನ್ನು 'ದೇಶ'ಗಳನ್ನಾಗಿ ದೇಶಗಳನ್ನು 'ಭುಕ್ತಿ'ಗಳಾಗಿ ವಿಂಗಡಿಸಿದರು. 'ಭುಕ್ತಿ' ವಿಭಾಗದ ಉಲ್ಲೇಖವು ದಕ್ಷಿಣ ಭಾರತದ ಇತಿಹಾಸದಲ್ಲಿ ಮೊದಲ ಬಾರಿಗೆ ಗುಪ್ತರ ಅವಧಿಯಲ್ಲಿ ಉಲ್ಲೇಖವಾಗಿದೆ.[೩೯೭] ಮೌರ್ಯರ ಅವಧಿಯಲ್ಲಿನ ರಾಷ್ಟ್ರ ಅಥವಾ ಪ್ರಾಂತ ಗುಪ್ತರ 'ದೇಶ'ಕ್ಕೆ ಸಮನಾಗಿತ್ತು. ಮೌರ್ಯರ ವಿಷಯ ಅಥವಾ ಹಾರವು ಭುಕ್ತಿಗಿಂತ ಚಿಕ್ಕದಾಗಿತ್ತು ಹಾಗೂ 'ಪಥಕ್ಕೆ' ಸಮನಾಗಿರುವುದನ್ನು ಕಾಣಬಹುದು. ಶಾತವಾಹನರ ಕಾಲದಲ್ಲಿ ಮೌರ್ಯರ ಪದ್ಧತಿಯೇ ಮುಂದುವರಿಯಿತು. ಅವರು ರಾಜ್ಯವನ್ನು ಜನಪದ ಅಥವಾ ರಾಷ್ಟ್ರಗಳನ್ನಾಗಿ

ವಿಭಾಗಿಸಲಾಗಿತ್ತು. ಜನಪದವನ್ನು ಆಹಾರಗಳನ್ನಾಗಿ ವಿಂಗಡಿಸಲಾಗಿತ್ತು. 'ಆಹಾರ' ಪದವು ಇವರ ಕಾಲದಲ್ಲಿ ಆಡಳಿತ ವಿಭಾಗದ ಅತಿ ಸಾಮಾನ್ಯ ಪದನಾಮವಾಗಿತ್ತು. ಶಾತವಾಹನರ ಶಾಸನಗಳಲ್ಲಿ ಕಾಪುರ ಆಹಾರ್, ಮಾಮಲಾಹಾರ, ಸೂಪರಕಾಹಾರಗಳ ಉಲ್ಲೇಖವನ್ನು ಕಾಣಬಹುದು. ನಂತರದ ಅವಧಿಯಲ್ಲಿ ಆಹಾರ ಪದದೊಂದಿಗೆ 'ವಿಷಯ' ಪದದ ಬಳಕೆ ರೂಢಿಯಲ್ಲಿತ್ತು. ಕದಂಬರ ಕಾಲದಲ್ಲಿ ವಿಷಯ ಪದದ ಬಳಕೆ ಅತೀ ಸಾಮಾನ್ಯವಾಗಿತ್ತು. ಪಲ್ಲವ ಮತ್ತು ಇಕ್ಷ್ವಾಕು ವಂಶದ ಕೆಲವು ಅರಸರು 'ರಥಾ' ಅಥವಾ 'ರಾಷ್ಟ್ರ'ದಂತಹ ಹಳೆಯ ಪದಗಳಿಗೆ ಆದ್ಯತೆ ನೀಡಿದ್ದನ್ನು ಕಾಣಬಹುದು. ಇನ್ನಿತರ ಸಣ್ಣಪುಟ್ಟ ರಾಜ್ಯಗಳಲ್ಲಿ ವಿಷಯ–ರಾಷ್ಟ್ರ ಮತ್ತು ಭೋಗ್ ಎಂಬ ಹೆಸರಿನ ಆಡಳಿತ ಘಟಕಗಳಿದ್ದವು.[೩೮] ಬಾದಾಮಿ ಚಾಳುಕ್ಯರು ತಮ್ಮ ರಾಜ್ಯವನ್ನು ದೇಶ, ವಿಷಯ, ಭೋಗ್ ಅಥವಾ ಭಾಗ ಎಂದು ವಿಭಜಿಸಿದ್ದರೆಂದು ಅವರ ದಾಖಲೆಗಳಿಂದ ತಿಳಿದುಬರುತ್ತದೆ. ಇದರ ಜೊತೆಗೆ ಆಹಾರ ಹಾಗೂ ಪಥಕ ವಿಭಾಗಗಳ ಕುರಿತು ಏಕೈಕ ದಾಖಲೆ ಉಪಲಬ್ಧವಾಗಿದೆ.

ಆಹಾರ ಮತ್ತು ಪಥಕ ಅಥವಾ ಪಥ ಆಡಳಿತ ವಿಭಾಗದ ಚರ್ಚೆಗೆ ಬಂದಾಗ ಆಹಾರ ಎಂಬ ಆಡಳಿತ ವಿಭಾಗದ ಹೆಸರು ಭಾರತದಾದ್ಯಂತ ಕ್ರಿಶ್ಚಿಯನ್ ಯುಗದ ಆರಂಭದಿಂದ ಬಳಕೆಯಲ್ಲಿರುವುದನ್ನು ಕಾಣುತ್ತೇವೆ. ಬಾದಾಮಿ ಚಾಳುಕ್ಯರ ಕಾಲದಲ್ಲಿ ಆಡಳಿತ ವಿಭಾಗದ ಕೇಂದ್ರ ಪ್ರದೇಶದ ಹೆಸರಿನೊಂದಿಗೆ ಸಂಖ್ಯಾ ಪ್ರತ್ಯಯಗಳು ವಿಶೇಷವಾಗಿ ಕಾಣಿಸಿಕೊಳ್ಳುತ್ತವೆ.

ರಾಷ್ಟ್ರಕೂಟರ ಕಾಲದಲ್ಲಿನ ಅವರ ಭೂ–ದತ್ತಿ ಶಾಸನಗಳಲ್ಲಿ 'ರಾಷ್ಟ್ರಪತಿ', 'ವಿಷಯಪತಿ' ಹಾಗೂ 'ಗ್ರಾಮಕೂಟ'ರೆಂದು ಸಮಾನವಾಗಿ ಬಳಸಲಾಗಿದೆ. ಚಾಳುಕ್ಯರ ಕಾಲದಲ್ಲಿ ವಿಷಯವು ದೊಡ್ಡದಾಗಿದ್ದು, 'ರಾಷ್ಟ್ರವು' ಸಣ್ಣ ಆಡಳಿತಾತ್ಮಕ ಘಟಕವಾಗಿತ್ತು. ಇವರ ಸಮಕಾಲೀನ ನೆರೆಯ ಪ್ರಾಂತ್ಯಗಳಲ್ಲಿ 'ಮಂಡಲ' ಎಂಬ ಆಡಳಿತ ಘಟಕ ಅಸ್ತಿತ್ವದಲ್ಲಿರುವುದು ಕಂಡುಬರುತ್ತದೆ. ದಕ್ಷಿಣ ಗುಜರಾತನ್ನು 'ಲಾಟ ಮಂಡಲ' ಮತ್ತು ವೆಂಗಿ ಮಂಡಲವನ್ನು 'ಆಂಧ್ರಮಂಡಲ' ಎಂದು ಕರೆದಿದ್ದನ್ನು ಕಾಣಬಹುದು. ರಾಷ್ಟ್ರಕೂಟರ ದಾಖಲೆಗಳು ತಮ್ಮ ಸ್ವಪ್ರಾಂತ್ಯಗಳಲ್ಲಿನ ಯಾವುದೇ ಮಂಡಲ ಹಾಗೂ ರಾಷ್ಟ್ರದ ಬಗ್ಗೆ ಉಲ್ಲೇಖಿಸುವುದಿಲ್ಲ. ಆದರೆ ರಾಷ್ಟ್ರಪತಿ ಎಂಬ ಅಧಿಕಾರಿಗಳ ಉಲ್ಲೇಖ ಕಂಡು ಬರುತ್ತದೆ. ಪುಂಕವಿಷಯ ಅಥವಾ ಕರಹಾಟಕ ವಿಷಯ ಎಂಬ ವಿಶೇಷ ಆಡಳಿತ ಘಟಕದ ಉಲ್ಲೇಖಗಳಿವೆ.

ಕಲ್ಯಾಣ ಚಾಳುಕ್ಯರ ಕಾಲದಲ್ಲಿ 'ಕಂಪಣ' ಎಂಬ ಹೊಸ ಉಪವಿಭಾಗವನ್ನು ಕಾಣುತ್ತೇವೆ. 'ಕಂಪಣ'ವು ವಿಷಯದ ಉಪ ವಿಭಾಗವಾಗಿತ್ತು ಹಾಗೂ ಭುಕ್ತಿಗೆ ಸಮನಾಗಿತ್ತು. ಉದಾಹರಣೆಗೆ ಕೊಳನೂರ ಭುಕ್ತಿ, ಕೊಳನೂರ ಕಂಪಣ ಎಂದೂ ಸಹ ಉಲ್ಲೇಖಿತಗೊಂಡಿದೆ. ಕಂಪಣ ಪದವನ್ನು 'ಭುಕ್ತಿ'ಗಿಂತ ಹೆಚ್ಚಾಗಿ ಈ ಅವಧಿಯಲ್ಲಿ ಬಳಸಲಾಗಿದೆ. 'ಕಂಪಣ' ಎಂದರೆ 'ಒಂದು ವರ್ತುಳ'.[೩೯]

ಯಾದವರ ಕಾಲದಲ್ಲಿನ ಆಡಳಿತ ವಿಭಾಗಗಳನ್ನು ಗಮನಿಸಿದಾಗ, ದಖ್ಖನ್‌ನಲ್ಲಿ ಮೊತ್ತಮೊದಲ ಬಾರಿಗೆ 'ಮಂಡಲ' ವಿಭಾಗದ ಬಗ್ಗೆ ಉಲ್ಲೇಖವನ್ನು ಇವರ ಶಾಸನಗಳಲ್ಲಿ ಕಾಣುತ್ತೇವೆ. ಉದಾಹರಣೆಗೆ ಕುಂಡಿಮಂಡಲ, 'ಕಂಪಣ'ದಂತಹ ಆಡಳಿತಾತ್ಮಕ ಪದಗಳನ್ನು ವಿರಳವಾಗಿ ಬಳಸಲಾಗಿದೆ. 'ಭುಕ್ತಿ' ವಿಭಾಗವು ಇಲ್ಲಿ ಸಂಪೂರ್ಣವಾಗಿ ಕಣ್ಮರೆಯಾದಂತೆ ಕಂಡುಬರುತ್ತದೆ.

ಆಡಳಿತ ವಿಭಾಗಗಳ ಸಾಮಾನ್ಯ ಸ್ವರೂಪವೆಂದರೆ ಆರಂಭದ ಚಾಳುಕ್ಯರ ಕಾಲದಿಂದ ಕಳಚೂರಿ, ಹೊಯ್ಸಳ ಮತ್ತು ಯಾದವರ ಕಾಲದಲ್ಲಿ ಒಂದೇ ರೀತಿಯಾಗಿದ್ದಂತೆ ಕಂಡುಬರುತ್ತದೆ.[೯೦೦] ವಿಜಯನಗರ ಕಾಲಕ್ಕೆ ಆಡಳಿತ ವಿಭಾಗಗಳನ್ನು ರಾಜ್ಯ, ವೇಂಠೆ, ವೇಠಕ, ವಳಿತ, ಚಾವಡಿ, ಸೀಮೆ ಎಂಬ ಪದಗಳಿಂದ ಕರೆಯಲಾಗಿದೆ. ಮರಾಠರ ಕಾಲದಲ್ಲಿ ಮಹಲು ಇತ್ಯಾದಿ ಪದಗಳು ಬಳಕೆಯಾಗಿವೆ.

ಕರ್ನಾಟಕದಲ್ಲೂ ಆಡಳಿತ ವಿಭಾಗಗಳನ್ನು ವಿಷಯ, ಭುಕ್ತಿ, ಕಂಪಣ, ರಾಷ್ಟ್ರ ಮುಂತಾಗಿ ಕರೆಯಲಾಗಿದೆ. ಈ ವಿಭಾಗಗಳ ಹೆಸರಿನ ಮುಂದೆ ಸಂಖ್ಯಾ ಪ್ರತ್ಯಯಗಳನ್ನು ಸೇರಿಸಿದ ಪದ್ಧತಿ ವಿಶಿಷ್ಟವಾಗಿದೆ. ಗಂಗವಾಡಿ–೯೬,೦೦೦, ನೊಳಂಬವಾಡಿ–೩೨,೦೦೦, ಬನವಾಸಿ–೧೨,೦೦೦ ಮುಂತಾದ ಉದಾಹರಣೆಗಳನ್ನು ಶಾಸನಗಳಲ್ಲಿ ಕಾಣಬಹುದಾಗಿದೆ. ಈ ಪದ್ಧತಿ ಉತ್ತರ ಕರ್ನಾಟಕದಲ್ಲಿ ಕಂಡುಬಂದಷ್ಟು ದಕ್ಷಿಣ ಕರ್ನಾಟಕದಲ್ಲಿ ಕಂಡುಬರುವುದಿಲ್ಲ. ಆಡಳಿತ ವಿಭಾಗಗಳ ಹೆಸರುಗಳ ಮುಂದೆ ಸಂಖ್ಯಾ ಪ್ರತ್ಯಯಗಳನ್ನು ಬಳಸುವ ಪದ್ಧತಿಯು ದಖ್ಖನ್ ಬಾದಾಮಿ ಚಾಳುಕ್ಯ ಹಾಗೂ ರಾಷ್ಟ್ರಕೂಟರ ರಾಜ್ಯಗಳಲ್ಲಿ ವಿಶೇಷವಾಗಿ ಕಂಡುಬರುತ್ತದೆ. ಕಲ್ಯಾಣ ಚಾಳುಕ್ಯ, ಸೇವುಣ, ಹೊಯ್ಸಳರ ಕಾಲದಲ್ಲಿ ಇದರ ಬಳಕೆ ಅನೂಚಾನವಾಗಿರುವುದನ್ನು ಕಾಣುತ್ತೇವೆ. ದಖ್ಖನ್ ರಾಜ್ಯಗಳ ಸುತ್ತಲಿನ ರಾಜ್ಯಗಳಲ್ಲಿ ಈ ಪದ್ಧತಿ ಅಷ್ಟೊಂದು ಮಹತ್ವದ್ದಾಗಿ ಕಂಡುಬರುವುದಿಲ್ಲ. ದಖ್ಖನ್ ರಾಜ್ಯಗಳ ಪ್ರಭಾವದಿಂದಾಗಿ ಚೋಳ ಹಾಗೂ ಕಾಕತೀಯರ ರಾಜ್ಯಗಳಲ್ಲಿ ಈ ಪದ್ಧತಿ ಕಂಡುಬರುತ್ತದೆ. ಕದಂಬರು ವಾಕಾಟಕರು ಸಮಕಾಲೀನರಾಗಿದ್ದರು. ಅವರಲ್ಲಿ ಆಡಳಿತ ಘಟಕಗಳ ಹೆಸರುಗಳ ಮುಂದೆ ಸಂಖ್ಯಾಪ್ರತ್ಯಯಗಳ ಬಳಕೆ ಕಂಡುಬರುವುದಿಲ್ಲ. ಬಾದಾಮಿ ಚಾಳುಕ್ಯರು ಮೊದಲ ಬಾರಿಗೆ ಇಂತಹದೊಂದು ಹೊಸ ಪದ್ಧತಿಯನ್ನು ಪರಿಚಯಿಸಿ ರುವುದನ್ನು ಚಾಳುಕ್ಯ ಇಮ್ಮಡಿ ಪುಲಿಕೇಶಿಯ ಐಹೊಳೆ ಶಾಸನದಲ್ಲಿ ಕಾಣಬಹುದು. ಕೆಲವು ಆಡಳಿತ ವಿಭಾಗಗಳು ಎಲ್ಲಾ ಅವಧಿಯಲ್ಲಿಯೂ ಒಂದೇ ರೀತಿಯ ಸಂಖ್ಯೆಗಳನ್ನು ಹೊಂದಿದ್ದವು. ಉದಾ:– ಕದಂಬಳಿಗೆ–೫೦೦, ಬನವಾಸಿ–೧೨೦೦, ಸಾಂತಳಿಗೆ–೧೦೦೦ ಮುಂತಾದವುಗಳು. ಇದಕ್ಕೆ ವ್ಯತಿರಿಕ್ತವಾಗಿ ರಾಜಕೀಯ ಪ್ರಭುತ್ವಗಳು ಬದಲಾದ ಹಾಗೇ ಕೆಲವು ವಿಭಾಗಗಳ ಸಂಖ್ಯೆಗಳು ಬದಲಾದವು. ಉದಾ:– ರಾಷ್ಟ್ರಕೂಟರ ಕಾಲದಲ್ಲಿ ನೊಳಂಬವಾಡಿ–೧೦೦೦ ಎಂದು ಕರೆದರೆ ಕಲ್ಯಾಣದ ಚಾಳುಕ್ಯರ ಕಾಲದಲ್ಲಿ ನೊಳಂಬವಾಡಿ–೩೨೦೦೦ ಎಂದು ಕರೆಯಲ್ಪಟ್ಟಿತು.(ಕುಂಡಿಕ–೧೦೦೦, (ಬಾದಾಮಿ ಚಾಳುಕ್ಯ), ಕುಹೂಂಡಿ–೩೦೦೦ ರಾಷ್ಟ್ರಕೂಟ).

'ದಿ ಇಂಪೆರಿಯಲ್ ಗೆಜೆಟಿಯರ್', ಬಿ.ಎಲ್. ರೈಸ್ (ತಮ್ಮ ಗಂಗವಾಡಿ ಲೇಖನದಲ್ಲಿ) ಜೆ.ಎಸ್. ದೀಕ್ಷಿತ್, ವೈದ್ಯ ಅವರು ಈ ಸಂಖ್ಯಾ ಪ್ರತ್ಯಯಗಳು ಪ್ರಾಚೀನ ವಿಭಾಗಗಳ ಕಂದಾಯವನ್ನು ಅಥವಾ ಅವುಗಳಲ್ಲಿನ ನಾಡು ಮುಂತಾದ ಉಪ-ವಿಭಾಗಗಳನ್ನು ಪ್ರತಿನಿಧಿಸುತ್ತವೆ ಎಂದು ಉಲ್ಲೇಖಿಸಲಾಗಿದೆ.[೮೧] "ಅಯ್ಯಂಗಾರರು ಈ ಸಂಖ್ಯೆಗಳು ಕಂದಾಯವನ್ನು ನೀಡಿದ ಇಲ್ಲವೆ, ಒಟ್ಟು ಉತ್ಪನ್ನದ ಮೌಲ್ಯವಾಗಿದೆ. ಇಲ್ಲವೆ ಕೆಲವು ಸಂದರ್ಭಗಳಲ್ಲಿ ಅವಶ್ಯಕ ಬೀಜಗಳ ಪ್ರಮಾಣವನ್ನು ಸೂಚಿಸುತ್ತವೆ"[೮೨] ಎನ್ನುತ್ತಾರೆ. ಪ್ರಾಣನಾಥ್, ಫ್ಲೀಟ್, ಅಲ್ತೇಕರ, ಪಿ.ವ್ಹಿ. ಖಾನೆ ಅವರು ಗ್ರಾಮಗಳ ಸಂಖ್ಯೆಗಳನ್ನು ಸೂಚಿಸುತ್ತವೆ ಎಂದು ಹೇಳುತ್ತಾರೆ. ಉದಾ:- ಐಹೊಳೆ ಶಾಸನದಲ್ಲಿ ಇಮ್ಮಡಿ ಪುಲಕೇಶಿಯನ್ನು ೯೯,೦೦೦ ಗ್ರಾಮವನ್ನು ಒಳಗೊಂಡ ಮೂರು ರಾಷ್ಟ್ರಗಳ ಒಡೆಯ ಎಂದು ಉಲ್ಲೇಖಿಸಲಾಗಿದೆ. ಆಡಳಿತದ ವಿಭಾಗಗಳೊಂದಿಗೆ ಹೊಂದಿಕೊಂಡ ಅಂಕಿ-ಸಂಖ್ಯೆಗಳ ಕುರಿತು ಒಮ್ಮತಕ್ಕೆ ಬರಲು ಸಾಧ್ಯವಾಗಿಲ್ಲ. ಇಂಥ ದ್ವಿಮುಖವಾದ ಹೇಳಿಕೆಗಳಿಗೆ ಶಾಸನಗಳಿಂದ ಸ್ಪಷ್ಟತೆ ಸಿಗುವುದಿಲ್ಲ. ಆದರೆ ದೊಡ್ಡ ಸಂಖ್ಯೆಗಳು ಬಂದಾಗ ಅದು ಕಂದಾಯವನ್ನು ಸಣ್ಣ ಸಂಖ್ಯೆಗಳು ಇದ್ದಾಗ ಅವು ಗ್ರಾಮಗಳನ್ನು ಪ್ರತಿನಿಧಿಸುತ್ತಿರಬಹುದು ಎಂಬ ವಾದ ಸೂಕ್ತವೆನಿಸುತ್ತದೆ.

ಈ ಸಂಖ್ಯಾ ಪ್ರತ್ಯಯಗಳ ಜೊತೆಗೆ ಕರೆಯುವ ಆಡಳಿತ ವಿಭಾಗಗಳ ಹೆಸರುಗಳು ಹಿಂದೆ ಚಾರಿತ್ರಿಕ 'ವಿಶೇಷತೆ ಇದೆ. ಆಡಳಿತ ವಿಭಾಗದ ಮುಖ್ಯಪಟ್ಟಣ ಅಥವಾ ಮುಖ್ಯಕೇಂದ್ರದ ಹೆಸರಿನಿಂದ ಆಡಳಿತ ವಿಭಾಗ ಹಾಗೂ ಉಪವಿಭಾಗಗಳನ್ನು ಕರೆಯಲಾಗಿದೆ. ಉದಾ:- ಕೋಗಳಿ-೫೦೦ ಸಾನ್ತಳಿಗೆ-೧೦೦೦, ಮುತ್ತಿಗೆ-೩೦, ಬಿಕ್ಕಿಗ-೭೦. ಆಡಳಿತ ವಿಭಾಗದಲ್ಲಿ ಆಡಳಿತ ನಡೆಸುತ್ತಿರುವ ರಾಜ ಮನೆತನಗಳು ತಮ್ಮ ಮೂಲ ಮನೆತನದ ಹೆಸರಿನಲ್ಲಿ ತಮ್ಮ ಆಡಳಿತ ರಾಜ್ಯವನ್ನು ಕರೆದುಕೊಂಡಿದ್ದಾರೆ. ಮತ್ತೆ ಅಲ್ಲಿ ಆಡಳಿತ ನಡೆಸುವ ರಾಜ್ಯವಂಶ ಪತನವಾದ ಮೇಲೆ ವಿಜಯ ಪಡೆದ ರಾಜಮನೆತನಗಳು ಶತ್ರುಗಳನ್ನು ಗೆದ್ದ ನೆನಪಿಗಾಗಿ ಅವರ ಹೆಸರಿನಿಂದ ಅವುಗಳನ್ನು ಗುರುತಿಸುತ್ತಾರೆ. ಉದಾ: ನೊಳಂಬವಾಡಿ ೩೬೦೦, ಗಂಗವಾಡಿ-೯೬೦೦೦, ಬನವಾಸಿನಾಡು ಪಾಂಡ್ಯನಾಡು, ಹೊಯ್ಸಳ ದೇಶ ಚೋಳನಾಡು ಕದಂಬಳಿಗೆ ಎಂದು ಕರೆದಿರುವುದು ಇದಕ್ಕೆ ಸಾಕ್ಷಿಯಾಗಿದೆ.

ಶಾಸನಗಳು ಅರಸನ ಆಳ್ವಿಕೆಯನ್ನು ವಿವರಿಸಬೇಕಾದಾಗ ಆತನ ರಾಜ್ಯದ ಒಟ್ಟು ಭೂಭಾಗವನ್ನು ಹೆಸರಿಸುತ್ತವೆ. ಕ್ರಿ.ಶ. ೧೦೭೯ರ ಪಾಂಡ್ಯರ ಮೊದಲ ಶಾಸನ ತ್ರಿಭುವನಮಲ್ಲ ಪಾಂಡ್ಯದೇವರು ನೊಳಂಬವಾಡಿ-೩೨೦೦೦. ಆಳುತ್ತಿರುವುದಾಗಿ ಹೇಳಿದರೆ ಕ್ರಿಶ ೧೦೮೩ರ ನೀಲಗುಂದ ಶಾಸನ ತ್ರಿಭುವನಮಲ್ಲ ಪಾಂಡ್ಯದೇವರು ನೊಳಂಬವಾಡಿ-೩೨೦೦೦, ಗಂಗವಾಡಿ-೯೬೦೦೦, ಕಣೆಕಲ್ಲು-೩೦೦ ಬನವಾಸಿ ನಾಡಗಳನ್ನು ಆಳುತ್ತಿದ್ದನೆಂದು ಹೇಳುತ್ತದೆ.

ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗಗಳ ಕುರಿತು ಈವರೆಗೂ ನಡೆದಿರುವ ಅಧ್ಯಯನಗಳು ಹಾಗೂ ಉಚ್ಚಂಗಿ ಪಾಂಡ್ಯರ ಕಾಲದ ಶಾಸನಗಳ ಹಿನ್ನೆಲೆಯಲ್ಲಿ ನೊಳಂಬವಾಡಿ-೩೨,೦೦೦

ಅಥವಾ ಪಾಂಡ್ಯನಾಡಿನ ಆಡಳಿತ ವಿಭಾಗ ಮತ್ತು ಅದರ ಉಪವಿಭಾಗಗಳನ್ನು ಗುರುತಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಕಂಚಿಯ ಪಲ್ಲವ ವಂಶದೊಂದಿಗೆ ಮೂಲವನ್ನು ಕಲ್ಪಿಸಿಕೊಳ್ಳುವ ನೊಳಂಬ ಪಲ್ಲವರು ಕರ್ನಾಟಕದ ಆಗ್ನೇಯ ಭಾಗದಲ್ಲಿ ಮೂರು ಶತಮಾನಗಳ ಕಾಲ ರಾಜ್ಯವನ್ನಾಳಿದರು. ಇವರು ಆಡಳಿತ ನಡೆಸಿದ ಪ್ರದೇಶವನ್ನು ನೊಳಂಬವಾಡಿ-೩೨,೦೦೦ ಎಂದು ಕರೆಯಲಾಗಿದೆ. ಈ ವಂಶದ ಮೂರನೇ ತಲೆಮಾರಿನ ಸಿಂಹಪೋತ ಕಲಿನೊಳಂಬಾದಿ ರಾಜನ ಮಗ ಚಾರುಪೊನ್ನೇರನು ತಾನು ಆಳ್ವಿಕೆ ಮಾಡುತ್ತಿದ್ದ ಪ್ರದೇಶವನ್ನು ತನ್ನ ವಂಶದ ಮೂಲ ಹೆಸರಿನೊಂದಿಗೆ ನೊಳಂಬಳಿಗೆ ಸಾಸಿರವೆಂದು ಕರೆದುಕೊಂಡಿದ್ದಾನೆ.[೪೦೩] ನೊಳಂಬರ ಆಳ್ವಿಕೆಯು ಕ್ರಿ.ಶ. ೭೩೫ರಲ್ಲಿ ಕೇವಲ ೧೦೦೦ ಹಳ್ಳಿಗಳಿಗೆ ಸೀಮಿತವಾಗಿತ್ತು. ಕ್ರಿ.ಶ. ೯೦೦ರ ಹೊತ್ತಿಗೆ ಇವರ ಆಡಳಿತದ ವ್ಯಾಪ್ತಿ ಮತ್ತಷ್ಟು ವಿಸ್ತರಿಸಲ್ಪಟ್ಟು ನೊಳಂಬವಾಡಿ–೩೨,೦೦೦ ಹಳ್ಳಿಗಳನ್ನು ಹೊಂದಿದ ವಿಶಾಲ ಪ್ರಾಂತ್ಯವಾಯಿತು.[೪೦೪] ಇವರ ರಾಜ್ಯಾಡಳಿತದ ಪ್ರಗತಿಯು ಪರಾಕಾಷ್ಠತೆಯನ್ನು ತಲುಪಿದ ಸಮಯದಲ್ಲಿ ಆಡಳಿತ ವಿಭಾಗದ ವಿಸ್ತಾರವು ಈಗಿನ ಕರ್ನಾಟಕದ ಬೆಂಗಳೂರು, ಕೋಲಾರ, ತುಮಕೂರು, ಚಿತ್ರದುರ್ಗ, ಚಿಕ್ಕಮಗಳೂರು, ಬಳ್ಳಾರಿ, ದಾವಣಗೆರೆ, ಮಂಡ್ಯ ಜಿಲ್ಲೆಯ ತಾಯಲೂರಿನವರೆಗೂ, ಅನಂತಪುರ, ಧರ್ಮಪುರಿ ಹಾಗೂ ಚಿತ್ತೂರು ಜಿಲ್ಲೆಯ ಭಾಗಗಳನ್ನು ನೊಳಂಬವಾಡಿ-೩೨,೦೦೦ ಪ್ರಾಂತ್ಯ ಹೊಂದಿದ್ದಿತು.[೪೦೫]

ಕ್ರಿ.ಶ. ೧೦೫೫ರ ನಂತರ ನೊಳಂಬ ಪಲ್ಲವರು ಈ ಆಡಳಿತ ವಿಭಾಗದ ಆಡಳಿತದಿಂದ ದೂರ ಸರಿದರು. ಆಗ ಇದು ಕಲ್ಯಾಣ ಚಾಳುಕ್ಯ ಅರಸರ ನೇರ ಆಡಳಿತಕ್ಕೆ ಒಳಪಟ್ಟಿತ್ತು. ಚಾಳುಕ್ಯ ವಂಶದ ರಾಜಕಮಾರರಾದ ಅಹವಮಲ್ಲ, ವಿಷ್ಣುವರ್ಧನ ವಿಜಯಾದಿತ್ಯ, ಆರನೇ ವಿಕ್ರಮಾದಿತ್ಯ, ೨ನೇ ಸೋಮೇಶ್ವರ ಹಾಗೂ ಸಹೋದರ ಜಯಸಿಂಹ ನೊಳಂಬ ಪಲ್ಲವರ ಪಾರಂಪರಿಕ ಬಿರುದುಗಳನ್ನು ಪಡೆದು ಈ ಪ್ರಾಂತ್ಯದ ಆಡಳಿತ ನಿರ್ವಹಿಸಿರುವುದು ಶಾಸನಗಳಿಂದ ಸ್ಪಷ್ಟವಾಗುತ್ತದೆ.

ಕ್ರಿ.ಶ. ೧೦೭೫-೭೬ರ ವೇಳೆಯಲ್ಲಿ ಎರಡನೇ ಸೋಮೇಶ್ವರ ಹಾಗೂ ವಿಕ್ರಮಾದಿತ್ಯ ಇವರ ಮಧ್ಯೆ ಚಾಳುಕ್ಯ ಸಿಂಹಾಸನಕ್ಕೆ ಕಲಹ ಆರಂಭವಾದಾಗ (ಜಯಸಿಂಹ ವಿಕ್ರಮಾದಿತ್ಯನ ಪರ ವಹಿಸಿದ್ದನು) ಎರಡನೇ ಸೋಮೇಶ್ವರ ನೊಳಂಬ ವಂಶದ ಮಹಾಪ್ರಚಂಡ ದಂಡನಾಯಕ ಉದಯಾದಿತ್ಯನಿಗೆ ನೊಳಂಬವಾಡಿ-೩೨,೦೦೦, ಹಾನಗಲ್ಲು-೫೦೦, ಬನವಾಸಿ-೧೨,೦೦೦ಗಳ ಒಡೆತನವನ್ನು ಶಾಸನವಾಗಿ ಬರೆದುಕೊಟ್ಟು ದಕ್ಷಿಣ ಭಾಗವನ್ನು ಅಥವಾ ವಿಕ್ರಮಾದಿತ್ಯನಿಗೆ ಆಶ್ರಯ ನೀಡಿದ ಪ್ರದೇಶವನು ಗೆಲ್ಲು ಎಂದು ಹೇಳುತ್ತಾನೆ.[೪೦೬]

ಇದರಿಂದ ನೊಳಂಬರು ಪುನಃ ತಮ್ಮ ಮೂಲ ಪ್ರದೇಶದ ಆಡಳಿತವನ್ನು ಪಡೆದರೂ ಅದು ತಾತ್ಕಾಲಿಕವಾಗಿತ್ತು. ಕ್ರಿ.ಶ. ೧೦೭೬ರಲ್ಲಿ ಸಹೋದರರ ಜಗಳದಲ್ಲಿ ವಿಕ್ರಮಾದಿತ್ಯನಿಗೆ

ಜಯವಾಗಿ, ಸೋಮೇಶ್ವರ - ಸೆರೆಸಿಕ್ಕ. ಈ ಅವಧಿಯಲ್ಲಿ ವಿಕ್ರಮಾದಿತ್ಯ ಚಾಳುಕ್ಯ ಸಾಮ್ರಾಜ್ಯದ ಆಡಳಿತವನ್ನು ವಹಿಸಿಕೊಂಡ ತಕ್ಷಣ ತನ್ನ ಬೆಂಬಲಕ್ಕೆ ನಿಂತಿದ್ದ ಉಚ್ಚಂಗಿ ಪಾಂಡ್ಯರಿಗೆ ನೊಳಂಬವಾಡಿ-೩೨೦೦೦ ಪ್ರಾಂತ್ಯದ ಆಡಳಿತವನ್ನು ವಹಿಸಿದನು.

ವಿಕ್ರಮಾದಿತ್ಯನಿಂದ ಅಧಿಕಾರ ಪಡೆದ ಉಚ್ಚಂಗಿ ಪಾಂಡ್ಯರು ಚಾಳುಕ್ಯ ವಂಶದ ಅಂತ್ಯಕಾಲದವರೆಗೂ ಸಾಮಂತರಾಗಿ- ಚಾಳುಕ್ಯರ ರಕ್ಷಣೆಗೆ ನಿಂತರು. ಆನಂತರ ಹೊಯ್ಸಳ ವೀರಬಲ್ಲಾಳನ ದಾಳಿಗೆ ಚಾಳುಕ್ಯರು ಮತ್ತು ಉಚ್ಚಂಗಿ ಪಾಂಡ್ಯರು ಮಣಿದು ಕ್ರಿ.ಶ. ೧೨೦೬ರ ತನಕ ಹೊಯ್ಸಳ ಸಾಮಂತರಾಗಿ ನಂತರ ಚರಿತ್ರೆಯ ಪುಟಗಳಿಂದ ಕಣ್ಮರೆಯಾದರು. ಕ್ರಿ.ಶ. ೧೦೭೬ರಿಂದ ೧೨೦೬ರವರೆಗೆ ಉಚ್ಚಂಗಿ ಪಾಂಡ್ಯರು ನೊಳಂಬವಾಡಿ-೩೨,೦೦೦ ಪ್ರಾಂತ್ಯದ ಆಡಳಿತವನ್ನು ನಡೆಸಿದರು. ನೊಳಂಬರು ಕರೆದ ಹೆಸರಿನಿಂದಲೇ ಈ ಪ್ರಾಂತ್ಯದ ಆಡಳಿತವನ್ನು ಮುಂದುವರಿಸಿದರು. ಹೊಯ್ಸಳರ ನಂತರ ವಿಜಯನಗರದ ಕಾಲದಲ್ಲಿ ಈ ವಿಭಾಗವು "ಪಾಂಡ್ಯನಾಡು" ಎಂದು ಹೆಸರಾಯಿತು.

ಉಚ್ಚಂಗಿ ಪಾಂಡ್ಯರು ನೊಳಂಬವಾಡಿ-೩೨,೦೦೦ ಪ್ರಾಂತ್ಯದ ಆಡಳಿತವನ್ನು ಪಡೆದು ಕೊಂಡಿರುವ ಬಗ್ಗೆ ಕಾಟಿಕೆರೆ, ಹರಿಹರ[೧೦೭] ಹಾಗೂ ಕ್ರಿ.ಶ. ೧೦೭೯ರ ಹೂವಿನಹಡಗಲಿ ಮತ್ತು ಬಾಗಳಿ ಶಾಸನಗಳು ಮೊದಲ ಬಾರಿಗೆ ಮಾಹಿತಿ ನೀಡುತ್ತವೆ. ಕ್ರಿ.ಶ. ೧೨೦೬ರ ಅಂಬಳಿ ಮತ್ತು ಉಜ್ಜನಿ ಶಾಸನಗಳು ಉಚ್ಚಂಗಿ ಪಾಂಡ್ಯರ ಆಳ್ವಿಕೆಯ ಕೊನೆಯ ಶಾಸನಗಳು. ಕ್ರಿ.ಶ. ೧೦೭೯ರ ಬಾಗಳಿ ಶಾಸನ ಚಾಳುಕ್ಯ ದೊರೆ ವಿಕ್ರಮಾದಿತ್ಯನು ಕಲ್ಯಾಣದಲ್ಲಿ ರಾಜ್ಯಭಾರ ಮಾಡುತ್ತಿದ್ದಾಗ ಅವನ ಪಾದಪದ್ಮೋಪಜೀವಿ ಮಹಾಮಂಡಳೇಶ್ವರ ಕಾಂಚಿಪುರವರಾಧೀಶ್ವರ, ಯದುವಂಶಾಂಬರದ್ಯುಮಣಿ, ಸುಭಟ ಚೂಡಾಮಣಿ, ನಿಜಕುಳಕಮಳಮಾರ್ತಂಡ ಪರಿಚ್ಛೇಧಿಗಂಡ, ಪಾಂಡ್ಯ ದೇವರಸರು ನೊಣಂಬವಾಡಿ ಮೂವತ್ತಿತ್ಸಾಸಿರಮಂ ದುಷ್ಟ ನಿಗ್ರಹ ಶಿಷ್ಟ ಪ್ರತಿ ಪಾಳನದಿಂ ರಾಜ್ಯಂಗೆಯುತ್ತಮಿರೆ[೧೦೮] ಎಂದು ಹೇಳುತ್ತದೆ. ತ್ರಿಭುವನಮಲ್ಲ ಪಾಂಡ್ಯ ನೊಳಂಬವಾಡಿ-೩೨೦೦೦ ಪ್ರಾಂತ್ಯದ ಜೊತೆಗೆ ಕೆಲವು ಕಾಲ ಗಂಗವಾಡಿ-೯೬೦೦೦, ಬನವಾಸಿ-೧೨೦೦೦, ಪ್ರಾಂತ್ಯಗಳ ಆಡಳಿತ ನೋಡಿಕೊಂಡಿರುವಂತೆ ಶಾಸನಗಳು ತಿಳಿಸುತ್ತವೆ. ಕ್ರಿ.ಶ. ೧೦೮೫-೮೬ರ ರಾಗಿಮಸಲವಾಡ ಶಾಸನ ತ್ರಿಭುವಮಲ್ಲದೇವರ ಪಾದಾಬ್ಜಭೃಂಗ ಶ್ರೀಮನ್ಮಹಾಮಂಡಳೇಶ್ವರ ತ್ರಿಭುವನಮಲ್ಲ ಪಾಂಡ್ಯ ದೇವರು ನೊಳಂಬವಾಡಿ-೩೨೦೦೦, ಗಂಗವಾಡಿ-೯೬೦೦೦ ಆಳುತ್ತಿರುವುದಾಗಿ ತಿಳಿಸುತ್ತದೆ.[೧೦೯]

ಕ್ರಿ.ಶ. ೧೧೨೩ರ ಕಬ್ಬೂರು ಶಾಸನ ಮಹಾಮಂಡಳೇಶ್ವರ ತ್ರಿಭುವನಮಲ್ಲ ವೀರನೊಳಂಬ ಪಲ್ಲವ ಪೆರ್ಮ್ಮಾನಡಿ ದೇವರ ತಮ್ಮ ತ್ರಿಭುವನಮಲ್ಲದೇವ ಪಾದಾಬ್ಜಭೃಂಗ ಶ್ರೀಮನ್ಮಹಾಮದ್ದಿಳೇಶ್ವರ ತ್ರಿಭುವನಮಲ್ಲ ಪಾಂಡ್ಯದೇವರು ನೊಳಂಬವಾಡಿ ಮೂವತ್ತಿರ್ಚ್ಛಾಸಿರಮುಮಂ, ಸಾನ್ತಳಿಗೆ ಸಾಸಿರಮಂ, ಬನವಾಸಿನಾಡೊಳಗಣ ಅಗ್ರಹಾರಂ ತುಂಬೆಗನ ಹೊಸವೂರು ಎಲಗತೂರೊಳಗಾಗಿ ಪಲಮಕುರ್ತ್ತು

ಪ್ರಿತ್ತಿಗಳ ಸುರಸಂಕಥಾ ವಿನೋದದಿಂದ ಆಳುತ್ತಿರುವುದಾಗಿ ಹೇಳುತ್ತದೆ.[೪೧೦] ಆನಂತರದ ಪಾಂಡ್ಯ ಅರಸರ ಶಾಸನಗಳಲ್ಲಿ ಗಂಗವಾಡಿ-೯೬೦೦೦ ಮತ್ತು ಬನವಾಸಿ ನಾಡಿನ ಉಲ್ಲೇಖಗಳು ಕಂಡುಬರುವುದಿಲ್ಲ. ತಾತ್ಕಾಲಿಕವಾಗಿ ಈ ಪ್ರದೇಶದ ಕೆಲವು ಪ್ರದೇಶಗಳು ಇವರ ಆಡಳಿತದ ವ್ಯಾಪ್ತಿಗೆ ಬಂದಂತೆ ಕಾಣುತ್ತವೆ. ಹೊಯ್ಸಳ ವಂಶದ ಎರೆಯಂಗ ವಿಕ್ರಮಾದಿತ್ಯನ ಸಾಮಂತನಾಗಿ ಗಂಗವಾಡಿ-೯೬೦೦೦ ಪ್ರದೇಶದ ಆಡಳಿತವನ್ನು ನೋಡಿಕೊಳ್ಳುತ್ತಿದ್ದ. ಎರೆಯಂಗನ ನಂತರ ಅವನ ಮಕ್ಕಳಾದ ವಿಷ್ಣುವರ್ಧನ ಮತ್ತು ವೀರಬಲ್ಲಾಳ ಚಾಳುಕ್ಯ ಆಡಳಿತದಿಂದ ಸ್ವತಂತ್ರರಾಗಲು ಪ್ರಯತ್ನಿಸಿದರು. ಈ ಕಾರಣಕ್ಕೆ ವಿಷ್ಣುವರ್ಧನ ಮತ್ತು ವಿಕ್ರಮಾದಿತ್ಯನ ನಡುವೆ ಕ್ರಿ.ಶ. ೧೧೦೮ರಲ್ಲಿ ನರೇಗಲ್, ೧೧೧೮ರಲ್ಲಿ ಕಣ್ಣೆಗಾಲ ಬಿಜಾನಕಬಿಯ ಕಾಳಗ, ಪರಮಾರಜಗದ್ದೇವನೊಂದಿಗೆ ಹಾಗೂ ಕ್ರಿ.ಶ. ೧೧೨೦ರಲ್ಲಿ ಹಲಸೂರು ಕಾಳಗಗಳು ನಡೆದಿರುವುದು ಚಾಳುಕ್ಯರ ಶಾಸನಗಳಿಂದ ತಿಳಿಯುತ್ತದೆ.[೪೧೧] ಹಾಗಾಗಿ ಹೊಯ್ಸಳರ ಮೇಲೆ ಹಿಡಿತ ಸಾಧಿಸುವ ಕಾರಣಕ್ಕೆ ವಿಕ್ರಮಾದಿತ್ಯ ತನ್ನ ನಿಷ್ಠಾವಂತ ಮಂಡಳೇಶ್ವರ ತ್ರಿಭುವನಮಲ್ಲ ಪಾಂಡ್ಯನಿಗೆ ಈ ಪ್ರಾಂತ್ಯಗಳ ಆಡಳಿತ ವಹಿಸಿದಂತೆ ಕಾಣುತ್ತದೆ. ಈ ಪ್ರಾಂತ್ಯದ ಮೇಲೆ ಪೂರ್ಣ ಹಿಡಿತ ಹಿಡಿದಿದ್ದರು. ಹೊಯ್ಸಳ ಆಡಳಿತದ ಮೇಲೆ ನಿಗಾವಿಡಲು ಉತ್ಸುವಾರಿ ವಹಿಸಿರಬೇಕು.

ಹೊಯ್ಸಳರ ಕ್ಷಿಪ್ರ ಬೆಳವಣಿಗೆ ನೊಳಂಬವಾಡಿ-೩೨೦೦೦ದ ಭೌಗೋಳಿಕ ವ್ಯಾಪ್ತಿ ಕಡಿಮೆ ಯಾಗಲು ಕಾರಣವಾಯಿತು ಎಂಬುದು ಸತ್ಯ ಕ್ರಿ.ಶ. ೧೧೨೭ರ ರಾಗಿಮಸಲವಾಡ ಶಾಸನ ದಂಡನಾಯಕ ಚೋಳಾಂಡರನು 'ಪಾಂಡ್ಯನಾಡಿನ' ತೆರಿಗೆಯಲ್ಲಿ ಎರಡು ಪಣವನ್ನು ದೇವರಿಗೆ ದಾನ ನೀಡಿದ್ದನ್ನು ತಿಳಿಸುತ್ತದೆ.[೪೧೨] ಉಚ್ಚಂಗಿ ಪಾಂಡ್ಯರು ತಮ್ಮ ಆಡಳಿತ ಪ್ರದೇಶವನ್ನು ನೊಳಂಬವಾಡಿ ಬದಲಾಗಿ 'ಪಾಂಡ್ಯನಾಡು' ಎಂದು ತಮ್ಮ ಮೂಲ ವಂಶದ ಹೆಸರಿನಲ್ಲಿ ಕರೆಯುವ ಪ್ರಯತ್ನವಾಗಿದ್ದರೂ ಅದು ಮುಂದುವರೆಯಲಿಲ್ಲ. ಆಡಳಿತದುದ್ದಕ್ಕೂ ನೊಳಂಬವಾಡಿ ಎಂದು ಮೂಲ ಹೆಸರಿನಿಂದಲೂ ಕರೆದಿರುವುದು ವಿಶೇಷವಾಗಿದೆ.

ಉಚ್ಚಂಗಿ ಪಾಂಡ್ಯರು ಈ ಪ್ರದೇಶದ ಆಡಳಿತವನ್ನು ಪಡೆಯುವ ಪೂರ್ವದಲ್ಲಿ ನೊಳಂಬವಾಡಿ-೩೨೦೦೦ ಪ್ರಾಂತ್ಯದ ಆಡಳಿತ ಚಾಳುಕ್ಯರ ನೇರ ಆಡಳಿತಕ್ಕೆ ಒಳಪಟ್ಟಿತ್ತು. ಈ ಅವಧಿಯಲ್ಲಿ ಚಾಳುಕ್ಯರು ಇದನ್ನು ನೊಳಂಬವಾಡಿ-೩೨೦೦೦ ಎಂದು ಕರೆದುಕೊಂಡಿದ್ದಾರೆ. ವಿಷ್ಣುವರ್ಧನ ಮಹಾರಾಜ ವಿಜಯಾದಿತ್ಯನ ನಂತರ ಜಯಸಿಂಹ ಈ ಪ್ರಾಂತ್ಯದ ಆಡಳಿತ ವಹಿಸಿಕೊಂಡ ಇರುವ ನೊಳಂಬ ಘಟೆಯಂಕಾರನಿಗೆ (ನನ್ನಿನೊಳಂಬ) ಗಂಡು ಸಂತಾನವಿಲ್ಲದೆ ತನ್ನ ಸಹೋದರಿಯ ಮಗ ಚಾಳುಕ್ಯ ಜಯಸಿಂಹನನ್ನು ದತ್ತು ಪಡೆದು ನೊಳಂಬ ಸಾಮ್ರಾಜ್ಯದ ಅಧಿಕಾರ ವಹಿಸಿರಬಹುದು ಎಂದು ವಿದ್ವಾಂಸರು ಹೇಳಿದ್ದಾರೆ.

ನನ್ನಿನೊಳಂಬ ಸತ್ತಾಗ ಅಪುತ್ರಕನಾಗಿದ್ದ ಅವನ ಸಾಮ್ರಾಜ್ಯಕ್ಕೆ ಅಂದರೆ ನೊಳಂಬವಾಡಿ-೩೨೦೦೦ ಪ್ರಾಂತ್ಯಕ್ಕೆ ಜಯಸಿಂಹ ಪಟ್ಟಾಭಿಷಕ್ತನಾಗಿರಬೇಕು.[೪೧೩] ಜಯಸಿಂಹನನ್ನು ಪಲ್ಲವ ವಂಶದ

ರಾಣಿಗೆ ಜನಿಸಿದನೆಂದು ಹೇಳಲಾಗುತ್ತದೆ. ಜಯಸಿಂಹ ನೊಳಂಬರ ಪಾರಂಪರಿಕ ಬಿರುದುಗಳನ್ನು ಧರಿಸಿರುವುದು ಇದಕ್ಕೆ ಪುಷ್ಠಿ ಕೊಡುತ್ತದೆ. ನೊಳಂಬರೊಂದಿಗಿನ ಚಾಳುಕ್ಯರ ವೈವಾಹಿಕ ಸಂಬಂಧದ ಪ್ರತಿಫಲವಾಗಿ ನೊಳಂಬವಾಡಿ - ಚಾಳುಕ್ಯರ ವಶದಲ್ಲಿತ್ತು. ಚಾಳುಕ್ಯರು ಬಳುವಳಿಯ ರೂಪದಲ್ಲಿ ಬಂದ ನೊಳಂಬವಾಡಿ ವಿಭಾಗದ ಆಡಳಿತವನ್ನು ಉಚ್ಚಂಗಿ ಪಾಂಡ್ಯರಿಗೆ ಅವರ ನಿಷ್ಠೆ, ಪ್ರಾಮಾಣಿಕತೆ ಮತ್ತು ಶೌರ್ಯಕ್ಕೆ ಮೆಚ್ಚಿ ಪ್ರೀತಿಪೂರ್ವಕವಾಗಿ ನೀಡಿದ್ದರಿಂದ ಪಾಂಡ್ಯರ ಈ ಆಡಳಿತ ವಿಭಾಗದ ಹೆಸರನ್ನು ಬದಲಾಯಿಸದೆ ಮುಂದುವರಿಸಿ ಅರಸ ಪ್ರೀತಿ ವಿಶ್ವಾಸವನ್ನು ಉಳಿಸಿಕೊಂಡಿದ್ದರು. ಈ ವೇಳೆಗೆ ಜಯಸಿಂಹ ಮತ್ತು ವಿಕ್ರಮಾದಿತ್ಯರ ನಡುವಿನ ಸಂಬಂಧಗಳು ಮೊದಲಿನಂತೆ ಇರಲಿಲ್ಲ. ಜಯಸಿಂಹ ವಿಕ್ರಮಾದಿತ್ಯನಿಂದ ಸ್ವತಂತ್ರನಾಗಲು ಹವಣಿಸುತ್ತಿದ್ದ. ಗಂಗಾವತಿ ತಾಲೂಕಿನ ವಿಪ್ರ ಗ್ರಾಮದ ಶಾಸನ ತ್ರಿಭುವನಮಲ್ಲ ಪಾಂಡ್ಯನನ್ನು ನೊಳಂಬರ ಪಾರಂಪರಿಕ ಬಿರುದುಗಳಿಂದ ವರ್ಣಿಸುತ್ತದೆ. ಕ್ರಿ.ಶ. ೧೧೨೩ರ ಕಬ್ಬೂರು ಶಾಸನ ತ್ರಿಭುವನಮಲ್ಲ ವೀರನೊಳಂಬ ಪಲ್ಲವ ಪೆರ್ಮ್ಮಾಡಿ ದೇವರ ತಮ್ಮ[೧೯] ಎಂದು ಹೇಳುತ್ತದೆ ಹಾಗೂ ತ್ರಿಭುವನಮಲ್ಲ ಪಾಂಡ್ಯನನ್ನು ಚಾಳುಕ್ಯ ಜಯಸಿಂಹನ ಸಹೋದರನೆಂದು ಶಾಸನಗಳು ತಿಳಿಸುತ್ತವೆ. ಈ ಅಂಶವನ್ನು ಗಮನಿಸಿದರೆ ಪಾಂಡ್ಯರು ಮತ್ತು ನೊಳಂಬ ಪಲ್ಲವರಿಗೂ ವೈವಾಹಿಕ ಮತ್ತು ರಾಜ ತಾಂತ್ರಿಕ ಸಂಬಂಧಗಳು ಏರ್ಪಟ್ಟಿರುವುದು ಸ್ಪಷ್ಟವಾಗುತ್ತದೆ. ಚಾಳುಕ್ಯ, ನೊಳಂಬವಲ್ಲ ಮತ್ತು ಪಾಂಡ್ಯ ಮನೆತನಗಳ ನಡುವಿನ ರಾಜತಾಂತ್ರಿಕ ಸಂಬಂಧಗಳ ಕಾರಣಕ್ಕೆ ಉಚ್ಚಂಗಿ ಪಾಂಡ್ಯರು ತಮ್ಮ ಆಡಳಿತದಲ್ಲಿ ನೊಳಂಬವಾಡಿ ಪ್ರಾಂತ್ಯದ ಹೆಸರನ್ನು ಬದಲಾಯಿಸದೆ ನೊಳಂಬರ ಮೂಲ ವಂಶದ ಹೆಸರಿನಿಂದಲೇ ಕರೆದಿದ್ದಾರೆ. ಹೊಯ್ಸಳರು ಪಾಂಡ್ಯರೊಂದಿಗೆ ಹೋರಾಡಿ ಈ ಪ್ರಾಂತ್ಯವನ್ನು ಜಯಸಿದ್ದರಿಂದ ವಿಜಯದ ಸಂಕೇತವಾಗಿ 'ಪಾಂಡ್ಯನಾಡು' ಎಂದು ಕರೆದುಕೊಂಡರು. ವಿಜಯನಗರ ಕಾಲದಲ್ಲೂ ಇದು ಮುಂದುವರಿಯಿತು.

ಉಚ್ಚಂಗಿ ಪಾಂಡ್ಯರ ಕಾಲಕ್ಕೆ ನೊಳಂಬವಾಡಿ-೩೨೦೦೦ ಪ್ರಾಂತ್ಯದ ಭೌಗೋಳಿಕ ವ್ಯಾಪ್ತಿ ಈಗಿನ ಕರ್ನಾಟಕದ ಚಿತ್ರದುರ್ಗ, ತುಮಕೂರು, ಬಳ್ಳಾರಿ, ದಾವಣಗೆರೆ ಜಿಲ್ಲೆಯ ಭಾಗಗಳನ್ನು ಒಳಗೊಂಡಿತ್ತು. ನೊಳಂಬರ ಉಚ್ಛ್ರಾಯ ಕಾಲಕ್ಕಿದ್ದ ಕೋಲಾರ, ಅನಂತಪುರ, ಧರ್ಮಪುರಿ ಮತ್ತು ಚಿತ್ತೂರು ಜಿಲ್ಲೆಯ ಭಾಗಗಳು ವಿಕ್ರಮಾದಿತ್ಯ ಮತ್ತು ತ್ರಿಭುವನಮಲ್ಲ ಪಾಂಡ್ಯ ಮರಣದ ನಂತರ ಚೋಳ ಮತ್ತು ಹೊಯ್ಸಳರ ಆಕ್ರಮಣದಿಂದಾಗಿ ನೊಳಂಬವಾಡಿ-೩೨೦೦೦ ಪ್ರಾಂತ್ಯದಿಂದ ದೂರವಾದವು. ಚೋಳ ಮತ್ತು ಬಾಣರು ಈ ಪ್ರದೇಶಗಳ ಅಧಿಪತಿಗಳಾದರು. ಚಿಕ್ಕಮಗಳೂರು, ಶಿವಮೊಗ್ಗ, ಮಂಡ್ಯ, ಬೆಂಗಳೂರು ಜಿಲ್ಲೆಗಳ ಭಾಗಗಳು ಹೊಯ್ಸಳರ ಅಧೀನಕ್ಕೆ ಬಂದವು. ಆಡಳಿತ ವಿಭಾಗಗಳ ವಿಂಗಡಣೆಯಲ್ಲಿ ಕೆಲವು ಪ್ರಾಂತ್ಯಗಳ ಎಲ್ಲೆಗಳು ನಿಖರವಾಗಿ ನಿರೂಪಿತ ಗೊಂಡಿದ್ದರೆ ಮತ್ತೆ ಕೆಲವು ಪ್ರಾಂತ್ಯಗಳ ಎಲ್ಲೆಗಳು ಬಗೆಗೆ ಸ್ಪಷ್ಟವಾಗಿ ತಿಳಿಯುವುದಿಲ್ಲ. ಕೆಲವು ಪ್ರಾಂತ್ಯಗಳನ್ನು ಗುರುತಿಸುವುದು ಸದ್ಯಕ್ಕೆ ಕಷ್ಟದ ಕೆಲಸ. ಇವುಗಳ ಬಗ್ಗೆ ಹೆಚ್ಚಿನ ಮಾಹಿತಿ ಇಲ್ಲದಿರುವುದೇ ಇದಕ್ಕೆ ಕಾರಣ.

ವಿಸ್ತಾರವಾದ ಪ್ರಾಂತ್ಯವನ್ನು ಸುಭದ್ರ ಹಾಗೂ ಸುಗಮ ಆಡಳಿತಕ್ಕೋಸ್ಕರ ಅನೇಕ ವಿಭಾಗ ಉಪವಿಭಾಗಗಳಾಗಿ ವಿಂಗಡಿಸಲಾಗಿತ್ತು. ಈ ಉಪವಿಭಾಗಗಳನ್ನು ಅರಸನಿಂದ ನೇಮಕ ಮಾಡಲ್ಪಟ್ಟ ಮಹಾಮಂಡಳೇಶ್ವರ, ಮಂಡಳೇಶ್ವರ, ಮಹಾಸಾಮಂತ, ಸಾಮಂತ, ದಂಡನಾಯಕ, ಸಂಧಿವಿಗ್ರಹಿ, ಗೌಡ, ಪೆರ್ಗಡೆ ಮನ್ನೆಯರು ಮೊದಲಾದ ಅಧಿಕಾರಿಗಳು ಆಳುತ್ತಿದ್ದ ಉಲ್ಲೇಖ ಶಾಸನಗಳಲ್ಲಿದೆ. ಕೆಲವು ವಿಭಾಗಗಳು ಪ್ರಾಸಂಗಿಕವಾಗಿ ಪ್ರಸ್ತಾಪಿಸಲ್ಪಟ್ಟಿರುತ್ತವೆ. ಯಾವುದಾದರೂ ದಾನದತ್ತಿಗಳನ್ನು ನೀಡುವಾಗ ಅಥವಾ ಭೂದಾನದ ಮೇರೆಯನ್ನು ನಿಗದಿಪಡಿಸುವಾಗ ಗುರುತಿಗಾಗಿ ಇಂತಹ ಪ್ರದೇಶಗಳ ಹೆಸರುಗಳು ಬಂದಿರುವ ನಿದರ್ಶನಗಳುಂಟು. ಅಂತಹ ಸ್ಥಳಗಳು ನೊಳಂಬವಾಡಿ ನಾಡಿನ ಒಂದು ಪಟ್ಟಣವೋ ಹಳ್ಳಿಯೋ ಆಗಿದ್ದಿತೆಂಬುದರಲ್ಲಿ ಸಂದೇಹವಿಲ್ಲ. ಆಡಳಿತ ವಿಭಾಗಗಳ ಹೆಸರಿನೊಂದಿಗೆ ಪ್ರತ್ಯಯವಾಗಿ ಕೆಲವು ಸಂಖ್ಯೆಗಳು ಕಂಡುಬರುತ್ತವೆ. ಈ ಸಂಖ್ಯೆಗಳು ಆರು ಹಳ್ಳಿಗಳಿಂದ ಪ್ರಾರಂಭವಾಗಿ ೧೦೦೦೦ ಹಳ್ಳಿಗಳವರೆಗೆ ವಿಸ್ತರಿಸಿದ್ದನ್ನು ಇಲ್ಲಿ ಗಮನಿಸಬಹುದು.

ನೊಳಂಬವಾಡಿ-೩೨೦೦೦ ಪ್ರಾಂತ್ಯವನ್ನು ಶಾಸನಗಳಲ್ಲಿ ನೊಳಂಬವಾಡಿ ಮೂವತ್ತಿರ್ಚ್ಛಾಸಿರಮುಮಂ,[೪೧೫] ನೊಳಂಬವಾಡಿ ಮೂವತ್ತಿರ್ಚ್ಛಾಸಿರಮಂ,[೪೧೬] ನೊಳಂಬವಾಡಿ ಮೂವತ್ತಿರ್ಛಾಸಿರಿಮುಮಂ,[೪೧೭] ನೊಳಂಬವಾಡಿ ಮೂವತ್ತಿಚ್ಛಾಯಿರ,[೪೧೮] ನೊಳಂಬವಾಡಿ ಮೂವತ್ತಿತ್ಸಾಯಿರಮಂ,[೪೧೯] ನ್ಣೊಳಂಬವಾಡಿ ಮೂವತ್ತಿರ್ಚ್ಛಾಸಿರಮುಮಂ,[೪೨೦] ಣ್ಣೊಳಂಬವಾಡಿ ಮೂವತ್ತಿಚ್ಛಾಸಿರಮುಮಂ,[೪೨೧] ನೊಣಂಬವಾಡಿ ಮೂವರ್ತ್ತಿರ್ಛಾಸಿರಮುಮಂ,[೪೨೨] ನೊಣಂಬವಾಡಿ ಮೂವತ್ತಿರ್ಚ್ಛಾಸಿರಮಂ,[೪೨೩] ನೊಳಂಬವಾಡಿ,[೪೨೪] ಮೂವತಿಶ್ಛಾಸಿರಮುಮಂ,[೪೨೫] ನೊಳಂಬವಾಡಿ ಮೂವತ್ತೆರಡು ಸಾಸಿರ[೪೨೬] ಎಂದು ಉಲ್ಲೇಖಿತವಾಗಿದೆ. ಕೆಲವು ಶಾಸನಗಳು ನೊಳಂಬವಾಡಿ ಪ್ರದೇಶದ ಭೌಗೋಳಿಕ ವರ್ಣನೆಯನ್ನು ನೀಡುತ್ತವೆ.

ಕ್ರಿ.ಶ. ೧೧೬೯ರ ಹೊಳಗುಂದಿ ಶಾಸನ ನೊಳಂಬವಾಡಿ-೩೨೦೦೦ ಪ್ರದೇಶದ ವರ್ಣನೆಯನ್ನು ಈ ರೀತಿ ತಿಳಿಸುತ್ತದೆ.

ವನದಿಟ್ಟಪ ಕುಳಾವ್ರಿತಂ ನೆಗಳ್ದ ಜಂಬೂದ್ವೀಪವಾದ್ವೀಪಮಧ್ಯ
ನಿರುದ್ಧಂ ಸುರಸ್ಯೆಳವಾಗಿರಿಗೆ ತೆಂಕಲು ಭಾರತಕ್ಷೇತ್ರವೆಂಬಿಳೆ...
..ಳಿರ್ದ್ದರ್ತ್ತದರೊಳ್ಸಮಸ್ತ ವಿಶಯ ಶ್ರೀ ಭೂಷಣಂ ಭೋಗ
ಭೂಯಮಿನಿಭಂ ನಾಡೆ ನೊಣಂಬವಾಡಿ ವಿಷಯಂ ಕಣ್ಗೆ ಬೆಡಂಗಾದುದೊ ||
ಅದು ವಿವಿದಾಗ್ರಹಾರ ಕಳಿತಂ ಸಕಳಾಮಳ ಧರ್ಮ ಸಂಭವಾ
ಸ್ಪದಹರು ಸಂಪದಾವಿಳ ಜಿನಾವಳಿಲಾಳಿತ ಮಲ್ಲಿ ಸದೃಶಸ್ಸದನ
ನ್ರಿಪಾಳ ಜಾಳ ಪರಿಪಾಳಿತ ವಸ್ತು ಸಮಸ್ತ ಕಂಟಕಂ
ಹ್ರಿದಯ ವಿಕಾಶ ಸಜ್ಜನ ಸಮುಜ್ಜಳಮಂಗಜ ಜಿನ್ನಮಂದಿರಂ||.[೪೨೭]

**ಅರ್ಥ:-** ಹಸಿರುಡೆಯನುಟ್ಟ ಜಂಭೂದ್ವೀಪ ಆ ದ್ವೀಪ ಮಧ್ಯ ಹಿಮಾಲಯ ಪರ್ವತ ಶ್ರೇಣಿ ಅದರ ದಕ್ಷಿಣಕ್ಕೆ ಭಾರತ ಕ್ಷೇತ್ರ ಅದರಲ್ಲಿ ಭೋಗ ಭೂಮಿಯೆನಿಸಿದ ನೊಳಂಬವಾಡಿ ನಾಡು ಕಂಗೊಳಿಸಿತಿತ್ತು. ಅದು ನಾನಾ ವಿಧದ ಅಗ್ರಹಾರಗಳಿಂದಲೂ ಸಕಲ ನಿರ್ಮಲ ಧರ್ಮಗಳಿಂದಲೂ ಜನಗಳಿಂದಲೂ ಮಲ್ಲಿ ಸದೃಶ ಸದನವೆನಿಸಿತ್ತು ಮದನ ಮಂದಿರವೆನಿಸಿತ್ತು. ಇಂತಹ ವೈವಿಧ್ಯಮಯವಾದ ನೊಳಂಬವಾಡಿ-೩೨೦೦೦ ಪ್ರಾಂತ್ಯದ ಆಡಳಿತವನ್ನು ಪಾಂಡ್ಯರು "ಉಳವಿ", ಕೇಸವುರು, ಬೇತೂರು ಹಾಗೂ ಉಚ್ಚಂಗಿದುರ್ಗ ರಾಜಧಾನಿಯಿಂದ ಆಳಿದರು. ಈ ನೊಳಂಬವಾಡಿ ಅಥವಾ ಪಾಂಡ್ಯನಾಡು ಅನೇಕ ಸಣ್ಣ, ಅತಿಸಣ್ಣ ಆಡಳಿತ ವಿಭಾಗಗಳಿಂದ ಕೂಡಿತ್ತು. ಆ ಉಪ ಆಡಳಿತ ವಿಭಾಗಗಳನ್ನು ಇಲ್ಲಿ ಗುರುತಿಸಲಾಗಿದೆ.

**೧. ಕದಂಬಳಿಗೆ - ೧೦೦೦**

ನೊಳಂಬ ಪಲ್ಲವರು ಆಡಳಿತ ನಡೆಸಿದ ಪ್ರದೇಶವನ್ನು ನೊಳಂಬವಾಡಿ ಎಂದು ಕರೆದಂತೆ, ಕದಂಬರು ಆಳಿದ್ದು ಕದಂಬಳಿಗೆಯಾಗಿದೆ. ಈ ಪ್ರದೇಶದಲ್ಲಿ ಆದಿ ಕದಂಬರ ಅಸ್ತಿತ್ವದ ಬಗ್ಗೆ ಕುರುಹುಗಳು ದೊರೆಯುವುದಿಲ್ಲ. ಅಧಿಕಾರ ಕಳೆದುಕೊಂಡ ಕದಂಬರು ವಿವಿಧ ಶಾಖೆಗಳಾಗಿ ಕವಲೊಡೆದರು. ಅದರ ಒಂದು ಶಾಖೆ ನೆಲೆ ನಿಂತ ಪ್ರದೇಶ ಇದಾಗಿರಬೇಕು. ಉಚ್ಚಂಗಿದುರ್ಗ ಕದಂಬರ ಎರಡನೇ ರಾಜಧಾನಿಯಾಗಿತ್ತು ಎಂಬುದನ್ನು ತಿಳಿಸುತ್ತವೆ. ಕದಂಬರ ಒಂದು ಶಾಖೆ ನೊಳಂಬವಾಡಿ ನಾಡಿನ ಕೋಗಳಿ-೫೦೦ನ್ನು ಕೊಟ್ಟೂರಿನಿಂದ ಪಾಂಡ್ಯರ ಸಾಮಂತರಾಗಿ ಆಳಿರುವುದು ಇಲ್ಲಿ ವಿಶೇಷವಾಗಿದೆ. ಇವರು ಉಚ್ಚಂಗಿದೇವಿ ವರಪ್ರಸಾದ ಎಂದು ತಮ್ಮ ಶಾಸನಗಳಲ್ಲಿ ಕರೆದುಕೊಂಡಿದ್ದಾರೆ. ಈ ಶಾಖೆಯವರೇ ಕದಂಬಳಿಗೆ ಸಾಸಿರದ ಮೂಲ ಅಧಿಪತಿಗಳಾಗಿರಬೇಕು ಅನಿಸುತ್ತದೆ. ಈ ಆಡಳಿತ ವಿಭಾಗವನ್ನು ಕದಂಬಳಿಗೆ ಸಾಸಿರ, ಕದಂಬಳಿಗೆನಾಡ ಸಾಹಿರ.[೪೨೮] ಕದಂಬಳಿಗೆ ಸಾಹಿರ, ಕದಂಬವೆಂಗೆಸಾಸಿರ, ಕದಂಬವಾಡಿನಾಡು,[೪೨೯] ಸಾಸಿರನಾಡು,[೪೩೦] ಸಾಸಿರ, ಕದಂಬ ದೇಶ ಸಹಸ್ರ, ಕದಂಬಳಿಕೆ ಸಾಯಿರ[೪೩೧] ಎಂದು ಶಾಸನಗಳು ಉಲ್ಲೇಖಿಸುತ್ತವೆ.

ಹರಪನಹಳ್ಳಿ ತಾಲ್ಲೂಕಿನ ಈಗಿನ 'ಕಡಬಗೆರೆ' ಗ್ರಾಮ ಸಾವಿರ ಹಳ್ಳಿಗಳ ಮುಖ್ಯ ಪಟ್ಟಣವಾಗಿತ್ತು. ಹರಪನಹಳ್ಳಿ, ದಾವಣಗೆರೆ, ಹರಿಹರ, ಜಗಳೂರು, ಚಿತ್ರದುರ್ಗ, ಹೊಳಲಕೆರೆ, ಕೂಡ್ಲಿಗಿ, ಚನ್ನಗಿರಿ ತಾಲೂಕಿನ ಭಾಗಗಳು ಕದಂಬಳಿಗೆಸಾಸಿರ ಪ್ರಾಂತ್ಯದಲ್ಲಿ ಸೇರಿದ್ದವು. ಉಚ್ಚಂಗಿ ಪಾಂಡ್ಯರು ತಮ್ಮ ರಾಜಧಾನಿಯನ್ನು ಬೆತ್ತೂರಿನಿಂದ ಉಚ್ಚಂಗಿದುರ್ಗಕ್ಕೆ ಬದಲಿಸಿಕೊಂಡ ನಂತರ ಕದಂಬಳಿಗೆ ನಾಡಿನ ಉಲ್ಲೇಖ ಮತ್ತು ಅದರ ಮಹತ್ವ ಕಡಿಮೆಯಾಯಿತು. ಕ್ರಿ.ಶ. ೧೦೬೪ರ ಉಚ್ಚಂಗಿದುರ್ಗದ ಶಾಸನ ಅಲ್ಲಿಯ ಪರ್ವತವು ಕದಂಬಳಿಗೆನಾಡ ಮಧ್ಯದ ಮೇರುವಿನಂತಿದ್ದಿತೆಂದು, ಆ ಪರ್ವತಕ್ಕೆ ಒಂದೊಂದು ಯುಗದಲ್ಲಿ ಒಂದೊಂದು ಹೆಸರಿದ್ದಿತೆಂದು ಹೇಳುತ್ತದೆ.[೪೩೨]

ಕ್ರಿ.ಶ. ೧೧೯ರ ಬೇತೂರು ಶಾಸನ ಕೋಗಳಿನಾಡೊಳಗ್ಗನ ಕದಂಬಳಿಗೆ ಸಾಯಿರವೆಂದು ಹೇಳಿದೆ.[೪೩೩] ಅಂದರೆ ಈ ವೇಳೆಗೆ ಕಂದಬಳಿಗೆ ಸಾಯಿರ ತನ್ನ ಮಹತ್ವವನ್ನು ಕಳೆದುಕೊಂಡು

ಕೋಗಳಿ-೫೦೦ರಲ್ಲಿ ಸೇರಿಕೊಂಡಿತು. ಉಚ್ಚಂಗಿ ಪಾಂಡ್ಯರ ರಾಜಧಾನಿಗಳಾದ ಬೇತೂರು ಮತ್ತು ಉಚ್ಚಂಗಿದುರ್ಗ ಕಂದಬಳಿಗೆ ಸಾಸಿರದಲ್ಲಿ ಸೇರಿದ್ದವು. ನೊಳಂಬವಾಡಿ ಪ್ರಾಂತ್ಯದ ಕದಂಬಳಿಗೆ ಸಾಸಿರ ಉಪವಿಭಾಗವು ಕೊರವಾಡಿ-೩೦೦, ಹಡವಗೆರೆ-೫೦೦, ಕೋಗಳಿ-೫೦೦ ವಿಭಾಗಗಳನ್ನು ಮತ್ತು ಕೆಲವು ಸಣ್ಣ ಉಪವಿಭಾಗಗಳನ್ನು ಹೊಂದಿತ್ತು.

**೧. ಕೊರವಾಡಿ-೩೦೦**

ಕ್ರಿ.ಶ. ೯೬೮ರ ಗುಂಡೇರಿ ಶಾಸನ ಕೊರವಾಡಿ-೩೦೦ ಆಡಳಿತ ವಿಭಾಗದ ಬಗ್ಗೆ ಮಾಹಿತಿ ನೀಡುತ್ತದೆ.[೪೩೪] ಈ ವಿಭಾಗದ ಮುಖ್ಯ ಪಟ್ಟಣದ ಬಗ್ಗೆ ಸ್ಪಷ್ಟತೆ ಇಲ್ಲ. ಜಗಳೂರು, ಹೊಳಲ್ಕೆರೆ, ದಾವಣಗೆರೆ, ಚಿತ್ರದುರ್ಗ ತಾಲೂಕಿನ ಹಳ್ಳಿಗಳನ್ನು ಸೇರಿಕೊಂಡಿತ್ತು. ಕ್ರಿ.ಶ. ೧೦೦೦ದ ನಂತರದ ಕಾಲದಲ್ಲಿ ಈ ಆಡಳಿತ ವಿಭಾಗದ ಉಲ್ಲೇಖ ಕಾಣಿಸುವುದಿಲ್ಲ. ಚಾಳುಕ್ಯರ ಕಾಲದಲ್ಲಿ ಈ ವಿಭಾಗ ತನ್ನ ಮಹತ್ವ ಕಳೆದುಕೊಂಡು ಹಡವಗೆರೆ-೫೦೦ರಲ್ಲಿ ಸೇರಿಕೊಂಡಿತು. ಕೊರವಾಡಿ-೩೦೦ರಲ್ಲಿನ ಚಿಕ್ಕ ಚಿಕ್ಕ ಆಡಳಿತ ವಿಭಾಗಗಳು ಪಾಂಡ್ಯರ ಶಾಸನಗಳಲ್ಲಿ ಹಡವಗೆರೆ-೫೦೦ ವಿಭಾಗದಲ್ಲಿ ಕಾಣಿಸಿಕೊಳ್ಳುತ್ತಿರುವುದು ಇದಕ್ಕೆ ಪುಷ್ಟಿ ನೀಡುತ್ತದೆ.

**ಹಡವಗೆರೆ - ೫೦೦**

ಐನೂರು ಹಳ್ಳಿಗಳನ್ನು ಹೊಂದಿದ ಈ ಆಡಳಿತ ವಿಭಾಗ ನೊಳಂಬರ ಶಾಸನಗಳಲ್ಲಿ ಕಾಣಿಸುವುದಿಲ್ಲ. ಕ್ರಿ.ಶ. ೧೧೨೩ರ ಗಾರೇಹಟ್ಟಿ ಶಾಸನ ಮಹಾಸಾಮಂತ ಉದಯಾದಿತ್ಯ ಅರಹಟ-೧೨, ಜಗಳೂರು-೭೦, ಹಡವಗೆರೆ-೫೦೦ನ್ನು ಬೆಮ್ಮಚನೂರಿಂದ ಆಳುತ್ತಿರುವುದಾಗಿ ಹೇಳುತ್ತದೆ.[೪೩೫] ಬೆಮ್ಮಚನೂರು ಹಡವಗೆರೆ-೫೦೦ ಆಡಳಿತದ ಮುಖ್ಯ ಕೇಂದ್ರವಾಗಿದ್ದಂತೆ ತೋರುತ್ತದೆ. ಇದೇ ಶಾಸನ ಹಡವಗೆರೆ-೫೦೦ರೊಳಗಣ ಕಂಪಣಂ "ಚೋಳುಂಗಲ್ಲು-ಎಪತ್ತರ" ಬಳಿಯ ಬಾಡಂ ನಿಡಗುರನ್ನು ದಾನ ಮಾಡಿರುವುದಾಗಿ ತಿಳಿಸುತ್ತದೆ. ಚಿತ್ರದುರ್ಗ, ದಾವಣಗೆರೆ, ಚನ್ನಗಿರಿ, ಜಗಳೂರು, ಹೊಳಲ್ಕೆರೆ ತಾಲೂಕಿನ ಹಳ್ಳಿಗಳು ಈ ವಿಭಾಗದಲ್ಲಿ ಸೇರಿದ್ದವು. ಕೆಲವು ಚಿಕ್ಕ ವಿಭಾಗಗಳು ಇದರಲ್ಲಿದ್ದವು.

**ಬೆಳ್ತೂರು-೧೨(ಹನ್ನೆರಡು)**

ದಾವಣಗೆರೆ ತಾಲೂಕಿನ ಇಂದಿನ ಎಲೆಬೇತೂರು ಗ್ರಾಮ ಪ್ರಾಚೀನ ಹನ್ನೆರಡು ಹಳ್ಳಿಗಳ ಮುಖ್ಯ ಕೇಂದ್ರವಾಗಿತ್ತು. ಇದು ಉಚ್ಚಂಗಿ ಪಾಂಡ್ಯರ ಆರಂಭದ ರಾಜಧಾನಿ ಪಟ್ಟಣವಾಗಿತ್ತು. ಶಾಸನಗಳು ಈ ಊರನ್ನು ಬೆಳ್ತೂರು, ಬೆಳ್ತುಟು, ಬೇರುವಿನ, ಬೇಲುರು ಎಂದು ಉಲ್ಲೇಖಿಸಿವೆ. ಕ್ರಿ.ಶ. ೧೧೨೩ರ ದಾವಣಗೆರೆ ಶಾಸನ ಕಡಂಬದೇಶ ಸಹಸ್ರಾಂತರ್ಗತ ಬೆಳ್ತೂರು ದ್ವಾದಶ" ಎಂದು ಹೇಳಿದೆ.[೪೩೬] ಅದೇ ಗ್ರಾಮದ ಇನ್ನೊಂದು ಕ್ರಿ.ಶ. ೧೧೨೪ರ ಶಾಸನ ಪಲ್ಲವರಾಯ ತಾನು ಮಾಡಿಸಿದ ವಾಸುದೇವರಿಗೆ ಬೆಳ್ತೂರು-೧೨ರೊಳಗಣ ಬೆಳ್ಬೂರ, ತಾರಣವಳ್ಳಿಯು, ಮನರಸನ ಕೆರೆಯ ಕೆಳಗೊಂದು ಮತ್ತರು ತೋಟದಲ್ಲಿ ತ್ರಿಭೋಗಭ್ಯಂತರವಾಗಿ ದಾನ ನೀಡಿದ್ದನ್ನು ತಿಳಿಸುತ್ತದೆ.[೪೩೭] ಅನೆಕೊಂಡ ಶಾಸನ ಶ್ರೀಮದ್ರಾಜಧಾನಿ ಹಿರಿಯ ಬೇತೂರ ಹಳೆಯ ಬೀಡಿನಲ್ಲಿ ಮೊನ್ನೇಯರು ದಾನ ನೀಡಿದನು ದಾಖಲಿಸಿದೆ.[೪೩೮]

**ಅರಹಟ-೧೨**

ಕ್ರಿ.ಶ. ೧೧೨೩ರ ಗಾರೇಹಟ್ಟಿ ಶಾಸನ ತ್ರಿಭುವನಮಲ್ಲ ಪಾಂಡ್ಯನ ಸಾಮಂತ ಉದಯಾದಿತ್ಯ ಅರಹಟ-೧೨ನ್ನು ಆಳುತ್ತಿರುವುದಾಗಿ ಉಲ್ಲೇಖಿಸುತ್ತದೆ.[೪೩೯] ಇಂದಿನ ಗಾರೇಹಟ್ಟಿ ಗ್ರಾಮವೇ ಪ್ರಾಚೀನ ಅರಹಟವಾಗಿದೆ. ಅದರ ಸುತ್ತಲಿನ ಹನ್ನೆರಡು ಹಳ್ಳಿಗಳು ಈ ಚಿಕ್ಕ ಘಟಕದಲ್ಲಿದ್ದವು.

**ಜಗಳವುರು-೭೦**

ದಾವಣಗೆರೆ ಜಿಲ್ಲೆಯ ತಾಲೂಕು ಕೇಂದ್ರವಾದ ಇಂದಿನ ಜಗಳೂರು ಎಪ್ಪತ್ತು ಹಳ್ಳಿಗಳಿಂದ ಕೂಡಿದ ಪ್ರಾಚೀನ ಆಡಳಿತ ವಿಭಾಗದ ಮುಖ್ಯ ನೆಲೆಯಾಗಿತ್ತು. ಈ ಆಡಳಿತ ವಿಭಾಗದ ಉಲ್ಲೇಖ ಕ್ರಿ.ಶ. ೧೧೨೩ರ ಗಾರೇಹಟ್ಟಿ ಶಾಸನದಲ್ಲಿ ಮಹಾಸಾಮಂತ ಉದಯಾದಿತ್ಯ ಜಗಳವೂರವೆಳ್ಪತ್ತುಮಂ ಹಡುವಗೆರೆ-೫೦೦ನ್ನು ಬೆಮ್ಮಚನೂರೊಳ್ ಆಳುತ್ತಿರುವುದಾಗಿ ಕಂಡುಬರುತ್ತದೆ.[೪೪೦] ಪಾಂಡ್ಯರ ಕಾಲದಲ್ಲಿ ಕುರುಗೋಡ ಸಿಂಧರು ಈ ಭಾಗದ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು. ಜಗಳೂರು, ಹರಪನಹಳ್ಳಿ, ಕೂಡ್ಲಿಗಿ ತಾಲೂಕಿನ ಗ್ರಾಮಗಳು ಇದರಲ್ಲಿ ಹೊಂದಿಕೊಂಡಿದ್ದವು.

**ಅತ್ತಿಗೇರಿ-೧೨**

ಕ್ರಿ.ಶ. ೧೧೯ರ ಈ ಶಾಸನ ಅತ್ತಿಗೆರೆ ಪನ್ನೆರಡರ ಬಳಿಯ ಬಾಡಂ, ತೋಗಲೇರಿ ಉತ್ತರ ದಿಶಾಭಾಗದ ನೆಲೆಸಿರ್ಪ್ಪ ಶ್ರೀ ಮೂಲಸ್ಥಾನ ಸ್ವಯಂಭುದೇವರ ಪರಿಸೂತ್ರದಲಿರ್ಪ್ಪ.[೪೪೧] ಈ ವಿಭಾಗದಲ್ಲಿ ಅತ್ತಿಗೇರೆ, ಬಾಡ, ಹಿರೇತೋಗಲೇರಿ ಮೊದಲಾದ ೧೨ ಹಳ್ಳಿಗಳು ಇದರಲ್ಲಿದ್ದವು.

**ಕಂಪಣ ಅಯ್ವತ್ತು**

ತ್ರುಟಿತವಾಗಿರುವ ಮಳಲಕೆರೆ ಗ್ರಾಮದ ಶಾಸನ ಕೇಸವಯ್ಯ ನಾಯಕ, ಹೆಗ್ಗಡೆ, ರಾಜ ಪ್ರಮುಖಕರಣಗಳು ಕದಂಬಳಿಗೆ ಸಾಸಿರದ ಕಂಪಣವಯ್ಯತ್ತರ ಬಳಿಯ ಅಗ್ರಹಾರ ಮಣಲಕೆರೆಯಂ ಎಂದು ಉಲ್ಲೇಖಿಸುತ್ತದೆ.[೪೪೨] ದಾವಣಗೆರೆ ತಾಲೂಕಿನ ಮಾಯಕೊಂಡ ಹೋಬಳಿ ಮತ್ತು ಚನ್ನಗಿರಿ ತಾಲೂಕಿನ ಗ್ರಾಮಗಳು ಇದರಲ್ಲಿ ಹೊಂದಿಕೊಂಡಿದ್ದವು.

**ಭ್ರಾಂತಿ-೩೦**

ಹರಿಹರ ತಾಲೂಕಿನ ಭಾನುವಳ್ಳಿ ಇದರ ಮುಖ್ಯ ಪಟ್ಟಣವಾಗಿರಬೇಕು ಎಂದು ಚನ್ನಬಸವಯ್ಯ ಹಿರೇಮಠ ಅಭಿಪ್ರಾಯಪಡುತ್ತಾರೆ. ಪಿ.ವಿ. ಕೃಷ್ಣಮೂರ್ತಿ ಅವರು ಇದು ಕದಂಬಳಿಗೆ ಸಾಸಿರದ ಉಪವಿಭಾಗವೆಂದು ಗುರುತಿಸಿದ್ದಾರೆ. ಹಿರೆಕೆರೂರು ತಾಲೂಕಿನ ಹಳೆನಿಡನೇಗಿಲು ಶಾಸನದಲ್ಲಿ ಇದರ ಉಲ್ಲೇಖವಿದೆ. ಹರಿಹರ ಶಾಸನ[೪೪೩] ಶ್ರೀಮನ್ಮಹಾಮಂಡಳೇಶ್ವರ ಈಶ್ವರದೇವರಸನು ಶ್ರೀ ದಕ್ಷಿಣಗಂಗೆ ಕಾಶಿ ಸ್ವಯಂಭೂ ಶಂಕರನಾರಾಯಣದೇವರ ಶ್ರೀಕಾರ್ಯಕ್ಕೆ ನೈವೇದ್ಯಕ್ಕೆ ಷೋಡಶೋಪಚಾರಕ್ಕೆ ಭ್ರಾಂತಿ ಮುವತ್ತರ ತಮ್ಮ ಮನ್ನೆಯರ ನಿಬಂಧಿಯೊಳಗೆ ಊರಲೊಂದು ಹೊನ್ನನ್ನು ಅಲ್ಲಿಯ ಸಮಸ್ತ ನೂರನಾಲ್ವರು ಮಹಾಜನರು ನಡೆಸುವುದರ ಸಲುವಾಗಿ

ಧಾರಾಪೂರ್ವಕವಾಗಿ ಮಾಡಿಕೊಟ್ಟನು. ಈ ಆಡಳಿತ ವಿಭಾಗದಲ್ಲಿ ಹೊನ್ನಳಿ ಮತ್ತು ಹರಿಹರ ತಾಲೂಕಿನ ಹಳ್ಳಿಗಳು ಸೇರಿದ್ದವು.

**೩. ಕೋಗಳಿ-೫೦೦**

ಕದಂಬಳಿಗೆ ಸಾವಿರ ನಾಡಿನ ಉಪವಿಭಾಗಗಳಲ್ಲಿ ಕೋಗಳಿ-೫೦೦ ಒಂದು. ಉಚ್ಚಂಗಿ ಪಾಂಡ್ಯರ ಆಡಳಿತ ಕಾಲಕ್ಕೆ ಕದಂಬಳಿಗೆ ಸಾಸಿರ ನಾಡಿನ ಮಹತ್ವ ಕಡಿಮೆಯಾಗಿ ಕೋಗಳಿ-೫೦೦ ಅದರ ಮಹತ್ವವನ್ನು ಪಡೆದುಕೊಂಡಿತ್ತು. ಹಗರಿಬೊಮ್ಮನಹಳ್ಳಿ ತಾಲೂಕಿನ ಈಗಿನ ಕೋಗಳಿ ಗ್ರಾಮವೇ ಐನೂರು ಹಳ್ಳಿಗಳನ್ನೊಳಗೊಂಡ ಪ್ರಾಚೀನ ಆಡಳಿತ ವಿಭಾಗದ ಮುಖ್ಯ ಸ್ಥಾನವಾಗಿತ್ತು.

ಕ್ರಿ.ಶ. ೧೧೬೩ರ ಕೋಗಳಿ ಶಾಸನದಲ್ಲಿ ಕೋಗಳಿ-೫೦೦ನ್ನು ಕುರಿತು ಚತುಸ್ಸಮುದ್ರ ಮುದ್ರಿತಮಾದ ಜಂಬೂದ್ವೀಪಕ್ಕಂ ಮುಖತಿಳಕಮೆನ್ಸಿಯಂ ನೊಣಂಬವಾಡಿ ಮೂವತ್ತಿರ್ಚ್ಛಾಸಿರಕ್ಕಂ ಸಿಖಾಮಣಿಯೆನ್ಸಿಯುಂ ಕೋಗಳಿಯಯ್ನೂರಕಂ ಮೊದಲೆನ್ಸಿ ನೆಗಳ್ದ ರಾಜಧಾನಿ ಪಟ್ಟಣಂಗಳ ಚಕ್ರವರ್ತಿ ಕೋಗಳಿಯ ಪೆರ್ಮ್ಮೆಯೆಂತೆಂದಡೆ ||ಕ|| ಬೆಳದೆರಗಿದ ಬಹುಧಾನ್ಯದ ಮಳಯಜ ಮಾಕಂದ.....ಯನೆವೊಪ್ಪವನದ ಬಳಸಿನಿಂ ಬಗೆಗೊಳ್ವುದು ಕೋಗಳಿಯ ಜಗದೊಳತಿರಮಣೀಯಂ[೪೪೪] ಎಂದು ವರ್ಣಿಸುತ್ತದೆ. ಕ್ರಿ.ಶ. ೧೦೮೩ರ ಅಂಬಳಿ ಶಾಸನದಲ್ಲಿ, ಜಲನಿಧಿವೇಷ್ಟಿತಾವನಿಗೆ ರಂಜಿಪ ಕುಂತಳದೇಶದೊಳ್ಮನಂಗೊಳಿಪಮುಖಕ್ಕೆನಾಸಿಕ ಮೆನಿಪ್ಪವೊಲಿರ್ಪ ನೊಣಂಬವಾಡಿ ನಾಡೊಳಗಿದು ದ್ರಿಷ್ಟಿ ತಾನೆನಿಪ ಕೋಗಳಿನಾಳ್ಕತಿರುಮ್ಯಮಾಗಿರಮ್ಮಳೆ ತಿಲಕಂಬೊಲಿರ್ಪ್ಪುದ ಮರಾವತಿಯಂತೆಸೆದನ್ತು ನೋಪ್ರ್ಪೊಡಂ||[೪೪೫] ಎಂದು ವರ್ಣಿಸಿದೆ.

ಕದಂಬ ವಂಶದ ಮಹಾಸಾಮಂತರು ಈ ಆಡಳಿತ ವಿಭಾಗವನ್ನು ಆಳುತ್ತಿದ್ದರು. ಕದಂಬ ವಂಶದ ಈ ಶಾಖೆಯನ್ನು ಕೊಟ್ಟೂರಿನ ಕದಂಬರು ಅಥವಾ ಕೋಗಳಿ ಕದಂಬರು ಎಂದು ಗುರುತಿಸಲಾಗಿದೆ. ನೊಳಂಬ ಪಲ್ಲವರಾದಿಯಾಗಿ ಉಚ್ಚಂಗಿ ಪಾಂಡ್ಯರ ಅಂತ್ಯ ಕಾಲದವರೆಗೂ ಕದಂಬರು ಈ ವಿಭಾಗದ ಮಹಾಮಂಡಳೇಶ್ವರರಾಗಿ ಆಳಿರುವುದು ಶಾಸನಗಳಿಂದ ಸ್ಪಷ್ಟವಾಗುತ್ತದೆ. ದಶಾಶ್ವಮೇಧ, ದೀಕ್ಷಿತನಾದ ಕದಂಬರ ವಂಶದವನಾದ ಆದಿತ್ಯವರ್ಮರಸನ್ನು ಕೋಗಳಿ-೫೦೦ ಆಳುತ್ತಿದ್ದನು. ಕ್ರಿ.ಶ. ೯೯೨ರ ಕೋಗಳಿ ಶಾಸನ ಹೇಳುತ್ತದೆ.[೪೪೬] ಕ್ರಿ.ಶ. ೧೧೪೭ರಲ್ಲಿ ಜಗದೇಕಮಲ್ಲ ವೀರಪಾಂಡ್ಯನು ಆಳುತ್ತಿರುವಾಗ ಕದಂಬ ವಂಶದ ನಾಚಿದೇವರಸನು ಕೋಗಳಿ-೫೦೦ನ್ನು ಆಳುತ್ತಿದ್ದನು.[೪೪೭]

ಜಗದಳ ಪಾಂಡ್ಯ ಕ್ರಿ.ಶ. ೧೨೦೬ರ ವೇಳೆಗೆ ಹೊಯ್ಸಳ ಅರಸರ ಮಾಂಡಲೀಕನಾಗಿ ಕೋಗಳಿ-೫೦೦ನ್ನು ಕದಂಬರ ಪಾರಂಪರಿಕ ಬಿರುದುಗಳನ್ನು ಹೊಂದಿ ಆಳಿರುವುದು ಅಲಬೂರು ಮತ್ತು ಉಜ್ಜನಿ ಶಾಸನಗಳು ಸ್ಪಷ್ಟಪಡಿಸುತ್ತವೆ. ಕ್ರಿ.ಶ. ೧೨೦೬ರಲ್ಲಿ ಕದಂಬ ಕುಲೋದ್ಭವಾಗ್ರಣಿ ಜಗದಳ ಪಾಂಡ್ಯನು ಕಲ್ಲಿದೇವರಿಗೆ ಕೋಗಳಿಯಲ್ಲಿ ೪೦೦ ಕಮ್ಮ ಭೂಮಿಯನ್ನು ದಾನ

ನೀಡಿದ್ದನು.[೪೪೮] ಹರಪನಹಳ್ಳಿ, ಹೂವಿನಹಡಗಲಿ, ಹಗರಿಬೊಮ್ಮನಹಳ್ಳಿ, ಕೂಡ್ಲಿಗಿ ತಾಲೂಕಿನ ೫೦೦ ಹಳ್ಳಿಗಳು ಈ ಉಪವಿಭಾಗದಲ್ಲಿ ಸೇರಿಕೊಂಡಿದ್ದವು. ಈ ವಿಭಾಗ ಜೈನ ಪರಂಪರೆಯ ಆಶ್ರಯ ತಾಣವಾಗಿತ್ತು.

**ಬಿಕ್ಕಿಗ-೭೦**

ಹರಪನಹಳ್ಳಿ ತಾಲ್ಲೂಕಿನ ಇಂದಿನ ಬಿಕ್ಕಿಗನ ಮರಡಿ ಗ್ರಾಮ ಪ್ರಾಚೀನ ಕಾಲದಲ್ಲಿ ಎಪ್ಪತ್ತು ಹಳ್ಳಿಗಳಿಂದ ಕೂಡಿದ ಆಡಳಿತ ಉಪ ವಿಭಾಗದ ಮುಖ್ಯ ಕೇಂದ್ರವಾಗಿತ್ತು. ಕ್ರಿ.ಶ. ೧೧೬೨ರ ದುಗ್ಗವತಿ ಶಾಸನ ತಿಳಿಸುತ್ತದೆ. ಕೋಗಳಿ-೫೦೦ರ ಸುಂಕಾಧಿಕಾರಿ, ಕಲಿಮಯ್ಯ, ದಂಡನಾಯಕ, ಹೆಗ್ಗಡೆ, ಸರ್ವಾಧಿಕಾರಿ, ಸೋಮರಸರು ಬಿಕ್ಕಿಗನೆಪ್ಪತ್ತರೊಳಗೆ ದುಗ್ಗವತ್ತಿಯ ದೇವರುಗಳಿಗೆ ದಾನ ಮಾಡಿದ್ದನು.[೪೪೯] ಕೋಗಳಿ ಐನೂರರ ಕಂಪಣ ಬಿಕ್ಕಿಗನೆರ್ಪತ್ತರೊಳಗಣ ತಲವಗೆಯ.[೪೫೦] ಬಿಕ್ಕಿಗನೆರ್ಪ್ಪತ್ತರೊಳಗಣ ಅರಸೀಕೆರೆ[೪೫೧] ಬಿಕ್ಕಿಗನೆರ್ಪತ ರೊಳಗಣಗ್ರಹಾರ ತೆಲಗಿ.[೪೫೨] ಬಿಕ್ಕಿಗನೆರ್ಪತದ ಮೊದಲ ಕಂಪಣ ಶ್ರೀಮದಗ್ರಹಾರ ನೀರ್ಗ್ಗುಂದ.[೪೫೩] ಹೀಗೆ ಬಿಕ್ಕಿಗ-೭೦ ವಿಭಾಗದ ಕೆಲವು ಹಳ್ಳಿಗಳನ್ನು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ.

**ಬಲ್ಲವಾಡಿ-೭೦**

ಬಲ್ಲವಾಡಿ ಈಗಿನ ಯಾವ ಗ್ರಾಮ ಎಂಬುದು ಸ್ಪಷ್ಟವಾಗುವುದಿಲ್ಲ. ಎಪ್ಪತ್ತು ಹಳ್ಳಿಗಳಿಂದ ಕೂಡಿದ ಬಲ್ಲವಾಡಿ-೭೦ರ ಉಲ್ಲೇಖ ಕ್ರಿ.ಶ. ೧೦೪೫ರ ಮೋರಿಗೆರೆ ಶಾಸನ ಬಲ್ಲವಾಡಿಯೆಪತ್ತರ ಮನ್ನೆಯ ಚಟ್ಟರಸ ಪಾದ ಪೂಜೆಯಂ ಕೊಂಡಲ್ಲಿಯ ಮನ್ನೆಯ ಸಾಮ್ಯಮನಭ್ಯಂತರಸಿದ್ಧಿಯಾಗೆ ಬಿಟ್ಟ.[೪೫೪] ಉಚ್ಚಂಗಿ ಪಾಂಡ್ಯರು ಹಾಗೂ ಅನಂತರದ ಕಾಲಘಟ್ಟದ ಶಾಸನಗಳಲ್ಲಿ ಈ ವಿಭಾಗದ ಉಲ್ಲೇಖ ಕಾಣಿಸುವುದಿಲ್ಲ. ಹಗರಿಬೊಮ್ಮನಹಳ್ಳಿ, ಕೂಡ್ಲಿಗಿ ತಾಲೂಕಿನ ಗ್ರಾಮಗಳು ಇದರಲ್ಲಿ ಸೇರಿಕೊಂಡಿದ್ದವು. ಮನ್ನೆಯ ಸ್ಥಾನದಲ್ಲಿದ್ದ ಕದಂಬರು ಪಾಂಡ್ಯರ ಕಾಲದಲ್ಲಿ ಮಹಾಮಂಡಳೇಶ್ವರ ಪದವಿ ಪಡೆದಿದ್ದರಿಂದ ಬಲ್ಲವಾಡಿ-೭೦ ಕಣ್ಮರೆಯಾಗಿ ಕೋಗಳಿ-೫೦೦ರಲ್ಲಿ ಅಂತರ್ಗತವಾಗಿರುವಂತೆ ಕಾಣುತ್ತದೆ.

**ಕುದಿಯಹರವಿ-೭೦**

ಕ್ರಿ.ಶ. ೧೦೪೫-೪೬ರ ಮೊರಿಗೇರಿ ಶಾಸನವು ತ್ರೈಲೋಕಮಲ್ಲ ನನ್ನಿನೊಳಂಬ ಪಲ್ಲವ ಪೆರ್ಮಾಡಿಯು ಬಲ್ಲಕುದ್ದೆ-೩೦೦, ಕೋಗಳಿ-೫೦೦ ಕದಂಬಳಿಗೆ-೧೦೦೦, ಕುದಿಯಹರವಿ-೭೦, ನೊಳಂಬವಾಡಿ-೩೨೦೦೦ವನ್ನು ಅಚಳ ವೃತ್ತಿಯಿಂದ ಆಳುತ್ತಿರುವುದಾಗಿ ದಾಖಲಿಸುತ್ತದೆ.[೪೫೫] ಈ ಉಪವಿಭಾಗದ ಮುಖ್ಯ ಪಟ್ಟಣ ಹಾಗೂ ಅದು ಒಳಗೊಂಡ ಹಳ್ಳಿಗಳ ವಿವರಣೆ ದೊರೆಯುವುದಿಲ್ಲ. ಇದೇ ಶಾಸನ ಅಂಬಳೆ ನಲ್ಕುದುರೆ, ಸೊನ್ನ ಹೊಳಗುಂದಿ, ಸೂಗೂರು, ಮೊರಿಗೇರಿ ಮೊದಲಾದ ಊರುಗಳನ್ನು ಮಾತ್ರ ಹೆಸರಿಸುತ್ತದೆ. ಹಗರಿಬೊಮ್ಮನಹಳ್ಳಿ ಮತ್ತು ಹಡಗಲಿ ತಾಲೂಕಿನ ಹಳ್ಳಿಗಳು ಈ ವಿಭಾಗದಲ್ಲಿ ಇದ್ದಂತೆ ತೋರುತ್ತದೆ.

**ಕರಿವಿಡಿ-೩೦**

ಮೊರಿಗೇರೆಯ ಕ್ರಿ.ಶ. ೧೦೪೫-೪೬ನೇ ಶಾಸನ ಕರಿವಿಡಿ-೩೦ ವಿಭಾಗವನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೦೧೭ರ ಮಲ್ಲಯ್ಯನಗುಡ್ಡ ಶಾಸನ ನೊಳಂಬ ಪಲ್ಲವ ಪೆರ್ಮ್ಮಾಡಿದೇವರು ನೊಳಂಬವಾಡಿ ಮೂವತ್ತಿರ್ಛಾಸಿರಮುಮಂ, ಕದಂಬಕೆ-ಸಾಯಿರಮುಮಂ, ಕೋಗಳಿ-ಐನೂರುಮಂ ಬಲ್ಲಕುಂದೆ ಮೂನೂರಮಂ ಕುದಿಹರವಿ-೭೦, ಕರಿವಿಡಿ ಮೂವತ್ತಮಂ[೪೫೬] ಆಳುತ್ತಿರುವುದಾಗಿ ತಿಳಿಸುತ್ತದೆ. ಈ ವಿಭಾಗದ ಮುಖ್ಯ ಪಟ್ಟಣದ ಚಿತ್ರಣ ದೊರೆಯುವುದಿಲ್ಲ. ಹಡಗಲಿ, ಹಗರಿಬೊಮ್ಮನಹಳ್ಳಿ ಮತ್ತು ಕೂಡ್ಲಿಗಿ ತಾಲೂಕಿನ ಹಳ್ಳಿಗಳನ್ನು ಈ ಪ್ರದೇಶ ಹೊಂದಿತ್ತು.

**ಉಚ್ಚಂಗಿ-೩೦**

ಹರಪನಹಳ್ಳಿ ತಾಲೂಕಿನ ಈಗಿನ ಉಚ್ಚಂಗಿದುರ್ಗ ಗ್ರಾಮ ೩೦ ಹಳ್ಳಿಗಳಿಂದ ಕೂಡಿದ ಪ್ರಾಚೀನ ಆಡಳಿತ ವಿಭಾಗದ ಮುಖ್ಯ ಪಟ್ಟಣವಾಗಿತ್ತು. ನೊಳಂಬ ಪಲ್ಲವರ ಆಡಳಿತದಲ್ಲಿ ಉಚ್ಚಂಗಿ-೩೦ ಕದಂಬಳಿಗೆ-೧೦೦೦ದ ಚಿಕ್ಕ ಆಡಳಿತ ಘಟಕವಾಗಿತ್ತು. ಉಚ್ಚಂಗಿದುರ್ಗದ ಕ್ರಿ.ಶ. ೧೦೬೪ರ ಶಾಸನದಲ್ಲಿ ಕದಂಬವಾಡಿನಾಡ ಮಧ್ಯದೊಳ್ಮೆರುವಿಪ್ಪಂತಿರ್ದುಚ್ಚಂಗಿ ಪರ್ವತಂ ಅದಕ್ಕೆ ನಾಲ್ಕು ಯುಗದಲ್ಲಿ ಬೇರೆ ಬೇರೆ ಹೆಸರಿದ್ದುದನ್ನು ಹೇಳುತ್ತದೆ.[೪೫೭]

ಮುಂದುವರಿದು ದೇವಪಯ್ಯ ಉಚ್ಚಂಗಿ-೩೦ನ್ನು ಆಳುತ್ತಿರುವುದಾಗಿ ತಿಳಿಸುತ್ತದೆ. ಉಚ್ಚಂಗಿ ಪಾಂಡ್ಯರ ಕಾಲಕ್ಕೆ ಕದಂಬಳಿಗೆ-೧೦೦೦ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತದೆ. ಇದು ನೊಳಂಬವಾಡಿ-೩೨೦೦೦ ವಿಭಾಗದ ಪಾಂಡ್ಯ ಅರಸರ ರಾಜಧಾನಿ ಪಟ್ಟಣವಾಗಿತ್ತು. ಆನಂತರದ ಶಾಸನಗಳಲ್ಲಿ ಉಚ್ಚಂಗಿ-೩೦ ಕೋಗಳಿ-೫೦೦ರ ವಿಭಾಗವಾಗಿ ಕಾಣಿಸಿಕೊಳ್ಳುತ್ತದೆ. ಕ್ರಿ.ಶ. ೧೧೪೯ರ ಉಚ್ಚಂಗಿದುರ್ಗ ಶಾಸನದಲ್ಲಿ ಜಗದೇಕಮಲ್ಲ ವೀರಪಾಂಡ್ಯ ನೊಳಂಬವಾಡಿ-೩೨೦೦೦ನ್ನು ಉಚ್ಚಂಗಿಯ ರಾಜಧಾನಿಯಿಂದ ಆಳುತ್ತಿದ್ದಾಗ ಉಚ್ಚಂಗಿ-೩೦ರ ಬೆಣ್ಣಿಗನೂರ ಸ್ವಯಂಭೂದೇವರಿಗೆ ದಾನ ಬಿಡುತ್ತಾನೆ.[೪೫೮] ಪಾಂಡ್ಯರ ಕಾಲಕ್ಕೆ ಉಚ್ಚಂಗಿದುರ್ಗ ರಾಜಧಾನಿ ಪಟ್ಟಣವಾಗಿ ಬದಲಾವಣೆಗೊಂಡಿದ್ದರೂ ಕೆಲವು ಶಾಸನಗಳು ಉಚ್ಚಂಗಿ-೩೦ ಆಡಳಿತ ವಿಭಾಗವೆಂದೇ ಕರೆಯುತ್ತವೆ. ಹರಪನಹಳ್ಳಿ ಮತ್ತು ಜಗಳೂರು ತಾಲೂಕಿನ ೩೦ ಹಳ್ಳಿಗಳು ಈ ಉಪ ವಿಭಾಗದಲ್ಲಿ ಸೇರಿದ್ದವು.

**ಮುತ್ತಗಿ-೩೦**

ಹರಪನಹಳ್ಳಿ ತಾಲೂಕಿನ ಮುತ್ತಗಿ ಗ್ರಾಮವೇ ೩೦ ಹಳ್ಳಿಗಳ ಆಡಳಿತ ಕೇಂದ್ರವಾಗಿತ್ತು. ಮುತ್ತಗಿ-೩೦ ಉಪ ವಿಭಾಗವನ್ನು ಕ್ರಿ.ಶ. ೧೨೧೩ರ ಶಾಸನ ಕೋಗಳಿಯನ್ನೂರರೊಳಗೆ ಮುತ್ತಗೆ ಮೂವತ್ತಕಂ ಶಿರೋಮಣಿಯೆನಿಪ ಮುತ್ತಗೆಗೆಯ ಪ್ರಭುಗಳ ಗುಣಸುತ್ತಿಯೆಂತೆನೆ ಎಂದು ಉಲ್ಲೇಖಿಸುತ್ತದೆ.[೪೬೦]

ಹರಪನಹಳ್ಳಿ ತಾಲೂಕಿನ ಶಾಸನಗಳು ಮುತ್ತಿಗೆ-೩೦ರಲ್ಲಿ ಸೇರಿಕೊಂಡಿದ್ದ ಕೆಲವು ಹಳ್ಳಿಗಳ ಮಾಹಿತಿಯನ್ನು ನೀಡುತ್ತವೆ. ಕೆರೆಗುಡಿಹಳ್ಳಿ ಶಾಸನ ಕೋಗಳಿ-೫೦೦ರ ಕಂಪಣ ಮುತ್ತಿಗೆ-೩೦ರ

ಬಳಿಯ ಬಾಡಂ, ಶ್ರೀಮದ್ದ, ಅರಸೀಕೆರೆ,[೪೧] ಹರಕನಾಳು ಶಾಸನ ಕೋಗಳಿ-೫೦೦ರ ಬಳಿಯ ಕಂಪಣ ನಿಲ್ಲಜಿಗೆಯೂರೊಂದು,[೪೨] ಮುತ್ತಿಗೆ-೩೦ರ ಕಂಪಣ ಕಡಕೋಳನಂ,[೪೩] ಮುತ್ತಿಗೆ-೩೦ರೊಳಗಣ ಬೆಣ್ಣೆಗನೂರಂ,[೪೪] ಹಾರಕನಾಳು, ಕೆರೆಗುಡಿಹಳ್ಳಿ, ನಿಲ್ಲವಂಜಿಗೆ, ಅರಸಿಕೆರೆ, ಕಡಕೊಳ, ಬೆಣ್ಣೆಹಳ್ಳಿ, ಬಾಡ, ಚಿಗಟೇರಿ, ಮೈದೂರು, ಹೊಸಕೋಟೆ, ಕಡಬಗೆರೆ ಹಳ್ಳಿಗಳು ಇದರಲ್ಲಿ ಸೇರಿದ್ದವು.

**ಬೆಣ್ಣೆವೂರು-೧೨**

ಹನ್ನೆರಡು ಹಳ್ಳಿಗಳಿಂದ ಕೂಡಿದ ಈ ಚಿಕ್ಕ ವಿಭಾಗವನ್ನು ಕ್ರಿ.ಶ. ೧೧೦೪ರ ಕುರುವತ್ತಿ ಶಾಸನ ಉಲ್ಲೇಖಿಸುತ್ತದೆ. ಬೆಣ್ಣೆವೂರು ಪನ್ನೆರಡರ ಪ್ರಭುಗಾವುಂಡರು, ನೀರಗುಂದ ಎರಡು ಹಡಂಗಿಲೆಗಳು, ಮಾಗಳ, ಬಿದರಿಹಳ್ಳಿ ಹಹನೂರು, ಹೊನ್ನವತ್ತಿ, ಕುರುವತ್ತಿ ಬಾಳ್ಗುಳಿಯನ್ನು ಉಲ್ಲೇಖಿಸುತ್ತದೆ.[೪೫] ಹಡಗಲಿ ತಾಲೂಕಿನ ಈಗಿನ ಕತ್ತೆಬೆನ್ನೂರು ಗ್ರಾಮ ಪ್ರಾಚೀನ ಹನ್ನೆರಡು ಹಳ್ಳಿಗಳ ಆಡಳಿತದ ಮುಖ್ಯ ಪಟ್ಟಣವಾಗಿತ್ತು. ಕ್ರಿ.ಶ. ೧೦೨೫ರ ಕತ್ತೆಬೆನ್ನೂರು ಶಾಸನ ಮದುವರ್ಮದೇವನು ಬೆಣ್ಣೆವೂರು-೧೨ನ್ನು ಆಳುತ್ತಿದ್ದನು ತಿಳಿಸುತ್ತದೆ.[೪೬] ಹಡಗಲಿ ತಾಲೂಕಿನ ಮೈಲಾರ, ಕುರುವತ್ತಿ, ಮಕರಬ್ಬೆ, ಬಾಡ ಗ್ರಾಮಗಳು ಈ ವಿಭಾಗದಲ್ಲಿ ಸೇರಿದ್ದವು.

**ಬೆಣ್ಣೆಕಲ್ಲು-೧೨**

ಬೆಣ್ಣೆಕಲ್ಲು-೧೨ ಹಗರಿಬೊಮ್ಮನಹಳ್ಳಿ ತಾಲೂಕಿನ ಹಳ್ಳಿಗಳನ್ನು ಒಳಗೊಂಡಿತ್ತು. ಬೆಣ್ಣೆಕಲ್ಲು ಈ ವಿಭಾಗದ ಮುಖ್ಯ ಕೇಂದ್ರವಾಗಿತ್ತು. ಇದರ ಸುತ್ತಮುತ್ತಲಿನ ಹಳ್ಳಿಗಳು ಇದರಲ್ಲಿದ್ದವು. ಇದರ ಉಲ್ಲೇಖವನ್ನು ಕ್ರಿ.ಶ. ೧೨೨೬ರ ಬೆಣ್ಣೆಕಲ್ಲು ಶಾಸನದಲ್ಲಿ ಕೋಗಳಿ-೫೦೦ರ ಬೆಣ್ಣೆಕಲ್ಲು ಹನ್ನೆರಡಕ್ಕಂ ಮುಖ್ಯವಾದ ಬೆಣ್ಣೆಕಲ್ಲು ಗ್ರಾಮದಲು ಮತ್ತು ಬೆಣ್ಣೆಕಲು ಹನ್ನೆರಡರೊಳಗಣ ಹಳ್ಳಿ ಮಾನಿಲಿಯಂ ಎಂದು ಕಾಣುತ್ತದೆ.[೪೭] ಬೆಣ್ಣೆಕಲ್ಲು, ಮಾಲವಿ, ನೆಲುಕುದಿರಿ, ದೂಪದಹಳ್ಳಿ ಮೊದಲಾದ ಸುತ್ತಮುತ್ತಲಿನ ಹನ್ನೆರಡು ಹಳ್ಳಿಗಳನ್ನು ಇದು ಒಳಗೊಂಡಿತ್ತು.

**ಕೊಟ್ಟೂರು-೧೨**

ಈಗಿನ ಹೊಸ ತಾಲೂಕು ಕೇಂದ್ರವಾದ ಕೊಟ್ಟೂರು ಪ್ರಾಚೀನ ಆಡಳಿತದಲ್ಲೂ ಹನ್ನೆರಡು ಹಳ್ಳಿಗಳ ಮುಖ್ಯ ಆಡಳಿತ ಪಟ್ಟಣವಾಗಿತ್ತು. ಉಚ್ಚಂಗಿ ಪಾಂಡ್ಯರ ಆಡಳಿತ ಕಾಲದಲ್ಲಿ ಕೊಟ್ಟೂರಿನ ಕದಂಬರು ಕೋಗಳಿ-೫೦೦ ವಿಭಾಗದ ಆಡಳಿತವನ್ನು ಕೊಟ್ಟೂರು ಪಟ್ಟಣದಿಂದ ನಿರ್ವಹಿಸುತ್ತಿದ್ದರು. ಕ್ರಿ.ಶ. ೧೧೫೪ರ ಹಳ್ಯದ ಶಾಸನ ನಾಚಿದೇವರಸರು ಕೋಗಳಿ-೫೦೦ನ್ನು ಕೊಟ್ಟೂರು-೧೨ನ್ನು ದುಷ್ಟನಿಗ್ರಹದಿಂದ ಕೊಟ್ಟೂರಲು ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತವಿದೆ[೪೮] ಎಂದು ದಾಖಲಿಸಿದೆ. ಕಿರಿಯ ಕೊಟ್ಟೂರೊಳ ಹೆರಪ್ಪನಹಾಳು, ನಾಗನೂರು, ಮರೆಯೂರು, ನೆರಲಕೆರೆ, ತೆಗಿಡಿಯಹಳ್ಳಿ ಮಾವಿನ ಮೊಗೆ, ಹಿಟ್ಟೆಯಗೋತನಹಳ್ಳಿ ಚಿಕ್ಕಮೊರಂಬ ಉಸ್ತಿಲಿಯೂರುಗಳಲ್ಲಿ ದವಸದ ಹೆರು ನೂರಕ್ಕೆರಡು.[೪೯] ದಾನ ಬಿಟ್ಟಿರುವುದನ್ನು ಹೇಳುತ್ತದೆ. ಈ ಶಾಸನದಲ್ಲಿ ಉಲ್ಲೇಖಗೊಂಡಿರುವ ಕೊಟ್ಟೂರಿನ ಸುತ್ತಮುತ್ತಲಿನ ಹನ್ನೆರಡು ಹಳ್ಳಿಗಳು ಈ ವಿಭಾಗದಲ್ಲಿ ಹೊಂದಿಕೊಂಡಿದ್ದವು.

**ಸೋಗೆ-೧೨**

ಹೂವಿನಹಡಗಲಿ ತಾಲೂಕಿನ ಸೋಗಿ ಗ್ರಾಮವೇ ಪ್ರಾಚೀನ ಹನ್ನೆರಡು ಹಳ್ಳಿಗಳ ಆಡಳಿತ ವಿಭಾಗದ ಪ್ರಮುಖ ಕೇಂದ್ರವಾಗಿತ್ತು. ಕ್ರಿ.ಶ. ೧೦೫೨ರ ತಳಕಲ್ಲು ಶಾಸನ ಕೋಗಳಿಆಯ್ನೂರರ ಕಂಪಣ ಸೋಗೆ-ಪನ್ನೆರಡರ ಬಳಿಯ ಅಗ್ರಹಾರ ತೊಣುಕಲಿಯುಮಂ ಎಂದು ಹೇಳುತ್ತದೆ.[೬೦] ಸೋಗಿ ಸುತ್ತಮುತ್ತಲಿನ ಗ್ರಾಮಗಳಾದ ತಳಕಲ್ಲು ಹುಗಲೂರು, ನಂದಿಹಳ್ಳಿ ಉತ್ತಂಗಿ ಮೊದಲಾದ ಹನ್ನೆರಡು ಹಳ್ಳಿಗಳು ಇದರಲ್ಲಿದ್ದವು.

**ಸುಂದವತ್ತಿ-೧೨**

ಈ ಸುಂದವತ್ತಿ-೧೨ ಗ್ರಾಮ ಈಗಿನ ಯಾವ ತಾಲೂಕಿಗೆ ಸೇರಿತ್ತೆಂಬುದು ಸ್ಪಷ್ಟವಿಲ್ಲ. ಕೋಗಳಿ ಶಾಸನ ಕದಂಬ ವಂಶವಂಶದವನಾದ ಆದಿತ್ಯಮ್ಮರಸರು ಕೋಗಳಿ-೫೦೦ ಮತ್ತು ಸುನ್ದವತ್ತಿ-೧೨ನು ಆಳುತ್ತಿದ್ದಾಗಿ ಹೇಳುತ್ತದೆ.[೬೧] ಉಚ್ಚಂಗಿ ಪಾಂಡ್ಯರ ಆಡಳಿತ ಕಾಲಕ್ಕೆ ಈ ವಿಭಾಗ ತನ್ನ ಮಹತ್ವ ಕಳೆದುಕೊಂಡು ಕೋಗಳಿ-೫೦೦ರಲ್ಲಿ ಸೇರಿಕೊಂಡಿರಬೇಕು. ಇಂದಿನ ಕೊಟ್ಟೂರು ತಾಲೂಕಿನಲ್ಲಿ ಈ ವಿಭಾಗ ಸೇರಿತ್ತೆಂದು ಹೇಳಬಹುದು.

**ಹಾಲ್ವೊಳ-೧೨**

ಹೂವಿನಹಡಗಲಿಯ ಶಾಸನ ಈ ಉಪ ವಿಭಾಗದ ಬಗ್ಗೆ ಉಲ್ಲೇಖಿಸುತ್ತದೆ. ಹಾಲ್ವೊಳ ಇಂದಿನ ಯಾವ ಗ್ರಾಮದ ಹೆಸರು ಎಂಬುದು ಸ್ಪಷ್ಟವಿಲ್ಲ. ಹಡಗಲಿ ಶಾಸನ ಕೋಗಳಿ-೫೦೦ ಬಳಿಯ ಕಂಪಣ ಹಾಲ್ವೊಳಂ ಪನ್ನೆರಡರೊಳಗಣ ಕೊಟಿಗನೂರು ಎಂದು ಉಲ್ಲೇಖಿಸಿದೆ.[೬೨] ತುಂಗಭದ್ರ ನದಿಯ ದಕ್ಷಿಣ ದಂಡೆಯ ಮೇಲಿನ ಕೊಟ್ನೆಕಲ್ಲು ನವಿಲಿ ಸುತ್ತಮುತ್ತಲಿನ ಹನ್ನೆರಡು ಹಳ್ಳಿಗಳು ಈ ಚಿಕ್ಕ ವಿಭಾಗದಲ್ಲಿ ಸೇರಿಕೊಂಡಿದ್ದವು.

**ಹಲುಮಯಿ-೧೨**

ಹರಪನಹಳ್ಳಿ ತಾಲೂಕಿನ ಈಗಿನ ಹಲುವಾಗಿಲು ಗ್ರಾಮ ಅಂದಿನ ಹಲುಮಯಿ-೧೨ರ ಮುಖ್ಯ ಕೇಂದ್ರ, ಕ್ರಿ.ಶ. ೧೦೫೨-೫೩ರ ತಳಕಲ್ಲು ಶಾಸನ ಕ್ರಿ.ಶ. ೧೨೮೮ರ ಹಲುವಾಗಿಲು ಶಾಸನ ಈ ವಿಭಾಗವನ್ನು ಉಲ್ಲೇಖಿಸುತ್ತವೆ. ಹಲುಮಯಿ ಪನ್ನೆರಡರ ಬಳಿಯ ನಿಟ್ಟೂರುಮುಮಂ ಎಂದು ತಳಕಲ್ಲು ಶಾಸನ ಹೇಳುತ್ತದೆ.[೬೩] ಹಲುವಾಗಿಲು ಗ್ರಾಮದ ಸುತ್ತಮುತ್ತಲಿನ ಹನ್ನೆರಡು ಹಳ್ಳಿಗಳು ಇದರಲ್ಲಿ ಸೇರಿದ್ದವು. ಈ ವಿಭಾಗವು ತುಂಗಭದ್ರಾ ನದಿ ದಂಡೆಯ ಮೇಲಿನ ಹಳ್ಳಿಗಳನ್ನು ಒಳಗೊಂಡಿತ್ತು.

**ಮೊಸಳೆವಾಡ-೧೨**

ತಳಕಲ್ಲು ಮತ್ತು ಮಾನ್ಯರಮಸಲವಾಡ ಶಾಸನಗಳು ಈ ವಿಭಾಗದ ಬಗ್ಗೆ ಮಾಹಿತಿ ನೀಡುತ್ತವೆ. ಹೂವಿನಹಡಗಲಿ ತಾಲೂಕಿನ ಮಾನ್ಯರಮಸಲವಾಡ ಗ್ರಾಮ ಈ ವಿಭಾಗದ ಕೇಂದ್ರವಾಗಿತ್ತು. ಕ್ರಿ.ಶ. ೧೧೮೩ರ ಮಸಲವಾಡ ಶಾಸನ ಮಹಾಮಂಡಳೇಶ್ವರಂ ಮೊಸಳವಾಡ

ಹನ್ನೆರಡಮಂ ಮನ್ನೆಯ ವಿಕ್ರಮಾದಿತ್ಯ ರಸಂ ರಾಜ್ಯಗೆಯ್ಯುತ್ತಮಿರೆ.[೪೭೪] ಗುತ್ತ ವಂಶದ ವಿಕ್ರಮಾದಿತ್ಯ ಈ ವಿಭಾಗದ ಆಡಳಿತ ನೋಡಿಕೊಳ್ಳುತ್ತಿದ್ದ ಎಂಬುದು ಇದರಿಂದ ತಿಳಿಯುತ್ತದೆ. ಈತನು ಉಚ್ಚಂಗಿ ಪಾಂಡ್ಯ ಅರಸರೊಂದಿಗೆ ಸಂಬಂಧವನ್ನು ಹೊಂದಿದ್ದನು. ಹಡಗಲಿ ತಾಲೂಕಿನ ಮಾನ್ಯರಮಸಲವಾಡ, ಬಸರಕೋಡು ಸುತ್ತಮುತ್ತಲಿನ ಗ್ರಾಮಗಳು ಇದರಲ್ಲಿ ಸೇರಿದ್ದವು.

**ಬೆಳಹುಗೆ-೭೦**

ಕುರುವತ್ತಿಯ ಕ್ರಿ.ಶ. ೧೧೧೦ಳರ ಶಾಸನ ಪಡೆವೆಚ್ಚೆಗಂಡ, ಮಂಡಳಿಕ ಭೈರವ ಶ್ರೀವಿಕ್ರಮಾದಿತ್ಯ ದೇವರು ಬೆಳಹುಗೆ-೭೦ ಬೆಣ್ಣೆವೂರು-೧೨ನ್ನು ಆಳುತ್ತಿರುವುದಾಗಿ ಹೇಳುತ್ತದೆ.[೪೭೫] ಎಪ್ಪತ್ತು ಹಳ್ಳಿಗಳಿಂದ ಕೂಡಿದ ಈ ಘಟಕದ ಪ್ರಾಚೀನ ಕೇಂದ್ರ ಇಂದು ಯಾವ ಗ್ರಾಮ ಎಂಬುದು ಸ್ಪಷ್ಟವಾಗಿಲ್ಲ. ಹಡಗಲಿ ತಾಲೂಕಿನ ಇಂದಿನ ಗುತ್ತಹೊಳಲು ಗ್ರಾಮವೇ ಇದರ ಮುಖ್ಯ ಪಟ್ಟಣವಾಗಿತ್ತು ಎಂದೂ ಊಹಿಸಬಹುದಾಗಿದೆ. ವೀರ ಪಾಂಡ್ಯನ ಮಾವ ಗುತ್ತ ವಂಶದ ವಿಕ್ರಮಾದಿತ್ಯ ಈ ಪ್ರದೇಶದ ಆಡಳಿತವನ್ನು ನೋಡಿಕೊಳ್ಳುತ್ತಿದ್ದ ಹಡಗಲಿ ತಾಲೂಕಿನಲ್ಲಿ ಹರಿಯುವ ತುಂಗಭದ್ರ ನದಿಯ ದಂಡೆಯ ಪಕ್ಕದಲ್ಲಿರುವ ಕುರುವತ್ತಿ, ಹೊಳಲು, ಮಕ್ಕರಬೆ, ಕತ್ತೆಬೆನ್ನೂರು, ಬಾಡ ಗ್ರಾಮಗಳನ್ನು ಇದು ಹೊಂದಿತ್ತು.

**ಹನಸಿ-೧೨**

ಹನಸಿ ಗ್ರಾಮದ ಕ್ರಿ.ಶ. ೧೧೧೧ರ ಶಾಸನ ಹನಸಿ-೧೨ ವ್ರಿತಿಯ ಸಮಸ್ತ ಪ್ರಜೆಯುಂ ಪರಿಗ್ರಹಮುಂ ದೇವರ್ಗ್ಗೆ ದೇವಗೊಳದಲ್ಲಿ ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ ಹಾಗೂ ಕೋಗಳಿ-೫೦೦ ಬಳಿಯ ನಾಯಕ ವೃತ್ತಿಯ ಹನಸಿ ಪರಶುರಾಮೇಶ್ವರ ದೇವರು ಎಂದು ಹೇಳುತ್ತದೆ.[೪೭೬] ಕೂಡ್ಲಿಗಿ ತಾಲೂಕಿನ ಹನಸಿ ಗ್ರಾಮವೇ ಈ ಚಿಕ್ಕ ವಿಭಾಗದ ಮುಖ್ಯ ಕೇಂದ್ರವಾಗಿತ್ತು. ಹನಸಿ, ಚಿಕ್ಕಲಬ್ಬೆಗೆರೆ ಸುತ್ತಲಿನ ಗ್ರಾಮಗಳು ಇದರೊಳಗೆ ಸೇರಿಕೊಂಡಿದ್ದವು.

**ಬಿಳಿಚಿ-೭೦**

ಕದಂಬಳಿಗೆ ಸಾವಿರದ ಉಪವಿಭಾಗಗಳಲ್ಲಿ ಬಿಳಿಚಿ-೭೦ ಕೂಡ ಒಂದು. ಈ ಉಪ ವಿಭಾಗದಲ್ಲಿ ಚನ್ನಗಿರಿ ತಾಲೂಕಿನ ಎಪ್ಪತ್ತು ಹಳ್ಳಿಗಳು ಇದರಲ್ಲಿ ಸೇರಿದ್ದವು. ಆಸ್ತಾಪನಹಳ್ಳಿ ಶಾಸನ ಬಿಳಿಚಿಯೆಪ್ಪತ್ತರ ಮನ್ನೆಯ ಯೆಡವರಿಯರಸರು ಸೂಸಲಗೆರೆಯಲ್ಲಿ ಆಳುತ್ತಿರುವುದಾಗಿ ಹೇಳುತ್ತದೆ.[೪೭೭] ಚನ್ನಗಿರಿ ಶಾಸನ ಮಹಾಸಾಮಂತ ಸೋಮರಸರು ಬಿಳಿಚಿ-೭೦ರಲ್ಲಿಯ ಮನ್ನೆಯಂ ಆಳುತ್ತಿರುವುದಾಗಿ ಉಲ್ಲೇಖಿಸುತ್ತದೆ[೪೭೮] ಹಾಗೂ ಬಿಳಿಚಿ-೭೦ರ ಬಳಿಯ ಬಾಡ, ಬಸವಳ್ಳಿ, ಸಾರತಿಹಳ್ಳಿ, ನಲ್ಲೂರನ್ನು ಉಲ್ಲೇಖಿಸುತ್ತದೆ. ಈ ಆಡಳಿತ ಘಟಕದಲ್ಲಿ ಮನುಜವೊಳಲು-೧೨, ಹರಕಲಿ-೧೨, ದುಮ್ಮಿ-೧೨, ಚಿಕ್ಕ ಘಟಕಗಳನ್ನು ಹೊಂದಿರುವುದು ಶಾಸನಗಳಿಂದ ತಿಳಿಯುತ್ತದೆ. ಚನ್ನಗಿರಿ ಮತ್ತು ಹೊಳಲಕೆರೆ ತಾಲೂಕಿನ ಹಳ್ಳಿಗಳು ಇದರಲ್ಲಿ ಸೇರಿದ್ದವು.

**ದುಮ್ಮಿ-೧೨**

ಹೊಳಲಕೆರೆ ತಾಲೂಕಿನ ದುಮ್ಮಿ ಗ್ರಾಮ ಈ ವಿಭಾಗದ ಪ್ರಾಚೀನ ಕೇಂದ್ರವಾಗಿತ್ತು. ಹೊಯ್ಸಳರು ಮತ್ತು ಪಾಂಡ್ಯರಿಗೆ ಈ ಪ್ರದೇಶದಲ್ಲಿ ಕದನ ನಡೆದಿರುವುದನ್ನು ಅಲ್ಲಿನ ವೀರಗಲ್ಲು

ಶಾಸನ ತಿಳಿಸುತ್ತದೆ. ಚನ್ನಗಿರಿ ಮತ್ತು ಆಸ್ತಾಪನಹಳ್ಳಿ ಶಾಸನಗಳು ಬಿಳಿಚಿ-೭೦ರೊಳಗಿನ ದುಮ್ಮಿ-೧೨, ವಿಭಾಗದ ಬಗ್ಗೆ ಉಲ್ಲೇಖಿಸುತ್ತವೆ. ದುಮ್ಮಿ ಗ್ರಾಮದ ಸುತ್ತಮುತ್ತಲಿನ ೧೨ ಹಳ್ಳಿಗಳು ಇದರಲ್ಲಿ ಸೇರಿದ್ದವು.

**ಹರಕಲಿ-೧೨**

ಚನ್ನಗಿರಿ ಶಾಸನ ಈ ವಿಭಾಗದ ಬಗ್ಗೆ ಉಲ್ಲೇಖಿಸುತ್ತದೆ. ಸಾರತಿವಹಳ್ಳಿಯ ನಲ್ಲೂರ ಮನುಜವೊಳಲು ಹನ್ನೆರಡರ ಬಳಿಯ ಬಾಡ ಮಲ್ಲಿಗೆಯ ಹರಕಲಿ ಹನ್ನೆರಡರ ಬಳಿಯ ಬಾಡಂ ಕುಂಕುವರಹಳ್ಳಿಯನ್ನು ಹೆಸರಿಸುತ್ತದೆ.[೪೯] ಹರಕಲಿ, ಬಾಡ, ಕುಂಕದಹಳ್ಳಿ, ಅವುಗಳ ಸುತ್ತಲಿನ ಹಳ್ಳಿಗಳನ್ನು ಈ ವಿಭಾಗ ಒಳಗೊಂಡಿತ್ತು.

**ಕುಕ್ಕವಾಡ-೩೦೦**

ಕುಕ್ಕವಾಡ ಪ್ರಾಚೀನ ಆಡಳಿತ ವಿಭಾಗದಲ್ಲಿ ೩೦೦ ಹಳ್ಳಿಗಳ ಆಡಳಿತ ಕೇಂದ್ರವಾಗಿತ್ತು. ಹೊಳಲಕೆರೆ ತಾಲೂಕಿನ ಗುಂಜಿಗನೂರ ಶಾಸನ ಗಂಗರಸರು ಕುಕ್ಕವಾಡಿ-೩೦೦ನು ಆಳುತ್ತಿರುವುದಾಗಿ ಉಲ್ಲೇಖಿಸುತ್ತದೆ.[೫೦] ಹೊಳಲಕೆರೆ, ಚನ್ನಗಿರಿ, ದಾವಣಗೆರೆ ತಾಲೂಕಿನ ಹಳ್ಳಿಗಳು ಈ ಆಡಳಿತ ವಿಭಾಗದಲ್ಲಿ ಸೇರಿದ್ದವು.

**ಕಣಿಯಕಲ್ಲು-೩೦೦**

ಅನಂತಪುರ ಜಿಲ್ಲೆಯ ರಾಯದುರ್ಗ ತಾಲೂಕಿನ 'ಕಣಿಯಕಲ್ಲು' ಅಥವಾ 'ಕಣೀಕಲ್ಲು' ಎಂಬ ಗ್ರಾಮವೇ ಈ ವಿಭಾಗದ ಮುಖ್ಯ ಆಡಳಿತ ಗ್ರಾಮವಾಗಿತ್ತು. ನರಸಾಪುರ ಶಾಸನದಲ್ಲಿ ಕಣಿಯಕಲ್ಲು ಮುನ್ನೂರರ ರಾಜಧಾನಿ ಗೊನ್ದವಾಡಿ ಎಂದು ಉಲ್ಲೇಖಿಸುತ್ತದೆ.[೫೧] ಕ್ರಿ.ಶ. ೧೦೭೯ರ ನೀಲಗುಂದ ಶಾಸನ ರಾಯಪಾಂಡ್ಯದೇವರು ನೊಳಂಬವಾಡಿ-೩೨೦೦೦, ಕಣಿಯಕಲ್ಲು-೩೦೦ನ್ನು 'ಉಳವಿ' ನೆಲೆವೀಡಿನಿಂದ ಆಳುತ್ತಿರುವುದಾಗಿ ತಿಳಿಸುತ್ತದೆ.[೫೨] ತ್ರಿಭುವನಮಲ್ಲ ಪಾಂಡ್ಯ, ರಾಯಪಾಂಡ್ಯನ ನಂತರ ಈ ವಿಭಾಗದ ಆಡಳಿತ ಉಚ್ಚಂಗಿ ಪಾಂಡ್ಯರ ಕೈತಪ್ಪಿ, ಚೋಳ ಮತ್ತು ಬಾಣರಸರಿಗೆ ಸೇರುತ್ತದೆ. ಅನಂತಪುರ ಜಿಲ್ಲೆಯ ರಾಯದುರ್ಗ, ಕಲ್ಯಾಣದುರ್ಗ ಹಾಗೂ ಚಿತ್ರದುರ್ಗ ಜಿಲ್ಲೆಯ ಹಳ್ಳಿಗಳು ಈ ವಿಭಾಗದಲ್ಲಿ ಸೇರಿದ್ದವು.

**ರೊದ್ದ-೩೦೦**

ಶಿರಾ ತಾಲೂಕಿನ ದೊಡ್ಡ ಬಾಣಗೆರೆ ಶಾಸನ ಈ ಆಡಳಿತ ವಿಭಾಗದ ಬಗ್ಗೆ ಮಾಹಿತಿ ನೀಡುತ್ತದೆ. ಈ ವಿಭಾಗದ ವ್ಯಾಪ್ತಿ ಅನಂತಪುರ ಜಿಲ್ಲೆಯ ಪೆನುಕೊಂಡ ತಾಲೂಕಿನ ಪಿನಾಕಿನಿ ನದಿ ತೀರದ ಪ್ರದೇಶವನ್ನೊಳಗೊಂಡಿದೆ.[೫೩]

ವಿಜಯನಗರ ಅರಸರ ಕಾಲಕ್ಕೂ ಈ ವಿಭಾಗದ ಆಡಳಿತ ಮುಂದುವರಿದಿರುವುದನ್ನು ಶಾಸನಗಳು ಸ್ಪಷ್ಟಪಡಿಸುತ್ತವೆ. ಈ ಆಡಳಿತ ವಿಭಾಗ ಹೊಂದಿದ ಉಪವಿಭಾಗಗಳ ಬಗ್ಗೆ ಮಾಹಿತಿ ದೊರೆಯುವುದಿಲ್ಲ. ಕ್ರಿ.ಶ. ೧೨೨೯ರ ದೊಡ್ಡ ಬಾಣಗೆರೆ ಶಾಸನ ಮಹಾಮಂಡಳೇಶ್ವರ

ವೀರಪಾಂಡ್ಯ ಇರುಂಗೊಳ ದೇವರು ರೊದ್ದ-೩೦೦, ಸಿರೆ-೩೦೦, ಹರವೆ-೩೦೦ ಕಣಿಯಕಲ್ಲು-೩೦೦, ಸಿನ್ದವಾಡಿ-೧೦೦೦ವನ್ನು ಆಳುತ್ತಿರುವುದಾಗಿ ಹೇಳುತ್ತದೆ.[೪೮] ನಿಡುಗಲ್ಲು ಚೋಳ ವಂಶದ ಇರುಂಗೊಳದೇವ ಇಲ್ಲಿ ವೀರಪಾಂಡ್ಯನ ಹೆಸರಿನೊಂದಿಗೆ ಕರೆದುಕೊಂಡಿರುವುದು ವಿಶೇಷವಾಗಿದೆ. ಈ ವೇಳೆಯಲ್ಲಿ ವೀರಪಾಂಡ್ಯ ತಂದೆ ರಾಯಪಾಂಡ್ಯನ ಸಾಮಂತನಾಗಿ ಕುಮಾರ ವೃತ್ತಿಯಿಂದ ಆಳುತ್ತಿದ್ದ. ಇವನ ಸಾಮಂತನಾಗಿ ಇರುಂಗೊಳದೆವ ರೊದ್ದ-೩೦೦ ಆಡಳಿತ ನೋಡಿಕೊಳ್ಳುತ್ತಿದ್ದ. ಚೋಳರು ಹೊಯ್ಸಳ ಬಲ್ಲಾಳನ ಕಾಲಕ್ಕೆ ಅವರ ಸಾಮಂತರಾದ್ದರಿಂದ ರೊದ್ದ-೩೦೦ ಆಡಳಿತ ಪಾಂಡ್ಯರಿಂದ ಜಾರಿಕೊಳ್ಳುತ್ತದೆ. ತುಮಕೂರು, ಚಿತ್ರದುರ್ಗ, ಅನಂತಪುರ ತಾಲೂಕಿನ ಹಳ್ಳಿಗಳು ಈ ವಿಬಾಗದಲ್ಲಿ ಸೇರಿದ್ದವು.

**ಸಿಂದವಾಡಿ-೧೦೦೦**

ಸಿಂದವಾಡಿ-೧೦೦೦ ನೊಳಂಬವಾಡಿ-೩೨೦೦೦ ವಿಭಾಗದ ದೊಡ್ಡ ಉಪವಿಭಾಗವಾಗಿದೆ. ಬಳ್ಳಾರಿ, ಸಿರಗುಪ್ಪ, ಸಂಡೂರು, ಹೊಸಪೇಟೆ, ಜಗಳೂರು ತಾಲೂಕಿನ ಗ್ರಾಮಗಳು, ಆದೋನಿ, ಗುತ್ತಿ, ಆಲೂರು ತಾಲೂಕಿನ ಕೆಲವು ಗ್ರಾಮಗಳು ಇದರಲ್ಲಿ ಸೇರಿದ್ದವು. ತುಂಬುಳ ಇದರ ಮೊದಲ ರಾಜಧಾನಿಯಾಗಿತ್ತು. ಚಾಳುಕ್ಯ ವಿಕ್ರಮಾದಿತ್ಯನ ನಂತರ ಕುರುಗೋಡು ಇದರ ಎರಡನೇ ರಾಜಧಾನಿಯಾಯಿತು.[೪೫] ಬಲಕುಂದೆ-೩೦೦, ಆದವಾನಿ-೫೦೦, ಚಿನ್ನವಾಡಿ-೮೬, ಸಿಂದವಾಡಿ ಸಾವಿರದ ಉಪವಿಭಾಗಗಳಾಗಿವೆ. ಉಚ್ಚಂಗಿ ಪಾಂಡ್ಯರ ಕಾಲಕ್ಕೆ ಸಿಂದವಾಡಿ-೧೦೦೦ದ ಪೂರ್ಣ ಆಡಳಿತ ಅವರಿಗೆ ದೊರೆತಿರಲಿಲ್ಲ. ಬಲಕುಂದಿ-೩೦೦ ಮಾತ್ರ ಇವರ ಅಧೀನಕ್ಕೆ ಬಂದಿತ್ತು. ಕ್ರಿ.ಶ. ೧೧೨೯ರ ವೇಳೆಗೆ ಸಿಂಧವಾಡಿ-೧೦೦೦ ಹಳ್ಳಿಗಳಿಂದ ೩೦೦ ಹಳ್ಳಿಗೆ ಕಡಿಮೆಯಾಗಿತ್ತು ಅನ್ನಿಸುತ್ತದೆ. ದೊಡ್ಡಬಾಣಗೆರೆ ಶಾಸನ ಸಿಂಧವಾಡಿ-೩೦೦ ಎಂದು ಉಲ್ಲೇಖಿಸಿರುವುದು ಇದಕ್ಕೆ ಸ್ಪಷ್ಟೀಕರಣ ನೀಡುತ್ತದೆ.

ಕುರುಗೋಡಿನ ಸಿಂಧರು ಪಾಂಡ್ಯರ ಸಾಮಂತರಾಗಿ ಈ ವಿಭಾಗದ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು. ಕ್ರಿ.ಶ. ೧೧೬೩ರ ನಂತರ ಸಿಂಧವಾಡಿ-೧೦೦೦ ಪಾಂಡ್ಯರ ಆಡಳಿತದಿಂದ ದೂರ ಸರಿದು ಕಳಚೂರಿಗಳ ಅಧೀನಕ್ಕೆ ಬಂದಿತು.

**ಬಲ್ಲಕುಂದೆ-೩೦೦**

ಬಳ್ಳಾರಿ ಜಿಲ್ಲೆಯ ಸಿರುಗುಪ್ಪ ತಾಲೂಕಿನ ಬಲ್ಲಕುಂದಿ ಗ್ರಾಮವು ಈ ವಿಭಾಗದ ಮುಖ್ಯ ಪಟ್ಟಣವಾಗಿತ್ತು. ಸಿಂಧರ ಕಾಲದಲ್ಲಿ ಇದು ಅವರ ರಾಜಧಾನಿ ಕೇಂದ್ರವಾಗಿ ರೂಪುಗೊಂಡಿತು. ಆರಂಭದಲ್ಲಿ ಬಲಕುನ್ದ ವಿಷಯವೆನಿಸಿದ್ದ ಈ ನಾಡು ಚಾಳುಕ್ಯರ ಕಾಲಕ್ಕೆ ಮೂರು ನೂರು ಹಳ್ಳಿಗಳ ವಿಭಾಗವಾಗಿ ರೂಪುಗೊಂಡಿತು. ಈ ವಿಭಾಗದಲ್ಲಿ ದೊರವಡಿ-೭೦, ಸ್ವಾಮಿ ಆರುಂಬಾಡ, ಸಬಾಲ-೭೦, ನಲ್ವಡಿ-೧೨, ಬಳ್ಳಾರಿ-೩೦, ತೆಕ್ಕೆಕಲ್ಲು-೧೨ ಸಾವಿಮಲೆ(ಸೊಂಡೂರು ಮತ್ತು ಅದರ ದಕ್ಷಿಣಕ್ಕಿರುವ ಹಳ್ಳಿಗಳು) ಉಪ ವಿಭಾಗಗಳು ಇದರಲ್ಲಿ ಕಾಣಿಸಿಕೊಳ್ಳುತ್ತವೆ.[೪೬]

ಉಚ್ಚಂಗಿ ಪಾಂಡ್ಯರ ಆರಂಭದಿಂದ ಕಳಚೂರಿ ಬಿಜ್ಜಳನ ಕಾಲದವರೆಗೂ ಬಲ್ಲಕುಂದೆ-೩೦೦ ಪಾಂಡ್ಯರ ಅಧೀನದಲ್ಲಿ ನೊಳಂಬವಾಡಿ-೩೨೦೦೦ ಪ್ರಾಂತ್ಯದ ಉಪ ವಿಭಾಗವಾಗಿತ್ತು. ಕುರುಗೋಡು ಸಿಂಧರು ಪಾಂಡ್ಯರ ಸಾಮಂತರಾಗಿ ಈ ಪ್ರಾಂತ್ಯದ ಆಡಳಿತ ನೋಡಿಕೊಳ್ಳುತ್ತಿದ್ದರು.

ಕ್ರಿ.ಶ. ೧೦೯೪ರ ಗಂಗಾವತಿ ತಾಲೂಕಿನ ವಿಪ್ರದ ಶಾಸನ ತ್ರಿಭುವನ ಮಲ್ಲಪಾಂಡ್ಯ ವೀರನೊಳಂಬ ಪಲ್ಲವ ಪೆರ್ಮಾಡಿದೇವನು ಬಲ್ಲಕುಂದೆ-೩೦೦ರ ಕಂಪಣ ನಲ್ವಡಿ-೧೨ನ್ನು ಆಳುತ್ತಿರುವಾಗ ಕಂಪ್ಲಿಯ ಸಿದ್ದೇಶ್ವರ ದೇವರಿಗೆ ಬಾಡದ ಇಕುಪುರವನ್ನು ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ.[೪೭] ಕ್ರಿ.ಶ. ೧೧೦೨ ಸಿರುಗುಪ್ಪ ಶಾಸನ ತ್ರಿಭುವನಮಲ್ಲ ಪಾಂಡ್ಯ ಭತ್ತಗ್ರಾಮ ಮತ್ತು ನೊಳಂಬವಾಡಿ-೩೨೦೦೦ ಪ್ರದೇಶಗಳನ್ನು ಆಳುತ್ತಿದ್ದನು ಎಂದು ಹೇಳುತ್ತದೆ. ಕುರುಗೋಡು ಸಿಂಧ ವಂಶದ ಬೀವರಸ, ಲೋಕರಸ, ತೆಕ್ಕೆಕಲ್ಲು, ಚೋಕರಸ, ಚಗ್ಗರಸರು ಆತನ ಸಾಮಂತರಾಗಿ ಆಳುತ್ತಿದ್ದ ವಿಷಯವನ್ನು ಈ ಶಾಸನ ತಿಳಿಸುತ್ತದೆ.[೪೮]

ಹಿರೇಹಡಗಲಿ ಶಾಸನ ವೀರಪಾಂಡ್ಯದೇವರು ಕದಂಬಳಿಗೆ-೧೦೦೦, ಬಲ್ಲಕುಂದೆ-೩೦೦, ಕೋಗಳಿ-೫೦೦ನ್ನು ಆಳುತ್ತಿರುವುದಾಗಿ ದಾಖಲಿಸಿದೆ.[೪೯]

ಕುರುಗೋಡು ಸಿಂಧ ವಂಶದ ಮಹಾಮಂಡಳೇಶ್ವರ ರಾಜಮಲ್ಲ ಉಚ್ಚಂಗಿ ಪಾಂಡ್ಯರ ಅಧೀನತೆಯನ್ನು ತಿರಸ್ಕರಿಸಿ ಕಳಚೂರಿ ಬಿಜ್ಜಳನ ಪ್ರಭುತ್ವವನ್ನು ಒಪ್ಪಿಕೊಂಡ. ಉಚ್ಚಂಗಿ ಪಾಂಡ್ಯರು ಕಳಚೂರಿಗಳ ಆಡಳಿತವನ್ನು ಒಪ್ಪದೆ, ಚಾಳುಕ್ಯರಿಗೆ ವಿಧೇಯರಾಗಿದ್ದರು. ಇದರಿಂದಾಗಿ ಪಾಂಡ್ಯರು ಕುರುಗೋಡು ಸಿಂಧರು ಪರಸ್ಪರ ಶತ್ರುಗಳಾಗಿ ಬದಲಾಗಿದ್ದರು. ಹೊಯ್ಸಳರ ದಾಳಿಯಿಂದಾಗಿ ನೊಳಂಬವಾಡಿ ಪ್ರಾಂತ್ಯದ ಈ ಉಪವಿಭಾಗ ಅವರ ವಶವಾಗಿ ಕುರುಗೋಡು ಸಿಂಧರು ಚರಿತ್ರೆಯ ಪುಟಗಳಿಂದ ಹಿಂದಕ್ಕೆ ಸರಿದರು.

ತುಂಗಭದ್ರಾ ನದಿಯ ದಂಡೆಯ ಮೇಲಿರುವ ಕಂಪಿಲಿ, ಹಂಪಿ ಈ ನಾಡಿನಲ್ಲಿದ್ದವು. ಇಂದಿನ ಆಂಧ್ರಪ್ರದೇಶದ ಆದೋನಿ ತಾಲೂಕಿನ ಕೆಲವು ಹಳ್ಳಿಗಳೂ ಸೇರಿದಂತೆ ಸಿರುಗುಪ್ಪ ತಾಲೂಕಿನ ಎಲ್ಲಾ ಹಳ್ಳಿಗಳು ಹಾಗೂ ಸಂಡೂರು ಸುತ್ತಮುತ್ತಲಿನ ಕೆಲವು ಹಳ್ಳಿಗಳು ಬಲ್ಲಕುಂದೆ ನಾಡಿನಲ್ಲಿ ಸೇರಿರಬೇಕು. ಈ ಆಡಳಿತ ವಿಭಾಗವು ಕುಂತಲದ ಪ್ರಮುಖ ಆಡಳಿತ ಪ್ರದೇಶವಾಗಿದ್ದುದನ್ನು ಶಾಸನಗಳು ಸಾರಿವೆ.[೫೦]

**ದೊರವಡಿ-೭೦**

ಬಲ್ಲುಕಂದೆ-೩೦೦ರ ಉಪವಿಭಾಗಗಳಲ್ಲಿ ಇದು ಅತಿದೊಡ್ಡದು. ಇಂದಿನ ಸಂಡೂರು ತಾಲೂಕಿನ ದರೋಜಿಯೇ ಈ ವಿಭಾಗದ ಮುಖ್ಯ ಪಟ್ಟಣ. ಕ್ರಿ.ಶ. ೧೧೪೮ರ ಓರವಾಯಿ ಶಾಸನ ಈ ಬಗ್ಗೆ ಉಲ್ಲೇಖಿಸುತ್ತದೆ.[೫೧] ಸಂಡೂರು, ಬಳ್ಳಾರಿ ತಾಲೂಕಿನಲ್ಲಿ ಬರುವ ೭೦ ಹಳ್ಳಿಗಳನ್ನು ಇದು ಹೊಂದಿತ್ತು.

**ಅರುಂಬಾಡ**

ಕುರೆಕುಪ್ಪೆ ಶಾಸನ ಈ ಆಡಳಿತ ವಿಭಾಗದ ಕುರಿತು ಉಲ್ಲೇಖಿಸುತ್ತದೆ. ಕುರೆಕುಪ್ಪೆ ಅರುಂಬಾಡ ಆಡಳಿತ ವಿಭಾಗದಲ್ಲಿ ಅಗ್ರಹಾರವಾಗಿತ್ತು.

**ಸಬಾಲ-೭೦**

ಕುಡುತಿನಿ ಶಾಸನ ಸಬಾಲ-೭೦ ಉಪ ವಿಭಾಗದ ಬಗ್ಗೆ ಮಾಹಿತಿ ನೀಡುತ್ತದೆ. ಈ ವಿಭಾಗದ ಮುಖ್ಯ ಸ್ಥಾನ ಕುಡುತಿನಿ ಗ್ರಾಮವಾಗಿತ್ತು. ಕೊಟ್ಟಿತೊಣೆ, ರಾಜಧಾನಿ ಕೊಟ್ಟಿತೊಣೆ, ಕೊಟ್ಟೆತೋನೆ ಎಂದು ಈ ಗ್ರಾಮವನ್ನು ಶಾಸನಗಳು ಕರೆಯುತ್ತವೆ.[೪೯೨] ಈಗಿನ ಬಳ್ಳಾರಿ-ಸಂಡೂರು ತಾಲೂಕುಗಳ ಹಳ್ಳಿಗಳು ಇದರಲ್ಲಿ ಸೇರಿದ್ದವು.

**ನಲ್ವಡಿ-೧೨**

ಬಳ್ಳಾರಿ ತಾಲೂಕಿನ ನೆಲ್ಲುಡಿಯೇ ಪ್ರಾಚೀನ ನಲ್ವಡಿ ಹನ್ನೆರಡರ ಮುಖ್ಯ ಪಟ್ಟಣವಾಗಿತ್ತು. ಓರುವಾಯಿ ಶಾಸನ ಈ ಚಿಕ್ಕ ವಿಭಾಗದ ಬಗ್ಗೆ ಉಲ್ಲೇಖಿಸುತ್ತದೆ. ಕುತನೂರು, ದೇನೂರು, ನೆಸರುವಾಡ, ಕಟಹಳ್ಳಿ ನೆಲ್ಲುಡಿ, ಓರುವಾಯಿ ಗ್ರಾಮಗಳು ಈ ವಿಭಾಗದಲ್ಲಿ ಕಂಡು ಬರುತ್ತವೆ.[೪೯೩]

**ತೆಕ್ಕೆಕಲ್ಲು-೧೨**

ಇಂದಿನ ತೆಕ್ಕಲಕೋಟೆ ಪ್ರಾಚೀನ ತೆಕ್ಕೆಕಲ್ಲು-೧೨ರ ಮುಖ್ಯ ಕೇಂದ್ರವಾಗಿತ್ತು. ಸಿರಗುಪ್ಪೆ ಮತ್ತು ಸಾಲಗುಂದೆ ಶಾಸನಗಳು ಈ ವಿಭಾಗವನ್ನು ಪರಿಚಯಿಸುತ್ತವೆ. ಸಿರುಗುಪ್ಪೆ ಶಾಸನದಲ್ಲಿ ತೆಕ್ಕೆಕಲ್ಲು-೧೨ರೊಳಗಣ ಭತ್ತಗ್ರಾಮ ಸಿರಿಗುಪ್ಪೆ ಎಂದು ಉಲ್ಲೇಖಿಸುತ್ತದೆ.[೪೯೪] ಕೋಳನೂರು, ಸಿನ್ದಾಪುರ, ಸಿರಿವುರಗಳು ಈ ವಿಭಾಗದಲ್ಲಿ ಸೇರಿಕೊಂಡಿದ್ದವು.

**ಬಳ್ಳಾರಿ-೩೦**

ಕೋಳೂರು ಶಾಸನ ಬಳ್ಳಾರಿ-೩೦ ಆಡಳಿತ ವಿಭಾಗದ ಬಗ್ಗೆ ದಾಖಲಿಸುತ್ತದೆ. ಬಳ್ಳಾರಿ ಪ್ರಾಚೀನ ಮತ್ತು ಸಮಕಾಲೀನ ಸಂದರ್ಭದಲ್ಲಿ ಆಡಳಿತದಲ್ಲಿ ಮುಖ್ಯ ಪಟ್ಟಣವಾಗಿರುವುದು ವಿಶೇಷವಾಗಿದೆ. ಬಳ್ಳಾರಿ ತಾಲೂಕಿನ ೩೦ ಹಳ್ಳಿಗಳು ಇದರಲ್ಲಿ ಸೇರಿದ್ದವು. ೩೦ ಹಳ್ಳಿಗಳು ಯಾವುವು ಎಂಬುದು ತಿಳಿಯುವುದಿಲ್ಲ.

ಈವರೆಗೂ ಚರ್ಚಿಸಿದ ವಿಭಾಗ - ಉಪವಿಭಾಗಗಳು ಉಚ್ಚಂಗಿ ಪಾಂಡ್ಯರ ಆಡಳಿತ ಕಾಲಕ್ಕೆ ನೊಳಂಬವಾಡಿ-೩೦೦೦ ಪ್ರಾಂತ್ಯದ ವ್ಯಾಪ್ತಿಗೆ ಸೇರಿದ್ದವು ಎಂಬುದನ್ನು ಶಾಸನಗಳು ದೃಢಪಡಿಸುತ್ತವೆ. ಆದರೆ ನೊಳಂಬ ಪಲ್ಲವ ಮತ್ತು ಚಾಳುಕ್ಯ ಅರಸರ ಕಾಲಕ್ಕೆ ಇನ್ನೂ ಕೆಲವು ಆಡಳಿತ ವಿಭಾಗಗಳು ನೊಳಂಬವಾಡಿ ಪ್ರಾಂತ್ಯಕ್ಕೆ ಸೇರಿದ್ದವು.

**ನೊಳಂಬಳಿಗೆ-೧೦೦೦**

ನೊಳಂಬರ ಆರಂಭದ ಶಾಸನಗಳಲ್ಲಿ ನೊಳಂಬಳಿಗೆ ಸಾಸಿರದ ಉಲ್ಲೇಖ ದೊರೆಯುತ್ತದೆ. ರಾಷ್ಟ್ರಕೂಟ ಮತ್ತು ಕಲ್ಯಾಣದ ಚಾಳುಕ್ಯರ ಕಾಲಕ್ಕೆ ನೊಳಂಬಳಿಗೆ-೧೦೦೦ ಶಬ್ದ ಬಳಕೆಗೆ ಕಡಿಮೆಯಾಗಿ ನೊಳಂಬಳಿಗೆ-೩೨೦೦೦ ಎಂದು ಕರೆಯಲಾಯಿತು. ಚಿತ್ರದುರ್ಗ ಜಿಲ್ಲೆಯ

ಚಳ್ಳಕೆರೆ, ಹಿರಿಯೂರು, ಪಾವಗಡ ಶಿರಾ ತಾಲೂಕಿನ ಹಳ್ಳಿಗಳು ಹಾಗೂ ಆಂಧ್ರಪ್ರದೇಶದ ಹೆಂಜೇರು ಅಥವಾ ಹೇಮಾವತಿಯ ಸುತ್ತಮುತ್ತಲ ಪ್ರದೇಶಗಳು ಇದರಲ್ಲಿ ಸೇರಿದ್ದವು. ಹೆಂಜೇರು ಈ ವಿಭಾಗದ ಆಡಳಿತ ಪಟ್ಟಣವಾಗಿತ್ತು.[೪೯೫]

**ಪುಲಿನಾಡು**

ಇದು ಕೋಲಾರ ಜಿಲ್ಲೆಯ ಶ್ರೀನಿವಾಸಪುರ, ಮುಳಬಾಗಿಲು, ಚಿತ್ತೂರು ಜಿಲ್ಲೆಯ ಹಳ್ಳಿಗಳು ಇದರಲ್ಲಿದ್ದವು. ವೈದುಂಬರ ಮತ್ತು ಬಾಣರ ಮಧ್ಯೆ ಈ ಪ್ರದೇಶಕ್ಕಾಗಿ ಕಾಳಗಗಳು ನಿರಂತರವಾಗಿ ನಡೆದಿರುವುದನ್ನು ತುರುಗೋಳ್ ಶಾಸನಗಳು ಹೇಳುತ್ತವೆ.

**ಎಮ್ಮೆದೆಲೆ-೬೦೦೦**

ಈ ವಿಭಾಗವು ಕರ್ನೂಲು, ಪ್ರಕಾಶಂ ಮತ್ತು ಗುಂಟೂರು ಜಿಲ್ಲೆಯ ವ್ಯಾಪ್ತಿಯನ್ನು ಹೊಂದಿತ್ತು.[೪೯೬] ಕರ್ನೂಲು ಜಿಲ್ಲೆಯ ತ್ರಿಪುರಾಂತಕದ ಶಾಸನ ಈ ಆಡಳಿತ ವಿಭಾಗದ ಬಗ್ಗೆ ಹೇಳುತ್ತದೆ.

**ಕೊಂಡಪಳ್ಳಿ-೩೦೦**

ಕೊಂಡಪಳ್ಳಿ-೩೦೦ ಎಮ್ಮೆದೆಲೆ-೩೦೦೦ ವಿಭಾಗದ ಉಪವಿಭಾಗವಾಗಿದೆ. ಕ್ರಿ.ಶ. ೧೧೨೬ರ ತ್ರಿಪುರಾಂತಕದ ಶಾಸನ ಈ ವಿಭಾಗದ ಮೇಲೆ ಬೆಳಕು ಚೆಲ್ಲುತ್ತದೆ. ಪಿಟ್ಟಮಪೂಳಿ, ಚರುನಾಡು-೧೨, ಕನ್ನೆ-೩೦೦, ಅಳಂಪುರ-೩೦, ನರವಾಡಿ/ನಳವಾಡಿ-೫೦೦.[೪೯೭]

ನಳವಾಡಿ-೫೦೦ ವಿಭಾಗವು ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯಲ್ಲಿ ಹರಿಯುವ ತುಂಗಭದ್ರಾ ನದಿಯ ದಕ್ಷಿಣ ದಂಡೆಯ ಮೇಲಿನ ಹಳ್ಳಿಗಳು ಈ ವಿಭಾಗದಲ್ಲಿ ಸೇರಿದ್ದವು.

**ರೇನಾಡು-೭೦೦೦**

ಈ ಪ್ರದೇಶವನ್ನು ಶಾಸನಗಳು ಎರುಮೆನಾಡು, ಎರುಮೈನಾಡು ಎಂದು ಕರೆದಿವೆ. ಚಿತ್ತೂರು, ನೆಲ್ಲೂರು, ಕಡಪ ಜಿಲ್ಲೆಯ ಭಾಗಗಳನ್ನು ಹೊಂದಿತ್ತು. ಈ ಆಡಳಿತ ವಿಭಾಗದಲ್ಲಿ ನಾಲ್ಕು ಸಾಸಿರ, ಪೆಡಕಲ್ಲು-೮೦೦, ಮೂಲ್ಕಿ-೫೦೦ ಪತ್ತುಪಾಳನಾಟ್ಟು, ಹೊನ್ನವಾಡಿ, ಮಡಂಬ-೫೦೦, ಮಡಂಬೂರು-೧೨, ರೇನಾಡು-೭೦ ಮೊದಲಾದ ಆಡಳಿತ ಉಪವಿಭಾಗಗಳು ಇದರಲ್ಲಿದ್ದವು.[೪೯೮]

ನೊಳಂಬ ಪಲ್ಲವರ ಕಾಲಕ್ಕಿದ್ದ ಈ ಆಡಳಿತ ವಿಭಾಗಗಳು ಉಚ್ಚಂಗಿ ಪಾಂಡ್ಯರ ಅಸಮರ್ಥತೆಯಿಂದಾಗಿ ಅವರ ಆಡಳಿತದಿಂದ ಕೈತಪ್ಪಿರಲಿಲ್ಲ. ಅವರು ನೊಳಂಬವಾಡಿ ಅಧಿಕಾರಕ್ಕೆ ಪಡೆಯುವ ಮೊದಲೇ ಈ ಪ್ರದೇಶಗಳು ನೊಳಂಬವಾಡಿ ಪ್ರಾಂತ್ಯದಿಂದ ದೂರವಾಗಿದ್ದವು. ಚೋಳ, ಬಾಣರು ಮತ್ತು ಮೈದುಂಬರಸರ ವಶದಲ್ಲಿ ಸೇರಿರುವುದನ್ನು ಶಾಸನಗಳು ತಿಳಿಸುತ್ತವೆ. ನೊಳಂಬರು ತಮ್ಮ ರಾಜಧಾನಿಯನ್ನು ಹೆಂಜೇರುವಿನಿಂದ ಬಳ್ಳಾರಿ ಜಿಲ್ಲೆಯ ಕಂಪಿಲೆಗೆ ವರ್ಗಾಯಿಸಿದ ಮೇಲೆ ಆನಂತರ ಈ ಪ್ರದೇಶಗಳು ನೊಳಂಬವಾಡಿಯಿಂದ ದೂರವಾಗಿರಬೇಕು ಮತ್ತು ಚಾಳುಕ್ಯ ಸಹೋದರರ ರಾಜಕೀಯ ಗುದ್ದಾಟದಲ್ಲಿ ಚೋಳರು ಇಲ್ಲಿ ನೆಲೆ

ಕಂಡುಕೊಂಡಿರಬೇಕು. ಇಂತಹ ಕಾರಣಗಳು ಏನೇ ಇದ್ದರೂ ಪಾಂಡ್ಯರು ಅಧಿಕಾರ ವಹಿಸಿಕೊಳ್ಳುವ ಕಾಲಕ್ಕೆ ಇದ್ದ ನೊಳಂಬವಾಡಿ-೩೨೦೦೦ ವಿಭಾಗದ ಭೌಗೋಳಿಕ ವ್ಯಾಪ್ತಿ. ಅವರ ಆಳ್ವಿಕೆಯ ಅಂತ್ಯ ಕಾಲದವರೆಗೂ ಅದು ಸ್ಥಿರವಾಗಿತ್ತು. ಹಾಗಾಗಿ ಹೊಯ್ಸಳರಿಂದ ಕೆಲವು ಭಾಗಗಳ ಮೇಲೆ ಆಕ್ರಮಣಗಳು ನಡೆದಿದ್ದರೂ ಅವುಗಳು ಹೊಯ್ಸಳರ ಪರವಾಗಲಿಲ್ಲ. ನೊಳಂಬರು ಮತ್ತು ಚಾಳುಕ್ಯ ರಾಜಕುಮಾರರ ಆಡಳಿತದಲ್ಲಿ ನೊಳಂಬವಾಡಿ ಕೆಲವು ಪ್ರದೇಶಗಳನ್ನು ಕಳೆದುಕೊಂಡಿದ್ದರು. ಪಾಂಡ್ಯರ ಕಾಲದಲ್ಲಿ ಗಂಗವಾಡಿ-೯೬೦೦೦ ಮತ್ತು ಬನವಾಸಿ-೧೨೦೦೦, ಸಾನ್ತಳಿಗೆ-೧೦೦೦ದ ಕೆಲವು ಉಪವಿಭಾಗಗಳು ಪಾಂಡ್ಯ ನಾಡಿನಲ್ಲಿ ಸೇರಿಕೊಂಡಿರುವುದು ಶಾಸನಗಳಿಂದ ತಿಳಿಯುತ್ತದೆ. ನೊಳಂಬರ ಕಾಲಕ್ಕೆ ಮಾನ್ಯತೆ ಪಡೆದಿದ್ದ ಕದಂಬಳಿಗೆ-೧೦೦೦, ಕೊರವಾಡಿ-೩೦೦, ಬಲ್ಲವಾಡಿ-೭೦, ಸಿಂದವಾಡಿ-೧೦೦೦, ಕುಕ್ಕವಾಡಿ-೩೦೦ ಮೊದಲಾದ ಕೆಲವು ವಿಭಾಗಗಳು ಪಾಂಡ್ಯರ ಆಡಳಿತ ಕಾಲಕ್ಕೆ ಕಣ್ಮರೆಯಾಗಿ ಕೋಗಳಿ-೫೦೦, ಬಲ್ಲಕುಂದೆ-೩೦೦, ಸಾನ್ತಳಿಗೆ-೧೦೦೦, ಹಡವಗೆರೆ-೫೦೦, ರೊದ್ದ-೩೦೦, ಸಿಂದವಾಡಿ-೩೦೦ ಮೊದಲಾದ ಆಡಳಿತ ವಿಭಾಗಗಳು ಹೆಚ್ಚು ಮಾನ್ಯತೆ ಪಡೆದುಕೊಂಡವು. ಉಚ್ಚಂಗಿ-೩೦, ಬೆಳ್ಳೂರು-೧೨ ವಿಭಾಗದ ಮುಖ್ಯ ಪಟ್ಟಣಗಳು ಪಾಂಡ್ಯರ ರಾಜಧಾನಿ ಕೇಂದ್ರಗಳಾಗಿ ಗುರುತಿಸಿಕೊಂಡವು.

ಉಚ್ಚಂಗಿ ಪಾಂಡ್ಯರು ತಮ್ಮ ೧೫೦ ವರ್ಷಗಳ ಆಡಳಿತದಲ್ಲಿ ತಮ್ಮ ಅಧೀನಕ್ಕಿದ್ದ ಪಾಂಡ್ಯನಾಡಿನ ಒಟ್ಟು ಭೌಗೋಳಿಕ ವ್ಯಾಪ್ತಿಯಲ್ಲಿದ್ದ ಉಪ ವಿಭಾಗಗಳ ಆಡಳಿತವನ್ನು ಮಹಾಮಂಡಳೇಶ್ವರರಾದ ಕೊಟ್ಟೂರಿನ ಕದಂಬರು, ಕುರುಗೋಡು ಸಿಂಧರು, ಬೆಳಗುತ್ತಿ ಸಿಂಧರು, ಗುತ್ತ ಹೊಳಲಿನ ಗುತ್ತರು, ಸಾಮಂತರಾದ ಗಂಗರಸ, ಮಲ್ಲಿದೇವ, ಉದಯಾದಿತ್ಯ, ಕಾಮಯ್ಯನಾಯಕ ಹಾಗೂ ಕೆಲವು ಚಿಕ್ಕ ವಿಭಾಗಗಳಲ್ಲಿ ಸಾಮಂತರು, ದಂಡನಾಯಕ, ಸಂಧಿ ವಿಗ್ರಹಿ, ಹೆಗ್ಗಡೆ ಮೊದಲಾದ ಆಡಳಿತ ವರ್ಗದವರಿಗೆ ವಹಿಸಿಕೊಡಲಾಗಿತ್ತು. ನೊಳಂಬರ ಕಾಲದಲ್ಲಿ ಮನ್ನೆಯ, ಹೆಗ್ಗಡೆ ಸ್ಥಾನದಲ್ಲಿದ್ದವರು ಪಾಂಡ್ಯರ ಕಾಲದಲ್ಲಿ ಮಹಾಮಂಡಳೇಶ್ವರ, ಸಾಮಂತ, ದಂಡನಾಯಕರಾಗಿ ಪದನ್ನೋತಿ ಪಡೆದು ಆಡಳಿತ ಉಪವಿಭಾಗಗಳಲ್ಲಿ ತಮ್ಮ ಪಾರಂಪರಿಕ ಆಡಳಿತವನ್ನು ಗಟ್ಟಿಗೊಳಿಸಿಕೊಂಡಿದ್ದರು. ಕೆಲವು ಮನೆತನಗಳೊಂದಿಗೆ ವೈವಾಹಿಕ ಸಂಬಂಧಗಳನ್ನು ಬೆಳೆಸಿಕೊಂಡು ಪಾಂಡ್ಯನಾಡಿನ ಭೌಗೋಳಿಕ ವ್ಯಾಪ್ತಿಯನ್ನು ಭದ್ರಪಡಿಸಿಕೊಂಡು ಚಾಳುಕ್ಯ ಅರಸರ ವಿಶ್ವಾಸ ಗೆದ್ದು ಅವರ ಸಾಮ್ರಾಜ್ಯದ ರಕ್ಷರಾಗಿ, ಹೊಯ್ಸಳ ಅರಸರ ಶತ್ರುಗಳಾಗಿ ನೊಳಂಬವಾಡಿಯ ಚರಿತ್ರೆಯಲ್ಲಿ ಕಾಣಿಸಿಕೊಂಡರು. ಮುಂದೆ ಹೊಯ್ಸಳರು ಪಾಂಡ್ಯರ ಮೇಲಿನ ವಿಜಯದ ಪ್ರತಿಷ್ಠೆಗಾಗಿ ಈ ಆಡಳಿತ ವಿಭಾಗವನ್ನು 'ಪಾಂಡ್ಯನಾಡು' ಎಂದು ಮರುನಾಮಕರಣ ಮಾಡಿದರು. ವಿಜಯನಗರ ಸಾಮ್ರಾಜ್ಯದ ಆಡಳಿತ ಕಾಲಕ್ಕೂ ಈ ಹೆಸರೇ ಮುಂದುವರೆದಿದೆ.

ಆಡಳಿತ ವಿಭಾಗಗಳಲ್ಲಿನ ಗ್ರಾಮಗಳನ್ನು ಗುರುತಿಸಿ, ನಿರ್ದಿಷ್ಟ ಗಡಿ ಮೇರೆಗಳನ್ನು ಗುರುತಿಸಬೇಕಿದೆ. ಅದರೊಂದಿಗೆ ಅಲ್ಲಿನ ರಾಜಕೀಯ, ಸಾಂಸ್ಕೃತಿಕ ಚರಿತ್ರೆಯ ಬದಲಾವಣೆಗಳನ್ನು

ಕಟ್ಟಿಕೊಡುವ ಮೂಲಕ ಈ ವಿಭಾಗಗಳ ಕಲೆ ಮತ್ತು ವಾಸ್ತುಶಿಲ್ಪ, ಆರ್ಥಿಕ ಸ್ಥಿತಿಗತಿ, ಸಾಮಾಜಿಕ, ಧಾರ್ಮಿಕ ಶಿಕ್ಷಣ, ನಗರಾಡಳಿತ, ನಗರೀಕರಣ ಮುಂತಾದ ವಿಷಯಗಳನ್ನು ವಿಸ್ತೃತವಾಗಿ ಅಧ್ಯಯನ ಮಾಡಲು ಇಲ್ಲಿ ಅವಕಾಶಗಳಿವೆ. ಪ್ರಾಚೀನ ಆಡಳಿತ ವಿಭಾಗಗಳ ಚಾರಿತ್ರಿಕ ಭೂಗೋಳದ ಸಮಗ್ರ ಅಧ್ಯಯನ ಇನ್ನೂ ರೂಪುಗೊಂಡಿಲ್ಲ. ಸಂಶೋಧಕರು ಈ ದಿಸೆಯಲ್ಲಿ ಅಧ್ಯಯನ ಕೈಗೊಳ್ಳುವ ಅಗತ್ಯವಂತೂ ಇದ್ದೇ ಇದೆ.

**ಕೊನೆ ಟಿಪ್ಪಣಿಗಳು**

೧. ಅಂತರ್ಜಾಲ, ವಿಕಿಪಿಡಿಯಾ

೨. ಅದೇ.

೩. ಅಂಬಳಿಕೆ ಹಿರಿಯಣ್ಣ(ಪ್ರ.ಸಂ.), ೨೦೦೯, ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ, ಪು. ೫೭೫.

೪. ಅದೇ, ಪು. ೫೭೫.

೫. ಗಣಪತಿಗೌಡ, ೨೦೦೭, ಶಿಸುಗಲಿ ಪಾಂಡ್ಯರು ಮತ್ತು ಚಂದಾವರ ಕದಂಬರು, ಪು. ೧೭.

೬. ಅಂರ್ತಜಾಲ ವಿಕಿಪಿಡಿಯಾ.

೭. ಅದೇ.

೮. ಅದೇ.

೯. ಅಂಬಳಿಕೆ ಹಿರಿಯಣ್ಣ(ಪ್ರ.ಸಂ.), ೨೦೦೯, ಪೂರ್ವೋಕ್ತ, ಪು. ೫೭೫.

೧೦. ಅದೇ, ಪು. ೫೭೭.

೧೧. ಕೃಷ್ಣರಾವ್ ಎಂ.ವಿ. ಮತ್ತು ಕೇಶಭಟ್ಟ, ಕರ್ನಾಟಕದ ಇತಿಹಾಸ ದರ್ಶನ, ಪು. ೨೦೩.

೧೨. ಕರ್ನಾಟಕ ಪರಂಪರೆ, ಸಂಪುಟ-೧, ಆದಿಕಾಲ-೨೦೧೪, ಪು. ೨೪೨.

೧೩. ಅದೇ, ಪು. ೨೪೪.

೧೪. ಅದೇ, ಪು. ೨೪೯.

೧೫. ಅದೇ, ಪು. ೨೫೧.

೧೬. ಗಣಪತಿಗೌಡ, ೨೦೦೭, ಪೂರ್ವೋಕ್ತ, ಪು. ೧೩.

೧೭. ಅದೇ, ಪು. ೧೩.

೧೮. ಅದೇ, ಪು. ೧೫

೧೯. EC-XI ಶಾ.ಸಂ. ೩೯, ಹರಿಹರ, ಹರಿಹರ (ತಾ).

೨೦. ಕ.ವಿ.ಶಾ.ಸಂ.-೧, ಶಾ.ಸಂ.೮೯, ನೀಲಗುಂದ ಹರಪನಹಳ್ಳಿ (ತಾ).

೨೧. ಪಾದೇಕಲ್ಲು ವಿಷ್ಣುಭಟ್ಟ, ಶಾಬ್ದಾರ್ಥ ಶೋಧ, ೨೦೦೮, ಪು. ೯೫.

೨೨. ಅದೇ, ಪು. ೯೯.

೨೩. ಸೋಮಶೇಖರ್ ಎಸ್.ವೈ., ೨೦೧೪, ಕರ್ನಾಟಕದ ಬಿರುದಾವಳಿಗಳು, ಪು. ೭೮.

೨೪. ಇ.ದ.ಸಂ.೧೮, ಪು. ೬೨.

೨೫. ಅದೇ, ಪು. ೬೨.

೨೬. ಅಂತರ್ಜಾಲ ವಿಕಿಪಿಡಿಯಾ.

೨೭. ಅದೇ.

೨೮. ಎ.ಕ.ಸಂ.೧೦, ಶಾ.ಸಂ. ೩೨೧, ಕಾಟಿಕೆರೆ, ಅರಸೀಕೆರೆ (ತಾ).

೨೯. ಪಾದೇಕಲ್ಲು ವಿಷ್ಣುಭಟ್ಟ, ಅದೇ, ಪು. ೯೮.

೩೦. ಗಣಪತಿಗೌಡ, ೨೦೦೭, ಪೂರ್ವೋಕ್ತ, ಪು. ೪.

೩೧. EC-XI ಶಾ.ಸಂ. ೪೧, ಹರಿಹರ, ಹರಿಹರ (ತಾ).

೩೨. ಎ.ಕ.ಸಂ.೧೦, ಶಾ.ಸಂ. ೩೨೧, ಕಾಟಿಕೆರೆ, ಅರಸೀಕೆರೆ (ತಾ).

೩೩. EC-XI, ಶಾ.ಸಂ. ೪೧, ಹರಿಹರ, ಹರಿಹರ (ತಾ).

ಹರಿಹರದ ಶಾ.ಸಂ. ೩೯-೪೦, ಬಾಗಳಿ, ಕಾಟಿಕೆರೆ ಶಾಸನಗಳು ಪಲತಪಾಂಡ್ಯನ ಬಗ್ಗೆ ತಿಳಿಸುತ್ತವೆ. ಸರ್ವಾಧ್ಯಕ್ಷ ದ್ರಾವಿಡದಿತ್ಯಪೇರಿತ ಪಲಿತ ಅಥವಾ ಪಳತ್ತಪಾಂಡ್ಯನ ಪುತ್ರ ರಾಯಪಾಂಡ್ಯನ ಕೋರಿಕೆಯಂತೆ ಕೃಷ್ಣಪಲ್ಲಿಕೆಯನ್ನು ಬ್ರಾಹ್ಮಣರಿಗೆ ದಾನ ಮಾಡಿದ.

ಪಲಮಾಂದ ಪಾಂಡ್ಯನನ್ನು ಪಾಂಡ್ಯ ನೃಪಾಲನೆಂದು ಕಾಟಿಕೆರೆ ಶಾಸನ ಪ್ರಚಂಡ ಪಾಂಡ್ಯನೆಂದು ಉಲ್ಲೇಖಿಸಿವೆ. ಬಾಗಳಿ, ಹರಿಹರ, ಲೋಕಿಕೆರೆ ಶಾಸನಗಳಲ್ಲಿ ಇವನ ಕುರಿತು ಹೇಳುವುದಿಲ್ಲ.

೩೪. ಕ.ವಿ.ಶಾ.ಸಂ.-೧, ಶಾ.ಸಂ.೧೧೮, ಬಾಗಳಿ, ಹರಪನಹಳ್ಳಿ (ತಾ).

೩೫. ಕ.ವಿ.ಶಾ.ಸಂ.-೧, ಶಾ.ಸಂ.೮೯, ನೀಲಗುಂದ, ಹರಪನಹಳ್ಳಿ (ತಾ).

೩೬. EC-XI, ಶಾ.ಸಂ. ೩೯, ಹರಿಹರ, ಹರಿಹರ (ತಾ).

೩೭. ಅದೇ.

೩೮. EC-XI, ಶಾ.ಸಂ. ೫೬, ಹಿರೇಯಮ್ಮಿಗನೂರು, ಹೊಳಲಕೆರೆ (ತಾ).

೩೯. ಅದೇ.

೪೦. ಅದೇ., ಶಾ.ಸಂ. ೪೧, ಹರಿಹರ, ಹರಿಹರ (ತಾ).

೪೧. ಅದೇ.

೪೨. ಅದೇ.

೪೩. ಅದೇ.

೪೪. EC-XI ಶಾ.ಸಂ. ೫೬, ಹಿರೇಯಮ್ಮಿಗನೂರು, ಹೊಳಲಕೆರೆ (ತಾ).

೪೫. ಕ.ವಿ.ವಿ.ಶಾ.ಸಂ. ೧, ಶಾ.ಸಂ. ೬, ಉಜ್ಜಿನಿ, ಕೂಡ್ಲಿಗಿ (ತಾ).

೪೬. ನಾಗರಾಜರಾವ್ ಎಂ.ಎಸ್., ೧೯೮೩, ದಿ ಚಾಲುಕ್ಯಸ್ ಆಫ್ ಕಲ್ಯಾಣ(ಸೆಮಿನಾರ್ ಪೇಪರ್ಸ್), ಪು. ೪೪.

೪೭. ಎ.ಕ.ಸಂ. ೧೦, ಶಾ.ಸಂ. ೩೨೧, ಕಾಟಿಕೆರೆ, ಅರಸೀಕೆರೆ (ತಾ).

೪೮. ಗೋಪಾಲ ಆರ್.(ಸಂ), ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು. ೭೫.

೪೯. ಕ.ವಿ.ವಿ.ಶಾ.ಸಂ. ೧, ಶಾ.ಸಂ. ೮೯, ನೀಲಗುಂದ, ಹರಪನಹಳ್ಳಿ (ತಾ).

೫೦. EC-II, ಶಾ.ಸಂ. ೫೬, ಹಿರೇಯಮ್ಮಿಗನೂರು, ಹೊಳಲ್ಕೆರೆ (ತಾ).

೫೧. ಕ.ವಿ.ವಿ.ಶಾ.ಸಂ. ೧, ಶಾ.ಸಂ. ೧೮೦, ಬಾಗಳಿ, ಹರಪನಹಳ್ಳಿ (ತಾ).

೫೨. ಕರಣಂ ವಿರೂಪಾಕ್ಷಗೌಡ, ಹೂವಿನಹಡಗಲಿ ತಾಲೂಕಿನ ಶಾಸನಗಳ ಸಮಗ್ರ ಅಧ್ಯಯನ, ಪು. ೧೬೪.

೫೩. ನಾಗಯ್ಯ ಜೆ.ಎಂ., ಪೂರ್ವೋಕ್ತ, ಪು. ೩.

೫೪. ಗೋಪಾಲ ಆರ್., ಪೂರ್ವೋಕ್ತ, ಪು. ೭೫.

೫೫. EC-XI, ಶಾ.ಸಂ. ೪೧, ಹರಿಹರ, ಹರಿಹರ (ತಾ).

೫೬. ಅದೇ.

೫೭. ಎ.ಕ.ಸಂ. ೧೦, ಶಾ.ಸಂ. ೩೨೧, ಕಾಟಿಕೆರೆ, ಅರಸೀಕೆರೆ (ತಾ).

೫೮. EC-XI, ಶಾ.ಸಂ.೪೧, ಹರಿಹರ, ಹರಿಹರ (ತಾ).

೫೯. ಅದೇ., ಶಾ.ಸಂ. ೩೯, ಹರಿಹರ, ಹರಿಹರ (ತಾ).

೬೦. ನಾಗರಾಜರಾವ್ ಎಂ.ಎಸ್., ಪೂರ್ವೋಕ್ತ, ಪು. ೪೫.

೬೧. ದೇಶಪಾಂಡೆ ರಾ.ಹ. ಕರ್ನಾಟಕ ಸಾಮ್ರಾಜ್ಯ ಸಂಪುಟ–೨, ಭಾಗ–೨, ಪು. ೨೫೭.

೬೨. ಅದೇ, ಪು. ೨೫೭

೬೩. EC-XI, ಶಾ.ಸಂ. ೩೯, ಹರಿಹರ, ಹರಿಹರ (ತಾ).

೬೪. ಎ.ಕ.ಸಂ. ೧೦, ಶಾ.ಸಂ. ೩೨೧, ಕಾಟಿಕೆರೆ ಅರಸೀಕೆರೆ (ತಾ).

೬೫. ನಾಗಯ್ಯ ಜೆ.ಎಂ., ಪೂರ್ವೋಕ್ತ, ಪು. ೧೦.

೬೬. ಅದೇ, ಪು. ೧೩.

೬೭. ಕ.ವಿ.ವಿ.ಶಾ.ಸಂ. ೧, ಶಾ.ಸಂ. ೫, ಅಂಬಳಿ, ಹರಿಹರ (ತಾ).

೬೮. ಅದೇ., ಶಾ.ಸಂ. ೮೯, ನೀಲಗುಂದ, ಹರಪನಹಳ್ಳಿ (ತಾ).

೬೯. EC-XI, ಶಾ.ಸಂ. ೫೬, ಹಿರೇಯಮ್ಮಿಗನೂರು, ಹೊಳಲ್ಕೆರೆ (ತಾ).

೭೦. ಕ.ವಿ.ವಿ.ಶಾ.ಸಂ.೧, ಶಾ.ಸಂ. ೮೩, ಹೂವಿನಹಡಗಲಿ, ಹೂವಿನಹಡಗಲಿ (ತಾ).

೭೧. ಅದೇ., ಶಾ.ಸಂ. ೩೫, ರಾಗಿಮಸಲವಾಡ, ಹರಪನಹಳ್ಳಿ (ತಾ).

೭೨. ಅದೇ., ಶಾ.ಸಂ. ೨, ಸಿರುಗುಪ್ಪ, ಸಿರುಗುಪ್ಪ (ತಾ).

೭೩. EC-XI, ಶಾ.ಸಂ. ೧೫೫, ಕಬ್ಬೂರು, ದಾವಣಗೆರೆ (ತಾ).

೭೪. ಕ.ವಿ.ವಿ.ಶಾ.ಸಂ.೧, ಶಾ.ಸಂ. ೫, ಅಂಬಳಿ, ಹಗರಿಬೊಮ್ಮನಹಳ್ಳಿ (ತಾ).

೭೫. ಅದೇ., ಶಾ.ಸಂ. ೮೮, ನೀಲಗುಂದ, ಹರಪನಹಳ್ಳಿ (ತಾ).

೭೬. ಅದೇ., ಶಾ.ಸಂ. ೨, ಶಾ.ಸಂ. ೧, ವಿಪ್ರ, ಗಂಗಾವತಿ (ತಾ).

೭೭. EC-XI, ಶಾ.ಸಂ. ೧೫೫, ಕಬ್ಬೂರು, ದಾವಣಗೆರೆ (ತಾ).

೭೮. ರೈಸ್ ಬಿ.ಎಲ್., ಮೈಸೂರು ಆ್ಯಂಡ್ ಕೂರ್ಗ್ ಪರಂ ದೀ ಇನ್‌ಸ್ಕ್ರಿಪ್ಸನ್, ಪು. ೧೫೧.

೭೯. ಕ.ವಿ.ವಿ.ಶಾ.ಸಂ.೧, ಶಾ.ಸಂ. ೩೫, ರಾಗಿಮಸಲವಾಡ, ಹರಪನಹಳ್ಳಿ (ತಾ).

೮೦. ನಾಗಯ್ಯ ಜೆ.ಎಂ., ಪೂರ್ವೋಕ್ತ, ಪು. ೧೮.

೮೧. ಅದೇ, ಪು. ೧೮.

೮೨. ಅದೇ, ಪು. ೧೯.

೮೩. ಅದೇ, ಪು. ೧೯.

೮೪. ಕ.ವಿ.ವಿ.ಶಾ.ಸಂ. ೧, ಶಾ.ಸಂ. ೩೫, ರಾಗಿಮಸಲವಾಡ, ಹರಪನಹಳ್ಳಿ (ತಾ).

೮೫. ಅದೇ., ಶಾ.ಸಂ. ೧೪೬, ಬಾಗಳಿ, ಹರಪನಹಳ್ಳಿ (ತಾ).

೮೬. EC-XI, ಶಾ.ಸಂ. ೧೯೧, ಅಲ್ಲೂರು, ದಾವಣಗೆರೆ (ತಾ).

೮೭. ಭಟ್‌ಸೂರಿ ಕೆ.ಜಿ.(ಸಂ), ಶಾಸನ ಅಧ್ಯಯನ, ಸಂಪುಟ–೨, ಸಂಚಿಕೆ–೨, ಪು. ೮೧.

೮೮. EC-XI, ಶಾ.ಸಂ. ೧೦೪, ಹುಣುವಿನೋಡು, ಹೊಳಲ್ಕೆರೆ (ತಾ).

೮೯. ನಾಗಯ್ಯ ಜೆ.ಎಂ., ಪೂರ್ವೋಕ್ತ, ಪು. ೨೨.

೯೦. ಸೂರ್ಯನಾಥ ಕಾಮತ್, ಇ.ದ.ಸಂ. ೧೦, ಪು. ೧೫೮.

೯೧. ಕ.ವಿ.ವಿ.ಶಾಸಂ. ೧, ಶಾ.ಸಂ. ೬೦, ಯರಬಾಳು, ಹರಪನಹಳ್ಳಿ (ತಾ).

೯೨. EC-XI, ಶಾ.ಸಂ. ೯೦, ಶಾಮನೂರು, ದಾವಣಗೆರೆ (ತಾ).

೯೩. ಕ.ವಿ.ವಿ.ಶಾ.ಸಂ.೧, ಶಾ.ಸಂ. ೮೯, ನೀಲಗುಂದ, ಹರಪನಹಳ್ಳಿ (ತಾ).

೯೪. EC-XI, ಶಾ.ಸಂ. ೬೮, ಗುಂಜಿಗನೂರು, ಹೊಳಲ್ಕೆರೆ (ತಾ).

೯೫. ಅದೇ. ಶಾ.ಸಂ. ೬೧, ಚನ್ನಗಿರಿ, ಚನ್ನಗಿರಿ (ತಾ).

೯೬. ಕ.ವಿ.ವಿ.ಶಾ.ಸಂ.೧, ಶಾ.ಸಂ. ೮೩, ಹೂವಿನಹಡಗಲಿ, ಹೂವಿನಹಡಗಲಿ (ತಾ).

೯೭. EC-XI, ಶಾ.ಸಂ. ೧೨, ಬೇತೂರು, ದಾವಣಗೆರೆ (ತಾ).

೯೮. ಕ.ವಿ.ವಿ.ಶಾ.ಸಂ. ೧, ಶಾ.ಸಂ. ೮೫, ಹೂವಿನಹಡಗಲಿ, ಹೂವಿನಹಡಗಲಿ (ತಾ).

೯೯. ಅದೇ, ಶಾ.ಸಂ. ೧೧೦, ಬಾಗಳಿ, ಹರಪನಹಳ್ಳಿ (ತಾ).

೧೦೦. EC-XI, ಶಾ.ಸಂ. ೩೩, ಗಾರೇಹಟ್ಟಿ, ಚಿತ್ರದುರ್ಗ (ತಾ).

೧೦೧. ಅದೇ, ಶಾ.ಸಂ. ೩೬, ಮದಕೆರೆಪುರ, ಚಿತ್ರದುರ್ಗ (ತಾ).

೧೦೨. ಅದೇ, ಶಾ.ಸಂ. ೯೦, ದಾವಣಗೆರೆ, ದಾವಣಗೆರೆ (ತಾ).

೧೦೩. ಅದೇ, ಶಾ.ಸಂ. ೧೨, ಬೇತೂರು, ದಾವಣಗೆರೆ (ತಾ).

೧೦೪. ಕ.ವಿ.ವಿ.ಶಾ.ಸಂ.೧, ಶಾ.ಸಂ. ೫, ಅಂಬಳಿ, ಹಗರಿಬೊಮ್ಮನಹಳ್ಳಿ (ತಾ).

೧೦೫. ಅದೇ, ಶಾ.ಸಂ.೭, ಉಚ್ಚಂಗಿದುರ್ಗ, ಹರಪನಹಳ್ಳಿ, ಪು. ೪೬೫.

೧೦೬. ಅದೇ, ಶಾ.ಸಂ. ೨, ಶಾ.ಸಂ.೧, ವಿಪ್ರ, ಗಂಗಾವತಿ (ತಾ).

೧೦೭. EC-XI, ಶಾ.ಸಂ. ೬೧, ಚನ್ನಗಿರಿ, ಚನ್ನಗಿರಿ (ತಾ).

೧೦೮. ಅದೇ, ಶಾ.ಸಂ. ೩೯, ಹರಿಹರ, ಹರಿಹರ (ತಾ).

೧೦೯. ಎ.ಕ.ಸಂ. ೧೦, ಶಾ.ಸಂ. ೩೨೧, ಕಾಟಿಕೆರೆ, ಅರಸೀಕೆರೆ (ತಾ).

೧೧೦. ಗೋಪಾಲ್ ಆರ್., ಪೂರ್ವೋಕ್ತ, ಪು. ೭೫-೭೬.

೧೧೧. EC-XI, ಶಾ.ಸಂ. ೩೬, ಮೆದಕೆರೆಪುರ, ಚಿತ್ರದುರ್ಗ (ತಾ).

೧೧೨. ಕ.ವಿ.ವಿ.ಶಾ.ಸಂ. ೧, ಶಾ.ಸಂ. ೮೯, ನೀಲಗುಂದ, ಹರಪನಹಳ್ಳಿ (ತಾ).

೧೧೩. ಅದೇ., ಶಾ.ಸಂ. ೮೫, ಹಡಗಲಿ, ಹಡಗಲಿ (ತಾ).

೧೧೪. EC-XI, ಶಾ.ಸಂ. ೧೨೨, ಜಿಗಳಿ, ಹರಿಹರ (ತಾ).

೧೧೫. ಕ.ವಿ.ವಿ.ಶಾ.ಸಂ. ೧, ಶಾ.ಸಂ. ೨೪, ರಾಮಘಟ್ಟ, ಹರಪನಹಳ್ಳಿ (ತಾ).

೧೧೬. EC-XI, ಶಾ.ಸಂ. ೬೮, ಗಂಜಿಗನೂರು, ಹೊಳಲ್ಕೆರೆ (ತಾ).

೧೧೭. ಅದೇ., ಶಾ.ಸಂ. ೯೦, ಶಾಮನೂರು, ದಾವಣಗೆರೆ (ತಾ).

೧೧೮. ಇ.ದ.ಸಂ. ೧೮, ಪು. ೬೨-೬೪.

೧೧೯. ದೇಶಪಾಂಡೆ ರಾ.ಹ., ಪೂರ್ವೋಕ್ತ, ಪು. ೩೦೭.

೧೨೦. ಎಂ.ವಿ. ಕೃಷ್ಣರಾವ್(ಸಂ), ಕರ್ನಾಟಕ ಇತಿಹಾಸ ದರ್ಶನ, ಪು. ೨೫೭.

೧೨೧. ಕ.ವಿ.ಶಾ.ಸಂ. ೧, ಶಾ.ಸಂ. ೨೪, ರಾಮಘಟ್ಟ, ಹರಪನಹಳ್ಳಿ (ತಾ).

೧೨೨. ಇ.ದ.ಸಂ. ೧೭, ಪು. ೫೯.

೧೨೩. EC-XI, ಶಾ.ಸಂ. ೧೨೨, ಜಿಗಳಿ, ಹರಿಹರ (ತಾ).

೧೨೪. ಕ.ವಿ.ಶಾ.ಸಂ. ೧, ಶಾ.ಸಂ. ೮೩, ನೀಲಗುಂದ, ಹರಪನಹಳ್ಳಿ (ತಾ).

೧೨೫. ಇ.ದ.ಸಂ. ೧೮, ಪು. ೬೫.

೧೨೬. EC-XI, ಶಾ.ಸಂ. ೧೨೨, ಜಿಗಳಿ, ಹರಿಹರ (ತಾ).

೧೨೭. ಕ.ವಿ.ವಿ. ಶಾ.ಸಂ. ೧, ಶಾ.ಸಂ. ೨೪, ರಾಮಘಟ್ಟ, ಹರಪನಹಳ್ಳಿ (ತಾ).

೧೨೮. EC-XI, ಶಾ.ಸಂ. ೪೧, ಹರಿಹರ, ಹರಿಹರ (ತಾ).

೧೨೯. ಅದೇ, ಶಾ.ಸಂ. ೩೯, ಹರಿಹರ, ಹರಿಹರ (ತಾ).

೧೩೦. ಅದೇ, ಶಾ.ಸಂ. ೪೧ ಹರಿಹರ, ಹರಿಹರ (ತಾ).

೧೩೧. ಅದೇ, ಶಾ.ಸಂ. ೩೯, ಹರಿಹರ, ಹರಿಹರ (ತಾ).

೧೩೨. ಶಂಕರನಾರಾಯಣರಾವ್ ಎಚ್.ಎಂ., ಶ್ರೀ ಹರಿಹರ ದೇವಾಲಯ, ಪು. ೧೮೭.

೧೩೩. ಕ.ವಿ.ವಿ.ಶಾ.ಸಂ. ೧, ಶಾ.ಸಂ. ೧೮೦, ಬಾಗಳಿ, ಹರಪನಹಳ್ಳಿ (ತಾ).

೧೩೪. EC-XI ಶಾ.ಸಂ.೪ ಆನೆಕೊಂಡ. ದಾವಣಗೆರೆ (ತಾ).

೧೩೫. ಅದೇ, ಶಾ.ಸಂ. ೪೧, ಹರಿಹರ, ಹರಿಹರ (ತಾ).

೧೩೬. ಕ.ವಿ.ಶಾ.ಸಂ. ೧, ಶಾ.ಸಂ. ೩೬, ಹೊಳಲು, ಹಡಗಲಿ, ಪು. ೩೪೧.

೧೩೭. ಅದೇ., ಶಾ.ಸಂ. ೬. ಅಂಬಳಿ, ಹಗರಿಬೊಮನಹಳ್ಳಿ (ತಾ).

೧೩೮. EC-XI, ಶಾ.ಸಂ. ೭, ದೊಡ್ಡಬಾಣಗೆರೆ, ಶಿರಾ (ತಾ).

೧೩೯. ಕ.ವಿ.ಶಾ.ಸಂ. ೧, ಶಾ.ಸಂ. ೧೧೫, ಬಾಗಳಿ, ಹರಪನಹಳ್ಳಿ (ತಾ).

೧೪೦. ಅದೇ., ಶಾ.ಸಂ. ೧೮೪ ಬಾಗಳಿ ಹರಪನಹಳ್ಳಿ (ತಾ).

೧೪೧. ಕರ್ನಾಟಕ ಪರಂಪರೆ, ಸಂ. ೧, ಪು. ೩೪೦.

೧೪೨. ಅದೇ, ಪು. ೩೪೦.

೧೪೩. ಕ.ವಿ.ಶಾ.ಸಂ. ೧, ಶಾ.ಸಂ. ೩೭, ದುಗ್ಗಾವತಿ, ಹರಪನಹಳ್ಳಿ (ತಾ).

೧೪೪. ಅದೇ, ಶಾ.ಸಂ. ೭೯, ನೀಲಗುಂದ ಹರಪನಹಳ್ಳಿ (ತಾ).

೧೪೫. ಕೃಷ್ಣರಾವ್ ಎಂ.ವಿ., ಪೂರ್ವೋಕ್ತ, ಪು. ೨೫೦.

೧೪೬. ಸೋಮಶೇಖರ್ ಎಸ್.ವೈ., ಕರ್ನಾಟಕದ ಬಿರುದಾವಳಿಗಳು, ಪು. ೧೨೬-೧೨೭.

೧೪೭. ಅದೇ, ಪು. ೧೨೬-೧೨೭.

೧೪೮. ನಂದೀಶ್ವರ ಎನ್, ಶಿರಾ ತಾಲೂಕಿನ ಸ್ಮಾರಕಗಳು ಹಾಗೂ ಶಾಸನಗಳು, ಪು. ೨೦೨.

೧೪೯. ಕೃಷ್ಣರಾವ್ ಎಂ.ವಿ. ಪೂರ್ವೋಕ್ತ, ಪು. ೨೫೧.

೧೫೦. ಕರಣಂ ವಿರೂಪಾಕ್ಷಗೌಡ, ಪೂರ್ವೋಕ್ತ, ಪು. ೧೬೪

೧೫೧. ಕ.ವಿ.ಶಾ.ಸಂ. ೧, ಶಾ.ಸಂ.೬ ಅಂಬಳಿ, ಹಗರಿಬೊಮ್ಮನಹಳ್ಳಿ (ತಾ).

೧೫೨. ಅದೇ, ಶಾ.ಸಂ. ೭ ಅಂಬಳಿ, ಹಗರಿಬೊಮ್ಮನಹಳ್ಳಿ (ತಾ).

೧೫೩. ಅದೇ, ಶಾ.ಸಂ. ೨೨ ಉಲವತ್ತಿ, ಹಗರಿಬೊಮ್ಮನಹಳ್ಳಿ (ತಾ).

೧೫೪. ಅದೇ, ಶಾ.ಸಂ. ೧೧೫, ಬಾಗಳಿ, ಹರಪನಹಳ್ಳಿ (ತಾ).

೧೫೫. ಅದೇ, ಶಾ.ಸಂ. ೨೦೭, ಕೆರೆಗುಡಿಹಳ್ಳಿ, ಹರಪನಹಳ್ಳಿ (ತಾ).

೧೫೬ EC-XI ಶಾ.ಸಂ. ೩೮, ಅಸ್ತಾಪುರ, ಚನ್ನಗಿರಿ (ತಾ).

೧೫೭ ಕ.ವಿ.ಶಾ.ಸಂ. ೧, ಶಾ.ಸಂ. ೭೯, ನೀಲಗುಂದ, ಹರಪನಹಳ್ಳಿ (ತಾ).

೧೫೮. ಅದೇ, ಶಾ.ಸಂ. ೪೯, ಅಲಗಿಲವಾಡ, ಹರಪನಹಳ್ಳಿ (ತಾ).

೧೫೯. EC-XI ಶಾ.ಸಂ. ೮೪ ಗಂಗನರಸಿ, ಹರಿಹರ (ತಾ).

೧೬೦. ಕ.ವಿ.ಶಾ.ಸಂ. ೧, ಶಾ.ಸಂ. ೧, ಚಟ್ನಹಳ್ಳಿ, ಹರಪನಹಳ್ಳಿ (ತಾ).

೧೬೧. EC-XI ಶಾ.ಸಂ. ೪೧, ಹರಿಹರ, ಹರಿಹರ (ತಾ).

೧೬೨. ಅದೇ, ಶಾ.ಸಂ. ೩೯, ಹರಿಹರ, ಹರಿಹರ (ತಾ).

೧೬೩. ಶಂಕರನಾರಾಯಣ ರಾವ್ ಎಚ್.ಎಂ., ಪೂರ್ವೋಕ್ತ, ಪು. ೧೮೭-೧೮೯.

೧೬೪. EC-XI, ಶಾ.ಸಂ. ೪೧, ಹರಿಹರ, ಹರಿಹರ (ತಾ).

೧೬೫. ಅದೇ, ಶಾ.ಸಂ. ೮೬, ಗಂಗನರಸಿ, ಹರಿಹರ (ತಾ).

೧೬೬. ಅದೇ, ಶಾ.ಸಂ. ೧೫೫, ವಾಸನ, ಹರಿಹರ (ತಾ).

೧೬೭. ಕ.ವಿ.ಶಾ.ಸಂ. ೧, ಶಾ.ಸಂ. ೧೮೦, ಬಾಗಳಿ, ಹರಪನಹಳ್ಳಿ (ತಾ).

೧೬೮. ಇ.ದ.ಸಂ. ಪು. ೨೬.

೧೬೯. EC-XI ಶಾ.ಸಂ. ೧೩, ಚಿತ್ರದುರ್ಗ, ಚಿತ್ರದುರ್ಗ (ತಾ).

೧೭೦. ನಾಗಯ್ಯ ಜೆ.ಎಂ., ಪೂರ್ವೋಕ್ತ, ಪು. ೪೯.

೧೭೧. EC-XI ಶಾ.ಸಂ. ೧೫೫, ಕಬ್ಬೂರು, ಜಗಳೂರು (ತಾ).

೧೭೨. ಅದೇ., ಶಾ.ಸಂ. ೪೩, ಹರಿಹರ, ಹರಿಹರ (ತಾ).

೧೭೩. ಕ.ವಿ.ಶಾ.ಸಂ.೧, ಶಾ.ಸಂ. ೯೨, ಮಾಡಲಗೆರೆ, ಹರಪನಹಳ್ಳಿ, ಪು. ೫೪೭.

೧೭೪. EC-XI ಶಾ.ಸಂ. ೩೩, ಗಾರೇಹಟ್ಟಿ, ಚಿತ್ರದುರ್ಗ (ತಾ).

೧೭೫. ದೇಶಪಾಂಡೆ ರಾ.ಹ., ಪೂರ್ವೋಕ್ತ, ಪು. ೩೩೦.

೧೭೬. ಅದೇ, ಪು. ೩೩೦.

೧೭೭. EC-XI ಶಾ.ಸಂ. ೧೨, ಬೆತೂರು, ದಾವಣಗೆರೆ (ತಾ).

೧೭೮. ಅದೇ. ಶಾ.ಸಂ. ೮, ಚದುರುಗೊಳ, ಜಗಳೂರು (ತಾ).

೧೭೯. ಇ.ದ.ಸಂ ೨೯. ಪು. ೨೬.

೧೮೦. EC-XI ಶಾ.ಸಂ. ೩೩, ಗಾರೇಹಟ್ಟಿ, ಚಿತ್ರದುರ್ಗ (ತಾ).

೧೮೧. ಕ.ವಿ.ಶಾ.ಸಂ.೧, ಶಾ.ಸಂ. ೬೧, ಮಾನ್ಯರಮಸಲವಾಡ, ಹಡಗಲಿ (ತಾ).

೧೮೨. ದೇವರಾಜಸ್ವಾಮಿ ಜಿ.ಕೆ., ಕಳಚೂರಿ ಶಾಸನಗಳು, ಶಾ.ಸಂ. ೨೬೫, ಪು. ೫೧೭

೧೮೩ ಅದೇ, ಶಾ.ಸಂ. ೩೨೭, ಪು. ೬೪೪.

೧೮೪. ಕ.ವಿ.ಶಾ.ಸಂ.೧, ಶಾ.ಸಂ. ೭, ಕುರುಗೋಡು, ಬಳ್ಳಾರಿ (ತಾ).

೧೮೫. ಕೃಷ್ಣರಾವ್ ಎಂ.ವಿ., ಪೂರ್ವೋಕ್ತ, ಪು. ೨೦೯.

೧೮೬. ಸೋಮಶೇಖರ್ ಎಸ್.ವೈ., ಪೂರ್ವೋಕ್ತ, ಪು. ೧೩೦.

೧೮೭. ಅದೇ, ಪು. ೧೩೪.

೧೮೮. ನಂದೀಶ್ವರ ಎನ್., ಪೂರ್ವೋಕ್ತ, ಪು. ೨೦೨.

೧೮೯. EC-XI, ಶಾ.ಸಂ. ೧೬, ಯರಬಳ್ಳಿ, ಹಿರಿಯೂರು (ತಾ).

೧೯೦. ಬ್ರಹ್ಮಪ್ಪ ಜಿ., ಶ್ರವಣಬೆಳಗೊಳದ ಶಾಸನಗಳು, ಪು. ೧೧೩.

೧೯೧. ಕ.ವಿ.ಶಾ.ಸಂ.೧, ಶಾ.ಸಂ. ೬೧, ಮಾನ್ಯರಮಸಲವಾಡ, ಹಡಗಲಿ (ತಾ).

೧೯೨. ಅದೇ, ಶಾ.ಸಂ. ೧೧೬, ಬಾಗಳಿ, ಹರಪನಹಳ್ಳಿ (ತಾ).

೧೯೩. ಅದೇ, ಶಾ.ಸಂ. ೫, ಕುರುವತ್ತಿ, ಹಡಗಲಿ (ತಾ).

೧೯೪. ಅದೇ, ಶಾ.ಸಂ. ೬, ಕುರುವತ್ತಿ, ಹಡಗಲಿ (ತಾ).

೧೯೫. ಅದೇ, ಶಾ.ಸಂ. ೯೨ ಮಾಡಲಗೆರೆ, ಹರಪನಹಳ್ಳಿ (ತಾ).

೧೯೬. EC-XI, ಶಾ.ಸಂ. ೩೩ ಗಾರೇಹಟ್ಟಿ, ಚಿತ್ರದುರ್ಗ (ತಾ).

೧೯೭. ಅದೇ, ಶಾ.ಸಂ. ೭೧, ಯಳಗೊಡ, ಚಿತ್ರದುರ್ಗ (ತಾ).

೧೯೮. ಕ.ವಿ.ಶಾ.ಸಂ.೧, ಶಾ.ಸಂ.೧೭, ಕುರವತ್ತಿ, ಹಡಗಲಿ (ತಾ).

೧೯೯. EC-XI, ಶಾ.ಸಂ. ೧೩, ಚಿತ್ರದುರ್ಗ, ಚಿತ್ರದುರ್ಗ (ತಾ).

೨೦೦. ಅದೇ, ಶಾ.ಸಂ. ೩೩, ಗಾರೇಹಟ್ಟಿ, ಚಿತ್ರದುರ್ಗ (ತಾ).

೨೦೧. ಅದೇ, ಶಾ.ಸಂ. ೬, ಆನೆಕೊಂಡ, ದಾವಣಗೆರೆ (ತಾ).

೨೦೨. ಕ.ವಿ.ಶಾ.ಸಂ. ೧, ಶಾ.ಸಂ. ೩೯, ಹೊಳಲು, ಹಡಗಲಿ (ತಾ).

೨೦೩. ಅದೇ, ಶಾ.ಸಂ. ೯೨, ಮಾಡಲಗೆರೆ, ಹರಪನಹಳ್ಳಿ (ತಾ).

೨೦೪. ಇ.ದ.ಸಂ. ೨೬, ಪು. ೨೦೪.

೨೦೫. EC-XI, ಶಾ.ಸಂ. ೩೯, ಹರಿಹರ, ಹರಿಹರ (ತಾ).

೨೦೬. ಕ.ವಿ.ಶಾ.ಸಂ. ೧, ಶಾ.ಸಂ. ೬, ಕುರುವತ್ತಿ, ಹಡಗಲಿ (ತಾ).

೨೦೭. ಅದೇ, ಶಾ.ಸಂ. ೬ ಉಜ್ಜಿನಿ, ಕೂಡ್ಲಿಗಿ (ತಾ).

೨೦೮. EC-XI, ಶಾ.ಸಂ. ೩೯, ಹರಿಹರ, ಹರಿಹರ (ತಾ).

೨೦೯. ಎ.ಕ.ಸಂ.೧೦ ಶಾ.ಸಂ. ೩೨೧. ಕಾಟಿಕೆರೆ, ಅರಸೀಕೆರೆ (ತಾ).

೨೧೦. ಅದೇ.

೨೧೧. ಅದೇ.

೨೧೨. ಅದೇ.

೨೧೩. ಕ.ವಿ.ಶಾ.ಸಂ.೨, ಶಾ.ಸಂ. ೧, ವಿಪ್ರ, ಗಂಗಾವತಿ (ತಾ).

೨೧೪. EC-XI, ಶಾ.ಸಂ. ೧೩೯ ಬಾಡ, ಹರಿಹರ (ತಾ).

೨೧೫. ಕ.ವಿ.ಶಾ.ಸಂ.೧, ಶಾ.ಸಂ.೩೫ ರಾಗಿಮಸಲವಾಡ, ಹರಪನಹಳ್ಳಿ (ತಾ).

೨೧೬. ಇ.ದ.ಸಂ ೧೮, ಪು. ೬೨,

೨೧೭. ಶಂಕರನಾರಾಯಣರಾವ್ ಎಚ್.ಎಂ., ಪೂರ್ವೋಕ್ತ, ಪು. ೧೮೭.

೨೧೮. EC-XI ಶಾ.ಸಂ. ೬೪, ಕೋಳಹಾಲು, ಚಿತ್ರದುರ್ಗ (ತಾ).

೨೧೯. ಅದೇ, ಶಾ.ಸಂ. ೪, ಆನೆಕೊಂಡ, ದಾವಣಗೆರೆ (ತಾ).

೨೨೦. ಅದೇ, ಶಾ.ಸಂ. ೭, ದೊಡ್ಡ ಬಾಣಗೆರೆ, ತುಮಕೂರು (ತಾ).

೨೨೧. ಕರಣಂ ವಿರೂಪಾಕ್ಷಗೌಡ, ಪೂರ್ವೋಕ್ತ, ಪು. ೧೬೫.

೨೨೨. EC-XI, ಶಾ.ಸಂ. ೧೩, ಚಿತ್ರದುರ್ಗ, ಚಿತ್ರದುರ್ಗ (ತಾ).

೨೨೩. ಅದೇ, ಶಾ.ಸಂ. ೩೩, ಗಾರೇಹಟ್ಟಿ, ಚಿತ್ರದುರ್ಗ (ತಾ).

೨೨೪. ಕ.ವಿ.ಶಾ.ಸಂ.೧, ಶಾ.ಸಂ. ೩೯ ಹೊಳಲು, ಹಡಗಲಿ (ತಾ).

೨೨೫. ಅದೇ, ಶಾ.ಸಂ. ೪, ಅಂಬಳಿ, ಹಗರಿಬೊಮ್ಮನಹಳ್ಳಿ (ತಾ).

೨೨೬. EC-XI ಶಾ.ಸಂ. ೩೯, ಹರಿಹರ, ಹರಿಹರ (ತಾ).

೨೨೭. ನಾಗರಾಜರಾವ್, ಪೂರ್ವೋಕ್ತ, ಪು. ೪೪.

೨೨೮. ಎ.ಕ.ಸಂ. ೧೦ ಶಾ.ಸಂ. ೩೨೧, ಕಾಟಿಕೆರೆ, ಅರಸೀಕೆರೆ (ತಾ).

೨೨೯. ಇ.ದ.ಸಂ. ೨೫, ಪು. ೩೩೬.

೨೩೦. ಎ.ಕ.ಸಂ. ೧೦, ಶಾ.ಸಂ. ೩೨೧, ಕಾಟಿಕೆರೆ, ಅರಸೀಕೆರೆ (ತಾ).

೨೩೧. ಕ.ವಿ.ಶಾ.ಸಂ. ೨, ಶಾ.ಸಂ. ೧, ವಿಪ್ರ, ಗಂಗಾವತಿ (ತಾ).

೨೩೨. EC-XI, ಶಾ.ಸಂ. ೧೫೫, ಕಬ್ಬೂರು, ದಾವಣಗೆರೆ (ತಾ).

೨೩೩. ನಾಗಯ್ಯ ಜೆ.ಎಂ., ಪೂರ್ವೋಕ್ತ, ಪು. ೪೯.

೨೩೪. EC-XI, ಶಾ.ಸಂ. ೪೧, ಹರಿಹರ, ಹರಿಹರ (ತಾ).

೨೩೫. ಅದೇ.

೨೩೬. ಅದೇ.

೨೩೭. ಕ.ವಿ.ಶಾ.ಸಂ. ೧, ಶಾ.ಸಂ. ೧೭ ಕುರುವತ್ತಿ, ಹಡಗಲಿ (ತಾ).

೨೩೮. ಅದೇ., ಶಾ.ಸಂ. ೪, ಅಂಬಳಿ, ಹಗರಿಬೊಮ್ಮನಹಳ್ಳಿ (ತಾ).

೨೩೯. ವಾಸುದೇವ ಬಡಿಗೇರ, ಪೂರ್ವೋಕ್ತ, ಪು. ೭೩.

೨೪೦. ಕ.ವಿ.ಶಾ.ಸಂ. ೧, ಶಾ.ಸಂ. ೭೮, ನೀಲಗುಂದ, ಹರಪನಹಳ್ಳಿ (ತಾ).

೨೪೧. ಅಂತರ್ಜಾಲ ವಿಕಿಪಿಡಿಯ.

೨೪೨. ಕ.ವಿ.ಶಾ.ಸಂ. ೧, ಶಾ.ಸಂ. ೫, ಅಂಬಳಿ ಹಗರಿಬೊಮ್ಮನಹಳ್ಳಿ (ತಾ).

೨೪೩. ಅದೇ, ಶಾ.ಸಂ. ೨೮, ಕೊಟ್ಟೂರು, ಕೂಡ್ಲಿಗಿ (ತಾ).

೨೪೪. ಅದೇ, ಶಾ.ಸಂ. ೩೬, ದುಗ್ಗಾವತಿ, ಹರಪನಹಳ್ಳಿ (ತಾ).

೨೪೫. EC-XI, ಶಾ.ಸಂ. ೨, ದಾವಣಗೆರೆ, ದಾವಣಗೆರೆ (ತಾ).

೨೪೬. ಇ.ದ.ಸಂ. ೧೮, ಪು. ೬೨.

೨೪೭. EC-XI, ಶಾ.ಸಂ. ೪, ಆನೆಕೊಂಡ, ದಾವಣಗೆರೆ (ತಾ).

೨೪೮. ಇ.ದ.ಸಂ. ೧೦, ಪು. ೧೫೬.

೨೪೯. ಕೊಟ್ರೇಶ್ ಎಂ., ಹರಪನಹಳ್ಳಿ ತಾಲೂಕಿನ ರಕ್ಷಣಾ ಸ್ಮಾರಕಗಳು, ಪು. ೬.

೨೫೦. ಇ.ದ ಸಂ. ೧೦, ಪು. ೧೫೭

೨೫೧. ಅದೇ.

೨೫೨. EC-XI, ಶಾ.ಸಂ. ೩೩ ಗಾರೇಹಟ್ಟಿ, ಚಿತ್ರದುರ್ಗ (ತಾ).

೨೫೩. ಬ್ರಹ್ಮಪ್ಪ ಜಿ., ಪೂರ್ವೋಕ್ತ, ಪು. ೧೧೩

೨೫೪. ಗಣೇಶ್ ಕೆ.ಆರ್. ಗುಣಮಧುರ ಪು. ೪೨೪

೨೫೫. EC-XI, ಶಾ.ಸಂ. ೧೨, ಬೇತೂರು, ದಾವಣಗೆರೆ (ತಾ).

೨೫೬ ಇ.ದ.ಸಂ. ೨೬, ಪು. ೨೬.

೨೫೭. EC-XI, ಶಾ.ಸಂ. ೩೯, ಹರಿಹರ, ಹರಿಹರ (ತಾ).

೨೫೮. ಮಹದೇವಯ್ಯ ಎಂ.ಪಿ., ಪ್ರಾಚೀನ ಕರ್ನಾಟಕದ ಆಡಳಿತ ಪದ್ಧತಿಯ ಕೆಲವು ಅಂಶಗಳು, ಪು. ೧೧೩.

೨೫೯. ಅದೇ, ಪು. ೧೧೨.

೨೬೦. ಅದೇ. ಪು. ೧೧೨.

೨೬೧. ಮಾನಸೋಲ್ಲಾಸ, ಪು. ೫೨–೫೯.

೨೬೨. ವಡ್ಡಾರಾಧನೆ, ಪು. ೨–೪.

೨೬೩. ಕ.ವಿ.ಶಾ.ಸಂ. ೧, ಶಾ.ಸಂ. ೫, ಅಂಬಳಿ, ಹಗರಿಬೊಮ್ಮನಹಳ್ಳಿ (ತಾ).

೨೬೪. ಮಹದೇವಯ್ಯ ಎಂ.ಪಿ., ಪೂರ್ವೋಕ್ತ, ಪು. ೧೨೭.

೨೬೫. ಕ.ವಿ.ಶಾ.ಸಂ. ೧, ಶಾ.ಸಂ. ೨೨, ಉಲವತ್ತಿ, ಹಗರಿಬೊಮ್ಮನಹಳ್ಳಿ (ತಾ).

೨೬೬ ಅದೇ, ಶಾ.ಸಂ. ೨೦೪, ಶ್ರೀನಿವಾಸಪುರ, ಹರಪನಹಳ್ಳಿ (ತಾ).

೨೬೭. ಅದೇ, ಶಾ.ಸಂ. ೧೩, ಕುರುವತ್ತಿ, ಹಡಗಲಿ (ತಾ).

೨೬೮. ಅದೇ, ಶಾ.ಸಂ. ೮೩, ಹಡಗಲಿ, ಹಡಗಲಿ (ತಾ).

೨೬೯. ಅದೇ, ಶಾ.ಸಂ. ೧೬, ಕೊಟ್ಟೂರು, ಕೂಡ್ಲಿಗಿ (ತಾ).

೨೭೦. ಅದೇ, ಶಾ.ಸಂ. ೩, ಅಂಬಳಿ, ಹಗರಿಬೊಮ್ಮನಹಳ್ಳಿ (ತಾ).

೨೭೧. EC-XI, ಶಾ.ಸಂ. ೧೨, ಅಸಗೊಡು, ಜಗಳೂರು (ತಾ).

೨೭೨. ಕ.ವಿ.ಶಾ.ಸಂ. ೧, ಶಾ.ಸಂ. ೩೭, ದುಗ್ಗಾವತಿ, ಹರಪನಹಳ್ಳಿ (ತಾ).

೨೭೩. ಮಹದೇವಯ್ಯ ಎಂ.ಪಿ., ಪೂರ್ವೋಕ್ತ, ಪು. ೧೨೭.

೨೭೪. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೩೯.

೨೭೫. ಕ.ವಿ.ಶಾ.ಸಂ.೧, ಶಾ.ಸಂ. ೫೫, ತೆಕ್ಕಲಕೋಟೆ ಸಿರಗುಪ್ಪ (ತಾ).

೨೭೬. EC-VII, ಶಾ.ಸಂ. ೬೧ ಚನ್ನಗಿರಿ, ಚನ್ನಗಿರಿ (ತಾ).

೨೭೭. ಮಹೇಶಕುಮಾರ ಹ. ಪಾಟೀಲ, ಕರ್ನಾಟಕದ ಸಾಮಂತ ಅರಸುಮನೆತನಗಳು ಮತ್ತು ಅವರಾಳ್ವಿಕೆಯ ಪ್ರದೇಶದಲ್ಲಿ ಅವರು ಕೈಗೊಂಡ ಸಾಂಸ್ಕೃತಿಕ ಅಭಿವೃದ್ಧಿ, ಪು. ೨೦೩

೨೭೮. ಕ.ವಿ.ಶಾ.ಸಂ. ೧, ಶಾ.ಸಂ. ೧೦೩, ಸೋಗಿ, ಹಡಗಲಿ (ತಾ).

೨೭೯. ಮಹೇಶಕುಮಾರ ಹ. ಪಾಟೀಲ, ಪೂರ್ವೋಕ್ತ, ಪು. ೨೦೫.

೨೮೦. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು ೩೪೦

೨೮೧. ಕ.ವಿ.ಶಾ.ಸಂ. ೧, ಶಾ.ಸಂ. ೨೪, ಮೋರಿಗೇರಿ, ಹಗರಿಬೊಮ್ಮನಹಳ್ಳಿ (ತಾ).

೨೮೨. ಸಂಕ್ಷಿಪ್ತ ಕನ್ನಡ ನಿಘಂಟು, ಕನ್ನಡ-ಕನ್ನಡ, ಪು. ೨೪.

೨೮೩. ಮಹೇಶಕುಮಾರ ಹ. ಪಾಟೀಲ, ಪೂರ್ವೋಕ್ತ, ಪು. ೨೦೬.

೨೮೪. ಅದೇ, ಪು. ೨೦೬

೨೮೫. ಕ.ವಿ.ಶಾ.ಸಂ.೧, ಶಾ.ಸಂ. ೫೭, ಕಡಬಗೆರೆ, ಹರಪನಹಳ್ಳಿ (ತಾ).

೨೮೬. ಅದೇ., ಶಾ.ಸಂ. ೧೨೨, ನಂದಿಕಂಬ, ಹರಪನಹಳ್ಳಿ (ತಾ).

೨೮೭. ನಾಗಯ್ಯ ಜೆ.ಎಂ., ಪೂರ್ವೋಕ್ತ, ಪು. ೧೬೫.

೨೮೮. ಅದೇ, ಪು. ೧೬೫.

೨೮೯. ಅದೇ, ಪು. ೧೬೫

೨೯೦. ಅದೇ, ಪು. ೧೬೫

೨೯೧. ಕ.ವಿ.ಶಾ.ಸಂ. ೧, ಶಾ.ಸಂ.೯೯೧ ಬೆಣ್ಣೆಹಳ್ಳಿ, ಹರಪನಹಳ್ಳಿ (ತಾ).

೨೯೨. ಅದೇ, ಶಾ.ಸಂ. ೨೮, ಕೊಟ್ಟೂರು, ಕೂಡ್ಲಿಗಿ (ತಾ).

೨೯೩. ಅದೇ, ಶಾ.ಸಂ.೬, ಅಂಬಳಿ, ಹಗರಿಬೊಮ್ಮನಹಳ್ಳಿ (ತಾ).

೨೯೪. ಅದೇ, ಶಾ.ಸಂ. ೨೨, ಉಲವತ್ತಿ, ಹಗರಿಬೊಮ್ಮನಹಳ್ಳಿ (ತಾ).

೨೯೫. ಅದೇ, ಶಾ.ಸಂ. ೨೪, ರಾಮಘಟ್ಟ, ಹರಪನಹಳ್ಳಿ (ತಾ).

೨೯೬. ಅದೇ, ಶಾ.ಸಂ. ೩ ಹಳ್ಯಾ, ಕೂಡ್ಲಿಗಿ (ತಾ).

೨೯೭. ಅದೇ, ಶಾ.ಸಂ. ೯೪, ಹೊಳಗುಂದಿ ಹಡಗಲಿ (ತಾ).

೨೯೮. ಅದೇ, ಶಾ.ಸಂ. ೬, ಅಂಬಳಿ, ಹಗರಿಬೊಮ್ಮನಹಳ್ಳಿ (ತಾ).

೨೯೯. ಅದೇ, ಶಾ.ಸಂ. ೨೨, ಉಲವತ್ತಿ, ಹಗರಿಬೊಮ್ಮನಹಳ್ಳಿ (ತಾ).

೩೦೦. EC-XI, ಶಾ.ಸಂ. ೩೨, ಹರಿಹರ, ಹರಿಹರ (ತಾ).

೩೦೧. ಶಂಕರನಾರಾಯಣರಾವ್ ಎಂ.ಎಚ್., ಪೂರ್ವೋಕ್ತ, ಪು. ೨೬೨-೨೬೩.

೩೦೨. ವಾಸುದೇವ ಬಡಿಗೇರ, ಪೂರ್ವೋಕ್ತ, ಪು. ೯೧.

೩೦೩. ಕ.ವಿ.ಶಾ.ಸಂ. ೧, ಶಾ.ಸಂ. ೧೩, ಕೊಟ್ಟೂರು, ಕೂಡ್ಲಿಗಿ (ತಾ).

೩೦೪. ವಾಸುದೇವ ಬಡಿಗೇರ, ಪೂರ್ವೋಕ್ತ, ಪು. ೯೨.

೩೦೫. ಅಂಬಳಿಕೆ ಹಿರಿಯಣ್ಣ, ಪೂರ್ವೋಕ್ತ, ಪು. ೨೨೨.

೩೦೬. ಕ.ವಿ.ಶಾ.ಸಂ. ೧, ಶಾ.ಸಂ. ೧೭, ಕುರುವತ್ತಿ, ಹಡಗಲಿ (ತಾ).

೩೦೭. ಅದೇ, ಶಾ.ಸಂ. ೬೧, ಮಾನ್ಯರಮಸಲವಾಡ, ಹಡಗಲಿ (ತಾ).

೩೦೮. ಅಂಬಳಿಕೆ ಹಿರಿಯಣ್ಣ, ಪೂರ್ವೋಕ್ತ, ಪು. ೨೨೦.

೩೦೯. EC-XI, ಶಾ.ಸಂ. ೪೩, ಹರಿಹರ, ಹರಿಹರ (ತಾ).

೩೧೦. ಕ.ವಿ.ಶಾ.ಸಂ. ೧, ಶಾ.ಸಂ. ೨, ಸಿರಗುಪ್ಪ, ಸಿರಗುಪ್ಪ (ತಾ).

೩೧೧. ಎ.ಕ.ಸಂ. ೧೨, ಶಾ.ಸಂ. ೭, ದೊಡ್ಡಬಾಣಗೆರೆ, ಶಿರಾ (ತಾ).

೩೧೨. ಕ.ವಿ.ಶಾ.ಸಂ. ೧, ಶಾ.ಸಂ. ೫೪ ಹಿರೇಹಡಗಲಿ, ಹಡಗಲಿ (ತಾ).

೩೧೩. ಅದೇ, ಶಾ.ಸಂ. ೯೨, ಮಾಡಗೇರಿ, ಹರಪನಹಳ್ಳಿ (ತಾ).

೩೧೪. EC-XI, ಶಾ.ಸಂ. ೬೮, ಗುಂಜಿಗನೂರು, ಹೊಳಲ್ಕೆರೆ (ತಾ).

೩೧೫. ನಾಗಯ್ಯ ಜೆ.ಎಂ., ಪೂರ್ವೋಕ್ತ, ಪು. ೨೩೦.

೩೧೬. ಅದೇ, ಪು. ೨೩೦.

೩೧೭. EC-XI, ಶಾ.ಸಂ. ೧೧, ಗಾರೇಹಟ್ಟಿ, ಚಿತ್ರದುರ್ಗ (ತಾ).

೩೧೮. ಅದೇ, ಶಾ.ಸಂ. ೧೩, ಚಿತ್ರದುರ್ಗ, ಚಿತ್ರದುರ್ಗ (ತಾ).

೩೧೯. ಅದೇ, ಶಾ.ಸಂ. ೩೬, ಮೆದಕೆರೆಪುರ, ಚಿತ್ರದುರ್ಗ (ತಾ).

೩೨೦. ಅದೇ, ಶಾ.ಸಂ. ೩೩, ಗಾರೇಹಟ್ಟಿ, ಚಿತ್ರದುರ್ಗ (ತಾ).

೩೨೧. ಅದೇ, ಶಾ.ಸಂ. ೧೫೯, ಬಾಡ, ದಾವಣಗೆರೆ (ತಾ).

೩೨೨. ಅದೇ, ಶಾ.ಸಂ. ೧೬೭, ಆಲೂರು, ದಾವಣಗೆರೆ (ತಾ).

೩೨೩. ಅದೇ, ಶಾ.ಸಂ. ೯, ಅಸಗೊಡು, ಜಗಳೂರು (ತಾ).

೩೨೪. ಅದೇ, ಶಾ.ಸಂ. ೧೨, ಅಸಗೊಡು, ಜಗಳೂರು (ತಾ).

೩೨೫. ಕ.ವಿ.ಶಾ.ಸಂ. ೧, ಶಾ.ಸಂ. ೯೩ ಮಾಡಗೇರಿ, ಹರಪನಹಳ್ಳಿ (ತಾ).

೩೨೬. EC-VII, ಶಾ.ಸಂ. ೬೧, ಚನ್ನಗಿರಿ, ಚನ್ನಗಿರಿ (ತಾ).

೩೨೭. ಅದೇ, ಶಾ.ಸಂ. ೩೯, ಅಸ್ತಾಪನಹಳ್ಳಿ, ಚನ್ನಗಿರಿ (ತಾ).

೩೨೮. ಅದೇ, ಶಾ.ಸಂ. ೩೮, ಅಸ್ತಾಪನಹಳ್ಳಿ, ಚನ್ನಗಿರಿ (ತಾ).

೩೨೯. EC-XI, ಶಾ.ಸಂ. ೧೧೫, ವಾಸನ, ಹರಿಹರ (ತಾ).

೩೩೦. ಅದೇ, ಶಾ.ಸಂ. ೮, ಚದುರುಗೊಳ, ಜಗಳೂರು (ತಾ).

೩೩೧. ಇ.ದ.ಸಂ. ೧೭. ಪು. ೬೧.

೩೩೨. ಮಹೇಶಕುಮಾರ ಹ. ಪಾಟೀಲ, ಪೂರ್ವೋಕ್ತ, ಪು. ೨೨೨.

೩೩೩. ನಾಗಯ್ಯ ಜೆ.ಎಂ., ಪೂರ್ವೋಕ್ತ, ಪು. ೨೮೨.

೩೩೪. ಕ.ವಿ.ಶಾ.ಸಂ. ೧, ಶಾ.ಸಂ. ೩, ಅಂಬಳಿ, ಹಗರಿಬೊಮ್ಮನಹಳ್ಳಿ (ತಾ).

೩೩೫. ಅದೇ, ಶಾ.ಸಂ. ೫, ಅಂಬಳಿ, ಹಗರಿಬೊಮ್ಮನಹಳ್ಳಿ (ತಾ).

೩೩೬. ಅದೇ, ಶಾ.ಸಂ. ೮೫, ಹೂವಿನಹಡಗಲಿ, ಹೂವಿನಹಡಗಲಿ (ತಾ).

೩೩೭. ಅದೇ, ಶಾ.ಸಂ. ೧೦೧, ಸೋಗಿ, ಹೂವಿನಹಡಗಲಿ (ತಾ).

೩೩೮. ಅದೇ, ಶಾ.ಸಂ. ೭೮, ನೀಲಗುಂದ, ಹರಪನಹಳ್ಳಿ (ತಾ).

೩೩೯. ಅದೇ, ಶಾ.ಸಂ. ೧೦೭, ಬಾಗಳಿ, ಹರಪನಹಳ್ಳಿ (ತಾ).

೩೪೦. ಅದೇ, ಶಾ.ಸಂ. ೧೦೮, ಬಾಗಳಿ, ಹರಪನಹಳ್ಳಿ (ತಾ).

೩೪೧. ಅದೇ, ಶಾ.ಸಂ. ೧೭೮, ಬಾಗಳಿ, ಹರಪನಹಳ್ಳಿ (ತಾ).

೩೪೨. ಕರಣಂ ವಿರೂಪಾಕ್ಷಗೌಡ, ಪೂರ್ವೋಕ್ತ, ಪು. ೧೯೬.

೩೪೩. ಕ.ವಿ.ಶಾ.ಸಂ. ೧, ಶಾ.ಸಂ. ೮೩, ಹಡಗಲಿ, ಹಡಗಲಿ (ತಾ).

೩೪೪. ಕರಣಂ ವಿರೂಪಾಕ್ಷಗೌಡ, ಪೂರ್ವೋಕ್ತ, ಪು. ೧೯೦-೯೧.

೩೪೫. ಕ.ವಿ.ಶಾ.ಸಂ. ೧, ಶಾ.ಸಂ.೨೪, ರಾಮಘಟ್ಟ, ಹರಪನಹಳ್ಳಿ (ತಾ).

೩೪೬. ಇ.ದ.ಸಂ. ೨೮, ಪು. ೩೪.

೩೪೭. ಕ.ವಿ.ಶಾ.ಸಂ. ೧, ಶಾ.ಸಂ. ೩೬, ಹೊಳಲು, ಹೂವಿನಹಡಗಲಿ (ತಾ).

೩೪೮. ಅದೇ, ಶಾ.ಸಂ. ೧೦೭, ಉತ್ತಂಗಿ, ಹೂವಿನಹಡಗಲಿ (ತಾ).

೩೪೯. ಅದೇ, ಶಾ.ಸಂ. ೩೭, ದುಗ್ಗಾವತಿ, ಹರಪನಹಳ್ಳಿ (ತಾ).

೩೫೦. ಅದೇ, ಶಾ.ಸಂ. ೭೯, ನೀಲಗುಂದ, ಹರಪನಹಳ್ಳಿ (ತಾ).

೩೫೧. ಅದೇ, ಶಾ.ಸಂ. ೯೯, ಬೆಣ್ಣೆಹಳ್ಳಿ, ಹರಪನಹಳ್ಳಿ (ತಾ).

೩೫೨. EC-XI, ಶಾ.ಸಂ. ೮೬, ಗಂಗನರಸಿ, ಹರಿಹರ (ತಾ).

೩೫೩. ಕ.ವಿ.ಶಾ.ಸಂ. ೧, ಶಾ.ಸಂ. ೩೯, ಹೊಳಲು, ಹೂವಿನಹಡಗಲಿ (ತಾ).

೩೫೪. ಅದೇ, ಶಾ.ಸಂ. ೪೮, ಅಲಗಿಲವಾಡ, ಹರಪನಹಳ್ಳಿ (ತಾ).

೩೫೫. ಅದೇ, ಶಾ.ಸಂ. ೨೨೧, ಹೀರೆ ಮ್ಯಾಗಳಗೆರಿ, ಹರಪನಹಳ್ಳಿ (ತಾ).

೩೫೬. ಅದೇ, ಶಾ.ಸಂ. ೧೮೦, ಬಾಗಳಿ, ಹರಪನಹಳ್ಳಿ (ತಾ).

೩೫೭. EC-XI., ಶಾ.ಸಂ. ೪೦, ಹರಿಹರ, ಹರಿಹರ (ತಾ).

೩೫೮. ಶಂಕರನಾರಾಯಣರಾವ್ ಎಚ್.ಎಂ., ಪೂರ್ವೋಕ್ತ, ಪು. ೨೬೨.

೩೫೯. ಕ.ವಿ.ಶಾ.ಸಂ. ೧, ಶಾ.ಸಂ. ೮೧ ಕೊಟ್ನಕಲ್, ಹಡಗಲಿ (ತಾ).

೩೬೦. EC-XI, ಶಾ.ಸಂ. ೪೧, ಹರಿಹರ, ಹರಿಹರ (ತಾ).

೩೬೧. ಅದೇ, ಶಾ.ಸಂ. ೧೩೫, ಹಿರೇತೊಗಲೇರಿ, ಹರಿಹರ (ತಾ).

೩೬೨. ಅದೇ, ಶಾ.ಸಂ. ೧೨, ಅಸಗೊಡು, ಜಗಳೂರು, ಪು. ೨೨೭.

೩೬೩. ಅದೇ, ಶಾ.ಸಂ. ೯, ಅಸಗೊಡು, ಜಗಳೂರು, ಪು. ೨೨೩.

೩೬೪. ಅದೇ, ಶಾ.ಸಂ. ೧೬೭, ಅಲೂರು, ದಾವಣಗೆರೆ, ಪು. ೨೧೫.

೩೬೫. ಕ.ವಿ.ಶಾ.ಸಂ.೧, ಶಾ.ಸಂ. ೧೦೭, ಉತ್ತಂಗಿ, ಹೂವಿನಹಡಗಲಿ (ತಾ).

೩೬೬. EC-XI, ಶಾ.ಸಂ. ೩೩, ಗಾರೇಹಟ್ಟಿ, ಚಿತ್ರದುರ್ಗ (ತಾ).

೩೬೭. ಕ.ವಿ.ಶಾ.ಸಂ. ೧, ಶಾ.ಸಂ. ೩೬, ದುಗ್ಗಾವತಿ, ಹರಪನಹಳ್ಳಿ (ತಾ).

೩೬೮. EC-XI, ಶಾ.ಸಂ. ೩೬, ಮೆದಕೆರೆಪುರ, ಚಿತ್ರದುರ್ಗ (ತಾ).

೩೬೯. ಕ.ವಿ.ಶಾ.ಸಂ. ೧, ಶಾ.ಸಂ. ೧೦೦, ಬಾಗಳಿ, ಹರಪನಹಳ್ಳಿ (ತಾ).

೩೭೦. EC-XI, ಶಾ.ಸಂ. ೨, ದಾವಣಗೆರೆ, ದಾವಣಗೆರೆ, ಪು. ೫೭.

೩೭೧. ಅದೇ, ಶಾ.ಸಂ. ೧೨೨, ಜಿಗಳಿ, ದಾವಣಗೆರೆ, ಪು. ೧೮೩.

೩೭೨. ಅದೇ, ಶಾ.ಸಂ.೬೪, ಕೊಳಹಾಳು ಚಿತ್ರದುರ್ಗ, ಪು. ೩೯.

೩೭೩. ಅದೇ, ಶಾ.ಸಂ.೮೪, ಗಂಗನರಸಿ ದಾವಣಗೆರೆ, ಪು. ೧೫೬.

೩೭೪. ವಾಸುದೇವ ಬಡಿಗೇರ, ಪೂರ್ವೋಕ್ತ, ಪು. ೧೫೮.

೩೭೫. ಕ.ವಿ.ಶಾ.ಸಂ. ೧, ಶಾ.ಸಂ. ೬೧, ಮಾನ್ಯರಮಸಲವಾಡ, ಹೂವಿನಹಡಗಲಿ, ಪು. ೩೭೯.

೩೭೬. ಅದೇ., ಶಾ.ಸಂ. ೯೪, ಹೊಳಗುಂದಿ, ಹೂವಿನಹಡಗಲಿ, ಪು. ೪೨೮.

೩೭೭. ಅದೇ., ಶಾ.ಸಂ. ೧೦೭, ಉತ್ತಂಗಿ, ಹೂವಿನಹಡಗಲಿ, ಪು. ೪೪೭.

೩೭೮. ಚನ್ನಬಸವಯ್ಯ ಹಿರೇಮಠ, ಕುರುಗೋಡು ಸಿಂಧರು ಒಂದು ಅಧ್ಯಯನ, ಪು. ೧೫೮.

೩೭೯. ಕ.ವಿ.ಶಾ.ಸಂ. ೧, ಶಾ.ಸಂ. ೬೧, ಮಾನ್ಯರಮಸಲವಾಡ, ಹಡಗಲಿ, ಪು. ೩೭೯.

೩೮೦. ಅದೇ, ಶಾ.ಸಂ. ೧೮೧, ಬಾಗಳಿ, ಹರಪನಹಳ್ಳಿ, ಪು. ೬೨೩.

೩೮೧. ಅದೇ, ಶಾ.ಸಂ. ೬೦, ಯರಬಾಳು, ಹರಪನಹಳ್ಳಿ, ಪು. ೫೧೫.

೩೮೨. ಅದೇ, ಶಾ.ಸಂ. ೧೮೦, ಬಾಗಳಿ, ಹರಪನಹಳ್ಳಿ, ಪು. ೬೨೧.

೩೮೩. EC-XI, ಶಾ.ಸಂ. ೮೬, ಗಂಗನರಸಿ, ದಾವಣಗೆರೆ, ಪು. ೧೬೦.

೩೮೪. ಅದೇ, ಶಾ.ಸಂ. ೬೪, ಕೋಳಹಾಳು, ಚಿತ್ರದುರ್ಗ, ಪು. ೩೯.

೩೮೫. ಅದೇ, ಶಾ.ಸಂ. ೧೪೯, ಕೊಡಗನೂರು, ದಾವಣಗೆರೆ, ಪು. ೨೦೧.

೩೮೬. ಕ.ವಿ.ಶಾ.ಸಂ. ೧, ಶಾ.ಸಂ. ೭, ಉಚ್ಚಂಗಿದುರ್ಗ, ಹರಪನಹಳ್ಳಿ, ಪು. ೪೬೫.

೩೮೭. ವಾಸುದೇವ ಬಡಿಗೇರ, ಪೂರ್ವೋಕ್ತ, ಪು. ೧೬೨.

೩೮೮. ನಾಗಯ್ಯ ಜೆ.ಎಂ., ಪೂರ್ವೋಕ್ತ, ಪು. ೩೬೧.

೩೮೯. ಕ.ವಿ.ಶಾ.ಸಂ. ೧, ಶಾ.ಸಂ. ೧, ಕುರುವತ್ತಿ, ಹೂವಿನಹಡಗಲಿ, ಪು. ೩೦೭.

೩೯೦. ಅದೇ, ಶಾ.ಸಂ. ೮೮, ನೀಲಗುಂದ, ಹರಪನಹಳ್ಳಿ, ಪು. ೫೩೭.

೩೯೧. ಕಲಬುರ್ಗಿ ಎಂ.ಎಂ., ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ, ಪು. ೪೫.

೩೯೨. Chopra Girish, Encyclopedic Dictionary of Geography, New Delhi. P: 341

೩೯೩. ನಾಗಯ್ಯ ಜೆ.ಎಂ., ಪೂರ್ವೋಕ್ತ, ಪು. ೮೭.

೩೯೪. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೩೪೯.

೩೯೫. ಮಲ್ಲಿಕಾರ್ಜುನ ಆರ್. ಜರಕುಂಟಿ, ಕರ್ನಾಟಕದ ಚಾರಿತ್ರಿಕ ಭೂಗೋಳ, ಪು. ೪೩.

೩೯೬. Gai G.S., Studies in Geography of Karnataka, P: 22.

೩೯೭. Mulay Sumati, Studies in the Historical and Cultural Gepgoraphy and Ethnogrophy of Decean, P: 95.

೩೯೮. ಮಲ್ಲಿಕಾರ್ಜುನ ಆರ್., ಜರಕುಂಟಿ, ಪೂರ್ವೋಕ್ತ, ಪು. ೪೩.

೩೯೯. Mulay Sumati, ಪೂರ್ವೋಕ್ತ, ಪು. ೮೪.

೪೦೦. ಮಲ್ಲಿಕಾರ್ಜುನ ಆರ್., ಜರಕುಂಟಿ, ಪೂರ್ವೋಕ್ತ, ಪು. ೪೮.

೪೦೧. Mulay Sumati, ಪೂರ್ವೋಕ್ತ, ಪು. ೯೪.

೪೦೨. ಮಲ್ಲಿಕಾರ್ಜುನ ಆರ್., ಜರಕುಂಟಿ, ಪೂರ್ವೋಕ್ತ, ಪು. ೫೦.

೪೦೩. ಜಯಮ್ಮ ಕರಿಯಣ್ಣ, ಪೂರ್ವೋಕ್ತ, ಪು. ೧೦೪.

೪೦೪. ಕೃಷ್ಣಮೂರ್ತಿ ಎಂ.ಎಸ್., ದಿ ನೊಳಂಬಸ್, ಪು. ೫೫.

೪೦೫. ಲಕ್ಷ್ಮಣ್ ತೆಲಗಾವಿ, ಹರತಿಸಿರಿ, ಪು. ೩೬.

೪೦೬. ನಾಗಯ್ಯ ಜೆ.ಎಂ., ಪೂರ್ವೋಕ್ತ, ಪು. ೧೨

೪೦೭. EC-XI ಶಾ.ಸಂ. ೪೧, ಹರಿಹರ, ಹರಿಹರ (ತಾ).

೪೦೮. ಕ.ವಿ.ಶಾ.ಸಂ. ೧, ಶಾ.ಸಂ. ೧೦೦, ಬಾಗಳಿ, ಹರಪನಹಳ್ಳಿ (ತಾ).

೪೦೯. ಅದೇ, ಶಾ.ಸಂ. ೩೫, ರಾಗಿಮಸಲವಾಡ, ಹರಪನಹಳ್ಳಿ (ತಾ).

೪೧೦. EC-XI, ಶಾ.ಸಂ. ೧೫೫, ಕಬ್ಬೂರು, ಹರಿಹರ (ತಾ).

೪೧೧. ನಾಗಯ್ಯ ಜೆ.ಎಂ., ಪೂರ್ವೋಕ್ತ, ಪು. ೨೨.

೪೧೨. ಕ.ವಿ.ಶಾ.ಸಂ. ೧, ಶಾ.ಸಂ. ೩೪, ರಾಗಿಮಸಲವಾಡ, ಹರಪನಹಳ್ಳಿ (ತಾ).

೪೧೩. ಜಯಮ್ಮ ಕರಿಯಣ್ಣ, ಪೂರ್ವೋಕ್ತ, ಪು. ೫೪.

೪೧೪. EC-XI, ಶಾ.ಸಂ. ೧೫೫, ಕಬ್ಬೂರು, ಹರಿಹರ (ತಾ).

೪೧೫. ಕ.ವಿ.ಶಾ.ಸಂ. ೧, ಶಾ.ಸಂ.೧, ಹನಸಿ, ಹಗರಿಬೊಮ್ಮನಹಳ್ಳಿ (ತಾ).

೪೧೬. ಅದೇ, ಶಾ.ಸಂ. ೭, ಉಚ್ಚಂಗಿದುರ್ಗ, ಹರಪನಹಳ್ಳಿ (ತಾ).

೪೧೭. EC-XI, ಶಾ.ಸಂ. ೩೬, ಮೆದಕೆರೆಪುರ, ಚಿತ್ರದುರ್ಗ (ತಾ).

೪೧೮. EC-XI, ಶಾ.ಸಂ. ೧೫೫, ಕಬ್ಬೂರು, ಹರಿಹರ (ತಾ).

೪೧೯. ಕ.ವಿ.ಶಾ.ಸಂ. ೧, ಶಾ.ಸಂ. ೬೦, ಯರಬಾಳು, ಹರಪನಹಳ್ಳಿ (ತಾ).

೪೨೦. ಅದೇ, ಶಾ.ಸಂ. ೮೩, ಹೂವಿನಹಡಗಲಿ, ಹೂವಿನಹಡಗಲಿ (ತಾ).

೪೨೧. ಅದೇ, ಶಾ.ಸಂ. ೧೧೯, ಬಾಗುಳಿ, ಹರಪನಹಳ್ಳಿ (ತಾ).

೪೨೨. ಅದೇ, ಶಾ.ಸಂ. ೩೬, ದುಗ್ಗವತಿ, ಹರಪನಹಳ್ಳಿ (ತಾ).

೪೨೩. ಅದೇ., ಶಾ.ಸಂ. ೧೨, ಕೊಟ್ಟೂರು, ಕೂಡ್ಲಿಗಿ (ತಾ).

೪೨೪. EC-XI,, ಶಾ.ಸಂ. ೧೩೫, ಹಿರೇತೊಗಲೇರಿ, ದಾವಣಗೆರೆ (ತಾ).

೪೨೫. EC-XI, ಶಾ.ಸಂ. ೪೧, ಹರಿಹರ, ಹರಿಹರ (ತಾ).

೪೨೬. EC-XI, ಶಾ.ಸಂ. ೧೩೯, ಬಾಡ, ದಾವಣಗೆರೆ (ತಾ).

೪೨೭. ಕ.ವಿ.ಶಾ.ಸಂ. ೧, ಶಾ.ಸಂ.೯೪, ಹೊಳಗುಂದಿ, ಹಡಗಲಿ (ತಾ).

೪೨೮. ಕೃಷ್ಣಮೂರ್ತಿ ಪಿ.ವಿ., ಶಾಸನ ಇತಿಹಾಸ ಮಂಥನ, ಪು. ೬೪.

೪೨೯. ಅದೇ, ಪು. ೬೪.

೪೩೦. ಅದೇ, ಪು. ೬೪.

೪೩೧. ಅದೇ, ಪು. ೬೪.

೪೩೨. ಕ.ವಿ.ಶಾ.ಸಂ. ೧, ಶಾ.ಸಂ.೬ ಉಚ್ಚಂಗಿದುರ್ಗ, ಹರಪನಹಳ್ಳಿ (ತಾ).

೪೩೩. EC-XI ಶಾ.ಸಂ. ೧೨, ಬೆತೂರು, ದಾವಣಗೆರೆ (ತಾ).

೪೩೪. EC-XI ಶಾ.ಸಂ. ೨೩, ಗುಂಡೇರಿ, ಹೊಳಲ್ಕೆರೆ (ತಾ).

೪೩೫. ಅದೇ, ಶಾ.ಸಂ. ೩೪, ಗಾರೇಹಟ್ಟಿ, ಚಿತ್ರದುರ್ಗ (ತಾ).

೪೩೬. EC-XI, ಶಾ.ಸಂ. ೧, ದಾವಣಗೆರೆ, ದಾವಣಗೆರೆ (ತಾ).

೪೩೭. ಅದೇ, ಶಾ.ಸಂ. ೨, ದಾವಣಗೆರೆ, ದಾವಣಗೆರೆ (ತಾ).

೪೩೮. ಅದೇ, ಶಾ.ಸಂ. ೬, ಆನೆಕೊಂಡ, ದಾವಣಗೆರೆ (ತಾ).

೪೩೯. ಅದೇ, ಶಾ.ಸಂ. ೩೪, ಗಾರೇಹಟ್ಟಿ, ಚಿತ್ರದುರ್ಗ (ತಾ).

೪೪೦. ಅದೇ.

೪೪೧. ಅದೇ, ಶಾ.ಸಂ. ೧೩೫, ಹಿರೇತೋಗಲೇರಿ, ದಾವಣಗೆರೆ (ತಾ).

೪೪೨. ಅದೇ, ಶಾ.ಸಂ. ೧೩೩, ಮಳಲಕೆರೆ ದಾವಣಗೆರೆ (ತಾ).

೪೪೩. EC-XI ಶಾ.ಸಂ. ೪೩, ಹರಿಹರ, ಹರಿಹರ (ತಾ).

೪೪೪. ಕ.ವಿ.ಶಾ.ಸಂ. ೧, ಶಾ.ಸಂ. ೨೧, ಕೋಗಳಿ, ಹಗರಿಬೊಮ್ಮನಹಳ್ಳಿ (ತಾ).

೪೪೫. ಅದೇ, ಶಾ.ಸಂ. ೪, ಅಂಬಳಿ, ಹಗರಿಬೊಮ್ಮನಹಳ್ಳಿ (ತಾ).

೪೪೬. ಅದೇ, ಶಾ.ಸಂ. ೧೭, ಕೋಗಳಿ, ಹಗರಿಬೊಮ್ಮನಹಳ್ಳಿ (ತಾ).

೪೪೭. ಅದೇ, ಶಾ.ಸಂ. ೭, ಅಲಬೂರು, ಹಗರಿಬೊಮ್ಮನಹಳ್ಳಿ (ತಾ).

೪೪೮. ಅದೇ, ಶಾ.ಸಂ. ೬, ಉಜ್ಜನಿ, ಕೂಡ್ಲಿಗಿ (ತಾ).

೪೪೯. ಅದೇ, ಶಾ.ಸಂ. ೩೭, ದುಗ್ಗಾವತಿ, ಹರಪನಹಳ್ಳಿ (ತಾ).

೪೫೦. ವಾಸುದೇವ ಬಡಿಗೇರ, ಪೂರ್ವೋಕ್ತ, ಪು. ೧೧೮.

೪೫೧. ಅದೇ, ಪು. ೧೧೮.

೪೫೨. ಅದೇ, ಪು. ೧೧೮.

೪೫೩. ಅದೇ, ಪು. ೧೧೮.

೪೫೪. ಕ.ವಿ.ಶಾ.ಸಂ. ೧, ಶಾ.ಸಂ. ೨೪, ಮೋರಿಗೇರಿ, ಹಗರಿಬೊಮ್ಮನಹಳ್ಳಿ (ತಾ).

೪೫೫. ಅದೇ, ಶಾ.ಸಂ. ೨೭, ಮೋರಿಗೇರಿ, ಹಗರಿಬೊಮ್ಮನಹಳ್ಳಿ (ತಾ).

೪೫೬. ಅದೇ, ಶಾ.ಸಂ. ೫೯ ಮಲ್ಲಯ್ಯನಗುಡ್ಡ, ಸಿರಗುಪ್ಪ (ತಾ).

೪೫೭. ಅದೇ, ಶಾ.ಸಂ. ೬ ಉಚ್ಚಂಗಿದುರ್ಗ, ಹರಪನಹಳ್ಳಿ (ತಾ).

೪೫೮. ಅದೇ, ಶಾ.ಸಂ. ೧೯೯, ಉಚ್ಚಂಗಿದುರ್ಗ, ಹರಪನಹಳ್ಳಿ (ತಾ).

೪೫೯. EC-XI, ಶಾ.ಸಂ. ೧೨, ಅಸಗೋಡು, ಜಗಳೂರು (ತಾ).

೪೬೦. ಕ.ವಿ.ಶಾ.ಸಂ. ೧, ಶಾ.ಸಂ. ೧೮೭, ಮುತ್ತಿಗಿ, ಹರಪನಹಳ್ಳಿ (ತಾ).

೪೬೧. ವಾಸುದೇವ ಬಡಿಗೇರ, ಪೂರ್ವೋಕ್ತ, ಪು. ೧೧೯.

೪೬೨. ಅದೇ, ಪು. ೧೧೯.

೪೬೩. ಅದೇ, ಪು. ೧೧೯.

೪೬೪. ಅದೇ, ಪು. ೧೧೯.

೪೬೫. ಕ.ವಿ.ಶಾ.ಸಂ. ೧, ಶಾ.ಸಂ. ೧೩ ಕುರುವತ್ತಿ, ಹಡಗಲಿ, ಪು ೩೨೦.

೪೬೬. ಅದೇ, ಶಾ.ಸಂ. ೪೭, ಕತ್ತೆಬೆನ್ನೂರು, ಹಡಗಲಿ, ಪು. ೩೫೩.

೪೬೭. ಅದೇ, ಶಾ.ಸಂ. ೨, ಬೆಣ್ಣೆಕಲ್ಲು, ಹಗರಿಬೊಮ್ಮನಹಳ್ಳಿ, ಪು. ೨೫೨.

೪೬೮. ಅದೇ, ಶಾ.ಸಂ. ೩, ಹಳ್ಯ, ಕೂಡ್ಲಿಗಿ (ತಾ).

೪೬೯. ಅದೇ, ಶಾ.ಸಂ. ೧೬, ಕೊಟ್ಟೂರು, ಕೂಡ್ಲಿಗಿ (ತಾ).

೪೭೦. ಅದೇ, ಶಾ.ಸಂ. ೪೧, ತಳಕಲ್ಲು, ಹಗರಿಬೊಮ್ಮನಹಳ್ಳಿ (ತಾ).

೪೭೧. ಅದೇ, ಶಾ.ಸಂ. ೧೭, ಕೋಗಳಿ, ಹಗರಿಬೊಮ್ಮನಹಳ್ಳಿ (ತಾ).

೪೭೨. ಅದೇ, ಶಾ.ಸಂ. ೮೪, ಹಡಗಲಿ, ಹಡಗಲಿ (ತಾ).

೪೭೩. ಅದೇ, ಶಾ.ಸಂ. ೪೧, ತಳಕಲ್ಲು, ಹಗರಿಬೊಮ್ಮನಹಳ್ಳಿ (ತಾ).

೪೭೪. ಅದೇ, ಶಾ.ಸಂ. ೬೧, ಮಾನ್ಯರಮಾಸಲವಾಡ, ಹಡಗಲಿ (ತಾ).

೪೭೫. ಅದೇ, ಶಾ.ಸಂ. ೧೭, ಕುರುವತ್ತಿ, ಹಡಗಲಿ (ತಾ).

೪೭೬. ಅದೇ, ಶಾ.ಸಂ. ೧, ಹನಸಿ, ಹಗರಿಬೊಮ್ಮನಹಳ್ಳಿ (ತಾ).

೪೭೭. EC-VII, ಶಾ.ಸಂ. ೩೯, ಅಸ್ತಾಪನಹಳ್ಳಿ, ಚನ್ನಗಿರಿ (ತಾ).

೪೭೮. ಅದೇ, ಶಾ.ಸಂ. ೬೧ ಚನ್ನಗಿರಿ, ಚನ್ನಗಿರಿ (ತಾ).

೪೭೯. ಅದೇ, ಪು. ೪೫೭.

೪೮೦. EC-XI ಶಾ.ಸಂ. ೬೮ ಗುಂಜಗನೂರು, ಹೊಳಲ್ಕೆರೆ (ತಾ).

೪೮೧. ನಾಗಯ್ಯ ಜೆ.ಎಂ., ಪೂರ್ವೋಕ್ತ, ಪು. ೧೨೫.

೪೮೨. ಕ.ವಿ.ಶಾ.ಸಂ. ೧, ಶಾ.ಸಂ.೮೮, ನೀಲಗುಂದ, ಹರಪನಹಳ್ಳಿ (ತಾ).

೪೮೩. ಚನ್ನಬಸವಯ್ಯ ಹಿರೇಮಠ, ಪೂರ್ವೋಕ್ತ, ಪು. ೧೬೨.

೪೮೪. ಎ.ಕ.ಸಂ. ೧೨, ಶಾ.ಸಂ.೭, ದೊಡ್ಡ ಬಾಣಗೇರೆ, ಶಿರಾ (ತಾ).

೪೮೫. ನಾಗಯ್ಯ ಜೆ.ಎಂ. ಪೂರ್ವೋಕ್ತ, ಪು. ೧೨೩.

೪೮೬. ಅದೇ, ಪು. ೧೫೨–೧೫೬.

೪೮೭. ಕ.ವಿ.ಶಾ.ಸಂ. ೨, ಶಾ.ಸಂ. ೧, ವಿಪ್ರ, ಗಂಗಾವತಿ (ತಾ).

೪೮೮. ಕ.ವಿ.ಶಾ.ಸಂ. ೧, ಶಾ.ಸಂ. ೨ ಸಿರಗುಪ್ಪ ಸಿರಗುಪ್ಪ (ತಾ).

೪೮೯. ಅದೇ, ಶಾ.ಸಂ. ೫೪, ಹಿರೇಹಡಗಲಿ, ಹೂವಿನಹಡಗಲಿ (ತಾ).

೪೯೦. ಚನ್ನಬಸವಯ್ಯ ಹಿರೇಮಠ, ಪೂರ್ವೋಕ್ತ, ಪು. ೯೭.

೪೯೧. ವಾಸುದೇವ ಬಡಿಗೇರ, ಪೂರ್ವೋಕ್ತ, ಪು. ೧೧೬.

೪೯೨. ಅದೇ, ಪು. ೧೧೬.

೪೯೩. ಅದೇ, ಪು. ೧೧೬.

೪೯೪. ನಾಗಯ್ಯ ಜೆ.ಎಂ., ಪೂರ್ವೋಕ್ತ, ಪು. ೧೨೩.

೪೯೫. ಜಯಮ್ಮ ಕರಿಯಣ್ಣ, ಪೂರ್ವೋಕ್ತ, ಪು. ೧೧೩.

೪೯೬. ಚನ್ನಬಸವಯ್ಯ ಹಿರೇಮಠ, ಪೂರ್ವೋಕ್ತ, ಪು. ೧೩೮.

೪೯೭. ಅದೇ, ಪು. ೧೪೧–೧೪೨.

೪೯೮. ಅದೇ, ಪು. ೧೬೧.



ಅಧ್ಯಾಯ : ನಾಲ್ಕು

# ಸಾಂಸ್ಕೃತಿಕ ಪರಂಪರೆ

೪.೧. ಧಾರ್ಮಿಕ

೪.೨. ಸಾಮಾಜಿಕ

೪.೩. ಆರ್ಥಿಕ

೪.೪. ಕಲೆ ಮತ್ತು ವಾಸ್ತುಶಿಲ್ಪ

# ಅಧ್ಯಾಯ : ನಾಲ್ಕು

## ಸಾಂಸ್ಕೃತಿಕ ಪರಂಪರೆ

ಕರ್ನಾಟಕದ ರಾಜಕೀಯ ಇತಿಹಾಸದಲ್ಲಿ ಕಲ್ಯಾಣದ ಚಾಳುಕ್ಯ ಕಾಲಘಟ್ಟ ಸಂಘರ್ಷದ ಮತ್ತು ಏಳುಬೀಳುಗಳ ಕಾಲ. ಇದೇ ಕಾಲಘಟ್ಟದಲ್ಲಿ ಹೊಯ್ಸಳರು ದಕ್ಷಿಣದಲ್ಲಿಯೂ, ಸೇವುಣರು ಉತ್ತರದಲ್ಲಿಯೂ ಪ್ರಬಲರಾಗಿ ಚಾಲುಕ್ಯ ಸಾಮಂತ ಅರಸರಾಗಿದ್ದರೂ, ಸ್ವತಂತ್ರರಾಗಲು ಪ್ರಯತ್ನಿಸಿದ ಕಾಲಘಟ್ಟ. ಈ ಅವಧಿಯಲ್ಲಿ ದಕ್ಷಿಣದಲ್ಲಿ ಹೊಯ್ಸಳ ಸಾಮ್ರಾಜ್ಯ, ಉತ್ತರದಲ್ಲಿ ಸೇವುಣ ಸಾಮ್ರಾಜ್ಯ ನಿಧಾನವಾಗಿ ತಮ್ಮ ಸುತ್ತಮುತ್ತಲಿನ ಇತರ ಅಶಕ್ತ ಸಾಮಂತರನ್ನು ಗೆಲ್ಲುವುದರೊಂದಿಗೆ ತಮ್ಮ ಪ್ರಭುತ್ವವನ್ನು ಆಡಳಿತಾತ್ಮಕ ಪ್ರದೇಶವನ್ನು ವಿಸ್ತರಿಸಲಾರಂಭಿಸಿದರು. ಈ ಪರಿಸ್ಥಿತಿ ಅತಿಹೆಚ್ಚು ಅನುಕೂಲವಾದುದು ಹೊಯ್ಸಳರಿಗೆಂದರೆ ತಪ್ಪಾಗಲಿಕ್ಕಿಲ್ಲ. ಆದರೂ ಕಲ್ಯಾಣ ಚಾಳುಕ್ಯರ ಕಾಲಘಟ್ಟ ಅತ್ಯಂತ ಮಹತ್ವಪೂರ್ಣವಾದ ಕಾಲ. ಇದೇ ಕಾಲಘಟ್ಟದಲ್ಲಿ ಕಲ್ಯಾಣ ಚಾಳುಕ್ಯರ ಕೊನೆಯ ಹಂತದಲ್ಲಿ ಪ್ರವರ್ಧಮಾನಕ್ಕೆ ಬಂದ ಕಳಚೂರಿಯರು ಕಲ್ಯಾಣದ ಚಾಳುಕ್ಯರ ಅವನತಿಗೆ ತಮ್ಮದೇ ಆದ ಕೊಡುಗೆಯನ್ನು ನೀಡಿದರೂ, ಇದು ಒಂದು ಅರ್ಥದಲ್ಲಿ ಸಂಘರ್ಷಗಳ ಸರಮಾಲೆಯ ಕಾಲಾವಧಿ.[೧] ಆರನೆಯ ವಿಕ್ರಮಾದಿತ್ಯನ ಅಂತ್ಯದವರೆಗೆ ಚಾಳುಕ್ಯರು ತಮ್ಮ ರಾಜಕೀಯ ಹಿರಿಮೆ ಮತ್ತು ಗರಿಮೆಗಳೆರಡನ್ನೂ ಸಾಧಿಸಿಕೊಂಡು ಬೆಳೆಸಿಕೊಂಡರಾದರೂ ಅವನ ತರುವಾಯ ಬಂದ ಕಲ್ಯಾಣದ ಚಾಳುಕ್ಯ ಅರಸರುಗಳು ಸಾಮಂತರು ಮೇಲೆ ಹೊಂದಿದ್ದ ಪ್ರಭಾವವನ್ನು ಹಲವಾರು ಕಾರಣಗಳಿಗೆ ಕಡಿಮೆ ಮಾಡಿಕೊಂಡರು ಅಥವಾ ಕಲ್ಯಾಣದ ಚಾಳುಕ್ಯ ಸಾಮಂತರುಗಳು ತಮ್ಮ ಬಲವನ್ನೂ ವೃದ್ಧಿಸಿಕೊಂಡರು. ಒಂದೆಡೆ ಕಲ್ಯಾಣದ ಚಾಳುಕ್ಯರ ಕುಸಿಯುತ್ತಿದ್ದ ಕೇಂದ್ರಾಡಳಿತ ಮತ್ತೊಂದೆಡೆ ಪ್ರವರ್ಧಮಾನಕ್ಕೆ ಬರುತ್ತಿದ್ದ ಹೊಯ್ಸಳರು ಮತ್ತು ಯಾದವರ ಮನೆತನಗಳು ಇವು ಕಲ್ಯಾಣದ ಚಾಳುಕ್ಯರ ಕೊನೆಯ ಹಂತದ ಆಡಳಿತಾತ್ಮಕ ವ್ಯವಸ್ಥೆಯಾಗಿದ್ದಿತು.[೨] ಅದಕ್ಕೆ ಈ ಕಾಲವನ್ನು ರಾಜಕೀಯ ಏಳುಬೀಳುಗಳ ಕಾಲವೆಂದು ಗುರುತಿಸಬಹುದು. ಈ ಕಾಲದಲ್ಲಿಯೇ ಬಳ್ಳಾರಿ, ದಾವಣಗೆರೆ, ಚಿತ್ರದುರ್ಗ ಜಿಲ್ಲೆಯಲ್ಲಿ ಬದುಕಿ ಬಾಳಿದ ಅರಸುಮನೆತನವೆಂದರೆ ಉಚ್ಚಂಗಿಯ ಪಾಂಡ್ಯರದು. ಇವರು ಬಹುತೇಕ ಈ ಜಿಲ್ಲೆಗಳ ಸಾಕಷ್ಟು ಭೂಪ್ರದೇಶಗಳನ್ನು ತಮ್ಮ ಅಧೀನದಲ್ಲಿಟ್ಟುಕೊಂಡು ಒಂದೆಡೆ ಕಲ್ಯಾಣದ ಚಾಳುಕ್ಯರ ಸಾಮಂತರಾಗಿ ಅವರ ಉತ್ಕರ್ಷದ ಕಾಲ ಅಂತ್ಯವಾದ ನಂತರ

ಹೊಯ್ಸಳರ ಸಾಮಂತರಾಗಿ ಎರಡೂ ಮನೆತನಗಳ ಜೊತೆ ರಾಜಕೀಯ ಹೊಂದಾಣಿಕೆಯನ್ನು ಮಾಡಿಕೊಂಡು ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡ ಸಾಮಂತ ಮನೆತನ.[೩] ಈ ಎಲ್ಲ ದೃಷ್ಟಿಯಿಂದ ನೊಳಂಬವಾಡಿನಾಡಿನ ರಾಜಕೀಯ ಇತಿಹಾಸದಲ್ಲಿ ಇವರು ಪ್ರಮುಖ ಪಾತ್ರವನ್ನು ನಿರ್ವಹಿಸಿದರೆಂದರೆ ತಪ್ಪಾಗಲಿಕ್ಕಿಲ್ಲ. ಈ ಕಾಲಘಟ್ಟದಲ್ಲಿ ನಡೆದ ಸಾಮಾಜಿಕ, ಧಾರ್ಮಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಕುರಿತು ಈ ಅಧ್ಯಾಯದಲ್ಲಿ ವಿವೇಚಿಸಲಾಗಿದೆ.

ದಕ್ಷಿಣ ಭಾರತದ ರಾಜಕೀಯ ವ್ಯವಸ್ಥೆಯಲ್ಲಿ ಕಲ್ಯಾಣದ ಚಾಲುಕ್ಯರ ಕಾಲಘಟ್ಟ ಸಾಮಾಜಿಕವಾಗಿ, ಧಾರ್ಮಿಕವಾಗಿ ಮತ್ತು ಆರ್ಥಿಕವಾಗಿ ಅತಿಹೆಚ್ಚು ಪುರೋಭಿವೃದ್ಧಿಯನ್ನು ಸಾಧಿಸಿದ್ದ ಕಾಲವಾಗಿತ್ತು. ನೊಳಂಬವಾಡಿ ಪ್ರದೇಶ ಕೇವಲ ಭೂಮಾರ್ಗದಿಂದ ಸಂಪರ್ಕವನ್ನು ಸಾಧಿಸಿದ್ದರಿಂದ ಇದು ನೇರವಾಗಿ ವಿದೇಶಿ ವ್ಯಾಪಾರಕ್ಕೆ ತನ್ನನ್ನು ತೊಡಗಿಸಿಕೊಳ್ಳದಿದ್ದರೂ ಪರೋಕ್ಷವಾಗಿ ವಿದೇಶಿ ವ್ಯಾಪಾರದೊಂದಿಗೆ ಸಹ ತನ್ನ ಅಸ್ತಿತ್ವವನ್ನು ಹೊಂದಿದ್ದಿತು. ಮಧ್ಯಕಾಲೀನ ಯುಗದ ಸಾಮಾಜಿಕ ಮತ್ತು ಧಾರ್ಮಿಕ ವಿಚಾರಗಳಲ್ಲಿ ಹೆಚ್ಚು ಬದಲಾವಣೆಗಳು ಕಂಡುಬರಲಿಲ್ಲ. ಅಲ್ಲದೆ ಸಮಾಜದಲ್ಲಿದ್ದ ನೀತಿ, ವಿಷಯವಾಗಲಿ ಒಬ್ಬ ವ್ಯಕ್ತಿಯ ನೈತಿಕತೆಯಾಗಲಿ, ಶೈಕ್ಷಣಿಕ ಕ್ರಮಗಳಾಗಲಿ ಬದಲಾಗಲಿಲ್ಲ. ಆದರೆ ಅಗ್ರಹಾರಗಳ ರಚನೆ, ದೇವಾಲಯಗಳ ರಚನೆ, ಅವುಗಳ ಜೀರ್ಣೋದ್ಧಾರ ಇತ್ಯಾದಿ ಧಾರ್ಮಿಕ ಚಟುವಟಿಕೆಗಳು, ಕೆಲ ನಂಬಿಕೆಗಳನ್ನು ಆಧರಿಸಿದ್ದವು ಮತ್ತು ಸಾಮಂತ ಅರಸರ ಶಕ್ತಿ ಅನುಸಾರ ವಾಸ್ತು ಲಕ್ಷಣಗಳಲ್ಲಿ ಕೆಲವು ಬದಲಾವಣೆಗಳಾದವು. ಕಲ್ಯಾಣದ ಚಾಲುಕ್ಯರ ಹಾಗೂ ಪಾಂಡ್ಯರ ಶಾಸನಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಆ ಕಾಲಘಟ್ಟದ ಶಾಸನಗಳು ಶಿಕ್ಷಣಕ್ಕೆ ಧಾರ್ಮಿಕ ಚಟುವಟಿಕೆಗಳಿಗೆ ಯಾವುದೇ ಫಲಾಪೇಕ್ಷೆ ಇಲ್ಲದೆ ಸಮಾಜದ ಒಳಿತಿಗಾಗಿ ಸಮಾಜದ ನೈತಿಕ ಮಟ್ಟದ ಬೆಳವಣಿಗೆಗಾಗಿ ದಾನ ನೀಡಿದವುಗಳಾಗಿವೆ.[೪] ಹೊಯ್ಸಳರ ಕಾಲಘಟ್ಟದ ಶಾಸನಗಳು ಇದಕ್ಕೆ ಸ್ವಲ್ಪ ವ್ಯತಿರಿಕ್ತವಾಗಿ ತಂದೆ ತಾಯಿಗಳಿಗೆ ಪುಣ್ಯವಾಗಲೆಂದು, ರಾಜನಿಗೆ ಪುಣ್ಯವಾಗಲೆಂದು ಅರಸನಿಗೆ ಪುಣ್ಯವಾಗಲೆಂದು ರಾಜಕುಮಾರನ ಹುಟ್ಟುಹಬ್ಬದಂದು ವಿವಾಹ, ಸಿಂಹಾಸನೋರೋಹಣ ಇತ್ಯಾದಿ ವಿಶೇಷ ಸಂದರ್ಭಗಳಲ್ಲಿ ಆ ಸಂದರ್ಭಗಳ ನೆನಪಿಗೆ ಮತ್ತು ಪುಣ್ಯಸಾಧನೆಗಾಗಿ ದಾನ ಮಾಡುವ ಪ್ರವೃತ್ತಿ ಬೆಳೆದುಬಂದಿತು. ಶಾಸನಗಳಲ್ಲಿ ಈ ಬಗೆಯ ಹಲವು ಉಲ್ಲೇಖಗಳು ನಮಗೆ ಹೊಯ್ಸಳ ಕಾಲಘಟ್ಟದಲ್ಲಿ ಕಂಡುಬರುತ್ತವೆ.[೫] ಪಾಂಡ್ಯರ ಶಾಸನಗಳಲ್ಲಿ ಈ ರೀತಿಯ ಉಲ್ಲೇಖಗಳು ಕಂಡುಬಂದರೂ ಅದರ ಪ್ರಮಾಣ ಬಹಳ ಕಡಿಮೆ. ಚಟ್ನಹಳ್ಳಿ ಶಾಸನ ತಂದೆ ರಾಯಪಾಂಡ್ಯನಿಗೆ ಪುಣ್ಯವಾಗಲಿ ಎಂದು ದಾನ ಮಾಡಿರುವುದನ್ನು ಹೇಳುತ್ತದೆ. ಕಲ್ಯಾಣದ ಚಾಲುಕ್ಯರ ಶೈಕ್ಷಣಿಕ ಶಾಸನಗಳನ್ನು ಗಮನಿಸಿದಾಗ ಯಾವ ಫಲಾಪೇಕ್ಷೆಯೂ ಇಲ್ಲದೆ ವಿದ್ಯಾರ್ಥಿಗಳಿಗೆ ದಾನ ನೀಡುತ್ತಿದ್ದ ಶ್ರೀಮಂತ ಸಮುದಾಯ, ಆಡಳಿತಗಾರರು, ರಾಜರುಗಳು ಅದೇ ಹೊಯ್ಸಳರ ಕಾಲಘಟ್ಟದಲ್ಲಿ ಅಗ್ರಹಾರಗಳ ರಚನೆಯನ್ನು ಮಾತಾ ಪಿತೃಗಳಿಗೆ ವೈಕುಂಠ, ಕೈಲಾಸ ಸ್ಥಾನ ಪ್ರಾಪ್ತಿಯಾಗಲೆಂದು ನೀಡುವ ಪದ್ಧತಿ ಬೆಳೆದು ಬರುತ್ತದೆ. ಶಿಕ್ಷಣಕ್ಕೆ ಮೀಸಲಾಗಿ ಅಂದರೆ

ಋಗ್ವೇದದ ಬೋಧನೆಗೆ, ಯಜುರ್ವೇದದ ಅಧ್ಯಯನಕ್ಕೆ, ವೇದಾಂಗಗಳ ಪ್ರವಚನ ಮತ್ತು ಕಲಿಕೆಗೆ ಪ್ರತ್ಯೇಕವಾಗಿ ನೀಡುವ ಪದ್ಧತಿ ಕ್ಷೀಣಿಸಿ ಕೇವಲ ಅಗ್ರಹಾರಗಳ ರಚನೆಯೇ ಮಹತ್ವದ ಉದ್ದೇಶವಾಗಿ ಪರಿವರ್ತಿತವಾದುದು ಪ್ರಾಯಶಃ ವರ್ಣವ್ಯವಸ್ಥೆಯಲ್ಲಿ ಕಂಡುಬಂದ ಕಠೋರ ನಿಯಮಗಳು ಮತ್ತು ರಾಜರ ನಂಬಿಕೆಗಳಲ್ಲುಂಟಾದ ವಿಕ್ಷಿಪ್ತಗಳು ಇತ್ಯಾದಿಗಳು ಕಾರಣವೆಂದು ಭಾವಿಸಿದರೂ ದಾನ ಕೊಡುವ ಉದ್ದೇಶ ಬದಲಾದರೂ ಅದನ್ನು ಪರಿಪಾಲಿಸುವ ಮತ್ತು ಧರ್ಮಾಚರಣೆ ಕ್ರಮದಲ್ಲಿ ಬದಲಾವಣೆ ಕಂಡುಬಾರದಿರುವುದು ಮತ್ತೊಂದು ಪ್ರಮುಖ ಸಂಗತಿ. ಇದು ಧರ್ಮದ ಉಳಿವಿಗೆ, ಪ್ರಚಾರಕ್ಕೆ ಮತ್ತು ಅದರ ಮುಂದುವರಿಕೆಗೆ ಹಾಗೂ ಸನಾತನ ಪರಂಪರೆಯ ಮುಂದುವರಿಕೆಯ ಎಲ್ಲ ವಿಭಾಗಗಳಿಗೆ ಕಾರಣವಾಯಿತೆಂದು ಭಾವಿಸುತ್ತ ಸಾಮಾಜಿಕ, ಧಾರ್ಮಿಕ ಮತ್ತು ರಾಜಕೀಯ ಸ್ಥಿತಿಗತಿಗಳಲ್ಲಿ ಉಂಟಾಗುವ ಬೆಳವಣಿಗೆಯನ್ನು ಇಲ್ಲಿ ಚರ್ಚಿಸಲಾಗಿದೆ.

### ಉಚ್ಚಂಗಿ ಪಾಂಡ್ಯರ ಶಾಸನಗಳ ಸಾಂಸ್ಕೃತಿಕ ಸಮೀಕ್ಷೆ

ಕಲ್ಯಾಣದ ಚಾಳುಕ್ಯರ ರಾಜಕೀಯ ಚರಿತ್ರೆಯ ಪ್ರಮುಖ ಅಧ್ಯಯನಕಾರರಾದ ಡಾ.ಬಿ.ಆರ್.ಗೋಪಾಲ್‌ರವರು ಕಲ್ಯಾಣದ ಚಾಳುಕ್ಯರು ಬಾದಾಮಿ ಚಾಳುಕ್ಯ ಮನೆತನದವರೆಂದು ಭಾವಿಸುತ್ತಾರೆ. ಇದನ್ನು ಆನಂತರದ ಶಾಸನಾಧ್ಯಯನಗಳು ಖಚಿತಪಡಿಸುತ್ತವೆ. ಈ ಹಿನ್ನೆಲೆಯಲ್ಲಿ ಗಮನಿಸಿದಾಗ ಬಾದಾಮಿ ಚಾಳುಕ್ಯರ ಕಾಲಘಟ್ಟದಲ್ಲಿದ್ದ ಸ್ಥಿತಿಗತಿಗಳು, ಸಾಮಾಜಿಕ ಆಸ್ಥೆ, ಸಂಪ್ರದಾಯ ಇತ್ಯಾದಿ ಸಮಾಜದ ವ್ಯವಸ್ಥೆಗಳು ಹಿಂದಿನಂತೆಯೇ ಮುಂದುವರಿದವೆಂದು ಭಾವಿಸಲು ಅಡ್ಡಿಯಿಲ್ಲ. ಬಾದಾಮಿಯ ಚಾಳುಕ್ಯರು ಸನಾತನ ವೈದಿಕ ಪಂಥದ ಅನುಯಾಯಿಗಳಾಗಿದ್ದರಲ್ಲದೆ ಅವರು ಎಲ್ಲ ಧರ್ಮಗಳನ್ನು ಒಂದೇ ಭಾವದಿಂದ ಕಾಣುತ್ತಿದ್ದರೆಂಬುದಕ್ಕೆ ಅನೇಕ ಶಾಸನಗಳು ಸಮಕಾಲೀನ ಸಾಹಿತ್ಯಿಕ ಆಕರಗಳು ಮತ್ತು ಪ್ರವಾಸಿ ಕಥನಗಳು ಲಭ್ಯವಿವೆ. ಇದೇ ಪದ್ಧತಿ ಕಲ್ಯಾಣದ ಚಾಳುಕ್ಯರ ಕಾಲದಲ್ಲಿಯೂ ಮುಂದುವರಿಯಿತು.[೬] ಆದರೆ ಇವರು ಬಾದಾಮಿ ಚಾಳುಕ್ಯರಿಗಿಂತ ಹೆಚ್ಚಾಗಿ ಶೈವ ಮತದ ಕಡೆಗೆ ತಮ್ಮ ಗಮನಹರಿಸಿದ್ದರು. ಕಾರಣ ಆ ಕಾಲಘಟ್ಟದಲ್ಲಿದ್ದ ಪಾಶುಪತ ಮತ್ತು ಲಕುಲೀಶ ಪಂಥ ಅತಿ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದುಕೊಂಡಿದ್ದಿತು. ಜೊತೆಗೆ ಭಾಗವತ ವೈಷ್ಣವ ಪಂಥವೂ ಕೂಡ ಆ ಕಾಲಘಟ್ಟದಲ್ಲಿ ಹೆಚ್ಚು ಪ್ರಚಲಿತದಲ್ಲಿತ್ತು.[೭] ಬಾದಾಮಿ ಚಾಳುಕ್ಯರು ಶೈವ, ವೈಷ್ಣವ ಮತ್ತು ಶಾಕ್ತ, ಸೌರ, ಗಾಣಪತ್ಯ ಪರಂಪರೆಯನ್ನು ಮುಂದುವರೆಸಿಕೊಂಡು ಬಂದಂತೆ ಕಲ್ಯಾಣದ ಚಾಳುಕ್ಯರು ಮತ್ತವರ ನೊಳಂಬವಾಡಿನಾಡಿನ ಸಾಮಂತರ ಶಾಸನಗಳು ಈ ಎಲ್ಲ ಧರ್ಮಗಳು ಅಥವಾ ಪಂಥಗಳು ಹೊಯ್ಸಳರ ಯುಗಾಂತ್ಯದವರೆಗೂ ಮುಂದುವರಿದವೆಂದು ಖಚಿತವಾಗಿ ದಾಖಲಿಸುವಷ್ಟು ಆಕರಗಳು ದೊರೆಯುತ್ತವೆ.[೮] ಕಲ್ಯಾಣದ ಚಾಳುಕ್ಯರ ಕೊನೆಯ ಕಾಲಘಟ್ಟದಲ್ಲಿ ವೀರಶೈವ ಪಂಥ ತನ್ನ ಪರಾಕಾಷ್ಠೆಯ ಹಂತವನ್ನು ತಲುಪಿತಾದರೂ ಕಲ್ಯಾಣದ ಕ್ರಾಂತಿ ಅದಕ್ಕೊಂದು ಕಪ್ಪು ಚುಕ್ಕೆಯಾಯಿತು. ಆನಂತರ ಮತ್ತೆ ಅದು ಪ್ರವರ್ಧಮಾನವನ್ನು ಪಡೆದುಕೊಳ್ಳಲು ಕೆಲವು

ದಶಕಗಳು ಹಿಡಿದವು. ಆ ಹೊತ್ತಿಗೆ ದಖನ್ ಪ್ರಸ್ಥಭೂಮಿ ಮುಸಲ್ಮಾನರ ದಬ್ಬಾಳಿಕೆಗೆ ಒಳಗಾಯಿತು. ಇದು ದಕ್ಷಿಣ ಭಾರತದ ಧಾರ್ಮಿಕ ಮತ್ತು ರಾಜಕೀಯ ವಲಯದಲ್ಲಿ ಸಾಕಷ್ಟು ಸಂಚಲನವನ್ನು ಉಂಟುಮಾಡಿತೆಂದರೆ ತಪ್ಪಾಗಲಿಕ್ಕಿಲ್ಲ.

ಕಲ್ಯಾಣದ ಚಾಳುಕ್ಯರು ಹಾಗೂ ಕಳಚೂರಿಯರ ಆಳ್ವಿಕೆಯಲ್ಲಿ ಶೈವ ಪರಂಪರೆ ತನ್ನ ಪರಾಕಾಷ್ಠೆಯನ್ನು ಮುಟ್ಟಿತೆಂದು ಹೇಳಬಹುದು. ಇವರ ಸಾಮಂತ ಮಹಾಮಂಡಳೇಶ್ವರ ಮೊದಲಾದ ಸಾಮಂತರು ಅಧಿಕಾರಿಗಳು ಈ ಪರಂಪರೆಗೆ ಪ್ರಾಶಸ್ತ್ಯ ನೀಡಿದರು. ಕಾಳಾಮುಖ ಪಾಶುಪಥ ಪಂಥವು ಪ್ರಬಲವಾಯಿತು. ಲಕುಲೀಶನು ಪಾಶುಪತ ಪಂಥದ ಸ್ಥಾಪಕನು. ಪಾಶುಪಂಥ ಮತದಲ್ಲಿ ಶಿವ ಅಥವಾ ಪರಶಿವನು ಅತ್ಯಂತ ಶ್ರೇಷ್ಠನೆಂದು ಪರಿಗಣಿಸಲ್ಪಟ್ಟನು. ಶೈವ ಧರ್ಮವು ಶ್ರೀಸಾಮಾನ್ಯನನ್ನು ಮಾತ್ರವಲ್ಲದೆ ರಾಜಮನೆತನಗಳನ್ನು ಮಹಾಮಾಂಡಲೀಕರುಗಳನ್ನು, ಮಾಂಡಲೀಕರುಗಳನ್ನು ತನ್ನೆಡೆಗೆ ಸೆಳೆದುಕೊಂಡಿತ್ತು. ಇಮ್ಮಡಿ ಜಯಸಿಂಹನ ಪತ್ನಿಯಾದ ಸುಕಲಾದೇವಿಯು ತನ್ನ ಪತಿಯನ್ನು ಜಿನಧರ್ಮಾಚರಣೆಯಿಂದ ಶೈವ ಧರ್ಮಕ್ಕೆ ಪರಿವರ್ತಿಸಿದಳೆಂದು ಹೇಳಲಾಗಿದೆ. ಶೈವ ಧರ್ಮದ ಆಚಾರ್ಯರುಗಳು ಅತ್ಯಂತ ಪ್ರಖಾಂಡ ಪಂಡಿತರಾಗಿದ್ದರಲ್ಲದೆ ವೇದಾಧ್ಯಯಿನಿಗಳು, ಶಾಸ್ತ್ರ ವಿಶಾರದರುಗಳು ಆಗಿದ್ದರು.[೯] ಶಿಕಾರಿಪುರ ತಾಲ್ಲೂಕಿನ ಶಾಸನವೊಂದು ಲಕುಲೀಶ ಪಂಡಿತನನ್ನು ವಾದಿರುದ್ರ ಗಣನೆಂದು ಬಿರುದು ನೀಡಿ ಆತನು ವಿರೋಧಿಗಳನ್ನು ವಾದದಲ್ಲಿ ಮಣಿಸುತ್ತಿದ್ದನೆಂದು ಉಲ್ಲೇಖಿಸುತ್ತದೆ. ಬಳ್ಳಿಗಾವೆಯಲ್ಲಿ ಕಾಳಾಮುಖ ಪಂಥದ ಬ್ರಹ್ಮಚಾರಿ ಸ್ಥಾನವೆಂದು ಹೆಸರು ಪಡೆದಿದ್ದ ಪೊಟ್ಟಲಕೆರೆಯಲ್ಲಿ ಇಮ್ಮಡಿ ಜಯಸಿಂಹನು ತಂಗಿದ್ದಾಗ ಪಾಂಡವರಿಂದ ಪ್ರತಿಷ್ಠಾಪನೆ ಮಾಡಲ್ಪಟ್ಟ ಪಂಚಲಿಂಗ ದೇವಾಲಯದ ದುರಸ್ಥಿಗಾಗಿ ದಾನ ನೀಡಿದನೆಂದು ಶಿಕಾರಿಪುರದ ಶಾಸನವೊಂದು ದಾಖಲಿಸುತ್ತದೆ.[೧೦]

ಈ ಶಾಸನದಲ್ಲಿ ಶೈವ ಧರ್ಮವನ್ನು ಅನುಸರಿಸದ ಇತರರು ಆ ಪಟ್ಟಣವನ್ನು ಬಿಟ್ಟುಹೋಗಬೇಕೆಂದು ದಾಖಲಿಸಿರುವ ಪಂಕ್ತಿ ನಮ್ಮ ಗಮನ ಸೆಳೆಯುತ್ತದೆ. “ಇನ್ತಿಧರ್ಮ್ಮಮಂ ನಗರಂ ಪ್ರತಿಪಾಳಿಸುವುದು ನೈಷ್ಠಿಕರಲ್ಲ ದರಪೂಜಿಮದೇಶಿಕಳೆವುದು” ಮಹಬೂಬ್ ನಗರದ ಶಾಸನವೊಂದರಲ್ಲಿ ಕಾಳಾಮುಖ ಪಂಥದ ಅಗಸ್ತ್ಯ ಗುರುವನ್ನು ವ್ರತನಿಷ್ಠನೆಂದು ಬಣ್ಣಿಸಿರುವುದು ದಾಖಲಾಗಿದೆ.[೧೧] ಇಲ್ಲಿಯ ಮತ್ತೊಂದು ಶಾಸನದಲ್ಲಿ ಮೀನಾಂಬರ ಮಠದ ಮುನಿಯಾದ ಚೂಡಾಮಣಿ ಧ್ಯಾನದ ಮೂಲಕ ಗಳಿಸಿದ್ದ ಆಧ್ಯಾತ್ಮಿಕ ಜ್ಞಾನವನ್ನು ಬಹಳವಾಗಿ ಕೊಂಡಾಡಲಾಗಿದೆ. ಕ್ರಿ.ಶ. ೧೧೪೨ರ ಶಾಸನದಲ್ಲಿ ನೈಷ್ಠಿಕ ಮಠವೊಂದರ ಪ್ರಸ್ತಾಪವಿದೆ. ಬ್ರಹ್ಮಚರ್ಯವನ್ನು ಅತ್ಯಂತ ಕಟ್ಟುನಿಟ್ಟಾಗಿ ಪಾಲಿಸದ ಮಠಾಧಿಪತಿಯನ್ನು ಮಠದಿಂದ ಹೊರದೂಡಬೇಕೆಂದು ಶಾಸನವೊಂದು ದಾಖಲಿಸುತ್ತದೆ.[೧೨]

ವೈಷ್ಣವ ಧರ್ಮ ಪ್ರಬಲವಾಗಿದ್ದ ಹಳೇಬೀಡಿನಲ್ಲಿ ಕೂಡ ಕಾಳಾಮುಖ ಪಂಥದ ಬಗ್ಗೆ ಅತ್ಯಂತ ಅಧಿಕಾರಯುತವಾಗಿ ಮಾತನಾಡಬಲ್ಲ ವ್ಯಕ್ತಿಯೋರ್ವನಿದ್ದನೆಂದು ತಿಳಿದುಬರುತ್ತದೆ.[೧೩] ಸಾಗರದ ಶಾಸನಗಳಲ್ಲಿ ಪರ್ವತಾವಳಿಯ ಕಾಳಾಮುಖ ಪಂಥದ ಪ್ರಮುಖ ಆಚಾರ್ಯರಾಗಿದ್ದ ವಾದಿರುದ್ರ ಪಂಡಿತನನ್ನು ಮುಕ್ತಕಂಠದಿಂದ ಹೊಗಳುವುದಲ್ಲದೆ ಆತನ ಶಿಷ್ಯನನ್ನು ಕ್ರಿಯಾಶಕ್ತಿ

ಪಂಡಿತನೆಂದು ದಾಖಲಿಸಲಾಗಿದೆ.[೧೪] ಕಳಚೂರಿಯರ ಕಾಲದ ಶಾಸನದಲ್ಲಿ ರಾಮತೀರ್ಥರ ರಾಮೇಶ್ವರ ಆಲಯದ ಆಚಾರ್ಯನಾಗಿದ್ದ ಚಂದ್ರಾಭರಣ ಪಂಡಿತ ದೇವ ಮುನಿಗಳ ಶ್ರೇಣಿಯಲ್ಲಿ ಪ್ರಥಮ ಸ್ಥಾನದಲ್ಲಿದ್ದನೆಂದು ವರ್ಣಿಸುತ್ತದೆ.[೧೫]

ಚಾಳುಕ್ಯರ ಕಾಲದ ಶ್ರೀಮಂತರು, ದಂಡನಾಯಕರು, ಅನೇಕ ವರ್ತಕರು, ದೇವಾಲಯಗಳ ನಿರ್ಮಾಣಕ್ಕೆ, ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ ದೇವರ ಅಂಗಭೋಗ, ರಂಗಭೋಗಕ್ಕೆ, ನೈವೇದ್ಯಕ್ಕೆ ಮಠಗಳಲ್ಲಿ ವಾಸಿಸುವ ಆಚಾರ್ಯರಿಗೆ, ಋಷಿಗಳ ಆಹಾರಕ್ಕೆ, ಮಾಣಿಗಳ/ ವಿದ್ಯಾರ್ಥಿಗಳ ಭೋಜನಕ್ಕೆ ಮುಂತಾದ ಧಾರ್ಮಿಕ ಕೈಂಕರ್ಯಗಳಿಗೆ ಅಪಾರವಾಗಿ ದಾನ ನೀಡಿದ ವಿವರಗಳು ಶಾಸನಗಳಲ್ಲಿ ದಾಖಲಾಗಿವೆ. ಈ ಎಲ್ಲವನ್ನೂ ಗಮನಿಸಿದಾಗ ಕಲ್ಯಾಣದ ಚಾಳುಕ್ಯರು ಅವರ ಸಾಮಂತರಾದ ಉಚ್ಚಂಗಿ ಪಾಂಡ್ಯರ ಕಾಲಘಟ್ಟದಲ್ಲಿ ಧಾರ್ಮಿಕ ಆಸಕ್ತಿ ನೈತಿಕತೆಯ ಹರಡುವಿಕೆ ಮತ್ತು ಪ್ರತಿ ವ್ಯಕ್ತಿಯೂ ಧಾರ್ಮಿಕವಾಗಿ ಮುಂದುವರಿಯುವ ಬಗೆಗೆ ಜನರಲ್ಲಿ ಸದಭಿಪ್ರಾಯವಿತ್ತೆಂದು ಭಾವಿಸುವ ಮಟ್ಟಿಗೆ ಸಾಕಷ್ಟು ಶಾಸನೋಲ್ಲೇಖಗಳು ಕಂಡುಬರುತ್ತವೆ. ತ್ರಿಭುವನ ಮಲ್ಲ ವೀರಸೋಮೇಶ್ವರನ ಆಳ್ವಿಕೆಗೆ ಸಂಬಂಧಿಸಿದ ಶಿರಸಂಗಿಯ ಶಾಸನದಲ್ಲಿ ಋಷ್ಯಶೃಂಗದ ಮಹಾಪ್ರಭು ವಾಗಿದ್ದ ಹೆಬ್ಬೆಯ ನಾಯಕನು ಹೆಬ್ಬೇಶ್ವರ ದೇವರ ಸೇವೆಗಾಗಿ ನಾಲ್ಕು ಮತ್ತರು ಭೂಮಿಯನ್ನು ದತ್ತಿಯಾಗಿ ಬಿಟ್ಟಿದುದನ್ನು ಅವನ ಹಿರಿಯ ನಾಯಕಿತಿಯು ಉಮಾಮಹೇಶ್ವರ ದೇವಾಲಯವನ್ನು ಕಟ್ಟಿಸಿ ಒಂದು ಮತ್ತರು ಭೂಮಿಯನ್ನು ದಾನ ಮಾಡಿದುದನ್ನು ದಾಖಲಿಸುತ್ತದೆ.[೧೬]

ಪ್ರಾಯಶಃ ವಾಣಿಜ್ಯ ಸಂಘಕ್ಕೆ ಸಂಬಂಧಪಟ್ಟ ನಖರ ಸಂಘದವರು ಹೆಬ್ಬೇಶ್ವರ ದೇವಾಲಯದಲ್ಲಿ ಚಿತ್ರ ಮತ್ತು ಪವಿತ್ರ ಹಬ್ಬಗಳ ಆಚರಣೆಗಾಗಿ ಹಣವನ್ನು, ಸಾಮಗ್ರಿಗಳನ್ನು ದಾನ ಮಾಡಿದುದನ್ನು ದಾಖಲಿಸುತ್ತದೆ. ಮಹಾರಾಜಾಧಿರಾಜ, ರಾಮಪರಮೇಶ್ವರ, ತ್ರಿಭುವನಮಲ್ಲ ಆರನೇ ವಿಕ್ರಮಾದಿತ್ಯನು ರಾಜ್ಯವಾಳುತ್ತಿದ್ದ ಕಾಲದಲ್ಲಿ ಹೊರಡಿಸಲಾದ ಅಕ್ಕಲಕೋಟೆ ಶಾಸನದಲ್ಲಿ ಸಾಮಂತನಾದ ಮಹಾಮಂಡಳೇಶ್ವರ ಇಂದರಸನು ಕುಮಾರ ತೈಲದೇವನ ಸಾಕು ತಾಯಿಯಾದ ಭೋಗಿಯಬ್ಬರಸಿಯು ದಂಡನಾಯಕ ಪ್ರಭುಕೇಸರಿ ನಾಯಕನು ಒಟ್ಟಾರೆಯಾಗಿ ಸಿದ್ಧಗಜ್ಜೇಶ್ವರ ದೇವಾಲಯಕ್ಕೆ ನೂರು ಮತ್ತರು ಭೂಮಿಯನ್ನು ದಾನ ಮಾಡಿದುದನ್ನು ಆ ದಾನವನ್ನು ಶ್ರೀಜ್ಞಾನಸಿದ್ದೇಶ್ವರನು ಅನ್ನದಾನ ವಿನೋದನೆಂದು ಹೆಸರು ಪಡೆದಿದ್ದವನು ಅದನ್ನು ಸ್ವೀಕರಿಸಿದಂತೆ ಶಾಸನವು ದಾಖಲಿಸುತ್ತದೆ.[೧೭]

ರಾಮತೀರ್ಥರ ರಾಮೇಶ್ವರ ದೇವರಿಗೆ ಚವುಣಯ್ಯ ಮತ್ತು ಮಹಾಮಂಡಳೇಶ್ವರ ಪೆರ್ಮಾಡಿ ಅರಸರ ನೇತೃತ್ವದಲ್ಲಿ ಕರಣರು ದತ್ತಿ ಬಿಟ್ಟದ್ದನ್ನು ಮತ್ತೊಂದು ಶಾಸನ ದಾಖಲಿಸುತ್ತದೆ.[೧೮] ರಾಜಕುಮಾರ ಸೋಮೇಶ್ವರನು ತನ್ನ ತಂದೆಯಾದ ಆರನೇ ವಿಕ್ರಮಾದಿತ್ಯನ ಅನುಮತಿಯೊಂದಿಗೆ ಹರಿಕೇಶ್ವರ ದೇವರ ಪೂಜೆಗೆ ಹೂದೋಟವನ್ನು ನೀಡಿದುದನ್ನು ಶಾಸನವೊಂದು ದಾಖಲಿಸುತ್ತದೆ.[೧೯] ವೇಗುಲವಾಡದ ಅರಿಕೇಸರಿಯ ಅಧಿಕಾರಿಯಾದ ಪೆದ್ದಣನು ತನ್ನ ಅರಸನ ಅನುಮತಿಯೊಂದಿಗೆ

ವೇಳುಂಬ ವಾಟಕದಲ್ಲಿದ್ದ ದೇವಾಲಯಕ್ಕೆ ದಾನ ಮಾಡಲು ಕೋರಿಕೊಂಡಾಗ ಅರಿಕೇಸರಿಯು ಆ ದಾನ ನಿರ್ವಹಿಸಿದುದನ್ನು ಮತ್ತೊಂದು ಶಾಸನ ದಾಖಲಿಸುತ್ತದೆ.[೨೦]

ಕಲ್ಯಾಣ ಚಾಳುಕ್ಯರ ಸಾಮಂತರಾಗಿದ್ದ ಸಿಂಧರ ಕಾಲಘಟ್ಟದ ಶಾಸನಗಳು ಕಲ್ಯಾಣದ ಚಾಳುಕ್ಯರ ರಾಜರುಗಳು ಮತ್ತು ಆ ಕಾಲದ ಧಾರ್ಮಿಕ ವ್ಯವಸ್ಥೆಯನ್ನು ಮುಂದುವರೆಸಿಕೊಂಡು ಹೋದುದನ್ನು ಯಥಾವತ್ತಾಗಿ ರೂಪಿಸುತ್ತವೆ. ಕುಡಿತಿನಿಯಲ್ಲಿ ದೊರೆತಿರುವ ೧೧೯೮ರ ಶಾಸನವು ಕುಮಾರಸ್ವಾಮಿ ದೇವಾಲಯಕ್ಕೆ ಬೇಚೋಳಜನ ಮಗನಾದ ಚಿಕ್ಕ ಮಾದೇಜನು ಸ್ವಾಮಿಯ ಸನ್ನಿಧಿಗೆ ೧೨ ಗದ್ಯಾಣಗಳನ್ನು ದಾನ ನೀಡುತ್ತಾನೆ. ಅಷ್ಟೇ ಅಲ್ಲದೆ ಅಲ್ಲಿಯೇ ದೊರೆತಿರುವ ಮತ್ತೊಂದು ಶಾಸನವು ತ್ರಿಭುವನ ಮಲ್ಲನ ಆಳ್ವಿಕೆಗೆ ಸಂಬಂಧಿಸಿದ್ದಾಗಿದ್ದು ಮಲ್ಲರಸ ಗೌರೇಶ್ವರ ದೇವರಿಗೆ ನೀಡಿದ ದಾನವನ್ನು ದಾಖಲಿಸುತ್ತದೆ.[೨೧]

ಅಲ್ಲದೆ ಬೇಕರಸರ ಮಗ ಮಲ್ಲಿದೇವ ಕುಡಿತಿನಿಯ ಸ್ವಾಮಿಯ ಜಾತ್ರೆಗೆ ಬರುವ ಕಪ್ಪಡಿಗಳ ಸತ್ರಕ್ಕೆ (ಛತ್ರಕ್ಕೆ) ಭೂಮಿ ದಾನವನ್ನು ನೀಡಿದುದನ್ನು ದಾಖಲಿಸುತ್ತದೆ. ದಂಡಸಾನಿ, ಲೋಹಸಾನಿ, ಮಾಧವ ಬ್ರಹ್ಮಚಾರಿ ಮತ್ತು ಸ್ಥಾನದ ೫ ವರ್ಗದವರ ಸಮ್ಮುಖದಲ್ಲಿ ದಾನ ನೀಡಿರುವುದು ವಿಶೇಷ. ಪ್ರಾಯಶಃ ಇವರು ವಿಶ್ವಕರ್ಮ ಸಮುದಾಯದ ಐದೂ ವರ್ಗದ ಮುಖಂಡರಾಗಿದ್ದರೆಂದು ಭಾವಿಸಬೇಕಾಗುತ್ತದೆ. ವಾಜಿ ವಂಶದ ಮಾರ್ತಾಂಡ ನಾಯಕನು ಮಾರ್ತಾಂಡೇಶ್ವರ ವಿನಾಯಕ ಸರಸ್ವತಿ ದೇವಿಯ ಆಲಯವನ್ನು ನಿರ್ಮಿಸಿ ಅಲ್ಲಿಗೆ ಬರುವ ಮತ್ತು ವಾಸವಾಗಿರುವ ಋಷಿಗಳ ಆಹಾರಕ್ಕಾಗಿ ದಾನ ನೀಡಿದುದನ್ನು ಶಾಸನವೊಂದು ದಾಖಲಿಸುತ್ತದೆ. ಅದೇ ಶಾಸನವು ಮಾಚೀಗೌಡನು ಇದೇ ದೇವಾಲಯಕ್ಕೆ ಭೂಮಿ ದಾನ ನೀಡಿದುದನ್ನು ದಾಖಲಿಸುತ್ತದೆ.[೨೨]

ಸಿರಗುಪ್ಪ ತಾಲ್ಲೂಕಿನ ೧೧೯೧ರ ಶಾಸನವು ತ್ರಿಭುವನಮಲ್ಲದೇವನ ಪತ್ನಿಯಾದ ಪಿರಿಯ ಕೇತಲದೇವಿಯು ಸಿರಗುಪ್ಪೆ ತೆಕ್ಕೆಕಲ್ಲು, ಕೆಳಗನೂರುಗಳನ್ನು ಆಳ್ವಿಕೆ ಮಾಡುತ್ತಿದ್ದಾಗ, ಸಿರಗುಪ್ಪೆಯ ಕೇತಲೇಶ್ವರ ದೇವಿಯ ಅಂಗಭೋಗ, ರಂಗಭೋಗ, ನಂದಾದೀವಿಗೆಗೆ ಹಾಡುವ ವರ್ಗದವರಿಗೆ ಮುಂತಾದ ಧರ್ಮಕಾರ್ಯಗಳಿಗೆ ಸಿರಗುಪ್ಪೆಯಲ್ಲಿ ೩೨ ಗೇಣು ಗದ್ದೆ, ಕೊಳಗನೂರಿನಲ್ಲಿ ೪೨ ಗೇಣು ಭೂಮಿಯನ್ನು ದಾನ ನೀಡಿದುದನ್ನು ಶಾಸನವೊಂದು ದಾಖಲಿಸುತ್ತದೆ. ಇದರ ಜೊತೆ ಚೋಕರಸನು ದೇವರಿಗೆ ಮತ್ತು ಅಲ್ಲಿರುವ ಬ್ರಾಹ್ಮಣರ ಭೋಜನಕ್ಕಾಗಿ ದಾನ ನೀಡಿದ ಭೂಮಿಯನ್ನು ದಾಖಲಿಸುತ್ತದೆ.[೨೩]

ಕೂಡ್ಲಿಗಿ ತಾಲ್ಲೂಕಿನ ಹ್ಯಾಳ್ಯದಲ್ಲಿ ದೊರೆತಿರುವ ೧೧೫೪ರ ಶಾಸನವು ತ್ರಿಭುವನಮಲ್ಲ ವೀರಪಾಂಡ್ಯ ದೇವನ ಸಾಮಂತನಾದ ಕೊಟ್ಟೂರಿನ ಕದಂಬ ವಂಶದ ನಾಚಿದೇವರಸ ಎಳೆಹಂದದ ಅಗಸ್ತ್ಯೇಶ್ವರ ದೇವಾಲಯಕ್ಕೆ ನೀಡಿದ ದಾನಗಳನ್ನು ಮಣಂಬ ದೇವರಸ ಅಗಸ್ತ್ಯೇಶ್ವರ ದೇವಾಲಯಕ್ಕೆ, ಎಲೆತೋಟಕ್ಕೆ ದಾನ ನೀಡಿದುದನ್ನೂ ದಾಖಲಿಸುತ್ತದೆ.[೨೪] ಬಳ್ಳಾರಿ ತಾಲ್ಲೂಕಿನ ಕುರುಕೋಡುನಲ್ಲಿ ದೊರೆತ ಕ್ರಿ.ಶ. ೧೧೮೧ರ ಶಾಸನವು ಬೇಚರಾಜನು ಸ್ವಯಂಭು ದೇವರ ದೇವಾಲಯವನ್ನು

ನಿರ್ಮಿಸಿ ದೇವರ ಅಂಗರಂಗ ಭೋಗ ವೈಭೋಗಕ್ಕಾಗಿ ಜಿಂತೆ ಗ್ರಾಮವನ್ನು ದಾನ ನೀಡುತ್ತಾನೆ. ಅಲ್ಲದೆ ಎರಡನೇ ರಾಚಮಲ್ಲ ಶ್ರೀಪುರುಷ ಅಗ್ರಹಾರವನ್ನು ನಿರ್ಮಾಣ ಮಾಡಿದುದನ್ನು ಉಲ್ಲೇಖಿಸುತ್ತದೆ.[೨೫] ಕ್ರಿ.ಶ. ೧೧೧೨ರ ಕೊಟ್ಟೂರು ಶಾಸನ ಕೊಟ್ಟೂರಿನ ರಾಮೇಶ್ವರ ದೇವರಿಗೆ ಕದಂಬ ಘಟ್ಟಿ ಅರಸನು ಕೊಟ್ಟೂರಿನ ನೇರಲಿಕೆರೆಯ ಕೆಳಗಿನ ಗದ್ದೆಯನ್ನು ದಾನ ಮಾಡಿದುದರ ಜೊತೆಗೆ ಸಾವಿರ ಬಳ್ಳಿಯ ಎಲೆಯ ತೋಟ, ಗಾಣ, ಕೋಟೆಯಲ್ಲಿ ನಾಲ್ಕು ಮನೆಗಳ ದಾನ ನೀಡಿದುದನ್ನು ದಾಖಲಿಸುತ್ತದೆ.[೨೬]

ಆರನೇ ವಿಕ್ರಮಾದಿತ್ಯನ ಕಾಲದ ಕೊಟ್ಟೂರಿನ ಶಾಸನವು ಜಗದಳ ಮಾಂಡಲೀಕ ಮತ್ತು ತಿರಿಮಯ್ಯ ಗೋದಣ, ಕೊಟ್ಟೂರಿನ ರಾಮೇಶ್ವರ ದೇವರಿಗೆ ನೀಡಿದ ದಾನಗಳನ್ನು ಹಲವಾರು ವ್ಯಾಪಾರಸ್ಥರು ಮತ್ತು ಬೇರೆ ಊರುಗಳಿಂದ ಬರುವವರಿಂದ ಪಡೆದ ಸುಂಕವನ್ನು ಈ ದೇವರಿಗೆ ದಾನ ಬಿಡಲಾಗಿದೆ.[೨೭]

ತ್ರಿಭುವನಮಲ್ಲದೇವರ ಸಾಮಂತನು ಹನಸೇಯ ಪರಶುರಾಮೇಶ್ವರ ದೇವರ ಅಂಗಭೋಗ, ರಂಗಭೋಗಕ್ಕೆ, ಸ್ನಾನಕ್ಕೆ, ನೈವೇದ್ಯಕ್ಕೆ, ಅತಿಥಿ ಅಭ್ಯಾಗತರಿಗೆ, ತಪೋಧನರ ಆಹಾರಕ್ಕೆ, ವಿದ್ಯಾರ್ಥಿ ಮಾಣಿಗಳ ಆಹಾರ ದಾನಕ್ಕಂ ಖಂಡಸ್ಫುಟಿತ ಜೀರ್ಣೋದ್ಧಾರಕ್ಕಂ ಕ್ರಿ.ಶ. ೧೧೧೧ರಲ್ಲಿ ಚಿಕ್ಕಲಬ್ಬಗೆರೆ ಗ್ರಾಮವನ್ನು ಸೋಮಕರ್ತ್ಥರ ಪಂಡಿತದೇವರ ಕಾಲು ತೊಳೆದು ದಾನ ನೀಡಿದ್ದಾರೆ.[೨೮] ಅಂಬಳಿಯ ಇದೇ ಕಾಲದ ಶಾಸನವೊಂದು ಜಗದ್ದಾಳ ಪಾಂಡ್ಯನ ಕಾಲದಲ್ಲಿ ಅಮ್ಮಳಿಯ ಕಲಿದೇವರಿಗೆ ಕೋಗಳಿಯ ಭೂಮಿಯನ್ನು ದಾನ ಮಾಡಿದ ವಿವರಗಳನ್ನು ಹೇಳುತ್ತದೆ.[೨೯] ಇದೇ ಗ್ರಾಮದ ಕ್ರಿ.ಶ. ೧೧೪೩ರ ಶಾಸನವೊಂದು ಅಮ್ಮಳಿಗೆಯಲ್ಲಿ ನರಸಿಂಹ ದೇವಾಲಯವನ್ನು ಜ್ಞಾನಪ್ರಕಾಶ ಭಟ್ಟಾರಕರು ಕಟ್ಟಿಸಿದುದನ್ನು ಆನಂತರ ಕದಂಬ ಘಟ್ಟಿದೇವನು ಚೀಬಿ ದೇವರಸನು ಆ ದೇವಾಲಯಕ್ಕೆ ಹಲವು ವಿಧದ ದಾನಗಳನ್ನು ನೀಡಿದುದನ್ನು ದಾಖಲಿಸುತ್ತದೆ.[೩೦] ಇಲ್ಲಿ ಶಾಸನದ ವಿಶೇಷವೆಂದರೆ ಶೈವ ಪರಂಪರೆಯ ಗಟ್ಟಿದೇವ ಹಾಗೂ ಚೀಬಿ ದೇವರಸ ನರಸಿಂಹ ದೇವಾಲಯಕ್ಕೆ ದಾನ ನೀಡಿದುದನ್ನು ವೈಷ್ಣವ ಮತ್ತು ಶೈವ ಪಂಥಗಳ ನಡುವಿನ ಪರಸ್ಪರ ಸಾಮರಸ್ಯದ ಸಂಕೇತವಾಗಿ ಗುರುತಿಸಬಹುದು.

ಅಲಬೂರಿನಲ್ಲಿ ದೊರೆತಿರುವ ಕ್ರಿ.ಶ. ೧೧೪೭ರ ಜಗದೇಕಮಲ್ಲನ ಸಿಂಹಾಸನಾರೋಹಣದ ಹತ್ತನೆಯ ವರ್ಷದ ಕಾಲದಲ್ಲಿನ ಶಾಸನವು ಸ್ವಯಂಭು ಮೂಲದೇವರಿಗೆ ಅಲಬೂರಿನ ಎಂಬತ್ನಾಲ್ಕು ಮಹಾಜನರು ಕಾಳಾಮುಖ ಯತಿಯಾದ ವಾಮಶಕ್ತಿ ಪಂಡಿತರ ಕಾಲು ತೊಳೆದು ದಾನ ನೀಡುತ್ತಾರೆ.[೩೧] ಇಲ್ಲಿ ಕೂಡ ಗಮನಿಸಬೇಕಾದುದೇನೆಂದರೆ ಕೇವಲ ಮಹಾರಾಜರು, ಚಕ್ರವರ್ತಿಗಳು, ಮಾಂಡಲೀಕರು, ರಾಣಿಯರು ಅಲ್ಲದೆ ಗ್ರಾಮದ ಸಾಮಾನ್ಯರು ಕೂಡ ಧಾರ್ಮಿಕ ಸ್ಥಳಗಳಿಗೆ ಮತ್ತು ಅವುಗಳ ಧಾರ್ಮಿಕ ಆಚರಣೆಗಳಿಗೆ ದಾನ ನೀಡಿದ ಸಂಗತಿಗಳನ್ನು ಮತ್ತೆ ದಾಖಲಿಸುತ್ತದೆ.

ಉಲುವತ್ತಿ ಗ್ರಾಮದ ರಾಮೇಶ್ವರ ದೇವರಿಗೆ ಉಯಲ್‌ವೃತ್ತಿಯ ಪ್ರಭು ಅಜಗಾಮುಂಡ ತನ್ನ ತಂದೆ ಸಿಂಗಗಾವುಂಡನಿಗೆ ಶಾಂತಿಕವ್ವೆ ಗಾವುಂಡರಿಗೆ ಶ್ರೇಯಸ್ಸಾಗಲಿ ಎಂದು ಗಾಣಿಗ ದೇವರ ನಂದಾದೀಪಕ್ಕೆ ಅಲ್ಲಿನ ಸ್ಥಾನಪತಿಯ ಕಾಲಕರ್ಚಿಮಾಡಿ ದಾನ ಬಿಟ್ಟ ವಿವರಗಳನ್ನು ನೀಡುತ್ತದೆ.[೩೨]

ಹಡಗಲಿ ತಾಲ್ಲೂಕಿನ ಕುರುವತ್ತಿಯ ೧೧೯೯ರ ಶಾಸನವು ಕಾಳಾಮುಖ ಪಂಥದ ಋಷಿಗಳನ್ನು, ಯತಿಗಳನ್ನು ಉಲ್ಲೇಖಿಸುತ್ತದೆ. ಅಭಿನವ ಸೋಮೇಶ್ವರ ದೇವರಿಗೆ ಋಷಿಗಳ ಆಹಾರಕ್ಕಾಗಿ ಕುರುವತ್ತಿಯ ೨೦೦ ಮಹಾಜನರು ಮತ್ತು ಮುಖಂಡರುಗಳು ನೀಡಿದ ದಾನವನ್ನು ಲಕುಲೀಶ ಪಂಡಿತನ ಸನ್ನಿಧಿಯಲ್ಲಿ ಭೂದಾನ ಮತ್ತು ಸುಂಕಗಳು ಕುರುವತ್ತಿಗೆ ಬರುವ ಮತ್ತು ಹೊರಹೋಗುವ ಧಾನ್ಯ, ಹತ್ತಿ, ಹುಲ್ಲು, ಸೌದೆ, ತರಕಾರಿ, ಹಣ್ಣು ಮುಂತಾದ ವಸ್ತುಗಳ ಮೇಲಿನ ಸುಂಕವನ್ನು ದಾನ ನೀಡಿದ ವಿವರಗಳನ್ನು ಹೊಂದಿದೆ.[೩೩]

ಗುತ್ತ ವಂಶದ ವಿಕ್ರಮಾದಿತ್ಯನನ್ನು ಉಲ್ಲೇಖಿಸುವ ಕ್ರಿ.ಶ. ೧೧೦೪ರ ಕುರುವತ್ತಿಯ ಶಾಸನವು ಚಾಳುಕ್ಯ ತ್ರಿಭುವನಮಲ್ಲದೇವನ ಆಳ್ವಿಕೆಯಲ್ಲಿ ಮತ್ತು ಗಂಡರಾದಿತ್ಯನ ಹೊಳಲ ಅಗ್ರಹಾರದ ಮಹಾಜನಗಳು ಮನ್ನೆಯ ಬೊಪ್ಪಯ್ಯನು ಹೊಳಲನ್ನು ಸೆರೆಹಿಡಿದು, ಗ್ರಾಮವನ್ನು ಸುಲಿಗೆ ಮಾಡಿ ಬ್ರಾಹ್ಮಣರನ್ನು ಕೊಂದನೆಂದು ದೊರೆಗೆ ದೂರು ನೀಡುತ್ತಾರೆ. ಆಗ ದೊರೆಯು ಅವನನ್ನು ದಂಡಿಸಿ ಅವನು ಮತ್ತು ಅವನ ಸಂತತಿಯವರು ಹೊಳಲಿನ ಮನ್ನೆಯವನ್ನು ಪಡೆಯದಂತೆ ಆಜ್ಞಾಪಿಸುತ್ತಾರೆ. ಆ ಪ್ರಕಾರ ಒಪ್ಪಿ ಬೆಣ್ಣವೂರು ೧೨, ನೀರುಗುಂದ, ೨ ಹಡಂಗಿಲೆಗಳು, ಮಾಂಗೋಳ, ಬಿದರಳ್ಳಿ, ಹಹನೂರು, ಹೊನ್ನವಳ್ಳಿ, ಕುರುವತ್ತಿ ಮತ್ತು ಬಾಳ್ಗಳಿಯನ್ನೊಳಗೊಂಡಂತೆ ೩೨ ಸಾವಿರ ಜನರ ಸಮ್ಮುಖದಲ್ಲಿ ತ್ರಿಪುತಾಂತಕ ದೇವರ ಬಳಿ ಬೊಪ್ಪಯ್ಯನು ನೀರು ಕುಡಿದು ಈ ಶಾಸನವನ್ನು ಹಾಕಿಸಿದನೆಂದು ಹೇಳುತ್ತದೆ.[೩೪] ಆಡಳಿತದ ಸಾಮಾಜಿಕ ನೀತಿ-ನಿಯಮಗಳನ್ನು ತಪ್ಪಿ ನಡೆದುಕೊಂಡರೆ ದಂಡ-ಶಿಕ್ಷೆ ಮತ್ತು ತಾವು ಹೊಂದಿದ್ದ ಅಧಿಕಾರವನ್ನು ಹಿಂದಕ್ಕೆ ಪಡೆಯುವ ಕ್ರಮ ಜಾರಿಯಿರುವುದನ್ನು ತೋರಿಸುತ್ತದೆ. ಹೊಯ್ಸಳ ವೀರಬಲ್ಲಾಳನ ಕಾಲದ ಉಲ್ಲೇಖವಿರುವ ಶಾಸನದಲ್ಲಿ ಮಹಾಮಂಡಲೇಶ್ವರ ವೀರ ಗೋಮದೇವರು ಶಸ್ತ್ರ ಮತ್ತು ಶಾಸ್ತ್ರ ನಿಪುಣ ಮತ್ತು ಯಾದವರ ಕೀರ್ತಿಯನ್ನು ಬೆಳಗಿಸಿದವನು. ಇವನು ಬೆಣ್ಣೆಯೂರ ೧೨ರ ಹರುಹೆಯ ಉತ್ತರಕ್ಕೆ ೩೬ ಮತ್ತರು ಭೂಮಿಯನ್ನು ಅಹಮಲ್ಲೇಶ್ವರ ದೇವರ ಪೂಜಾಕೈಂಕರ್ಯಕ್ಕೆ ದಾನ ಮಾಡಿದನು. ಈ ದಾನದ ಜವಾಬ್ದಾರಿಯನ್ನು ನೋಡಿಕೊಳ್ಳಲು ಲೋಕಾಭರಣನಿಗೆ ವಹಿಸಿದನು.[೩೫] ಲೋಕಾಭರಣನ ಹೆಸರು ಇದರಲ್ಲಿ ಉಲ್ಲೇಖವಾಗುವುದರಿಂದ ಇದನ್ನು ಎರಡನೇ ಬಲ್ಲಾಳನ ಕಾಲದ ಶಾಸನವೆಂದು ಭಾವಿಸಲು ಅಡ್ಡಿಯಿಲ್ಲ. ಮುಂದುವರಿದು ಅದೇ ದೇವಾಲಯದ ಕ್ರಿ.ಶ. ೧೧೮೧ರ ಡಿಸೆಂಬರ್ ೨೫ರಂದು ಹೊರಡಿಸಿದ ಶಾಸನವು ವಿಕ್ರಮಾದಿತ್ಯನು ಬೆಳುಹುಗೆ ೭೦ ಮತ್ತು ಬೆಣ್ಣೆವೂರು ೧೨ನ್ನು ಆಳುತ್ತಿರುವಾಗ ಆತನ ಪ್ರಧಾನ

ಸುಸಂಗದಣ್ಣಾಯಕನು ಮಹಾಮಂಡಲೇಶ್ವರ ವಿಜಯಪಾಂಡ್ಯರಸನ ಅನುಮತಿಯಂತೆ ಬಾಚರಸ ಮತ್ತು ಕುರುವತ್ತಿಯ ಮಹಾಜನಗಳ ಎದುರಿನಲ್ಲಿ ಮೊದಲು ಹಿರಿಯ ವಿಕ್ರಮಾದಿತ್ಯನು ಕೊಟ್ಟ ಭೂಮಿ ವೃತ್ತಿ ಸಮೇತ ಅಹವಮಲ್ಲೇಶ್ವರ ದೇವರ ಸೇವಾಕಾರ್ಯಗಳಿಗೆ ೭೦ ಮತ್ತರು ಭೂಮಿಯನ್ನು ದಾನ ಮಾಡಿದನು.[೩೬] ಜಗದೇಕಮಲ್ಲನ ಆಳ್ವಿಕೆಯ ಐದನೆಯ ವರ್ಷದ ಅಂದರೆ ದುಂದುಭಿ ಸಂವತ್ಸರದ ಆಷಾಢ ಶುದ್ಧ ಒಂದರಂದು ಹೊಳಲು ಗ್ರಾಮದ ಗೌರೀಶ್ವರ ದೇವರಿಗೆ ವೀರಪಾಂಡ್ಯ ದೇವರ ಅಧಿಕಾರಿಯಾದ ವೀರಪಾಂಡ್ಯ ಅನುಕಪಲ್ಲವ ರಾಯರು ಮತ್ತು ಉಯ್ಯವಂದ ದಂಡನಾಯಕರ ಮಗ ಸಾವಿದೇವನು ಗೌರೀಶ್ವರ ದೇವರಿಗೆ ಮೂರು ಲಕ್ಷ ಅಡಿಕೆಯ ಸುಂಕ ಒಡ್ಡಾಲುಗಳ ಹೆಜ್ಜುಕ ಸುಂಕವನ್ನು ದೇವಾಲಯಕ್ಕೆ ದಾನ ಬಿಡುತ್ತಾನೆ.[೩೭] ಕ್ರಿ.ಶ. ೧೧೦೦ರ ಹೇವಿಳಂಬಿ ಸಂವತ್ಸರದ ಮಾರ್ಗಶಿರ ಪಂಚಮಿಯಂದು ವಿಜಯಪಾಂಡ್ಯದೇವನು ಹೊಳಲು ಗ್ರಾಮದ ಗೌರೀಶ್ವರ ದೇವಾಲಯಕ್ಕೆ ಹೆಜ್ಜಂಕದಲ್ಲಿ ಲಕ್ಷ ಅಡಿಕೆಗೆ ಹಗ ಒಂದನ್ನು ಧಾರಾಪೂರ್ವಕವಾಗಿ ಬಿಟ್ಟಿದುದನ್ನು ಉಲ್ಲೇಖಿಸುತ್ತದೆ. ವಿಜಯಪಾಂಡ್ಯನು ಈ ದಾನವನ್ನು ಶಂಕರದಣಾಯಕರ ವಿನಂತಿಯ ಮೇರೆಗೆ ನೀಡುತ್ತಾನೆ. ಅಯ್ಯಹೊಳೆ ಐನೂರು ವ್ಯಾಪಾರಿ ಸಂಘವನ್ನು ಮತ್ತು ಅಡಿಕೆಯ ಮೇಲಿನ ಸುಂಕವನ್ನು ಈ ಶಾಸನವು ಉಲ್ಲೇಖಿಸುತ್ತದೆ. ಹೊಳಲು ಗ್ರಾಮದ ೧೨೦ ಮಹಾಜನರು ಮೂರು ಲಕ್ಷ ಅಡಿಕೆಯ ಸುಂಕವನ್ನು ವಸೂಲಿ ಮಾಡಿಕೊಡುವ ಜವಾಬ್ದಾರಿಯನ್ನು ಒಪ್ಪಿಕೊಳ್ಳುತ್ತಾರೆ.[೩೮]

ಹೊಸಪಡಂಗಿಲೆಯ ಮೂಲಸ್ಥಾನ ದೇವರಿಗೆ ದಾನದ ಜೊತೆಗೆ ಮಲ್ಲಿಯಣ ಮತ್ತು ಆತನ ತಂದೆ ಬಾಚಿಮಯ್ಯ ಮಲ್ಲಿಕಾರ್ಜುನ ದೇವರಿಗೆ ನೀಡಿದ ಭೂದಾನವನ್ನು ಶಾಸನವೊಂದು ಉಲ್ಲೇಖಿಸುತ್ತದೆ.[೩೯] ಕಳಚೂರಿಯರ ಮಾಂಡಲೀಕ ದೊರೆ ರಾಯನಾರಾಯಣ ಕಾಲದಲ್ಲಿ ವಿಜಯಪಾಂಡ್ಯ ಮತ್ತು ಮಹಾಮಂಡಲೇಶ್ವರ ವಿಕ್ರಮಾದಿತ್ಯರಾಯರ ಹೆಸರು ಉಲ್ಲೇಖಿಸುವುದ ರೊಂದಿಗೆ, ಹಲವು ಹೆಗ್ಗಡೆಗಳು ಹಾಗೂ ಕೆಲವು ಗಾವುಂಡರು ನೀಡಿದ ದಾನವನ್ನು ಸ್ಥಿರೀಕರಿಸಿದ ದಾನವೊಂದನ್ನು ಈ ಶಾಸನ ದಾಖಲಿಸುತ್ತದೆ.[೪೦] ಮೂಲಸ್ಥಾನ ಕಲಿದೇವರ ಜೀಯರ ಕೇತಿಶೆಟ್ಟಿಯರ ಮಗ ಸೋಸಯ್ಯನ ಮಗ ಕಲಿದೇವರಿಗೆ ಉದ್ದೇಶಿಸಿ ಕಲ್ಯಾಣಶಕ್ತಿ ಪಂಡಿತ ದೇವರಿಗೆ ಭೂಮಿಯನ್ನು ಹಾಗೂ ದೇವರ ಅಂಗಭೋಗಕ್ಕೆ ಮತ್ತು ರಂಗಭೋಗಕ್ಕಾಗಿ ನೈವೇದ್ಯಕ್ಕಾಗಿ ಪ್ರತ್ಯೇಕವಾಗಿ ಭೂಮಿ ದಾನ ನೀಡಿದ ವಿವರವನ್ನು ದಾಖಲಿಸುತ್ತದೆ. ವಿಕ್ರಮಾದಿತ್ಯನು ಕೊಟ್ಟಿಗನೂರಿನ ಮತ್ತು ಹೂವಿನ ಹಡಗಲಿಗೆ ಪೂರ್ವ ದಿಕ್ಕಿನಲ್ಲಿರುವ ಕೋಟೆ ಶಂಕರ ದೇವರಿಗೆ ಮತ್ತು ಅಲ್ಲಿನ ಬ್ರಾಹ್ಮಣರ ಊಟಕ್ಕಾಗಿ ದಾನ ನೀಡಿದ ವಿವರಗಳನ್ನೂ ಜೊತೆಗೆ ವಿಕ್ರಮಾದಿತ್ಯನು ಕೇಶವ ದೇವರಿಗೆ ನೀಡಿದ ಮತ್ತೊಂದು ದಾನವನ್ನು ಈ ಶಾಸನ ದಾಖಲಿಸುತ್ತದೆ.[೪೧] ತ್ರಿಭುವನಮಲ್ಲದೇವನ ಆಳ್ವಿಕೆಯಲ್ಲಿ ಅವನ ಮಾಂಡಲೀಕ ಮಹಾಮಂಡಲೇಶ್ವರ ತ್ರಿಭುವನಮಲ್ಲ ಪಾಂಡ್ಯದೇವನು ನೊಳಂಬವಾಡಿ ೩೨೦೦೦ವನ್ನು ಆಳುತ್ತಿದ್ದಾಗ ಶೂರಬ್ರಾಹ್ಮಣ ಸೇನಾಪತಿ ರವಿಗ ಅಥವಾ ರವಿದೇವನ ಪತ್ನಿಯಾದ ರೆಬ್ಬಲದೇವಿಯು ತನ್ನ ಹುಟ್ಟೂರಾದ ಪೂವಿನಪೊಸವಡಂಗಿಲೆಯಲ್ಲಿ

ಕೇಶವ ದೇವಾಲಯವನ್ನು ಕಟ್ಟಿಸಿ ದೇವರನ್ನು ಸ್ಥಾಪಿಸಿ, ದೇವರ ಸೇವಾಕಾರ್ಯಗಳಿಗಾಗಿ ಮತ್ತು ಬ್ರಾಹ್ಮಣರ ಆಹಾರ ಸತ್ರಕ್ಕಾಗಿ, ಹೂತೋಟಕ್ಕಾಗಿ ಭೂದಾನ ಮುಂತಾದುವನ್ನು ಅಲ್ಲಿನ ಬ್ರಾಹ್ಮಣ ಮಹಾಜನಗಳ ಸಮ್ಮುಖದಲ್ಲಿ ದಾನ ಮಾಡಿದಳು.[೨]

ದಂಡಾಧಿಪತಿಯಾದ ರವಿಗನು ಬಿಳಿಯ ಛತ್ರಿ, ಚಾಮರ, ಪಾವುಡಂಬರ ಮತ್ತು ಕುರುಳಕೊಂತಗಳೆಂಬ ರಾಜ ಮರ್ಯಾದೆಗಳನ್ನು ಪಡೆದಿದ್ದನು. ಆತನು ಯಾವ ನಾಯಕನಿಗೂ ಸಾಟಿಯಿಲ್ಲದವನಾಗಿದ್ದು ಸಂಧಿವಿಗ್ರಹಿ ಮತ್ತು ಚಾಳುಕ್ಯ ರಾಜ್ಯ ಮೂಲಸ್ಕಂಭವಾಗಿ, ಹಿಮಾಲಯ ಮತ್ತು ಸೇತುವಿನ ಮಧ್ಯೆ ರಾಜನ ಆದೇಶವನ್ನು ನೀಡುತ್ತಿದ್ದನು. ನರ್ಮದ, ಗಂಗಾ ಮತ್ತು ಜಮುನಾ ನದಿ ದಂಡೆಯ ಮೇಲೆ ಅನೇಕ ಸುರಾಲಯಗಳನ್ನು ಸ್ಥಾಪಿಸಿದ. ಅಲ್ಲಲ್ಲಿ ಸೆಂಜೆ ಮಠಗಳನ್ನು ಸ್ಥಾಪಿಸಿದ. ಆತ ಮತ್ತು ಆತನ ಪತ್ನಿಯ ವಂಶಪರಂಪರೆಯನ್ನು ಕೊಡಲಾಗಿದೆ. ಶಾಸನ ಕಾವ್ಯಮಯವಾಗಿದೆ. ಎರಡನೆಯದು ರವಿಯಣ(ರವಿಗ) ಭಟ್ಟನ ವಿನಂತಿಯಂತೆ ರಾಜನು ಅದೇ ದೇವರ ಸೇವಾಕಾರ್ಯಗಳಿಗಾಗಿ ಊರಚಲಗೇರಿ ಗ್ರಾಮದ ಉತ್ಪತ್ತಿಯನ್ನು ದಾನ ಮಾಡಿದನು. ಶಾಸನದ ಮೂರನೆಯ ಭಾಗ ವಸಿಷ್ಠಗೋತ್ರದ ರಾಯ್ಕೇಯಷಣಂಗಿಯು ೩ ಗದ್ಯಾಣಗಳನ್ನು ಚಾಳುಕ್ಯ ವಿಕ್ರಮ ವರ್ಷ ೫೦ನೆಯ ವಿಶ್ವಾವಸು, ಬನದ ಹುಣ್ಣಿಮೆ (ಪೂರ್ಣಿಮೆ) ಸೋಮವಾರದಂದು ನೀಡಿದ್ದು ಅದು ಕ್ರಿ.ಶ. ೧೧೨೬ ಜನವರಿ ೧೧ಕ್ಕೆ ಸರಿ ಹೊಂದುತ್ತದೆ. ಸಾಯಣ್ಣನ ಮಗಳು ಸೋರಿಕಯವ್ವೆ ಲೋಕೇಯ ಶಣಂಗಿಯ ಮಗ ೬೦೦ ಕಮ್ಮ ನೀರಾವರಿ ಭೂಮಿಯನ್ನು ದೇವರ ಸೇವಾಕಾರ್ಯಗಳಿಗಾಗಿ ದಾನ ನೀಡಿರುವುದನ್ನು ಹೇಳುತ್ತದೆ. ಈ ದಾನವನ್ನು ಚಾಳುಕ್ಯ ವಿಕ್ರಮ ವರ್ಷ ೫೩ರ ಕಿಲಕ ಸಂವತ್ಸರದ ಕಾರ್ತೀಕ ಮಾಸ ಪೌರ್ಣಮಿಯಂದು ಅಂದರೆ ಬೃಹಸ್ಪತಿ ವಾರ ಕೃತಿಕಾ ನಕ್ಷತ್ರ ಸೋಮಗ್ರಹಣದಂದು ದಾನ ನೀಡಿರುತ್ತಾನೆ. ಇದು ಗುರುವಾರ, ಚಂದ್ರಗ್ರಹಣ ನಡೆದ ೧೧೨೮ರ ನವೆಂಬರ್ ೮ಕ್ಕೆ ಸರಿ ಹೊಂದುತ್ತದೆ. ಈ ಶಾಸನವು ಮೂರು ಕಾಲಘಟ್ಟಗಳಲ್ಲಿ ದಾನ ನೀಡಿದ ವಿವರಗಳನ್ನು ಹೊಂದಿರುವುದರಿಂದ ದಾನ ಶಾಸನದ ವಿವಿಧ ಕಾಲಘಟ್ಟಗಳಲ್ಲಿಯೂ ವಿವಿಧ ಶಾಸನಗಳ ಒಂದೇ ಕಲ್ಲಿನ ಮೇಲೆ ನಂತರದ ದಾನಿಗಳು ಶಾಸನ ಹಾಕಿಸಿರುವುದು ಆ ದೇವಾಲಯದ ಪರಂಪರೆಯನ್ನು ಎಷ್ಟು ಜನ ಗೌರವಿಸುತ್ತಿದ್ದರೆಂದು ಭಾವಿಸಬಹುದು.[೩]

ಕಲ್ಲೇಶ್ವರ ದೇವಾಲಯದ ದಕ್ಷಿಣದ ಗೋಡೆಯ ಬಳಿ ಇರುವ ಇದೇ ಗ್ರಾಮದ ಮತ್ತೊಂದು ಶಾಸನ ಶಕ ೯೯೩ನೆಯ ಸಾಧಾರಣ ಸಂವತ್ಸರ ಫಾಲ್ಗುಣ ಬಹುಳ ಅಷ್ಟಮಿಯಂದು ಶುಕ್ರವಾರ ೧೦೭೧ರ ಫೆಬ್ರವರಿ ೨೦ಕ್ಕೆ ಸರಿ ಹೊಂದುವುದೆಂದು ಚಾಳುಕ್ಯ ದೊರೆ ತ್ರಿಭುವನ ಮಲ್ಲದೇವನು ಗೋವಿಂದವಾಡಿಯಿಂದ ಆಳ್ವಿಕೆಯನ್ನು ನಡೆಸುತ್ತಿದ್ದ ಕಾಲದಲ್ಲಿ ದಂಡನಾಯಕ ಚಿದ್ದಯ್ಯನು ಗೆಲುವಿನ ಉತ್ಸಾಹದಲ್ಲಿ ಕುಮಾರಸ್ವಾಮಿ ದಿವೇದಿಭಟ್ಟನಿಗೆ ಮತ್ತು ಹೂವಿನ ಪಡಂಗಲಿಯ ಉಳಿದ ಮಹಾಜನಗಳು ರಾಜನನ್ನು ಆಶೀರ್ವದಿಸಿದ ಸಂದರ್ಭದಲ್ಲಿ ಅವರ ವಿನಂತಿಯಂತೆ ರಾಜನು ಕಲಿದೇವರ ಸೇವಾ ಕೈಂಕರ್ಯಗಳಿಗೆ ದಾನ ನೀಡಿದುದನ್ನು ಈ

ಶಾಸನವು ದಾಖಲಿಸುತ್ತದೆ. ರಾಮೇಶ್ವರ ದೇವಾಲಯದ ಸ್ಥಾನಪತಿಯಾದ ಮಲೆಯಾಳ ಪಂಡಿತದೇವರ ಸಂತತಿಯಾದ ಲಕುಲೀಶ್ವರ ಪಂಡಿತರ ಮಠದ ಯತಿಗಳ ಆಹಾರಕ್ಕೆ ಮತ್ತು ವಿದ್ಯಾರ್ಥಿಗಳ ಬಟ್ಟೆಗೆ ಮತ್ತು ಆಹಾರಕ್ಕೆ, ದೇವಾಲಯದ ಸೇವಕರಿಗೆ, ಪಾತ್ರಿಗಳಿಗೆ, ಹಾಡುಗಾರರಿಗೆ, ತ್ರಿಭಾಗವಾಗಿ ದಾನ ನೀಡಿದುದನ್ನು ದಾಖಲಿಸುತ್ತದೆ. ಈ ಮೇಲಿನ ಕೈಂಕರ್ಯ ಮತ್ತು ಸೇವೆಗಳಿಗೆ ಕೋಗಳಿ ಐನೂರರ ಹಾಲ್ಗೊಳ ಹನ್ನೆರಡರಲ್ಲಿನ ಕೊಟಿಗನೂರು ಗ್ರಾಮದ ಸರ್ವ ಆದಾಯವನ್ನು ರಾಜನು ದಾನ ಮಾಡಿದನು. ಈ ದಾನವನ್ನು ಹೂವಿನ ಪಡಂಗಲಿಯ ನೂರಿಪ್ಪತ್ತು ಮಹಾಜನರು ಪ್ರತಿಪಾಲಿಸುವಂತೆ ರಾಜನು ಕಟ್ಟಪ್ಪಣೆ ಮಾಡಿದನು.[೪೪]

ಪಾಂಡುರಂಗ ದೇವಾಲಯದ ಆವರಣದಲ್ಲಿರುವ ಕಲ್ಲು ಕೂಡ ಆ ಕಾಲದ ದಾನದ ಬಗ್ಗೆ ದಾಖಲಿಸುತ್ತದೆ.[೪೫] ಚಾಳುಕ್ಯ ವಿಕ್ರಮ ಶಕ ೩೫ನೆಯ ವರ್ಷ ವಿಕೃತಿ ನಾಮಸಂವತ್ಸರದ ಉತ್ತರಾಯಣ ಸಂಕ್ರಾಂತಿಯ ದಿನದಂದು ಅಂದರೆ ಕ್ರಿ.ಶ. ೧೧೧೦ರ ಜನವರಿ ತಿಂಗಳಿನ ಸಂಕ್ರಮಣದಂದು ಚಾಳುಕ್ಯ ದೊರೆ ತ್ರಿಭುವನಮಲ್ಲನು ಕಲ್ಯಾಣದಿಂದ ಆಳುತ್ತಿರುವಾಗ ಆತನ ಮಾಂಡಲೀಕ ತ್ರಿಭುವನಮಲ್ಲ ನೊಳಂಬವಾಡಿ ಮೂವತ್ತೆರಡು ಸಾವಿರವನ್ನು ಆಳುತ್ತಿದ್ದಾಗ ಆತನ ಮಾಂಡಲೀಕ ನೊಳಂಬವಾಡಿ ಮೂವತ್ತೆರಡು ಸಾವಿರದ ತೆರಿಗೆ ಅಧಿಕಾರಿಯಾಗಿದ್ದಾಗ ಆ ಕಾಲದಲ್ಲಿ ಹೂವಿನಹಡಗಲಿಯ ೧೨೦ ಮಹಾಜನಗಳ ಮುಂದೆ ಕಲಿದೇವರ ಸ್ಥಾನಾಚಾರ್ಯನಾದ ಕಾಳೇಶ್ವರ ಪಂಡಿತರ ಕಾಲು ತೊಳೆದು ಸೋಮೇಶ್ವರ ದೇವರಿಗೆ ಪನ್ನಾಯದ ತೆರಿಗೆಯನ್ನು ದಾನ ಮಾಡಿದುದನ್ನು ದಾಖಲಿಸುತ್ತದೆ. ಅಲ್ಲದೆ ಕಾಳೇಶ್ವರ ಪಂಡಿತನ ಸನ್ಯಾಸ ಮತ್ತು ಮುದ್ದರಸನ ಧರ್ಮಗಳ ಬಗ್ಗೆ ಈ ಶಾಸನ ಉಲ್ಲೇಖಿಸುತ್ತದೆ.[೪೬]

ಶಾಸನವು ಶ್ರೀಮದ್ ಅಗ್ರಹಾರ ಹೂವಿನಹಡಗಲಿಯ ನೂರಿಪ್ಪತ್ತು ಮಹಾಜನರು ಅತ್ಯಂತ ಉತ್ತಮ ಧರ್ಮಾಚರಣೆಯಲ್ಲಿದ್ದಾಗ ಸ್ವಸ್ತಿ ಯಮನಿಯಮ ಸ್ವಾಧ್ಯಾಯ, ಧ್ಯಾನ, ಧಾರಣ, ಮೋನಾನುಷ್ಠಾನ, ಜಪ, ಸಮಾಧಿ, ಶೀಲ, ಗುಣಸಂಪನ್ನರಾದ ಶ್ರೀ ಕಲಿದೇವರ ಸ್ವಾಮಿದೇವರ ಸ್ಥಾನಾಚಾರ್ಯವರ್ಯರಾದ ಕಾಳೇಶ್ವರ ಪಂಡಿತದೇವರು ಎಂದು ಆತನ ಗುಣಗಳನ್ನು ದಾಖಲಿಸುತ್ತದೆ.[೪೭] ಬಹುತೇಕವಾಗಿ ತ್ರುಟಿತವಾಗಿರುವ ಈ ಶಾಸನವು ಚಾಳುಕ್ಯ ವಿಕ್ರಮ ಶಕೆಯ ೧೭ನೇ ವರ್ಷದ ಅಂದರೆ ಶ್ರೀಮುಖ ಸಂವತ್ಸರದ ಭಾದ್ರಪದ ಅಮಾವಾಸ್ಯೆ ಬೃಹಸ್ಪತಿವಾರ, ಸೂರ್ಯಗ್ರಹಣ ಸಂಕ್ರಾಂತಿಯಂದು ಅಂದರೆ ೧೦೯೨ರ ಸೆಪ್ಟಂಬರ್ ೨೫ರಂದು ದಾನ ನೀಡಿದ ಶಾಸನವಾಗಿದೆ.[೪೮] ವಾರ ವ್ಯತ್ಯಾಸವಿದ್ದು, ಶುಕ್ರವಾರಕ್ಕೆ ಬದಲಾಗಿ ಗುರುವಾರವೆಂದು ದಾಖಲಾಗಿದೆ. ತುಲಾ ಸಂಕ್ರಮಣವೂ ಕೂಡ ಸೆಪ್ಟಂಬರ್ ೨೭ರಂದು ಸಂಧಿಸಿರುತ್ತದೆ. ಚಾಳುಕ್ಯ ದೊರೆ ತ್ರಿಭುವನಮಲ್ಲದೇವನ ಆಳ್ವಿಕೆಯ ಕಾಲದಲ್ಲಿ ಚಾವುಂಡರಸನ ಮಗ ಮಹಾಮಂಡಲೇಶ್ವರ ಗಂಗರಸನು ತನ್ನ ತಂದೆ ಹೆಸರಿನಲ್ಲಿ ಕಟ್ಟಿಸಿದ ಬಾಳೇಶ್ವರ ದೇವರ ಸೇವಾಕಾರ್ಯಗಳಿಗೆ ಎರಕಗಾವುಂಡನಿಂದ ಭೂದಾನ ಮಾಡಿಸಿದುದನ್ನು ದಾಖಲಿಸುತ್ತದೆ. ಈ ದಾನವನ್ನು ಲಕುಲೀಶ ಪಂಥದ ಮಲೆಯಾಳ ಪಂಡಿತರ ಶಿಷ್ಯ ಜ್ಞಾನೇಶ್ವರ ಪಂಡಿತ ಆತನ ಶಿಷ್ಯ ಸೋಮೇಶ್ವರ

ಪಂಡಿತ, ಸೋಮೇಶ್ವರ ಪಂಡಿತರ ಕರಕಮಲ ಸಂಜಾತ ಸಂತರಾಸಿ ಪಂಡಿತ ಆತನ ಶಿಷ್ಯ ಕಾಳೇಶ್ವರ ಪಂಡಿತನ ಕಾಲು ತೊಳೆದು ರಾಜನ ಒಪ್ಪಿಗೆ ಪಡೆದು ದೇವಕಾರ್ಯಗಳಿಗೆ ಗಾವುಂಡರು ದಾನ ಮಾಡಿದರೆಂದು ದಾಖಲಿಸುತ್ತದೆ. ಸೋಗಿ ಗ್ರಾಮದಲ್ಲಿರುವ ಕಲ್ಲೇಶ್ವರ ದೇವಾಲಯದ ಆವರಣದಲ್ಲಿರುವ ಚಾಳುಕ್ಯ ವಿಕ್ರಮ ಶಕ ೩೫ರಲ್ಲಿ ಹೊರಡಿಸಿದ ಶಾಸನದಲ್ಲಿಯೂ ಕಾಳೇಶ್ವರ ಪಂಡಿತರ ಉಲ್ಲೇಖವಿದೆ.[೪೯] ಈ ಪಂಡಿತರ ಗುರುಪರಂಪರೆಯನ್ನು ಹಿಂದಿನ ಶಾಸನದಲ್ಲಿ ಉಲ್ಲೇಖಿಸಿಲ್ಲ. ಈ ಎರಡೂ ಶಾಸನಗಳ ನಡುವೆ ಇರುವ ಕಾಲ ವ್ಯತ್ಯಾಸವನ್ನು ಗಮನಿಸಿದಾಗ ೧೩ ವರ್ಷ ಸಂದಿರುವುದು ತಿಳಿದುಬರುತ್ತದೆ. ಆಚಾರ್ಯರನ್ನು ಒಂದೇ ಸಾಲಿನಲ್ಲಿ ಯಮ ನಿಯಮ ಇತ್ಯಾದಿ ಸಮಾಧಿ ಗುಣಶೀಲ ಸಂಪನ್ನರು ಎಂದು ಹೇಳಿದ ಶಾಸನ ೧೩ ವರ್ಷದ ತರುವಾಯ ಅವರ ಇಡೀ ಗುರು ಪರಂಪರೆಯನ್ನು ಮಲಯಾಳ ಪಂಡಿತರಿಂದ ಪ್ರಾರಂಭ ಮಾಡಿ ಆತನ ಗುರುವಿನವರೆಗೆ ಅಂದರೆ ಸಂತರಾಸಿ ಪಂಡಿತರವರೆಗೆ ಗುರುತಿಸಿ ದಾಖಲಿಸಿರುವುದು ವಿಶೇಷವೆನಿಸುತ್ತದೆ. ಕಾರಣ ಕಾಳೇಶ್ವರ ಪಂಡಿತರು ತಮ್ಮ ಕೈಂಕರ್ಯಗಳಲ್ಲಿ ಅನುಷ್ಠಾನದಲ್ಲಿ ಮಾಗಿದಂತೆ ಜನರೊಂದಿಗೆ ಬೆರೆತು ಅವರ ಎಲ್ಲ ಧಾರ್ಮಿಕ ಪ್ರಕ್ರಿಯೆಗಳಲ್ಲಿ ತೊಡಗಿಸಿಕೊಂಡು ಜನರಿಗೆ ಹತ್ತಿರವಾಗುವುದರ ಜೊತೆಗೆ ಅರಸರಿಗೆ ಮತ್ತು ಸ್ಥಳೀಯ ಆಡಳಿತಗಾರರಿಗೆ ಅವರ ಮಹತ್ವದ ಅರಿವಾಗಿದ್ದುದು ಖಚಿತವಾಗುತ್ತದೆ.

ಉತ್ತಂಗಿಯಲ್ಲಿರುವ ಕ್ರಿ.ಶ. ೧೧೫೦ರ ಶಾಸನವು ಇಮ್ಮಡಿ ಜಗದೇಕಮಲ್ಲನು ಕಲ್ಯಾಣವನ್ನು ಆಳುತ್ತಿದ್ದಾಗ ಹೊರಡಿಸಿದ್ದ ಶಾಸನವಾಗಿದೆ. ಈ ಶಾಸನವು ಜಗದೇಕಮಲ್ಲ ವೀರಪಾಂಡ್ಯದೇವನು ನೊಳಂಬವಾಡಿ ಮೂವತ್ತೆರಡು ಸಾವಿರವನ್ನು ಆಳುತ್ತಿದ್ದಾಗ ಕೋಗಳಿನಾಡ ಉತ್ತಂಗಿಯಲ್ಲಿ ಸೌಧರ ಬಸವಯ್ಯ ಕಟ್ಟಿಸಿದ ಬಸವೇಶ್ವರ ದೇವಾಲಯದ ಸೇವಾಕಾರ್ಯಗಳಿಗೆ ಭೂಮಿ ದಾನ ಮಾಡಿದುದನ್ನು ದಾಖಲಿಸುತ್ತದೆ.[೫೦] ಕ್ರಿ.ಶ. ೧೧೪೬ರ ಮೇ ೨೭ರಂದು ಹೊರಡಿಸಿದ ಚಾಳುಕ್ಯ ಚಕ್ರವರ್ತಿ ಜಗದೇಕಮಲ್ಲನ ಆಳ್ವಿಕೆಯ ಒಂಭತ್ತನೆಯ ವರ್ಷ ಕ್ಷಯಸಂವತ್ಸರ, ಜೇಷ್ಠ ಶುದ್ಧ ೧೫ರಂದು ಸೋಮವಾರ ಸೋಮಗ್ರಹಣದಂದು ದಾನ ನೀಡಿದ ಶಾಸನವಾಗಿದೆ. ಜಗದೇಕಮಲ್ಲ ವೀರಪಾಂಡ್ಯನು ನೊಳಂಬವಾಡಿ ಮೂವತ್ತೆರಡು ಸಾವಿರವನ್ನು ಆಳುತ್ತಿದ್ದಾಗ ಇವನ ದಂಡನಾಯಕನು ಉಚ್ಚಂಗಿಯನ್ನು ಆಳುತ್ತಿದ್ದು ಮಾಕೆರೆಯಲ್ಲಿ ದೇವಾಲಯವನ್ನು ನಿರ್ಮಿಸಿ ತನ್ನ ಸ್ವಾಮಿಯಾದ ವೀರಪಾಂಡ್ಯದೇವನಿಗೆ, ಅಜೇಯರಾಯ ಪಾಂಡ್ಯದೇವನಿಗೆ ಪುಣ್ಯವಾಗಲಿ ಎಂದು ಭಿನ್ನವಿಸಿ ಅಜೇಯರಾಯ ಪಾಂಡ್ಯ ಮತ್ತು ಆತನ ರಾಣಿ ಸೋವಲದೇವಿಗೆ ಪುಣ್ಯವಾಗಲೆಂದು ಸೋಯೇಶ್ವರ ದೇವರಿಗೆ ಅಂದರೆ ಸೋಮೇಶ್ವರ ದೇವರ ನಿತ್ಯ ಅಭಿಷೇಕ, ನೈವೇದ್ಯ, ಚೈತ್ರ ಪವಿತ್ರಕ್ಕೆ, ಅಂಗಭೋಗ, ರಂಗಭೋಗಕ್ಕೆ, ನಂದಾದೀವಿಗೆಗೆ, ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ ಪಾತ್ರ, ಪಾವುಳಕ್ಕಂ ಪೂಜಾರಿಯ ಗ್ರಾಸಕ್ಕೆ ದಾನ ನೀಡಿದ ವಿವರಗಳನ್ನು ದಾಖಲಿಸುತ್ತದೆ. ಈ ದಾನವನ್ನು ವೀರಪಾಂಡ್ಯ ದೇವರು ಪುಲ್ವಳ್ಳೂರ ಶಿವ ಬ್ರಾಹ್ಮಣನಯ್ಯ ಕೊಂಡಭಟ್ಟ ಕಾಲ ತೊಳೆದು ಧಾರಾಪೂರ್ವಕವಾಗಿ ದಾನ ನೀಡಿದುದನ್ನು ದಾಖಲಿಸುತ್ತದೆ.

ಅಲ್ಲದೆ ಕೆರೆಯ ಪೂರ್ವ ದಿಕ್ಕಿನ ಹದಿನೈದು ಮತ್ತರ ಬೆದ್ದಲ ಭೂಮಿಯನ್ನು ನೀಡಿದುದಲ್ಲದೆ ನಿತ್ಯ ಬ್ರಾಹ್ಮಣನೋರ್ವನಿಗೆ ಊಟದ ಅಕ್ಕಿಗಾಗಿ ಯಸರು, ಎರಡು ಸೊಳೆಸಿ ತುಪ್ಪಕ್ಕೆ, ಮೊಸರಿಗೆ, ಅಡಿಕೆಗೆ, ಎಲೆಗೆ ಪದಿನಾರು ಮಾನಸ ಬ್ರಾಹ್ಮಣರ ಛತ್ರಕ್ಕೆ ಧರ್ಮವನ್ನು ಬಿಟ್ಟಿದುದನ್ನು ದಾಖಲಿಸುತ್ತದೆ.[೫೧]

ಉಚ್ಚಂಗಿದುರ್ಗದ ಶಾಸನವೊಂದು ಕ್ರಿ.ಶ. ೧೧೬೫ನೆಯ ಪಾರ್ಥಿವ ಸಂವತ್ಸರದ ಆಷಾಢ ಮಾಸದ ಪೌರ್ಣಮಿಯಂದು ಹೊರಡಿಸಿದ ಶಾಸನವಾಗಿದ್ದು ವೀರಪಾಂಡ್ಯ ದೇವನು ನೊಳಂಬವಾಡಿಯನ್ನು ಆಳುತ್ತಿದ್ದಾಗ ಉಚ್ಚಂಗಿ ಪಟ್ಟಣದ ತೆರಿಗೆಯನ್ನು ದೇವರಿಗೆ ದತ್ತಿ ಬಿಡುತ್ತಾನೆ. ಅಲ್ಲದೆ ಚಟ್ಟನಹಳ್ಳಿಯ ಚಿಕ್ಕಮ್ಮನ ಕೆರೆಯಿಂದ ಚಟ್ಟನಕೆರೆಯ ಉತ್ತರದ ಕೋಡಿಯವರೆಗಿನ ನೀರಾವರಿ ಭೂಮಿಯನ್ನು ಅದೇ ದೇವರಿಗೆ ದಾನ ನೀಡುತ್ತಾನೆ. ಆದರೆ ಶಾಸನದ ಬಹುಭಾಗ ತ್ರುಟಿತವಾಗಿದ್ದು ದೇವರ ಹೆಸರು ಅಥವಾ ದೇವಾಲಯದ ಹೆಸರು ತಿಳಿದುಬರುವುದಿಲ್ಲ.[೫೨]

ರಾಗಿಮಸಲವಾಡ ಗ್ರಾಮದ ಈಶ್ವರ ದೇವಾಲಯದ ಬಳಿ ಇರುವ ಶಾಸನ ಚಾಳುಕ್ಯ ವಿಕ್ರಮ ಶಕ ವರ್ಷ ೫೨ನೆಯ ವರ್ಷದಲ್ಲಿ ಅಂದರೆ ಪ್ಲವಂಗ ಸಂವತ್ಸರದ ಆಷಾಡ ಅಮಾವಾಸ್ಯೆ ಆದಿತ್ಯವಾರ ದಕ್ಷಿಣಾಯನ ಸಂಕ್ರಮಣದಂದು ಚಾಳುಕ್ಯ ಭೂಲೋಕಮಲ್ಲ ದೇವರ ಮಹಾಸಾಮಂತಾದಿಪತಿ ಮಹಾಪ್ರಧಾನ ಕನ್ನಡ ಸಂಧಿವಿಗ್ರಹಿ ಸೇನಾಧಿಪತಿ ಭೋಗಯ್ಯ ಭಟ್ಟನು ಸಾವಾಸಿಗಳ ನಾಯಕನಾಗಿ ಬನವಾಸಿ ಹನ್ನೆರಡು ಸಾವಿರ ನಾಡಿನ ಏಳೂವರೆ ಲಕ್ಷ ಒಡ್ಡರ ನಾಡಿನ ಸುಂಕವನ್ನು ಪಡೆದು ಆಳುತ್ತಿದ್ದಾಗ ಸಹವಾಸಿ ಬ್ರಾಹ್ಮಣರ ಗುಂಪಿನ ದಂಡನಾಯಕ ಇಂದರಾಣಿ ಭಟ್ಟಯ್ಯ ಮತ್ತು ಅವನ ಪೆರ್ಗಡೆ ಉಜ್ಜಿಭಟ್ಟ ಇವರು ರತ್ನಭೂಷಣ ವಿನಾಯಕನನ್ನು ಪ್ರತಿಷ್ಠಾಪಿಸಿ ಸಭಾಮಂಟಪ ಮತ್ತು ಬಾವಿಯನ್ನು ಕಟ್ಟಿಸಿ ದೇವರ ಸೇವೆಗೆ ನಾಲ್ಕು ಪಣವನ್ನು ದಾನ ನೀಡುತ್ತಾರೆ. ನೊಳಂಬವಾಡಿ ಮೂವತ್ತೆರಡು ಸಾವಿರದ ದಂಡನಾಯಕ ಚೋಳಾಂಡರನು ಪಾಂಡ್ಯನಾಡಿನ ತೆರಿಗೆಯಲ್ಲಿ ಎರಡು ಪಣವನ್ನು ರತ್ನಭೂಷಣ ವಿನಾಯಕ ದೇವರಿಗೆ ದಾನ ನೀಡುತ್ತಾನೆ. ಅಲ್ಲದೆ ಇದೇ ಊರಿನ ಹೆಗ್ಗಡೆ ಜೋಗದೇವಯ್ಯ ಸೆಟ್ಟಿಗರು ಮತ್ತು ಸೆಟ್ಟಿಗುತ್ತರು ಹಾಗೂ ಮಸಣಯ ನಾಯಕ ಮಾರಯ ನಾಯಕ, ಕಾಳಯ್ಯನಾಯಕರು ದೇವರಿಗೆ ದಾನ ನೀಡಿದುದನ್ನು ಶಾಸನವು ಹೇಳುತ್ತದೆ. ಈ ದೇವಾಲಯದಲ್ಲಿ ಅರವಟ್ಟಿಗೆಯನ್ನು ನಡೆಸಲು ದಾನವನ್ನು ನೀಡಲಾಗಿದೆ.[೫೩]

ದುಗ್ಗವತಿಯ ೧೧೨೬ರ ಶಾಸನವು ಮಹಾಮಂಡಲೇಶ್ವರನಾದ ತ್ರಿಭುವನಮಲ್ಲ ಪಾಂಡ್ಯದೇವನು ಬೇಲೂರು ನೊಳಂಬವಾಡಿ ಮೂವತ್ತೆರಡು ಸಾವಿರವನ್ನು ಆಳುತ್ತಿದ್ದಾಗ ಕೋಗಳಿ ೫೦೦ಕ್ಕೆ ಸೇರಿದ ಬಿಕ್ಕಿಗ-೭೦ರಲ್ಲಿನ ದುಗ್ಗತಿ ಗ್ರಾಮವನ್ನು ಮಲಯಾಳ ವಡ್ಡ ವ್ಯವಹಾರಿ ನಂಬಿಗನ್ನಿ ಸೆಟ್ಟಿಯು ಆಳುತ್ತಿದ್ದು ದಂಡನಾಯಕ ಇಂದಿರಾಯಣ ಭಟ್ಟಯ್ಯ ಕೋಗುಳಿಯ ಸುಂಕದ ಅಧಿಕಾರಿ ದಂಡನಾಯಕ ಚೋದಾದರರು ದುಗ್ಗತಿಯ ಮಹಾದೇವರಿಗೆ ಭೂದಾನವನ್ನು

ಮಾಡಿದುದನ್ನು ದಾಖಲಿಸುತ್ತದೆ. ದುಗ್ಗತಿಯ ಮಾರುಕಟ್ಟೆಯಲ್ಲಿ ಮಾರಾಟವಾಗುತ್ತಿದ್ದ ಒಂದು ಲಕ್ಷ ಅಡಿಕೆಗೆ ಬರುವ ಸುಂಕವನ್ನು ನೈವೇದ್ಯಕ್ಕೂ ತೆಂಕಣಬಟ್ಟೆಯ ಕಾರಡಕ್ಕೆ ಮೆಣಸು ಸಾರಿಗೆಯಲ್ಲಿ ನಾಲ್ಕು ಹೇರು ದವಸದ ಸಾರಿಗೆಯ ಆರು ಹೇರುವನ್ನು ಬಿಟ್ಟರು. ನಂದಾದೀವಿಗೆಗೆ ಪನ್ನಾಯದ ಒಂದು ಭಾಗವನ್ನು ನಂದಾದೀವಿಗೆಗಾಗಿ ಈಂದಿರಾಯಣ ಭಟ್ಟಗಳು (ಇಂದಿರಾಯಣ ಭಟ್ಟ) ದಾನ ನೀಡಿದನು.[೩೪]

ದುಗ್ಗವತಿಯ ಗ್ರಾಮದ ರಾಮಲಿಂಗೇಶ್ವರ ದೇವಾಲಯದ ಪ್ರಾಂಗಣದಲ್ಲಿರುವ ಶಾಸನವು ಸರ್ವಾಧಿಕಾರಿ ಹೆಗ್ಗಡೆ ಸೋವರಸರು ವಾಮಶಕ್ತಿಗಳ ಪಾದ ತೊಳೆದು ದುಗ್ಗತಿಯ ದೇವಾಲಯಗಳಿಗೆ ದಾನ ನೀಡಿದುದನ್ನು ದಾಖಲಿಸುತ್ತದೆ. ದೇವಾಲಯದ ನಂದಾದೀವಿಗೆಗೆ ಸ್ಥಾನದ ತೋಟಗಳ ಹೆರ್ಜ್ಜುಂಕ ವಡ್ಡರಾವಳ ವೀರವೀರಾಗಳ ತಪೋಧನರ ಆಹಾರಕ್ಕಾಗಿ ವಾಮಶಕ್ತಿಗಳ ಪಾದ ತೊಳೆದು ದಾನ ಬಿಟ್ಟಿದುದನ್ನು ದಾಖಲಿಸುತ್ತದೆ. ಇದೇ ದೇವಾಲಯದಲ್ಲಿರುವ ಮತ್ತೊಂದು ಶಾಸನವು ಪಾಂಡ್ಯ ವೀರದೊರೆ ವಿಜಯಪಾಂಡ್ಯನನ್ನು ಉಲ್ಲೇಖಿಸುತ್ತದೆ. ಅಲ್ಲದೆ ಆತನ ಪಟ್ಟದರಸಿಯನ್ನು ದ್ವಿತೀಯ ಲಕ್ಷ್ಮೀ ಸಮಾನೆ ಎಂದು ಹೊಗಳುತ್ತದೆ. ಇವರು ದುಗ್ಗತಿಯ ದೇವರಿಗೆ ದಾನ ನೀಡಿದ ವಿವರವಿದೆ. ಉಳಿದ ಸಾಲುಗಳು ತ್ರುಟಿತವಾಗಿವೆ.[೩೫]

ಚಾಳುಕ್ಯ ವಿಕ್ರಮ ಶಕೆಯ ೪೭ನೇ ವರ್ಷದ ಶೋಭಕೃತ್ ಸಂವತ್ಸರದ ಪುಷ್ಯಶುದ್ಧ ೭ರಂದು ದಾನ ನೀಡಿರುವ ಶಾಸನವು ಕೆಲವು ಸ್ಥಾನಿಕ ವ್ಯಕ್ತಿಗಳು ಶ್ರೀಮಹಾದೇವರ ನೈವೇದ್ಯಕ್ಕಾಗಿ ನೀಡಿದ ದಾನವನ್ನು ದಾಖಲಿಸುತ್ತದೆ. ಈ ಶಾಸನದಂತೆ ಮಾಚಬೋವ ಸಿಂಗಬೋವರು ಮಹಾದೇವರಿಗೆ ಸೋರೆಗೊಂಡಾಪುರ ಎರಲಬಾಳೂರು ಕಡೆಯ ನಿವೇಶನವನ್ನು ನೀಡಿದುದನ್ನು ಶಾಸನ ದಾಖಲಿಸುತ್ತದೆ.[೩೬] ಕ್ರಿ.ಶ. ೧೧೧೦ರ ತ್ರಿಭುವನಮಲ್ಲ ಆರನೇ ವಿಕ್ರಮಾದಿತ್ಯನ ಕಾಲದ ನೀಲಗುಂದದ ಶಾಸನವು ನಿರ್‍ಗುಂದದ ಉತ್ತರಕ್ಕಿರುವ ಶ್ರೀ ಸ್ವಯಂಭು ಭೀಮೇಶ್ವರದ ನಂದಾದೀವಿಗೆಗಾಗಿ ನೈವೇದ್ಯಕ್ಕಾಗಿ ಎಲೆಯ ಹೇರುಸುಂಕವನ್ನು ದಾನ ಬಿಟ್ಟಿದುದನ್ನು ಉಲ್ಲೇಖಿಸುತ್ತದೆ.[೩೭] ನೀಲಗುಂದದ ಬಿಜ್ಜಳ ದೇವನ ಕಾಲದ ಅಂದರೆ ೧೧೬೨ರಲ್ಲಿ ಹೊರಡಿಸಿದ ಶಾಸನವು ಸುಂಕದ ಅಧಿಕಾರಿಯಾದ ಕಲ್ಲಮಯ್ಯ ದಂಡನಾಯಕನು ಕೋಗಳಿ ಐನೂರು ಕಡಂಬಳಿಕೆ ಸಾವಿರದ ಹೆಜ್ಜುಂಕ ವಡ್ಡರಾವುಳ ಪಂನಾಯ ಸುಂಕವನ್ನು ನೀರಗುಂದದ ಶ್ರೀಸ್ವಯಂಭು ಭೀಮೇಶ್ವರರ ನಂದಾದೀವಿಗೆಗೆ ಅಂಗಭೋಗ, ರಂಗಭೋಗ ನೈವೇದ್ಯಕ್ಕಾಗಿ ದಾನ ನೀಡಿರುವುದಲ್ಲದೆ ಶಾಸನವು ಶ್ರೀ ವೀರಪಾಂಡ್ಯದೇವರ ಮಠವನ್ನು ಉಲ್ಲೇಖಿಸುತ್ತದೆ.[೩೮] ಪ್ರಾಯಶಃ ಶ್ರೀವೀರಪಾಂಡ್ಯದೇವನು ಸ್ವಯಂಭು ಭೀಮೇಶ್ವರ ದೇವರ ದೇವಾಲಯಕ್ಕೆ ಸೇರಿದ ಮಠವನ್ನು ನಿರ್ಮಾಣ ಮಾಡಿ ಅದರ ಸಕಲ ಕೈಂಕರ್ಯಗಳಿಗೆ ವ್ಯವಸ್ಥೆ ಮಾಡಿದ್ದನೆಂದು ಭಾವಿಸಲು ಅಡ್ಡಿಯಿಲ್ಲ. ತ್ರಿಭುವನಮಲ್ಲ ಆರನೇ ವಿಕ್ರಮಾದಿತ್ಯನ ಕಾಲದ ವಿಕ್ರಮ ಶಕೆ ೪ ಕಾಳಾಯುಕ್ತಿ ಸಂವತ್ಸರ ಮಾಘಮಾಸ ಶುದ್ಧ ಪಂಚಮಿಯಂದು ಅಂದರೆ ೧೦೭೯ ಜನವರಿ ೩೦ರಂದು ಹಾಳಾಗಿದ್ದ ಸ್ವಯಂಭು ರಾಮೇಶ್ವರ ದೇವರ ಸೇವೆಗಾಗಿ ನೀರ್ಗುಂದದ ಮುನ್ನೂರು ಮಹಾಜನಗಳು

ಸ್ವಯಂಭು ರಾಮೇಶ್ವರದೇವರ್ಗೆ ಅಂಗಭೋಗ, ಉಪಾಹಾರಾದಿಗಳಿಗೆಂದು ಬಿಟ್ಟ ತೋಟದ ಸ್ಥಳ ಹಾಗೂ ಶ್ರೀ ಭೀಮೇಶ್ವರ ದೇವರ ತೋಟದ ಬಡಗಣ ದೆಸೆಯಲ್ಲಿ ಇನ್ನೂರು ಕಮ್ಮ ಭೂಮಿಯನ್ನು ರಾಮೇಶ್ವರ ದೇಗುಲದಿಂದ ಪಡುವಣ ದೆಸೆಯಲ್ಲಿ ತೆಂಕ ದೆಸೆಯಲ್ಲಿ ಹೂವಿನ ತೋಟ ೨೦೦ ಕಮ್ಮವನ್ನು ದೇಗುಲದ ಮೂಡಣ ದೆಸೆಯಲ್ಲಿ ೫೦೦ ಕಮ್ಮ ಬೆದ್ದಲು ಭೂಮಿಯನ್ನು ದಾನ ಮಾಡಿದುದನ್ನು ಉಲ್ಲೇಖಿಸುತ್ತದೆ.[೫೯] ಈ ದತ್ತಿಯ ಜೊತೆಗೆ ನಾನಾ ದೇಶಿ ಬಣಜಿಗರು ಅಡಿಕೆಯ ಒಂದು ಎಲೆಯ ಹೇರಿಗೆ ಒಂದು ಕಾಣಿಯಂತೆ ಸುಂಕ ದಾನವನ್ನು ತೋಟಿಗರು ಕೋನೆಕಾರರು, ತೆಲ್ಲಿಗರು ಹಾಗೂ ಇತರರು ಈ ದೇವರಿಗೆ ಊಳಿಗೆ ಪಾಗ, ಏಣಿಗೆ ಪಾಗ ಪ್ರತಿ ಗಾಣಕ್ಕೆ ಇಂತಿಷ್ಟು ಎಣ್ಣೆಯನ್ನು ದಾನ ನೀಡಿರುವುದನ್ನು ದಾಖಲಿಸುತ್ತದೆ. ಈ ಶಾಸನದಲ್ಲಿ ಮೂರು ಕಾಲಗಳನ್ನು ನೀಡಲಾಗಿದೆ. ಒಂದು ಚಾಳುಕ್ಯ ವಿಕ್ರಮ ಶಕೆಯ ೪ನೇ ವರ್ಷ ಕಾಳಾಯುಕ್ತಿ ಸಂವತ್ಸರ ಮಾಘ ೫, ಆದಿವಾರ ಉತ್ತರಾಯಣ ಸಂಕ್ರಾಂತಿಯಂದು ನಮೂದಿತವಾಗಿದೆ. ಇದು ೧೦೭೯ರ ಜನವರಿ ೩೦ಕ್ಕೆ ಸರಿ ಹೊಂದಿಸಬಹುದು. ಮತ್ತೊಂದು ಚಾಳುಕ್ಯ ವಿಕ್ರಮ ವರ್ಷ ೬೧ನೇ ವರ್ಷದ ನಳ ಸಂವತ್ಸರದ ಮಾಘ ಶುದ್ಧ ೧೦, ಸೋಮವಾರ ಉತ್ತರಾಯಣ ಸಂಕ್ರಾಂತಿ ಕಾಲವೆಂದು ಉಲ್ಲೇಖವಾಗಿದ್ದು ಇದು ೧೧೩೬ರ ಜನವರಿ ೩ಕ್ಕೆ ಸರಿ ಹೊಂದುತ್ತದೆ. ಈ ಕಾಲದಲ್ಲಿ ತೋಟಿಗರು, ಕೋನೆಕಾರರು, ತೆಲ್ಲಿಗರು ಮತ್ತು ಇತರರು ದೇವರಿಗೆ ಉಳಿದ ದಾನವನ್ನು ನೀಡಿದುದನ್ನು ದಾಖಲಿಸುತ್ತದೆ. ಮೂರನೆಯ ಕಾಲ ಜಯಸಂವತ್ಸರ ಪುಷ್ಯ ಶುದ್ಧ ೧೪ ಸೋಮವಾರ ಉತ್ತರಾಯಣ ಸಂಕ್ರಾಂತಿಯಂದಿದ್ದು ಇದು ೧೧೭೪ರ ಡಿಸೆಂಬರ್ ಒಂಭತ್ತಕ್ಕೆ ಸರಿ ಹೊಂದುತ್ತದೆ. ಮತ್ತೆ ಇದೇ ಊರಿನ ಆಶೇಷ ಮಹಾಜನಗಳು ದೇವಾಲಯಕ್ಕೆ ಬಿಟ್ಟ ಅಪಾರ ಭೂಮಿಯನ್ನು ದಾಖಲಿಸುತ್ತದೆ. ಅಂದರೆ ಈ ಗ್ರಾಮದ ಮುಕ್ತೇಶ್ವರ ದೇವಾಲಯವು ೧೦೭೯ರಿಂದ ಪ್ರಾರಂಭವಾಗಿ ೧೧೭೪ರ ಅವಧಿಯವರೆಗೆ ನಿರಂತರವಾಗಿ ನೂರು ವರ್ಷಗಳಿಗೂ ಅಧಿಕ ಕಾಲ ಅತ್ಯಂತ ವೈಭವದಿಂದ ತನ್ನ ಕೈಂಕರ್ಯಗಳನ್ನು ಸಾಮಾಜಿಕ ಧಾರ್ಮಿಕ ಚಟುವಟಿಕೆಗಳನ್ನು ನಡೆಸಿಕೊಂಡು ಹೋಗುತ್ತಿತ್ತೆಂದು ತಿಳಿಯುತ್ತದೆ.[೬೦]

ಮಾಡಲಗೇರಿಯ ಕ್ರಿ.ಶ. ೧೧೭೧ರ ಶಾಸನವು ಚಾಳುಕ್ಯ ಜಗದೇಕಮಲ್ಲನು ಕಲ್ಯಾಣದಿಂದ ರಾಜ್ಯವಾಳುತ್ತಿದ್ದಾಗ, ಇವನ ಮಹಾಮಂಡಲೇಶ್ವರನಾದ ವಿಜಯಪಾಂಡ್ಯದೇವ ವಿಜಯಹೆಮ್ಮಾಡಿಯೂ ನೊಳಂಬವಾಡಿ ೩೨೦೦೦ವನ್ನು ಉಚ್ಚಂಗಿಯಿಂದ ಆಳುತ್ತಿರುತ್ತಾನೆ. ಬಾಳ್ಗುಳಿಯ ಐವತ್ತು ಮಹಾಜನರ ಸಮ್ಮುಖದಲ್ಲಿ ಕಂನ್ನಗೌಡನು ಮಿಂಡಹಳ್ಳಿಯನ್ನು ಕ್ರಯವಾಗಿಟ್ಟುಕೊಂಡು ಆ ಊರಿನ ಮಿಂಡೇಶ್ವರ ದೇವರಿಗೆ ದಾನವಾಗಿ ಬಿಡುತ್ತಾನೆ. ಗ್ರಾಮದ ಮತ್ತೊಂದೆಡೆ ಮಂಡೆಯ ಹನಹಳ್ಳಿಯ ಮಂಡೇಶ್ವರ ಎಂದೂ ಕರೆದಿದೆ. ಈ ಸ್ಥಳಕ್ಕೆ ಬಾಚಜೀಯನನ್ನು ಆಚಾರ್ಯನನ್ನಾಗಿ ನೇಮಿಸುತ್ತಾರೆ. ಮಾದಿಯಣ್ಣ ಎಂಬುವನು ಇದೇ ಊರಲ್ಲಿ ದೇವೇಶ್ವರ ದೇವರ ಪ್ರತಿಷ್ಠೆ ಮಾಡಿಸಿ, ಅದಕ್ಕೆ ಭೂದಾನ ನೀಡಿದ ವಿವರವಿದೆ.[೬೧]

ಅತಿಹೆಚ್ಚು ತ್ರುಟಿತವಾಗಿರುವ ಮೂಡಲಗೇರಿ ಗ್ರಾಮದ ಕ್ರಿ.ಶ. ೧೨ನೇ ಶತಮಾನದ ಒಂದು ಶಾಸನವು ತ್ರಿಭುವನ ಪಾಂಡ್ಯದೇವನು ನೊಳಂಬವಾಡಿ ೩೨೦೦೦ವನ್ನು ಆಳುತ್ತಿದ್ದ ಕಾಲದಲ್ಲಿ ನಾಕರಸ ಮತ್ತು ಆತನ ಹೆಂಡತಿ ಲಕ್ಷ್ಮೀದೇವಿಯು ಅತ್ತಿಮೇಶ್ವರ ದೇವರ ನೇವೇದ್ಯ ಅಂಗಭೋಗ ಮತ್ತು ನಂದಾದೀವಿಗೆಗೆ ದಾನ ಬಿಟ್ಟ ವಿವರವನ್ನು ಐನೂರ್ವರ ಸಂಗ ಜಿನದನೋದ್ಧಾರ ಅತ್ತಿಮೆ ನಾಯಕರ ಉಲ್ಲೇಖವನ್ನು ಹೊಂದಿದ ಶಾಸನವಿದಾಗಿದೆ.[೬೨]

ಕ್ರಿ.ಶ. ೧೧೭೪ರ ಅಕ್ಟೋಬರ್ ೧೨ರಂದು ಹೊರಡಿಸಿದ ಭಾಗಯ್ಯ ಶಾಸನವು ಚಾಮಯ್ಯನ ಕೆರೆಯ ಕೆಳಗಿನ ಭೂಮಿಯನ್ನು ಸೋಮೇಶ್ವರ ದೇವರ ಸೇವೆಗೆ ಬೆಳ್ಗುಲಿಯ ಮಹಾಜನರ ಸಮ್ಮುಖದಲ್ಲಿ ದಾನ ನೀಡಿದ ವಿವರವನ್ನು ದಾಖಲಿಸುತ್ತದೆ. ಆದರೆ ದಾನಿಯ ಹೆಸರು ತ್ರುಟಿತವಾಗಿರುವುದರಿಂದ ಹೆಚ್ಚಿನ ವಿವರಗಳು ಲಭ್ಯವಿಲ್ಲ. ಅಲ್ಲದೆ ೧೧೮೪ರಲ್ಲಿ ಪುಟ್ಟಿಯಣ್ಣನು ಸೋಮನಾಥ ದೇವರ ಅಂಗಭೋಗಕ್ಕೆ ಭೂದಾನ ನೀಡಿದ ವಿವರ ಕೂಡ ಇದೇ ಶಾಸನದಲ್ಲಿದೆ.[೬೩]

೧೦೭೯ರ ಡಿಸೆಂಬರ್ ೨೯ರಂದು ಗುರುವಾರ ಚಾಳುಕ್ಯ ವಿಕ್ರಮಾದಿತ್ಯನು ರಾಜ್ಯವಾಳುತ್ತಿದ್ದ ಕಾಲದಲ್ಲಿ ಬಾಗಲಿಯ ೫೦ ಜನ ಮಹಾಜನರ ಸನ್ನಿಧಿಯಲ್ಲಿ ಅರಸೀಕೆರೆಯ ಕಲಿಯಗೌಡನ ಮಗಳು ಪಿರಿಯಾಡ ಪೆರ್ಗಡೆಯ ಹೆಂಡತಿಯೂ ಆದ ಬಾಚಲಾದೇವಿಯು ಬಾಗುಳಿಯ ಶ್ರೀಸ್ವಯಂಭೂ ಕಲಿದೇವರ ರಂಗಭೋಗ, ಅಂಗಭೋಗ, ಬ್ರಾಹ್ಮಣರ ಗ್ರಾಸಕ್ಕೆ ಪುರಾಣ ಓದುವ ಓಜರಿಗೆ ಮುಂತಾದ ದೇವತೆಗಳ ಪೂಜೆಗೆ ಈ ದೇವಾಲಯದ ಶಿವಶಕ್ತಿ ಪಂಡಿತರ ಕಾಲು ತೊಳೆದು ದಾನ ಮಾಡಿದ ವಿವರವನ್ನು ಹೊಂದಿದೆ. ಇದಲ್ಲದೆ ಗಾಣವಾರಿ ಪ್ರತಿ ಗಾಣಕ್ಕೆ ಒಂದು ಮಾನವನ್ನು ಉಪ್ಪಿನ ತೆರಿಗೆಯಲ್ಲಿ ಒಂದು ಭಾಗವನ್ನು ೫ ಪ್ರತ್ಯೇಕ ಪಣಗಳನ್ನು ದೇವರಿಗೆ ಸರ್ವಬಾಧಾ ಪರಿಹಾರವಾಗಿ ಬಿಟ್ಟ ವಿವರವನ್ನು ಕೊಡುತ್ತದೆ.[೬೪]

ಕ್ರಿ.ಶ. ೧೧೦೮ರ ಬಾಗುಳಿಯ ಕಲ್ಲೇಶ್ವರ ದೇವಾಲಯದ ಆವರಣದಲ್ಲಿರುವ ಶಾಸನವು ತ್ರಿಭುವನಮಲ್ಲ ದೇವನ ಆಳ್ವಿಕೆಯಲ್ಲಿ ಮಲಯಾಳ ವಡ್ಡವ್ಯವಹಾರಿ ಕೊಮರ ಮೂರ್ಕ್ಕರನು ಸ್ವಯಂಭು ಕಲಿದೇವರ ನಂದಾದೀವಿಗೆಗೆ ಐದು ಗದ್ಯಾಣಗಳನ್ನು ದಾನ ನೀಡಿದುದನ್ನು ದಾಖಲಿಸುತ್ತದೆ. ಕ್ರಿ.ಶ. ೧೧೧೫ರ ಬಾಗಳಿಯ ಕಲ್ಲೇಶ್ವರ ದೇವಾಲಯದ ಆವರಣದಲ್ಲಿರುವ ಮತ್ತೊಂದು ಶಾಸನವು ತ್ರಿಭುವನಮಲ್ಲ ದೇವರ ಆಳ್ವಿಕೆಯ ಕಾಲದಲ್ಲಿ ಭೋಜಂಗರ ಈಶ್ವರಯ್ಯನ ಮಾಚಕ್ಕ ಎಂಬುವಳು ಬೆಳ್ಗುಲಿಯ ೫೦ ಜನ ಮಹಾಜನರ ಸನ್ನಿಧಾನದಲ್ಲಿ ಇಲ್ಲಿನ ದೇವಾಲಯದ ಶಿವಶಕ್ತಿ ಪಂಡಿತರ ಕಾಲತೊಳೆದು ಕಲಿದೇವರ ನೈವೇದ್ಯಕ್ಕೆ ಇಪ್ಪತ್ತು ಗದ್ಯಾಣಗಳನ್ನು ದಾನ ನೀಡಿದನು.[೬೫]

ಕ್ರಿ.ಶ. ೧೧೧೫ರ ಕಲ್ಲೇಶ್ವರದಲ್ಲಿರುವ ಮತ್ತೊಂದು ಶಾಸನ ತ್ರಿಭುವನಮಲ್ಲ ಪಾಂಡ್ಯನು ನೊಳಂಬವಾಡಿಯನ್ನು ಆಳುತ್ತಿದ್ದ ಕಾಲದಲ್ಲಿ ಈತನ ದಂಡನಾಯಕ ತಿಕ್ಕಭಟ್ಟನು ಬೆಳ್ಗುಲಿಯ ೫೦ ಮಹಾಜನರ ಸನ್ನಿಧಿಯಲ್ಲಿ ಶಿವಶಕ್ತಿ ಪಂಡಿತರ ಸಾನ್ನಿಧ್ಯದಲ್ಲಿ ಸ್ವಯಂಭು ಕಲಿದೇವರಿಗೆ

ದಾನ ನೀಡಿದ ವಿವರಗಳನ್ನು ಹೊಂದಿದೆ. ದಾನಿಯಾದ ತಿಕ್ಕಭಟ್ಟನ ವಿಶೇಷಣಗಳನ್ನು ಈ ರೀತಿ ದಾಖಲಿಸುತ್ತದೆ.[೬೬]

"ಸಮಧಿಗತಪಂಚಮಹಾಶಬ್ಧ ಮಹಾಸಮಂತಾಧಿಪತಿ ಮಹಾಪ್ರಚನ್ಡದಣ್ಣನಾಯಕಂ ಸಿಷ್ಟೇಷ್ಟಜನಾಭೀಷ್ಟ ಫಳಪ್ರದಾಯ ಕಂಹರಚರಣಸರಸೀರುಹಮಧುಕರಂ ವಿನಯರತ್ನಾಕರಂ ನಿಯೋಗಯೋಗನ್ಧರಂ ಪತಿಕಾರ್ಯ್ಯಧುರನ್ದರಂ ಚತುಸ್ಸಮಯ ಸಮುದ್ಧರಣಂ ವಿಶ್ವಾಮಿತ್ರಗೋತ್ರಪವಿತ್ರಂ ನಾಮಾದಿಸಮಸ್ತಪ್ರಶಸ್ತಿಸಹಿತಂ ಶ್ರೀಮನ್ಮಹಾಪ್ರಧಾನನಚ್ಚುಪನ್ನಾಯದ ಧಿಷ್ಠಾಯಕಂ ದಣ್ಣನಾಯಕಂ ತಿಕ್ಕಭಟ್ಟರು" ಇದೇ ರೀತಿ ಅಲ್ಲಿನ ಮಠದ ಸ್ಥಾನಪತಿಯ ಗುಣಗಳನ್ನು ಹೊಗಳುತ್ತದೆ. "ಸ್ವಸ್ತಿ ಸಮಸ್ತವಸ್ತುಗುಣ ಸಕಳಾಗಮ ಕುಶಲರಪ್ಪ ಶ್ರೀಮತ್ತಿನ ಶಕ್ತಿಪಣ್ಡಿತರ ಸನ್ನಿಧಾನದೊಳ್ ಶ್ರೀಸ್ವಯಂಭು ಕಲಿದೇವಸ್ವಾಮಿ"

ಬಾಗುಳಿಯ ಕಲ್ಲೇಶ್ವರ ದೇವಾಲಯದ ಆವರಣದಲ್ಲಿ ೧೧೨೨ರ ಶಾಸನವು ಪಾಂಡ್ಯದೇವನು ನೊಳಂಬವಾಡಿಯನ್ನು ಆಳುತ್ತಿದ್ದಾಗ ಅವನ ಮಹಾಪ್ರಧಾನ ದಂಡನಾಯಕ ಬನ್ನಿಗೊಳದ ಸೋಮ ಅರಸರು ನೊಳಂಬವಾಡಿ ೩೨೦೦೦ದ ವಡ್ಡರಾವುಳದ ಸುಂಕವನಾಳುತ್ತಿದ್ದ ಕಾಲದಲ್ಲಿ ದೇವರ ಗ್ರಾಸಕ್ಕೆ ಮತ್ತು ಛತ್ರಕ್ಕೆ ದಾನ ಬಿಟ್ಟಿದುದನ್ನು ದಾಖಲಿಸುತ್ತದೆ. ಇದೇ ದೇವಾಲಯದ ಪರಿಸರದಲ್ಲಿರುವ ಮತ್ತೊಂದು ಶಾಸನವು ಮಾರ್ತಾಣ್ಡಯ್ಯ ದಾಸಯ್ಯನಾಯಕನು ಮಹಾಜನರ ಅಪ್ಪಣೆ ಪಡೆದು ದೇವಾಲಯದ ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ ಮುನ್ನೂರು ಕಮ್ಮ ಭೂಮಿಯನ್ನು ದಾನ ಬಿಟ್ಟಿದುದನ್ನು ಹೇಳುತ್ತದೆ.[೬೭]

ಬೆಳ್ಗುಲಿ ಗ್ರಾಮದ ಕಲ್ಲೇಶ್ವರ ದೇವಾಲಯದ ಆವರಣದಲ್ಲಿ ಕ್ರಿ.ಶ. ೧೧೨೬ರ ಶಾಸನವು ವಿಷ್ಣುವೃದ್ಧ ಗೋತ್ರದ ಗುಜ್ಜರ ಶಾಂತಿಕಬ್ಬೆಯು ಬೆಳ್ಗುಲಿಯ ೫೦ ಮಹಾಜನರ ಸನ್ನಿಧಿಯಲ್ಲಿ ಶಿವಶಕ್ತಿ ಪಂಡಿತರ ಕಾಲತೊಳೆದು ಕಲಿದೇವರ ನೈವೇದ್ಯಕ್ಕಾಗಿ ಪುರಾಣವನ್ನೋದುವ ಉಪಾಧ್ಯಾಯರಿಗಾಗಿ ಮೂವತ್ತು ಕಮ್ಮ ತೋಟವನ್ನು ದಾನ ನೀಡಿದುದನ್ನು ದಾಖಲಿಸುತ್ತದೆ.[೬೮] ಇಲ್ಲಿ ಕೂಡ ಶಿವಶಕ್ತಿ ಪಂಡಿತರ ಗುಣಗಾನ ಮಾಡುವಾಗ ಸ್ವಸ್ತಿ ಯಮ ನಿಯಮಾದಿ ಸಕಳ ಗುಣ ಶಿವಾಗಮ ಜ್ಞಾನ ಸಂಪನ್ನರಪ್ಪ ಶ್ರೀಮತ್ಸ್‌ಶಿವಶಕ್ತಿ ಪಂಡಿತರು ಎಂದು ಅವರ ಬಿರುದಾವಳಿಗಳನ್ನು ದಾಖಲಿಸುತ್ತದೆ. ಜಗದೇಕಮಲ್ಲನ ಕಾಲದ ಇಲ್ಲಿನ ಮತ್ತೊಂದು ಶಾಸನ ಚಾಳುಕ್ಯ ವಿಕ್ರಮ ಶಕ ಹನ್ನೊಂದನೆ ವರ್ಷದಲ್ಲಿ ಹೊರಡಿಸಲಾಗಿದ್ದು ೧೧೪೮ಕ್ಕೆ ಸರಿಹೊಂದುತ್ತದೆ.[೬೯] ಈ ಶಾಸನವು ಬೆಳ್ಗುಲಿಯನ್ನು ಶ್ರೀಮತ್ ಹರಿಶ್ಚಂದ್ರರ ದತ್ತಿ ಮಹಾಅಗ್ರಹಾರ ಬೆಳ್ಗುಲಿ ಎಂದು ಇಲ್ಲಿನ ಪ್ರಮುಖ ಆಶೇಷ ಮಹಾಜನಗಳೆಲ್ಲರ ಸಮ್ಮುಖದಲ್ಲಿ ಇಲ್ಲಿನ ಕಲಿದೇವರಿಗೆ ಪ್ರತಿವರ್ಷ ೬೦ ಲಕ್ಷ ಗಡುಗೆ ನಿಮಿತ್ತವಾಗಿ ಏಳು ಜನ ಬ್ರಾಹ್ಮಣರಿಗೆ ೪೫ ಕಮ್ಮ ತೋಟವನ್ನು ದಾನ ನೀಡಿದ ವಿವರಗಳನ್ನು ದಾಖಲಿಸುತ್ತದೆ.[೭೦] ಈ ಏಳು ಜನ ಬ್ರಾಹ್ಮಣರಲ್ಲಿ ಕೆಲವು ವಿಂಗಡಣೆಯನ್ನು ಕಾಣುತ್ತೇವೆ. ವೇದವನ್ನು ಹೇಳುವ ನಾಲ್ವರು ಬ್ರಾಹ್ಮಣರಿಗೆ ಜಪ ಮಾಡುವ

ಮೂವರು ಬ್ರಾಹ್ಮಣರಿಗೆ ಒಟ್ಟು ೭ ಜನ ಬ್ರಾಹ್ಮಣರಿಗೆ ಪ್ರತ್ಯೇಕವಾಗಿ ದಾನ ನೀಡಿರುವುದಲ್ಲದೆ ಪ್ರತ್ಯೇಕವಾಗಿ ತಿಂಗಳ ದಕ್ಷಿಣೆಗೆ ಏಳು ಪಣ ಬ್ರಾಹ್ಮಣರ ಭೋಜನಕ್ಕೆ ದೇವರ ರಂಗಭೋಗಕ್ಕೆ ನೈವೇದ್ಯಕ್ಕೆ ಸುಗಂಧ ದ್ರವ್ಯಕ್ಕೆ ಭಟ್ಟರ ಮಾದಿಯಣ್ಣನು ದೇವರ ಪಾದದಲ್ಲಿ ಈ ದಾನವನ್ನು ಧಾರಾಪೂರ್ವಕವಾಗಿ ಬಿಟ್ಟನು.[೬೧]

ಬಾಗಳಿಯ ಮತ್ತೊಂದು ಶಾಸನ ವಿಕ್ರಮ ಶಕ ೧೬ನೆಯ ವರ್ಷ ಆಂಗೀರಸ ಸಂವತ್ಸರದ ಫಾಲ್ಗುಣ ಪೌರ್ಣಮಿ ಸೋಮವಾರದಂದು ಇಲ್ಲಿಯ ಅಗ್ರಹಾರದ ಮಹಾಜನಗಳ ಸಮ್ಮುಖದಲ್ಲಿ ವಿಕ್ರಮಾದಿತ್ಯನು ಬೆಳ್ಗುಲಿಯ ೫೦ ಜನ ಮಹಾಜನರಿಗೆ ೧೭೩ ಗದ್ಯಾಣವನ್ನು ಬಿಟ್ಟು ಇದರ ಬಡ್ಡಿಯಲ್ಲಿ ದೇವಾಲಯದ ೧೩ ಬ್ರಾಹ್ಮಣರಿಗೆ ಪಡಿಯದ ರೂಪದಲ್ಲಿ ನೀಡುವಂತೆಯೂ ಕಲಿದೇವರಿಗೆ ಆಹಾರ ಮತ್ತು ನರಸಿಂಹ ದೇವರಿಗೆ ತಲಾ ಒಂದು ನಂದಾದೀಪವನ್ನು ಉರಿಸಲು ದಾನ ನೀಡುತ್ತಾನೆ.[೬೨] ಕಲ್ಲೇಶ್ವರ ದೇವಾಲಯದ ಆವರಣದಲ್ಲಿರುವ ೧೧೯೩ನೆಯ ವರ್ಷದ ಶಾಸನವು ಶ್ರೀಮತ್ ಹರಿಶ್ಚಂದ್ರ ಮಹಾರಾಜರ ದತ್ತಿ ಬಾಗಳಿಯ ಅಗ್ರಹಾರದ ಬ್ರಾಹ್ಮಣರು ಮತ್ತು ಮಹಾಜನರು ಹೊಯ್ಸಳ ಚಕ್ರವರ್ತಿ ವೀರಬಲ್ಲಾಳನು ಬೆಳ್ಗುಲಿಯನ್ನು ಆಳುತ್ತಿದ್ದಾಗ ಈ ಕಲಿದೇವರ ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ ದಾನ ನೀಡಿದುದನ್ನು ದಾಖಲಿಸುತ್ತದೆ.[೬೩] ಇದು ಒಂದು ಪ್ರಮುಖ ಶಾಸನವಾಗಿ ನಮಗೆ ಕಂಡುಬರುತ್ತದೆ. ಕಾರಣ ಹೊಯ್ಸಳ ಬಲ್ಲಾಳನು ಈ ಭೂಪ್ರದೇಶದ ಮೇಲೆ ತನ್ನ ಆಳ್ವಿಕೆಯನ್ನು ಸಾಧಿಸಿ ಕಲ್ಯಾಣದ ಚಾಳುಕ್ಯ ಮತ್ತು ಪಾಂಡ್ಯರ ವಿರುದ್ಧ ಸೈನಿಕ ಕಾರ್ಯಾಚರಣೆ ಮಾಡಿ ಹೊಯ್ಸಳ ಪ್ರಭುತ್ವವನ್ನು ಬಾಗಳಿಯ ಪ್ರದೇಶವನ್ನು ದಾಟಿ ವಿಸ್ತರಿಸಿದುದನ್ನು ಖಚಿತಪಡಿಸುತ್ತದೆ. ಅಷ್ಟೇ ಅಲ್ಲದೆ ಇಲ್ಲಿನ ಪರಂಪರೆಯಲ್ಲಿ ಯಾವುದೇ ವ್ಯತ್ಯಾಸ ಮಾಡದೆ ಮುಂದುವರೆಸಿದುದನ್ನು ಈ ಶಾಸನವು ದಾಖಲಿಸುತ್ತದೆ.

ಬಾಗಳಿಯ ಕಲ್ಲೇಶ್ವರ ದೇವಾಲಯದ ಆವರಣದಲ್ಲಿ ದೊರೆತಿರುವ ಕ್ರಿ.ಶ. ೧೧೧೩ರ ಶಾಸನವು ಮತ್ತೊಮ್ಮೆ ಮಲಯಾಳ ವಡ್ಡ ವ್ಯವಹಾರಿಯನ್ನು ಮತ್ತು ಶಿವಶಕ್ತಿ ಪಂಡಿತರನ್ನು ಆತನು ಕಲಿದೇವರ ನಂದಾದೀವಿಗೆಗೆ ಬಿಟ್ಟ ದಾನವನ್ನು ಈ ಕೆಳಗಿನಂತೆ ದಾಖಲಿಸುತ್ತದೆ.[೬೪]

"ಸ್ವಸ್ತಿ ಸಮಸ್ತ ವಸ್ತುಗುಣಗಣಾಳಂಕಾರಚಾರುಚಾರಿತ್ರನಯವಿನಯಶೀಲಾಚಾರಸಂಪನ್ನರಪ್ಪ ಶ್ರೀ ನಿಡುಂಗಾಲ್ನಾಡ ಶ್ರೀಮನ್ಮಹಾಮಲೆಯಾಳ ವಡ್ಡವ್ಯವಹಾರಿ ಪೊನ್ಮೂರ್ಖ್ವಸೆಟ್ಟಿಯರ್ಸ್ಸಮಸ್ತಗುಣ ಸಂಪನ್ನರಪ್ಪ ಶ್ರೀ ಮತ್ಸಿವಶಕ್ತಿಪಣ್ಡಿತರ ಕಾಲಂ ಕರ್ಚ್ಚಿ ಧಾರಾಪೂರ್ವ್ವಕ(ಂ)ಮ್ಮಾಡಿ ಶ್ರೀಸ್ವಯಂಭು ಕಲಿದೇವಸ್ವಾಮಿದೇವರ್ಗ್ಗೆರಡು ನಂದಾದೀವಿಗೆ ನಡವಂತಾಗಿ ಬಿಟ್ಟ ಗದ್ಯಾಣಂ ಹದಿನಾಲ್ಕು [೧೪]".[೬೫]

ಬಾಗಲಿಯ ವಿಕ್ರಮ ಶಕೆ ೪೪ನೇ ವರ್ಷದಲ್ಲಿ ಅಂದರೆ ವಿಕಾರಿ ಸಂವತ್ಸರ ಅಮವಾಸ್ಯೆಯಂದು ಹೊರಡಿಸಿದ ಶಾಸನವು ದಂಡನಾಯಕನಾದ ಮಹಾದೇವರಸರ ಅಪ್ಪಣೆಯ ಮೇರೆಗೆ ದಂಡನಾಯಕ

ಋಷಿಯಣ್ಣ ಭಟ್ಟನು ನೀಲೇಶ್ವರ ಪಂಡಿತರ ಕಾಲನ್ನು ತೊಳೆದು ತಿಂಗಳಿಗೆ ಒಂದು ಎಲೆಯ ಹೇರಿನ ಸುಂಕವನ್ನು ಬಾಗಳಿಯ ೫೦ ಮಹಾಜನಗಳು ಕೆರೆಯ ಸುಂಕದಲ್ಲಿ ನಂದಾದೀಪಕ್ಕೆ ತಿಂಗಳಿಗೆ ಒಂದು ಪಣವನ್ನು ಪೆರ್ಗಡೆಯ ಕಾಮರಾಜನು ದೀಪಾವಳಿಯ ದಿನ ಮಹಾರಾಜರು ಕೊಡುವ ೨ ಗದ್ಯಾಣದಲ್ಲಿ ೧ ಗದ್ಯಾಣವನ್ನು ನೀಲೇಶ್ವರ ದೇವರ ಪೂಜಾ ಕೈಂಕರ್ಯಕ್ಕೆ ಬಿಟ್ಟ ದಾನವನ್ನು ದಾಖಲಿಸುತ್ತದೆ.[೫೬]

ಬಾಗಲಿಯ ಕ್ರಿ.ಶ. ೧೧೦೮ರ ಶಾಸನವು ಮಹಾವಡ್ಡ ವ್ಯವಹಾರಿಗಳಾದ ಚಿನ್ನಗೆಯಿ ಕಪ್ಪಿಸೆಟ್ಟಿಯರು ಹೊನ್ನಬಾಚಯ್ಯ, ಪದ್ಮಣ, ಶರ್ವದೇವ ನಾಯಕ, ಮಾಹಣ್ಣ, ಸೇನಬೋವ, ಸಂಕಣ್ಣ ಮೊದಲಾದವರು ನೀಲೇಶ್ವರ ದೇವರಿಗೆ ನಾಗರಾಸಿ ಪಂಡಿತರ ಕಾಲ ತೊಳೆದು ಭೂದಾನ ಮಾಡಿದ ವಿವರಗಳನ್ನು ಹೊಂದಿದೆ.[೫೭] ಬಾಗಳಿಯ ಹೊಯ್ಸಳ ವೀರನರಸಿಂಹನ ಕಾಲದ ಶಾಸನವು ಅಂದರೆ ಕ್ರಿ.ಶ. ೧೨೯೧ರಲ್ಲಿ ಹೊರಡಿಸಿದ ಶಾಸನವು ನೀಲೇಶ್ವರ ದೇವರಿಗೆ ಮೊಗವಾಡ ಮಾಚರಸನ ಹರಿಕಾರ ಭೇಟಿಯ ನಾಯಕನ ಮಗ ಹೆಗ್ಗಡೆ ಚಂದಯ್ಯ ಪೂಜಾರ್ಥವಾಗಿ ಭೂದಾನ ನೀಡಿದುದನ್ನು ದಾಖಲಿಸುತ್ತದೆ.[೫೮] ಹೊಯ್ಸಳರ ಕಾಲಕ್ಕೂ ಅಲ್ಲಿನ ಸಾಮಾಜಿಕ ವ್ಯವಸ್ಥೆ ಪರಂಪರಾಗತವಾಗಿ ಮುಂದುವರಿದಿರುವುದು ಇದರಿಂದ ಸ್ಪಷ್ಟವಾಗುತ್ತದೆ.

ಇಲ್ಲಿಯ ಮತ್ತೊಂದು ಶಾಸನವು ಮಹಾಜನರ ಪ್ರಿಯಪುತ್ರನಾದ ಸೇನಭೋವ ಸಂಕಣನು ನೀಲೇಶ್ವರ ದೇವರ ಪೂಜೆಗೆ ನಂದಾದೀವಿಗೆ ತೋಟ ದಾನ ಮಾಡಿದುದನ್ನು ದಾಖಲಿಸುತ್ತದೆ.[೫೯] ಹರಪನಹಳ್ಳಿ ತಾಲ್ಲೂಕಿನ ಬೆಣ್ಣೆ ಹಳ್ಳಿಯ ಕ್ರಿ.ಶ. ೧೧೪೮ರ ಶಾಸನವು ಮತ್ಸ್ಯರಾಜನು ಬೆಳ್ಳಿಗನೂರನ್ನು ಸ್ವಯಂಭು ದೇವರಿಗೆ ದಾನ ನೀಡಿದ ವಿವರವನ್ನು ದಾಖಲಿಸುತ್ತದೆ. ಊರೊಡೆಯ ಮಲ್ಲರಸರ ಮುಖ್ಯರು ಬ್ರಹ್ಮಪುರಿಯ ೧೨ ಬ್ರಾಹ್ಮಣರಿಗೆ ಆಚಾರ್ಯ ಚಂದ್ರರಾಸಿ ಪಂಡಿತದೇವರಿಗೆ ಸರ್ವೇಸಾಮಾನ್ಯವಾಗಿ ಬಿಟ್ಟ ದತ್ತಿಯನ್ನು ದಾಖಲಿಸುತ್ತದೆ. ಇಲ್ಲಿ ಬ್ರಹ್ಮಪುರಿಯ ಪದ ಬಹಳ ಪ್ರಮುಖವೆನಿಸುತ್ತದೆ. ಪ್ರಾಯಶಃ ಬೆಣ್ಣೆಹಳ್ಳಿಯು ಬ್ರಹ್ಮಪುರಿಯಾಗಿತ್ತೆಂದು ಭಾವಿಸಬೇಕಾಗುತ್ತದೆ.[೬೦]

ಕ್ರಿ.ಶ. ೧೧೪೨ರ ಶಾಸನವು ವಡ್ಡರಾವುಳ ಸುಂಕಾಧಿಕಾರಿಯಾಗಿದ್ದ ಅನಂತ ಪಾಳಯ್ಯನು ಅಳಿಯ ಮಾದಿರಾಜನು ಬನವಾಸಿ ೧೨೦೦೦ ಹಲಸಿಗೆ ೧೨೦೦೦ ನೊಳಂಬವಾಡಿ ೩೨೦೦೦ ಹಾಗೂ ಫಲಿಮರಸನು ನೊಳಂಬವಾಡಿ ೩೨೦೦೦ದಿಂದ ವಡ್ಡರಾವುಳದಿಂದ ಸುಂಕಾಧಿಕಾರಿಯಾಗಿದ್ದಾಗ ಆತನ ಉತ್ತರಾಧಿಕಾರಿ ಚಾವುಂಡರಾಯನು ಮುತ್ತಗೆ ಮೂವತ್ತರ ಸಮೀಪದ ಗ್ರಾಮವಾದ ಅರಸೀಕೆರೆಯ ನೊಳಂಬೇಶ್ವರ ದೇವರ ಪೂಜಾರ್ಥವಾಗಿ ವರೇಶ್ವರ ಪಂಡಿತರ ಕಾಲ ತೊಳೆದು ವಡ್ಡರಾವುಳ ಸುಂಕವನ್ನು ದಾನ ಮಾಡಿದನು.[೬೧]

ಕೆರೆಗುಡಿಹಳ್ಳಿಯ ಈಶ್ವರ ದೇವಾಲಯದ ಸಭಾಮಂಟಪದಲ್ಲಿನ ಕ್ರಿ ಶ. ೧೧೧೧ರ ಶಾಸನವು ಮಹಾಸಾಮಂತ ಕಾಮರಸ ಮತ್ತು ಚಟ್ಟಬ್ಬೆಯ ಮಗನಾದ ಸಿಂಗರಸನು ನೊಳಂಬೇಶ್ವರ ದೇವರ ಪೂಜಾರ್ಥವಾಗಿ ಮುನಿಗಳ ಭೋಜನಾರ್ಥವಾಗಿ ವಿದ್ಯಾದಾನಕ್ಕಾಗಿ ದಿವ್ಯಶಕ್ತಿ ಪಂಡಿತರ

ಶಿಷ್ಯರಾದ ವಾಮಶಕ್ತಿ ಪಂಡಿತರ ಮತ್ತು ಇವರ ಶಿಷ್ಯರಾದ ವರೇಶ್ವರ ಪಂಡಿತರ ಕಾಲ ತೊಳೆದು ದಾನ ಮಾಡಿದ ವಿವರಗಳನ್ನು ದಾಖಲಿಸುತ್ತದೆ. ಅಂದಮೇಲೆ ಕೆರೆಗುಡಿಯ ಈಶ್ವರ ದೇವಾಲಯದಲ್ಲಿ ಮಠ ಒಂದಿದ್ದು ಅಲ್ಲಿ ಅನೇಕ ವಿದ್ಯಾರ್ಥಿಗಳು ಅಧ್ಯಯನ ಮಾಡುತ್ತಿದ್ದುದು ಇದರಿಂದ ಅರ್ಥವಾಗುತ್ತದೆ. ಶಾಸನದಲ್ಲಿ ನೊಳಂಬೇಶ್ವರ ದೇವರ ರಂಗಭೋಗಕ್ಕೆ ಸ್ನಾನ ನೈವೇದ್ಯಕ್ಕೆ ತಪೋಧನರಿಗೆ ವಾದ್ಯವಾದನಕ್ಕೆ ತ್ರಿಭೋಗವಾಗಿ ದಾನ ನೀಡಿದುದನ್ನು ಸ್ವಸ್ತಿ ಯಮನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೌನ ಅನುಷ್ಠಾನ ಪಾರಾಯಣ ಜಪ ಸಮಾಧಿಶೀಲ ಗುಣಸಂಪನ್ನರಾದ ಗುರುಗಳಿಗೆ ಕಾಲತೊಳೆದು ಧಾರಾಪೂರ್ವಕವಾಗಿ ದಾನ ನೀಡಿರುವುದು ಇವೆಲ್ಲವನ್ನು ಖಚಿತಪಡಿಸುತ್ತದೆ.[೮೨]

ತಲವಾಗಿಲು ಭಾಗ್ಯೇಶ್ವರ ದೇವಾಲಯದ ಬಳಿ ನಿಲ್ಲಿಸಿರುವ ಕ್ರಿ.ಶ. ೧೦೩೪ರ ಶಾಸನವು ಸ್ವಸ್ತಿ ಸಮಸ್ತ ಭುವನಾಶ್ವರಯ ಶ್ರೀವಲ್ಲಭ ಸತ್ಯಾಶ್ರಯ ಕುಲತಿಲಕ ಜಗದೇಕಮಲ್ಲನ ಕಾಲದಲ್ಲಿ ಹೊರಡಿಸಲಾದ ಶಾಸನವು ಭೋಗೇಶ್ವರ ದೇವರಿಗೆ ಮತ್ತು ದೇವಾಲಯದ ಪರಿಚಾರಕ ವರ್ಗವಾದ ಪರಿಚಾರಕರಾದ ಹಾಡುವವರಿಗೆ, ಪೂಜಾರಿಗೆ, ಕಲ್ಲುಕುಟಿಕರಿಗೆ, ಪಹರೆ ಕಾಯುವವರಿಗೆ, ಮಠಕೆ ವಂಚಿದುರ್ಗಯ್ಯನಿಗೆ, ಕಲ್ಲುಕುಟಿಕ ಸಿಂಗೋಜನಿಗೆ ಭೂಮಿ ದಾನ ನೀಡಿದುದನ್ನು ದಾಖಲಿಸುತ್ತದೆ.[೮೩]

ಉಚ್ಚಂಗಿಪಾಂಡ್ಯರ ಆಳ್ವಿಕೆಯ ಪ್ರದೇಶ ಕೇವಲ ಬಳ್ಳಾರಿ ಜಿಲ್ಲೆಗೆ ಸೀಮಿತವಾಗಿರದೆ ಅವರು ನೊಳಂಬವಾಡಿ ಭೂಪ್ರದೇಶದ ಮೇಲೆ ತಮ್ಮ ಪ್ರಭುತ್ವವನ್ನು ಸಾಧಿಸಿದ್ದರಿಂದ ಅವರ ಆಡಳಿತದ ಕ್ಷೇತ್ರ ಚಿತ್ರದುರ್ಗ, ದಾವಣಗೆರೆ ಮತ್ತು ತುಮಕೂರು ಜಿಲ್ಲೆಯನ್ನು ಆವರಿಸಿಕೊಂಡಿದ್ದಿತು. ಅಲ್ಲದೆ ಈ ಜಿಲ್ಲೆಯ ಭೂಪ್ರದೇಶದ ಮೇಲೆ ಅವರು ಪ್ರಭುತ್ವ ಸಾಧಿಸಿದ್ದರ ಕುರುಹಾಗಿ ಆ ಜಿಲ್ಲೆಯಲ್ಲಿ ಪಾಂಡ್ಯರ ಹಲವಾರು ಶಾಸನಗಳು ಕಂಡುಬರುತ್ತವೆ. ತುಮಕೂರು ಜಿಲ್ಲೆ ಸಿರಾ ತಾಲ್ಲೂಕಿನ ಶಾಸನವೊಂದು ಹಿರೀಬಾಣಗೆರೆಯ ಕೆರೆಯ ಏರಿಯ ಮೇಲೆ ಎರುಕಮಾರ ಗಾವುಂಡನು ಸೋಮೇಶ್ವರ ದೇವಾಲಯವನ್ನು ಕಟ್ಟಿಸಿ ಕೆರೆಯನ್ನು ನಿರ್ಮಿಸಿ ದೇವರ ನಿತ್ಯ ನೈವೇದ್ಯಕ್ಕಾಗಿ ನಂದಾದೀವಿಗೆಗೆ ದೇವರ ಗದ್ದೆಯ ಹಿಂಭಾಗದ ಮೂವತ್ತು ಹೆಗ್ಗಾಲುವೆ ಮೊದಲು ಮೂವತ್ತು ಕೊಳಗ ಗದ್ದೆಯನ್ನು ದಾನ ನೀಡಿದ ವಿವರವನ್ನು ಹೇಳುತ್ತದೆ.[೮೪]

ಚಿತ್ರದುರ್ಗ ತಾಲ್ಲೂಕಿನ ಜಗದೇಕಮಲ್ಲನ ಕಾಲದ ಶ್ರೀ ಹಿಡಂಬೇಶ್ವರ ದೇವಾಲಯದ ಶಾಸನವು ದೇವರ ನಂದಾದೀವಿಗೆಗಾಗಿ ಮಾಚದೇವ ಕಾಮಯ್ಯ ನಾಯಕರು ಚೋಳಯ್ಯ ನಾಯಕರು ಹಿಡಂಬೇಶ್ವರ ದೇವರ ನಂದಾದೀವಿಗೆಗೆ ನೈವೇದ್ಯಕ್ಕೆ ಚೈತ್ರ ಪವಿತ್ರಕ್ಕೆ ನೀಡಿದ ಭೂ ದಾನದ ವಿವರಗಳನ್ನು ಕೊಡುತ್ತದೆ.[೮೫]

ಚಿತ್ರದುರ್ಗ ಹೋಬಳಿಯ ಗಾರೆಹಟ್ಟಿ ಗ್ರಾಮದ ಮಾಹೇಶ್ವರ ದೇವಸ್ಥಾನದ ಒಳಗಿರುವ ಜಗದೇಕಮಲ್ಲ ತ್ರಿಭುವನಮಲ್ಲದೇವನ ಕಾಲದ ಶಾಸನವು ಉದಯಾದಿತ್ಯ ನಾಯಕ ಹೆಗ್ಗಡೆ

ಮಾಚಯ್ಯನ ಮಗಳಾದ ಗಂಗವ್ವ ಶಿವನಲ್ಲಿ ಅತ್ಯಂತ ನಿಷ್ಠಾವಂತಳಾಗಿದ್ದು ಲಿಂಗವನ್ನು ಪ್ರತಿಷ್ಠಾಪನೆ ಮಾಡಿಸಿ ಕಾಮಯ್ಯ ನಾಯಕನನ್ನು ಬೇಡಿಕೊಂಡು ಸನ್ಮಾರ್ಗ ಚರಿತರಾದ ಸೋಮರಾಶಿ ಪಂಡಿತರ ಕಾಲ ತೊಳೆದು ಭೂಮಿಯನ್ನು ಬಿಟ್ಟ ವಿವರವನ್ನು ಹೊಂದಿದೆ.[೮೬] ಜಗದೇಕ ಮಲ್ಲದೇವನ ಕಾಲದ ಅಂದರೆ ಪ್ರಭವ ಸಂವತ್ಸರ ಕಾರ್ತಿಕ ಶುದ್ಧ ೯, ಸೋಮವಾರದಂದು ಹೊರಡಿಸಿದ ಕೊಲ್ಲುಹಾಳದ ಶಾಸನವು ಇಲ್ಲಿನ ಯಾದೇಶ್ವರ ದೇವರಿಗೆ ಬೆನಕ ವೆಗ್ಗಡೆ ಬಮ್ಮಗೌಡನ ಮಗನಾದ ಮುದ್ದನಗೌಡನು ದೇವಾಲಯದ ಜೀರ್ಣೋದ್ಧಾರ ಮತ್ತು ನಂದಾದೀವಿಗೆಗೆ ನೈವೇದ್ಯಕ್ಕೆ ಕರಿಯಾಚಾರ್ಯರ ಆಹಾರಕ್ಕೆ ಕಂಬಮ್ಮಜಿಯನ ತಮ್ಮ ಬೆನಕರಾಶಿ ಪಂಡಿತರಿಗೆ ಧಾರಾಪೂರ್ವಕವಾಗಿ ಹಿರಿಯ ಗದ್ದೆಯನ್ನು ಮೂಲಸ್ಥಾನದ ಕಲಿನಾಥ ದೇವರಿಗೆ ಹಗ್ಗೆರೆಯ ಹಿಂದಿನ ೧೦೦ ಕಂಬ ಗದ್ದೆಯನ್ನು ಕೊಟ್ಟ ವಿವರಗಳನ್ನು ದಾಖಲಿಸುತ್ತದೆ.[೮೭]

ತ್ರೈಲೋಕ್ಯಮಲ್ಲದೇವರ ಕಾಲದ ಕಾಕಂಬಾಳ ಕಂಬಗಾವುಣ್ಣನ ಸನ್ನಿಧಿಯಲ್ಲಿ ಭೋಗೇಶ್ವರ ದೇವರ ದೇವಾಲಯದ ಜೀರ್ಣೋದ್ಧಾರಕ್ಕಾಗಿ ಮತ್ತು ಮಠದಲ್ಲಿ ವಿದ್ಯಾಭ್ಯಾಸ ಮಾಡುವ ವಿದ್ಯಾರ್ಥಿಗಳನ್ನು ನೋಡಿಕೊಳ್ಳುವುದಕ್ಕಾಗಿ ಹಿರಿಯ ಕೆರೆಯ ಬಯಲಿನ ಮುನ್ನೂರು ಬಳ್ಳಿಯ ತೋಟವನ್ನು ಚಂದ್ರಪಂಡಿತ ದೇವರ ಕಾಲತೊಳೆದು ಕನ್ನರಸನ ಆಳ್ವಿಕೆಯ ಕಾಲದಲ್ಲಿ ನೀಡಿದ ದಾನಗಳನ್ನು ವಿವರಿಸುತ್ತದೆ.[೮೮]

ಇದಲ್ಲದೆ ದಾವಣಗೆರೆಗೆ ಸೇರಿದ ಅನೇಕ ಶಾಸನಗಳು ಈ ಕಾಲಘಟ್ಟದವುಗಳಾಗಿವೆ. ಇವೆಲ್ಲವೂ ದೇವಾಲಯಕ್ಕೆ ದಾನ ನೀಡಿದ ವಿವರಗಳನ್ನು ಉಲ್ಲೇಖಿಸುತ್ತವೆ. ತ್ರಿಭುವನಮಲ್ಲ ದೇವರ ಕಾಲದ ವಿಕ್ರಮ ಶಕೆ ಮೂವತ್ತೆರಡರ ಶಾಸನವು ಮಹಾಪ್ರಧಾನ ರಾಯ ಬಾರಿ ದಂಡನಾಯಕ ಮಾ..ಣ್ನಯ್ಯ, ಪಿರಿಯಕೇತೆಯ ನಾಯಕರ ಪುತ್ರ ಕುಲದೀಪಕಮಪ್ಪ, ಕಿರಿಯ ಕೇತಯನಾಯಕರ ಪುತ್ರ ಹಂಪರಸರು, ಮೂಲಸ್ಥಾನದ ಕಲಿದೇವರಿಗೆ ಹಾಗೂ ದೇವಿಕಾಂಬೆಯ ಪುತ್ರಸ್ಥಾನದ ಪಂಡಿತರ ಕಾಲತೊಳೆದು ಬಿಟ್ಟ ದಾನದ ವಿವರಗಳನ್ನು ತಿಳಿಸುತ್ತದೆ.[೮೯]

ತ್ರಿಭುವನಮಲ್ಲನ ಆಳ್ವಿಕೆಯ ಕಾಲದ ವಿಕ್ರಮ ಶಕೆ ೮೨ನೆಯ ವರ್ಷ ವಿಜಯ ಸಂವತ್ಸರದಲ್ಲಿ ಕಲ್ಲೇಶ್ವರ ದೇವರಿಗೆ ಅಣ್ಣಮರಸ ಬಾಡದ ಮನೆಯ ಮಾಕರಸ ಸೋಮಯಾಜಿ, ಸೋಮನಾಥಯ್ಯ, ಭೀಮದೇವಯ್ಯ, ಸಂಕಣ್ಣ, ಕಾಚಂಣ್ಣ ಮುಂತಾದವರು ವಿಮಳಶಕ್ತಿ ಪಂಡಿತರ ಕಾಲನ್ನು ತೊಳೆದು ಪಿರಿಯ ಕೆರೆಯ ಮೊದಲ ಏರಿಯ ದೇವರ ಮುಂದಿನ ಗದ್ದೆ ತೆಂಕದಿಕ್ಕಿನ ಬೆದ್ದಲು ಭೂಮಿ, ನಾಲ್ಕು ಮತ್ತರುಗಳನ್ನು ದೇವರ ರಂಗಭೋಗಕ್ಕೆ ದೇವಾಪುರದ ಹನ್ನೆರಡು ಮನೆ ನೆಲದ ಸ್ವಾಮ್ಯವನ್ನು ದೇವರ ನಂದಾದೀವಿಗೆಗೆ ಒಂದು ಎತ್ತುಗಾಣ ಒಂದು ಅಡಕೆಯ ಮರವನ್ನು ದಾನಬಿಟ್ಟ ವಿವರಗಳನ್ನು ದಾಖಲಿಸುತ್ತದೆ.[೯೦]

ತ್ರಿಭುವನಮಲ್ಲನ ಕಾಲದ ವಿಕ್ರಮ ಶಕೆ ೩೭ನೆಯ ವರ್ಷದಲ್ಲಿ ಅಂದರೆ ನಂದನ ಸಂವತ್ಸರ ಫಾಲ್ಗುಣ ಅಮಾವಾಸ್ಯೆ ಬುಧವಾರ ವಿಷ್ಣುದೇವರ ನೈವೇದ್ಯಕ್ಕಾಗಿ ಮಹಾಪ್ರಭು

ಕೋಣೆ ನಾರಾಯಣಮಯ್ಯನ ಮಗನಾದ ಶ್ರೀಧರನು ೨೨೫ ಕಮ್ಮ ಗದ್ದೆಯನ್ನು ದಾನ ಮಾಡಿದ ವಿವರಗಳನ್ನು ಹೊಂದಿದ್ದು ಶಾಸನದ ಇತರ ಭಾಗ ತ್ರುಟಿತವಾಗಿರುವುದರಿಂದ ಹೆಚ್ಚಿನ ವಿವರಗಳಿಲ್ಲ. ಆದರೂ ಅಯ್ಯಹೊಳೆ ಶ್ರೀಮದ್‌ಅನಾದಿ ಅಗ್ರಹಾರ ಮುಂತಾದ ಪದಗುಚ್ಛಗಳು ದೊರೆಯುತ್ತವಷ್ಟೆ.[೯೧]

ವಿಕ್ರಮ ಶಕೆ ೪೮ನೇ ವರ್ಷದ ತ್ರಿಭುವನಮಲ್ಲ ದೇವರ ಆಡಳಿತ ಕಾಲದ ಶಾಸನವು ಮಹಾ ಅಗ್ರಹಾರವಾದ ಕಬ್ಬೂರ ವೀರರಾಜೇಂದ್ರ ಚತುರ್ವೇದಿಮಂಗಲದ ೨೬೦ ಮಹಾಜನಗಳು ಪೂರ್ವದಿಕ್ಕಿನ ಕಲಿದೇವರ್ಗೆ ದೇವವೃತ್ತಿಯಾಗಿ ಕಟ್ಟಡದ ಬಯಲೂರೊಡೆಯ ಗೌಡಗಳ ಮಾನ್ಯ ಉತ್ತರ ಭಾಗದ ೫೦೦ ಕಮ್ಮ ಗದ್ದೆ ಮುದುಗೆರೆಯ ಕೆಳಗೆ ೨೦೦ ಕಮ್ಮ ಗದ್ದೆಯನ್ನು ದೇವರ ಪಶ್ಚಿಮ ಭಾಗದಲ್ಲಿ ೬೦ ಉತ್ತರ ಭಾಗದಲ್ಲಿ ತೋಟ ೨೦೦ರನ್ನು ಮಹಾಜನಗಳು ದಾನ ಬಿಟ್ಟ ವಿವರಗಳನ್ನು ಹೊಂದಿದೆ. ಜೊತೆಗೆ ಕಲಿದೇವರ ನಂದಾದೀವಿಗೆಗೆ ಮಲಯಾಳ ನಾರಾಯಣನು ೩೦ ಗದ್ಯಾಣ ಚಿನ್ನವನ್ನು, ಕಾಮಣ್ಣನು ೩೦ ಗದ್ಯಾಣವನ್ನು ದಾನ ನೀಡಿದ ವಿವರಗಳನ್ನು ಹೊಂದಿದೆ.[೯೨]

ತ್ರಿಭುವನಮಲ್ಲ ದೇವನ ವಿಕ್ರಮ ಶಕೆ ೪೧ನೆಯ ವರ್ಷದ ಮತ್ತೊಂದು ಶಾಸನ ಮಹಾಪ್ರಧಾನ ನಂದಣ್ಣನಾಯಕನು ಕಾಟಿಯಾಲೂರು ನಾಗೇಶ್ವರದೇವರಿಗೆ ನೀಡಿದ ದಾನದ ವಿವರಗಳನ್ನು ಹೊಂದಿದೆ. ಆದರೆ ದಾನ ಭಾಗದ ಸಾಲುಗಳು ತ್ರುಟಿತವಾಗಿವೆ. ಇದೇ ಶಾಸನವು ವಿಷ್ಣುದೇವರಿಗೆ ದಾನ ಬಿಟ್ಟ ವಿವರಗಳನ್ನು ಹೊಂದಿದೆ.

**ವೈಷ್ಣವ**

ತ್ರಿಭುವನಮಲ್ಲ ದೇವರ ಪಾದಾಂಬುಜ ಬೃಂಗನಾದ ನಾಮ ಮತ್ತು ಸಮಸ್ತ ಪ್ರಶಸ್ತಿ ಸಹಿತ ಶ್ರೀಮನ್ಮಹಾಮಂಡಲೇಶ್ವರ ತ್ರಿಭುವನಮಲ್ಲ ಪಾಂಡ್ಯದೇವರು ನೊಳಂಬವಾಡಿ ಮೂವತ್ತೆರಡು ಸಾವಿರವನ್ನು ಆಳುತ್ತಿದ್ದ ಆತನ ಮಹಾಮಂಡಲೇಶ್ವರನಾದ ಸ್ವಸ್ತಿ ಸಮಸ್ತ ಪ್ರಶಸ್ತಿ ಸಹಿತ ಗಟ್ಟಿಯರಸರು ಕೋಗಳಿಯನ್ನು ಆಳುತ್ತಿದ್ದಾಗ ಕಲಿದಂಡಾದೀಪ ನಾಗವರ್ಮನ ಮಗನಾದ ಮಾರಸಿಂಗನಾಯಕ ಆತನ ಮಗನಾದ ಬಸಂತಿ ತಿಮ್ಮಯ್ಯನಾಯಕ ಆತನ ಮಕ್ಕಳಾದ ಮೂರು ಜನ ಸಹೋದರರಾದ ನಾಗವರ್ಮಯ್ಯ ನಾಯಕ ಕರಿಮಯ್ಯ ನಾಯಕ ಮತ್ತು ಮಹಾದೇವಯ್ಯ ನಾಯಕರು ವತ್ಸ ಗೋತ್ರದ ಬ್ರಾಹ್ಮಣರಾಗಿದ್ದು ನಾಗವರ್ಮಯ್ಯ ಸ್ಥಾಪಿಸಿದ ಕೇಶವ ದೇವರ ದೇವಾಲಯಕ್ಕೆ ದೇವಾಲಯದ ಸೇವಾ ಕೈಂಕರ್ಯಗಳಿಗೆ ಮತ್ತು ಬ್ರಾಹ್ಮಣರ ಆಹಾರಕ್ಕಾಗಿ ಭೂಮಿ ದಾನ ಮತ್ತು ಮಾನ ಎಣ್ಣೆಯನ್ನು ದಾನ ಮಾಡಿದುದನ್ನು ದಾಖಲಿಸುತ್ತದೆ. ನಾಯಕರುಗಳ ಶೂರತನವನ್ನು ಮತ್ತು ಉದಾರತೆಯನ್ನು ಶಾಸನವು ಮುಕ್ತ ಕಂಠದಿಂದ ಹೊಗಳುತ್ತದೆ.[೯೩]

ಬಾಗಳಿಯ ಜಗದೇಕಮಲ್ಲನ ಶಾಸನವು ವೀರಕೇಶವ ದೇವರ ಪುರಾಣ ವೃತ್ತಿಗೆ ೬ ಹಾಗೂ ಆಯಿಂದ್ರವನು ಹಾಡುವವರಿಗೆ ನಾಲ್ಕು ಹೊನ್ನನ್ನು ಕೊಡುವಂತೆ ಏರ್ಪಾಡು ಮಾಡಿದುದನ್ನು ದಾಖಲಿಸುವ ಶಾಸನವಾಗಿದೆ.[೯೪]

ಬಾಗಳಿಯ ೫೦ ಮಹಾಜನಗಳ ಸಮ್ಮುಖದಲ್ಲಿ ೧೦೮೭ನೆಯ ವರ್ಷ ಭಾದ್ರಪದ ಪೌರ್ಣಮಿ ಅಂದರೆ ಕ್ರಿ.ಶ. ೧೧೫೦ರ ಶಾಸನವು ಬಾಗಳಿಯ ೫೦ ಮಹಾಜನಗಳ ಸಮ್ಮುಖದಲ್ಲಿ ಮಾಳಪಯ್ಯನ ಮಗನಾದ ಬೆದ್ದಣನ ಹೆಂಡತಿ ಧರ್ಮವ್ವ ಎಂಬುವಳು ಬಾಗಳಿಯಲ್ಲಿ ಸ್ಥಾಪಿಸಿದ ಲಕ್ಷ್ಮೀನಾರಾಯಣ ದೇವರ ಪೂಜೆಗಾಗಿ ಮತ್ತು ಜೀರ್ಣೋದ್ಧಾರಕ್ಕಾಗಿ, ಬ್ರಾಹ್ಮಣರ ಭೋಜನಕ್ಕಾಗಿ ಹಿರಿಯ ಕೆರೆಯ ಕೆಳಗಿನ ಭೂಮಿಯನ್ನು ದಾನ ನೀಡುತ್ತಾಳೆ. ಈ ಉತ್ಪತ್ತಿಯಲ್ಲಿ ಪುರಾಣ ಹೇಳುವ ಓರ್ವ ಉಪಾಧ್ಯಾಯರಿಗೆ ಶಾಸ್ತ್ರ ವ್ಯಾಖ್ಯಾನ ಮಾಡುವ ಓರ್ವ ಉಪಾಧ್ಯಾಯರಿಗೆ ಅಗ್ರಾಸನರ ಬ್ರಾಹ್ಮಣರ ಭೋಜನಕ್ಕೆ ದೇವರ ಗ್ರಾಸಕ್ಕೆ ಸರ್ವ ಬಾದಾ ಪರಿಹಾರಾರ್ಥವಾಗಿ ಪಿರಿಯ ಕೆರೆಯ ಕೆಳಗಿನ ಲಾಲಬಾಗಿನ ಹರಿನೀರಿನಲ್ಲಿ ಬಿಟ್ಟ ಅಡಕೆಯ ತೋಟ ಮುಂತಾದುವುಗಳನ್ನು ಹೆಸರಿಸುತ್ತದೆ.[೯೫]

ನಾರಾಯಣದೇವರಿಗೆ ಪಾಂಡ್ಯರಾಜನ ಮಂತ್ರಿಯಾದ ಸೋಮೇಶ್ವರ ಭಟ್ಟ ಪೋತ್ಯಣ್ಣ ಭಟ್ಟನು ಒಂದು ಲಕ್ಷ ಅಡಿಕೆಗೆ ಒಂದು ಹಾಗ ತೆರಿಗೆಯನ್ನು ದಾನ ನೀಡಿದುದನ್ನು ದಾಖಲಿಸುತ್ತದೆ. ಇದರೊಂದಿಗೆ ಶಂಕರಭಟ್ಟರು ಶ್ರೀರಂಗ ದೇವರಿಗೆ ತಾಂಬೂಲಕ್ಕೆ ಬಿಟ್ಟುಕೊಟ್ಟ ತೋಟ, ಗದ್ದೆ, ಕಾಳಭಟ್ಟನ ಮಗ ನಾಳಭಟ್ಟನು ಅಣ್ಣಯ್ಯ ಭಟ್ಟರ ಮಕ್ಕಳು ಬಿಟ್ಟುಕೊಟ್ಟ ಗದ್ದೆ ಹಾಗೂ ಅಂಗಭೋಗ, ರಂಗಭೋಗ ಹಾಗೂ ವೈಭೋಗಕ್ಕಾಗಿ ನೀಡಿದ ದಾನದ ವಿವರಗಳನ್ನು ಹೊಂದಿದೆ.[೯೬]

ಕಲ್ಯಾಣದ ಚಾಳುಕ್ಯ ಮನೆತನದ ಶ್ರೀ ಪೃಥ್ವಿವಲ್ಲಭ ಮಹಾರಾಜಾಧಿರಾಜ ಪರಮೇಶ್ವರ, ಪರಮಭಟ್ಟಾರಕ, ಸತ್ಯಾಶ್ರಯ ಕುಲತಿಲಕ ಚಾಲುಕ್ಯಾಭರಣಂ ಶ್ರೀಮತ್ಪ್ರಾತಾಪ ಚಕ್ರವರ್ತಿ ಎರಡನೆಯ ಜಗದೇಕಮಲ್ಲನು ಕಲ್ಯಾಣದಲ್ಲಿ ಸಾಮ್ರಾಜ್ಯ ನೆರವೇರಿಸುತ್ತಿದ್ದ ಕಾಲದಲ್ಲಿ ಆತನ ಪಾದ ಪದ್ಮೋಪಜೀವಿ ಶ್ರೀಮನ್ಮಮಹಾಮಂಡಲೇಶ್ವರ ಜಗದೇಕ ಮಲ್ಲ ವೀರಪಾಂಡ್ಯ ದೇವರು ನೊಳಂಬವಾಡಿ ೩೨೦೦೦ ವನ್ನು ಆಳುತ್ತಿದ್ದ ಕಾಲದಲ್ಲಿ ಕದಂಬ ವಂಶದ ಘಟ್ಟಿದೇವನ ಮಗ ಜಬಿದೇವರಸರು ಕೊಟ್ಟೂರಿನಲ್ಲಿ ವಾಸ್ತವ್ಯ ಮಾಡಿದ್ದ ಕಾಲದಲ್ಲಿ ಜ್ಞಾನಪ್ರಕಾಶ ಭಟ್ಟರು ಕಟ್ಟಿಸಿದ ನರಸಿಂಹ ದೇವಾಲಯಕ್ಕೆ ಭೂದಾನ ಮಾಡಿದುದನ್ನು ಶಾಸನವು ದಾಖಲಿಸುತ್ತದೆ.[೯೭]

ಕೊಟ್ನಕಲ್ಲು ಗ್ರಾಮದ ಕೋಟೇಶ್ವರ ದೇವಾಲಯದಲ್ಲಿರುವ ಶಾಸನ ಕಲ್ಲಿನಲ್ಲಿ ಮೂರು ಕಾಲಗಳ ದಾನ ಶಾಸನಗಳಿವೆ. ಈ ಶಾಸನದ ಮೊದಲನೆಯ ಕಾಲ ಕ್ರಿ.ಶ. ೧೧೪೮ ಡಿಸೆಂಬರ್ ೨೪ರಂದು ಶುಕ್ರವಾರ ನೆರವೇರಿಸಿದುದು. ಎರಡನೆಯ ದಾನವನ್ನು ಮಾಘ ಶುದ್ಧ ಐದು ರುದಿರೋದ್ಗಾರಿ ಸಂವತ್ಸರ ಅಂದರೆ ಕ್ರಿ.ಶ. ೧೧೪೪ರ ಜನವರಿ ೧೧ರಂದು ದಾನ ಮಾಡಿದ ಶಾಸನವಾಗಿದೆ. ಅದೇ ಶಿಲೆಯ ಮೇಲಿರುವ ಮತ್ತೊಂದು ಕಾಲವು ಕ್ರಿ.ಶ. ೧೧೯೯ ಜೂನ್ ೪ರಂದು ದಾನ ನೀಡಿದುದಾಗಿದೆ. ಮತ್ತೊಂದು ಶಾಸನ ಕ್ರಿ.ಶ. ೧೧೭೮ ಜುಲೈ ೨೭ರಂದು ನೀಡಿದುದಾಗಿದೆ. ಈ ಮೂರು ಶಾಸನಗಳ ಪೈಕಿ ಇಲ್ಲಿ ಪ್ರಮುಖವಾಗಿ ಉಲ್ಲೇಖವಾಗುವ ಭಾಗವೆಂದರೆ ಕ್ರಿ.ಶ. ೧೧೯೯ರ ಜೂನ್ ತಿಂಗಳು ೪ರಂದು ಬುಧವಾರ

ಶ್ರೀ ವೀರಕೇಶವ ದೇವರ ಸೇವಾಕಾರ್ಯಗಳಿಗೆ ವಿಕ್ರಮಾದಿತ್ಯ ಅರಸನು ಭೂದಾನ ಮಾಡಿದುದು ಪ್ರಮುಖವಾಗಿ ಗಮನ ಸೆಳೆಯುತ್ತದೆ.[೯೮]

ಹೂವಿನಹಡಗಲಿಯ ಕೇಶವಸ್ವಾಮಿ ದೇವಾಲಯದ ಪಶ್ಚಿಮ ದಿಕ್ಕಿನ ಪ್ರವೇಶದ್ವಾರದ ಬಳಿಯ ಶಾಸನವು ಕಲ್ಯಾಣ ಚಾಳುಕ್ಯ ಮನೆತನದ ತ್ರಿಭುವನಮಲ್ಲ ದೇವರ ಕಾಲದ ಶಾಸನವಾಗಿದ್ದು ಇದೂ ಕೂಡ ನಾಲ್ಕು ಬೇರೆ ಬೇರೆ ಕಾಲಘಟ್ಟಗಳಲ್ಲಿ ದಾನ ನೀಡಿದ ವಿವರಗಳನ್ನು ಹೊಂದಿದ ಶಾಸನ ಶಿಲೆಯಾಗಿದೆ. ಮೊದಲನೆಯ ಕಾಲ ಚಾಳುಕ್ಯ ವಿಕ್ರಮ ಶಕೆ ೧೫ ಪ್ರಮೋದ ಸಂವತ್ಸರದ ಆಶ್ವೀಜ ಮಾಸದ ಅಮಾವಾಸ್ಯೆ ಆದಿವಾರದಂದು ಹೊರಡಿಸಿದ ಶಾಸನವಾಗಿದೆ. ಇದು ಕ್ರಿಶ. ೧೦೯೦ ನವೆಂಬರ್ ೨೪ಕ್ಕೆ ಸರಿ ಹೊಂದುತ್ತದೆ. ಚಾಳುಕ್ಯ ದೊರೆ ತ್ರಿಭುವನಮಲ್ಲ ದೇವನ ಆಳ್ವಿಕೆಯಲ್ಲಿ ಅವನ ಮಾಂಡಲೀಕ ಮಹಾಮಂಡಲೇಶ್ವರ ತ್ರಿಭುವನಮಲ್ಲ ಪಾಂಡ್ಯದೇವನು ನೊಳಂಬವಾಡಿ ೩೨೦೦೦ವನ್ನು ಆಳುತ್ತಿದ್ದಾಗ ಶೂರ ಬ್ರಾಹ್ಮಣ ಸೇನಾಧಿಪತಿ ರವಿಗ ಅಥವಾ ರವಿದೇವನ ಪತ್ನಿಯಾದ ರೆಬ್ಬಲದೇವಿಯು ತನ್ನ ಹುಟ್ಟೂರಾದ ಹೂವಿನ ಹೊಸವಡಂಗಿಲೆಯಲ್ಲಿ ಕೇಶವ ದೇವಾಲಯವನ್ನು ಕಟ್ಟಿಸಿ ಕೇಶವ ದೇವರನ್ನು ಪ್ರತಿಷ್ಠಾಪಿಸಿ ದೇವರ ಸೇವಾಕಾರ್ಯಗಳಿಗಾಗಿ ಮತ್ತು ಬ್ರಾಹ್ಮಣರ ಆಹಾರಕ್ಕಾಗಿ ಸತ್ರಕ್ಕೆ ಹೂದೋಟಕ್ಕಾಗಿ ಭೂದಾನ ಮಾಡಿದುದನ್ನು ದಾಖಲಿಸುತ್ತದೆ. ರವಿಗನನ್ನು ಅಥವಾ ಶೂರ ಬ್ರಾಹ್ಮಣ ಸೇನಾಧಿಪತಿ ರವಿದೇವನನ್ನು ಉಲ್ಲೇಖಿಸುವಾಗ ಆತನು ಯಾವ ನಾಯಕನಿಗೂ ಸರಿಸಾಟಿ ಇಲ್ಲದವನಾಗಿದ್ದು ಸಂಧ್ವಿಗ್ರಹಿ ಮತ್ತು ಚಾಳುಕ್ಯ ರಾಜ್ಯದ ಮೂಲಸ್ಥಂಭವಾಗಿದ್ದು ಹಿಮಾಲಯ ಮತ್ತು ಸೇತುವಿನ ಮಧ್ಯೆ ರಾಜನ ಆದೇಶವನ್ನು ನೀಡುತ್ತಿದ್ದನು. ನರ್ಮದ, ಗಂಗ ಮತ್ತು ಯಮುನಾ ನದಿಯ ಮೇಲೆ ಅನೇಕ ದೇವಾಲಯಗಳನ್ನು ಸ್ಥಾಪಿಸಿ ಮತ್ತು ಅಲ್ಲಲ್ಲಿ ಸಂಜೆ ಮಠಗಳನ್ನು ಸ್ಥಾಪಿಸಿದನು. ಆತ ಮತ್ತು ಆತನ ಧರ್ಮಪತ್ನಿಯ ವಂಶವನ್ನು ಇದರೊಂದಿಗೆ ಕೊಂಡಾಡಲಾಗಿದೆ. ದಂಡನಾಯಕನು ವಿನಂತಿಯಂತೆ ರಾಜನು ಕೇಶವ ದೇವರಿಗೆ ಊರಚಲಗೇರಿ ಗ್ರಾಮವನ್ನು ದಾನ ಮಾಡುತ್ತಾನೆ. ಈ ಶಾಸನದ ಕಲ್ಲಿನಲ್ಲಿ ಕಂಡುಬರುವ ಇತರ ತೇದಿಯ ದಾನಗಳು ಕೇಶವ ದೇವರನ್ನು ಕುರಿತದ್ದಾಗಿವೆ.[೯೯]

ಚಾಳುಕ್ಯ ಜಗದೇಕಮಲ್ಲನ ಸಾಮಂತನಾಗಿದ್ದ ಜಗದೇಕಮಲ್ಲ ವೀರಪಾಂಡ್ಯದೇವನ ವಿಕ್ರಮಾದಿತ್ಯರಸನು ಬಾಳ್ಗುಳಿಯ ೫೦ ಮಹಾಜನರಿಗೆ ೧೭೩ ಗದ್ಯಾಣವನ್ನು ಇಟ್ಟು ಅದರ ಬಡ್ಡಿಯಲ್ಲಿ ದೇವಾಲಯದ ೧೩ ಬ್ರಾಹ್ಮಣರಿಗೆ ಆಹಾರ ಪಡಿ ನೀಡುವಂತೆಯೂ ಕಲಿದೇವರಿಗೆ ಮತ್ತು ನರಸಿಂಹ ದೇವರಿಗೆ ತಲಾ ಒಂದು ದೀಪವನ್ನು ಉರಿಸಲು ದಾನ ನೀಡಿದ್ದಲ್ಲದೆ ಈ ದಾನದ ಫಲವು ವಿಕ್ರಮಾದಿತ್ಯ ದೇವನ ಅತ್ತೆ ಕೇತಬ್ಬರಸಿ ಹಾಗೂ ಅವನ ಪತ್ನಿ ನಾಗಿಯಾಂಡಿ ಅರಸಿಗೆ ಸಲ್ಲಬೇಕೆಂದು ಶಾಸನವು ದಾಖಲಿಸುತ್ತದೆ.[೧೦೦]

ವಿಕ್ರಮ ಶಕ ೪೮ ಶೋಭಕೃತು ಉತ್ತರಾಯಣ ಸಂಕ್ರಾಂತಿಯಂದು ರಾಜ ಬಣ್ನಳೂರಿನ ವಾಸುದೇವರ ನಿತ್ಯ ನೈವೇದ್ಯಕ್ಕಾಗಿ ಮತ್ತು ಜೀರ್ಣೋದ್ಧಾರ ಕಾರ್ಯಕ್ಕಾಗಿ ಬೆಳ್ನೂರ ತಾರಣವಳ್ಳಿಯ

ಯಮನರಸಕೆರೆಯ ಕೆಳಗಿನ ಒಂದು ಮತ್ತರು ತೋಟವನ್ನು ರಾಯಪಾಂಡ್ಯದೇವರ ಕೈಯಿಂದ ರಾಮೇಶ್ವರ ದತ್ತಿಯಾಗಿ ಪರಿಚ್ಛೇದಿನಾಯಕನು ಪಡೆದು ದೇವರಿಗೆ ಕೊಟ್ಟನು. ಈ ದೇವಾಲಯದ ಸ್ಥಾನಪತಿಯಾಗಿ ಶ್ರೀ ಕೃಷ್ಣಭಟ್ಟನಾದ ತಿರುವಲೆಯು ಈ ದಾನ ಸ್ವೀಕರಿಸಿದನು. ಈ ದಾನದ ಕಾಲವನ್ನು ಕ್ರಿ.ಶ. ೧೧೨೪ ಎಂದು ದಾಖಲಿಸಬಹುದು.[೧೦೦]

ತ್ರಿಭುವನಮಲ್ಲ ಪಾಂಡ್ಯನ ಕಾಲದ ಅಂದರೆ ಕ್ರಿ.ಶ. ೧೧೧೩ರಲ್ಲಿ ಹೊರಡಿಸಿದ ಶಾಸನವು ಬಹುತೇಕ ತ್ರುಟಿತವಾಗಿದ್ದು ವಿಷ್ಣುದೇವರ ನೈವೇದ್ಯಕ್ಕಾಗಿ ಮಹಾಪ್ರಭು ಕೋಣೆ ನಾರಾಯಣಾಮಾತ್ಯನ ಮಗನಾದ ಶ್ರೀಧರಯ್ಯನು ೨೨೫ ಕಮ್ಮ ಗದ್ದೆಯನ್ನು ದಾನ ಬಿಟ್ಟ ವಿವರವನ್ನು ದಾಖಲಿಸುತ್ತದೆ. ಅಯ್ಯಹೊಳೆಯ ಉಲ್ಲೇಖ ಮದನಾದಿ ಅಗ್ರಹಾರದ ಉಲ್ಲೇಖ ಕೂಡ ಕಂಡುಬರುತ್ತದೆ.[೧೦೨]

ಚಾಳುಕ್ಯ ವಿಕ್ರಮ ಶಕೆ ೪೧ ಅಂದರೆ ಕ್ರಿ.ಶ. ೧೧೨೦ರಲ್ಲಿ ತ್ರಿಭುವನಮಲ್ಲ ದೇವ ಪಾಂಡ್ಯನ ಕಾಲದಲ್ಲಿ ಹೊರಡಿಸಿದ ಶಾಸನವು ಬಹುತೇಕ ತ್ರುಟಿತವಾಗಿದ್ದು ಮಹಾಪ್ರಧಾನ ನಂದಣ್ಣನಾಯಕನು ಕಾಟಿಯಾಲೂರ ನಾಗೇಶ್ವರ ದೇವರಿಗೆ ನೀಡಿದ ದಾನದ ವಿವರದ ಭಾಗ ನಾಶವಾಗಿರುವುದಲ್ಲದೆ ವಿಷ್ಣುದೇವರಿಗೆ ಭೂಮಿಯನ್ನು ಬಿಟ್ಟ ವಿವರವನ್ನು ಹೊಂದಿದೆ.[೧೦೩]

**ಶಾಕ್ತ**

ಉಚ್ಚಂಗಿ ದುರ್ಗದ ಹಾಲಮ್ಮನ ದೇವಾಲಯದ ಗೋಡೆಗೆ ಒರಗಿಸಿಟ್ಟಿರುವ ಕಲ್ಲಿನಲ್ಲಿ ಉಚ್ಚಂಗಿ ಕೋಟೆಯ ಉಚ್ಚಂಗಿ ದೇವಿಗೆ ದಾನ ನೀಡಿದ ವಿವರವನ್ನು ಕಾಣಬಹುದು. ಬಾಳ ನಾಡಾಳ್ವರು ತ್ರಿಭುವನಮಲ್ಲ ಪಾಂಡ್ಯದೇವರಿಗೆ ಕೋರಿಕೊಂಡಾಗ ಆತನು ಅನಾದಿ ಸಂಸಿದ್ಧಿಯ ಪಟ್ಟಣ ಉಚ್ಚಂಗಿಕೋಟೆಯ ಕಾಯುವ ಉಚ್ಚಂಗಿ ದೇವಿಗೆ ದಾನವನ್ನು ನೀಡಿದುದನ್ನು ಇದು ದಾಖಲಿಸುತ್ತದೆ.[೧೦೪]

ಕುಡಿತಿನಿ ಗ್ರಾಮದ ಕುಮಾರಸ್ವಾಮಿ ದೇವಾಲಯದ ಮುಂದಿರುವ ಶಾಸನವೊಂದು ಕ್ರಿ.ಶ. ೧೧೯೯ರಲ್ಲಿ ಹೊರಡಿಸಲಾಗಿದ್ದು ಕೊಟ್ಟಿತೊಣ್ಣಿಯ ಭಗವತಿ ದೇವಿಗೆ ಈ ಮುನ್ನ ಪರಮೇಶ್ವರ ದತ್ತಿಯಾಗಿ ಪಡೆದ ವ್ರಿತ್ತಿಯನ್ನು ಹಾಗೂ ಭೂಮಿಯನ್ನು ದಾನವಾಗಿ ಕೊಡಲಾಗಿದೆ. ಈ ದಾನವನ್ನು ವಿಶ್ವರೂಪ ಬ್ರಹ್ಮಚಾರಿ ಹಾಗೂ ಸ್ಥಾನದ ಐದು ವರ್ಗದ ಪ್ರಮುಖ ಸಜಾವಿಚಕ್ರಪಾಣಿ ಸಮ್ಮುಖದಲ್ಲಿ ನೀಡಲಾಯಿತು.[೧೦೫]

**ಜೈನ**

ಭುವನೈಕ್ಯ ಮಲ್ಲ ಇಮ್ಮಡಿ ಸೋಮೇಶ್ವರನ ಕಾಲದಲ್ಲಿ ಮಂತ್ರಿಯಾಗಿದ್ದ ಸೋಮನಾಥನು ಜೈನನಾಗಿದ್ದನು. ಮತ್ತು ಬನವಾಸಿಯ ಮಾಂಡಲೀಕನಾಗಿದ್ದ ಲಕ್ಷ್ಮನು ಬಲಿಗ್ರಾಮದಲ್ಲಿ ಮಲ್ಲಿಕಾಮೋಧ ಶಾಂತಿನಾಥ ಬಸದಿಯನ್ನು ಕಟ್ಟಿಸುವಂತೆ ಆಗ್ರಹಿಸಿ ಯಶಸ್ವಿಯಾದುದನ್ನು ಶಾಸನ ದಾಖಲಿಸುತ್ತದೆ.[೧೦೬]

ಹೊಳಗುಂದಿ ಗ್ರಾಮದ ಸೋಮನಾಥ ದೇವಾಲಯದ ಒಳಭಾಗದಲ್ಲಿರುವ ಶಾಸನವು ಜಿನ ಶಾಸನವಾಗಿದ್ದು ಇದು ಕೂಡ ವಿಜಯಪಾಂಡ್ಯದೇವನ ಆಳ್ವಿಕೆಯ ಕಾಲದ್ದಾಗಿದೆ. ಇದು

ವಿಜಯಪೆರ್ಮಾಡಿ ಆತನ ಮನ್ನೆಯ ನಾಚಿಯ ದೇವನ ಹೆಸರನ್ನು ಸೂಚಿಸುತ್ತದೆ. ಅಲ್ಲದೆ ಹೊಳಗುಂದೆಯನ್ನು ಆಳಿದ ಮಲ್ಲಿನಾಥನನ್ನು ಹೊಗಳುತ್ತದೆ. ಅವನು ಹೊಳಗುಂದಿಯ ಮಲ್ಲಿನಾಥ ದೇವರಿಗೆ ಬಸದಿಯನ್ನು ಕಟ್ಟಿಸಿ ಮೂಲಸಂಘದ ಸೂರಸ್ತ ಗಣದ ಚಿತ್ರಕೋಕೆಯ ಗಚ್ಛಕ್ಕೆ ಸೇರಿದ ನಾಗಚಂದ್ರ ಭಟ್ಟಾರಕನ ಎದುರಿನಲ್ಲಿ ಮಲ್ಲಿನಾಥ ಬಸದಿಯ ದೇವ ಕೈಂಕರ್ಯಗಳಿಗೆ ದಾನ ನೀಡಿದುದನ್ನು ದಾಖಲಿಸುತ್ತದೆ.[೧೦೭]

ಕ್ರಿ.ಶ. ೧೧೧೫ರ ಫೆಬ್ರವರಿ ೧೦ರಂದು ಹೊರಡಿಸಿದ ಶಾಸನವು ದಂಡನಾಯಕನಾದ ತಿಕ್ಕಭಟ್ಟನು ಬೆಳ್ಗಲಿಯ ೫೦ ಮಹಾಜನರ ಮುಂದೆ ಶಿವಶಕ್ತಿ ಪಂಡಿತರ ಸನ್ನಿಧಾನದಲ್ಲಿ ದೇವರ ಗ್ರಾಸಕ್ಕೆ ಸತ್ರದಲ್ಲಿ ದಿನವೂ ಐವರ ಊಟಕ್ಕೆ ಆಗಿ ಮಿಕ್ಕ ಹಣವನ್ನು ಊರಿನ ಪಿರಿಯ ಕೆರೆಯೇರಿಯ ಕೆಲಸಕ್ಕೆ ವಿನಿಯೋಗಿಸಲು ಹೇರಿಗೆ ಒಂದು ಹಗವನ್ನು ಬ್ರಹ್ಮ ಜಿನಾಲಯದ ನಿವೇದನಕ್ಕೆ ತಿಂಗಳಿಗೆ ಎರಡು ಪಣವನ್ನು ಶಿವಮಯ್ಯನ ಕೈಯಿಂದ ದಾನ ಮಾಡಿಸಿದ್ದನ್ನು ದಾಖಲಿಸುತ್ತದೆ.[೧೦೮]

### ೪.೧. ಧಾರ್ಮಿಕ ಸ್ಥಿತಿಗತಿ

ಉಚ್ಚಂಗಿ ಪಾಂಡ್ಯ ಅರಸರುಗಳ ಈ ಮೇಲಿನ ಶಾಸನಗಳ ಸಂಕ್ಷಿಪ್ತ ಸಮೀಕ್ಷೆಯು ಅವರು ಅನುಸರಿಸಿದ ಧಾರ್ಮಿಕ, ಸಾಮಾಜಿಕ ಮತ್ತು ಆರ್ಥಿಕ ಚಟುವಟಿಕೆಗಳ ಕೈಗನ್ನಡಿಯಾಗಿದೆಯೆಂದರೆ ತಪ್ಪಾಗಲಿಕ್ಕಿಲ್ಲ. ಇಡೀ ಶಾಸನಗಳನ್ನು ಗಮನಿಸಿದಾಗ ಈ ಪ್ರದೇಶದಲ್ಲಿ ಶೈವ ಸಂಪ್ರದಾಯ ಅಥವಾ ಶೈವ ಪರಂಪರೆ ಅತ್ಯಂತ ಹೆಚ್ಚು ಪ್ರಖರವಾಗಿತ್ತೆಂದು ತಿಳಿದುಬರುತ್ತದೆ. ಶೈವ ಪರಂಪರೆ ಅಥವಾ ಶೈವ ಸಮುದಾಯದ ಆರಾಧನೆಯಲ್ಲಿ ಕೂಡ ಎರಡು ಪ್ರಬೇಧಗಳು ಕಂಡುಬರುತ್ತವೆ. ಒಂದು ಶುದ್ಧ ಶೈವರು ಎಂದು ಕರೆಸಿಕೊಳ್ಳುವ ಲಕುಲೀಶ ಪರಂಪರೆಯ ಶೈವ ಸಂಪ್ರದಾಯ. ಮತ್ತೊಂದು ವೈದಿಕ ಬ್ರಾಹ್ಮಣರು ಆರಾಧಿಸುವ ಶೈವ ಪರಂಪರೆಯ ದೇವಾಲಯಗಳು. ಬಳ್ಳಾರಿ ಜಿಲ್ಲೆಯ ಶಾಸನ ಸಂಪುಟದಲ್ಲಿ ಇಲ್ಲಿನ ದೇವಾಲಯಗಳ ಬಗ್ಗೆ ಬರೆಯುತ್ತ ಬ್ರಾಹ್ಮಣ ಸಮುದಾಯದವರಿಗೆ ಮತ್ತು ಇತರ ಶೈವ ಸಮುದಾಯದವರಿಗೆ ತಿಕ್ಕಾಟವಿದ್ದಿತೆಂದು ಎರಡು ಶಾಸನಗಳನ್ನಾಧರಿಸಿ ದಾಖಲಿಸುತ್ತಾರೆ. ಆ ಎರಡು ಶಾಸನಗಳು ಸಿರಗುಪ್ಪ ಮತ್ತು ಹರಪನಹಳ್ಳಿ ತಾಲ್ಲೂಕುಗಳಿಗೆ ಸೇರಿದವುಗಳಾಗಿವೆ. ಸಿರಗುಪ್ಪ ತಾಲ್ಲೂಕಿನ ಒಂದನೆಯ ಶಾಸನದಲ್ಲಿನ ಈ ಕೆಳಗಿನ ಸಾಲುಗಳು ಬಹಳ ಗಮನಾರ್ಹವಾದವುಗಳು.

ಅಯ್ವತ್ತು ಧಾನ್ಯಗೊಳಗ ದೇವರಿಗೆ ಬ್ರಾಹ್ಮಣರಿಗಲ್ಲದೆ ಗೊರವುಗಳಿಗೆ ಸಲ್ಲದು ಬ್ರಾಹ್ಮಣ ಪೂಜೆ.[೧೦೯] ಹರಪನಹಳ್ಳಿಯ ಶಾಸನವೊಂದರಲ್ಲಿ ಕಂಡುಬರುವ ಈ ಸಾಲು ದೇವಸ್ಥಾನಮಂ ಬ್ರಾ(೦) ಹ್ಮಣರು ಪೂದಿಸುವರು.[೧೧೦] ಈ ಎರಡು ಸಾಲುಗಳನ್ನು ಉಲ್ಲೇಖಿಸಿ ಶಾಸನದ ಸಂಪಾದಕರು ಪ್ರಸ್ತಾವನೆಯಲ್ಲಿ ಹೀಗೆ ಬರೆಯುತ್ತಾರೆ.

"ಸಿರುಗುಪ್ಪ ಶಾಸನದ ಅಂತ್ಯದಲ್ಲಿ '...... ಇವರ ದೇವಸ್ಥಾನವನ್ನು ಬ್ರಾಹ್ಮಣರು ಪೂದಿಸುವುದು ಇನ್ನೊಂದು ಶಾಸನದಲ್ಲಿ 'ಬ್ರಾಹ್ಮಣರಿಗಲ್ಲದೆ ಗೊರವುಗಳಿಗೆಸಲ್ಲದು' ಇವು ವೈದಿಕ ಧರ್ಮದಲ್ಲಿ

ನಡೆಯುತ್ತಿದ್ದ 'ಮೇಲು–ಕೀಳು' ಕಚ್ಚಾಟದಬಗ್ಗೆಬೆಳಕು ಚೆಲ್ಲುತ್ತದೆ. ಇಲ್ಲಿ ಕಾಳಾಮುಖ ಯತಿಗಳು ಬ್ರಾಹ್ಮಣರೇ ಅಲ್ಲವೇ ಎಂಬ ಬಗ್ಗೆ ಅಂಥ ಜಿಜ್ಞಾಸೆ ನಡೆದಿದೆ. ಹೀಗಾಗಿ ಗೊರವರು (ಎಕ್ಕೋಟಿ ಸಮಯದವರು) ಅಥವಾ ಪಾಶುಪತರನ್ನು ಬ್ರಾಹ್ಮಣರು ತಮಗಿಂತ ಕೀಳು ಎಂದು ಪರಿಗಣಿಸಿರಬೇಕು. ಹೀಗಾಗಿ ದೇವಾಲಯದ ನಿರ್ವಹಣೆ ಮಾತ್ರ ಈ ಎಕ್ಕೋಟಿಗಳ ಕೆಲಸವಾಗಿತ್ತು. ಕೆಲವೆಡೆ ಈ ಗೊರವರು ಅಥವಾ ಎಕ್ಕೋಟಿಗಳು ದೇವಾಲಯದ ಅರ್ಚನಾವೃತ್ತಿಗೆ ಇಳಿದಿರಬೇಕು. ಇದನ್ನು ವಿರೋಧಿಸಿ ಸರಿಪಡಿಸುವಂತೆ ಈ ಕಟ್ಟುಪಾಡುಗಳನ್ನು ಹಾಕಿ ಶಾಸನದಲ್ಲಿಯೂ ಅವು ನುಸುಳುವಂತೆ ಮಾಡಿರುತ್ತಾರೆ."[೧೧೧]

ಈ ಎರಡೂ ಶಾಸನಗಳ ಇಡೀ ಪಠ್ಯವನ್ನು ಅತ್ಯಂತ ಸೂಕ್ಷ್ಮವಾಗಿ ಗಮನಿಸಿದಾಗ ಎಲ್ಲೂ ಕಾಳಾಮುಖ ಯತಿಗಳ ಹೆಸರಾಗಲಿ ಅಥವಾ ಅದನ್ನು ಕಾಳಾಮುಖ ಯತಿಗಳು ಪೂಜಿಸುತ್ತಿದ್ದ ರೆಂದಾಗಲಿ ಅವರ ಸ್ಥಾನದಲ್ಲಿ ಬ್ರಾಹ್ಮಣರನ್ನು ಪೂಜೆಗೆ ನೇಮಕ ಮಾಡಲಾಯಿತೆಂದಾಗಲಿ ಶಾಸನವು ಉಲ್ಲೇಖಿಸಿಲ್ಲ. ಜಿಲ್ಲೆಯ ಅನೇಕ ಶಾಸನಗಳನ್ನು ಗಮನಿಸಿದಾಗ ಅಗ್ರಹಾರದ ಮಹಾಜನರುಗಳು ಶಿವಾಲಯದ ಕಾಳಾಮುಖ ಯತಿಗಳನ್ನು ಮುಂದಿಟ್ಟುಕೊಂಡು ದಾನ ಸ್ವೀಕರಿಸಿರುವುದು ಕಾಳಾಮುಖ ಯತಿಗಳ ಪಾದ ತೊಳೆದು ಬ್ರಾಹ್ಮಣರುಗಳಿಗೆ ದಾನ ನೀಡಿರುವುದು ದಾಖಲಾಗಿರುವ ಹಿನ್ನೆಲೆಯಲ್ಲಿ ಈ ಶಾಸನಗಳನ್ನು ಗಮನಿಸಿದಾಗ ಸಂಪಾದಕರು ದಾಖಲಿಸುವ ಅಭಿಪ್ರಾಯ ಸಮ್ಮತವಲ್ಲವೆಂದಾಗುತ್ತದೆ.

ಕರ್ನಾಟಕದಲ್ಲಿ ಕಾಪಾಲಿಕರು ಮತ್ತು ಪಾಶುಪತ ಕಾಳಾಮುಖರು ಎಂಬ ಎರಡು ವರ್ಗದ ಶೈವ ಸ್ಥಾನಪತಿಗಳನ್ನು ಗುರುತಿಸಲಾಗಿದ್ದರೂ ಕರ್ನಾಟಕದಲ್ಲಿ ಕಾಪಾಲಿಕರ ಸಂಖ್ಯೆ ಅತ್ಯಂತ ಕಡಿಮೆ. ಹೆಚ್ಚಾಗಿ ಇವರಿಬ್ಬರ ಮಧ್ಯದ ಪ್ರಭೇದವನ್ನು ಅಥವಾ ವ್ಯತ್ಯಾಸಗಳನ್ನು ಗುರುತಿಸಲು ಕಷ್ಟವಾಗುತ್ತದೆ. ಇವರಿಬ್ಬರ ಸಂಪ್ರದಾಯಗಳಲ್ಲಿಯೂ ಹೆಚ್ಚು ವ್ಯತ್ಯಾಸಗಳಿಲ್ಲ. ಕರ್ನಾಟಕದಲ್ಲಿ ಕಂಡುಬರುವ ಶೈವ ಸಂಪ್ರದಾಯಗಳಲ್ಲಿ ಪಾಶುಪತ ಕಾಳಾಮುಖರು ಅತಿಹೆಚ್ಚಾಗಿ ಕಂಡುಬರುತ್ತಾರೆ.

ನೊಳಂಬವಾಡಿ ೩೨೦೦೦ದ ಆಡಳಿತ ಶಾಖೆಯ ಶಾಸನಗಳ ಅಧ್ಯಯನದಿಂದ ಖಚಿತವಾಗುವುದೇನೆಂದರೆ, ಈ ಪ್ರದೇಶದಲ್ಲಿ ಹೆಚ್ಚಿನ ಸ್ಥಾನಪತಿಗಳು ಪಾಶುಪತ ಕಾಳಾಮುಖ ಸಂಪ್ರದಾಯಕ್ಕೆ ಸೇರಿದವರಾಗಿದ್ದರು. ಅಲ್ಲದೆ ಇಲ್ಲಿನ ಶಾಸನಗಳಲ್ಲಿ ಲಕುಲೀಶ ಪರಂಪರೆಯ ಮಲಯಾಳಿ ಪಂಡಿತ ಆತನ ಶಿಷ್ಯ ಜ್ಞಾನೇಶ್ವರ ಪಂಡಿತ ಆತನ ಶಿಷ್ಯ ಸೋಮೇಶ್ವರ ಪಂಡಿತ ಆತನ ಕರಕಮಲ ಸಂಜಾತ ಸಾಂತರಾಸಿ ಪಂಡಿತ ಸಾಂತರಾಸಿ ಪಂಡಿತರ ಕರಕಮಲ ಸಂಜಾತ ಖಾಳೇಶ್ವರ ಪಂಡಿತ ಆತನ ಶಿಷ್ಯ ವಾಮಶಕ್ತಿಯ ಉಲ್ಲೇಖ ಶಾಸನಗಳಲ್ಲಿ ಕಂಡುಬರುತ್ತದೆ. ಖಾಳೇಶ್ವರ ಮುನಿಯ ಉಲ್ಲೇಖಗಳು ಬೆಣ್ಣೆಕಲ್ಲು ಶಾಸನದಲ್ಲಿ ಕಂಡುಬರುತ್ತದೆ. ಮಹಾಪ್ರಧಾನ ಅಮಿತಯ್ಯ ದಂಡನಾಯಕ ಪದ್ಮಲೇಶ್ವರ ಅಮೃತೇಶ್ವರ, ಲಕ್ಷ್ಮೀನಾರಾಯಣ, ವಾಮೇಶ್ವರ,

ಬಲ್ಲಾಳೇಶ್ವರ, ನಿರಸಿಂಹೇಶ್ವರ ದೇವಾಲಯಗಳನ್ನು ಕಟ್ಟಿಸಿ ಅಲ್ಲಿಯ ವಜ್ರೇಶ್ವರ ಸೋಮನಾಥ ಸನ್ನಿಧಿಯಲ್ಲಿ ತಪಃಚಕ್ರವರ್ತಿ ಕೋಗುಳಿ ಐನೂರರ ರಾಜಗುರು ಖಾಳೇಶ್ವರ ಮುನಿಗೆ ದಾನ ಕೊಟ್ಟಿದ್ದನ್ನು ಉಲ್ಲೇಖಿಸುತ್ತ ಲಕುಲೀಶ ಪರಂಪರೆಯ ಶಿಷ್ಯ ವರ್ಗಕ್ಕೆ ಸೇರಿದ್ದರೆಂದು ಹೇಳುತ್ತವೆ.[೧೧೨]

ಮತ್ತೊಂದು ಶಾಸನವು ಲಕುಲೀಶ ಪರಂಪರೆಯ ಮಲಯಾಳದೇವ ಜ್ಞಾನರಾಸಿ ಮುನಿ ಆತನ ಶಿಷ್ಯ ಸೋಮೇಶ್ವರ ಮಹಾಬ್ರಾತಿ ಆತನ ಶಿಷ್ಯ ಶಾಂತರಾಸಿ ಯತೀಶ್ವರ ಇವರ ಶಿಷ್ಯ ಕಳೇಶ ಮುನೀಶ ಆತನ ಶಿಷ್ಯ ಕಳೇಳ ಭ್ರತೀಂದ್ರ ಎಂದು ದಾಖಲಿಸುತ್ತದೆ.[೧೧೩] ಕುರುವತ್ತಿಯ ಅಹವಮಲ್ಲೇಶ್ವರ ಅಥವಾ ಸೋಮೇಶ್ವರ ದೇವಾಲಯದ ಸ್ಥಾನೇಶ್ವರರಾಗಿ ಕಾರ್ಯನಿರ್ವಹಿಸಿದ ಅಭಿವನ ವಾದಿದೇವರು ಅವರ ನಂತರ ಲಕುಲೀಶ್ವರ ಪಂಡಿತ ಮಲಯಾಳ ಪಂಡಿತರಿದ್ದರೆಂದು ಆನಂತರ ಜ್ಞಾನೇಶ್ವರ ಪಂಡಿತರನ್ನು ಕಾಳಾಮುಖ ಸರಸ್ವತಿ ಕರ್ಣ್ನಾವಸಂತನೆಂದು ಕರೆಯಲಾಗಿದೆ.[೧೧೪]

ಕಾಶ್ಮೀರ ದೇವರಸನ ಸಂತತಿಯಾದ ಲಕುಲೇಶ್ವರ ಪಂಡಿತರ ಪರಂಪರೆಯನ್ನು ಒಂದು ಶಾಸನ ದಾಖಲಿಸುತ್ತದೆ. ಅದರಲ್ಲಿ ಕಾಶ್ಮೀರ ದೇವ, ಆತನ ಶಿಷ್ಯ ಲಕುಲೇಶ್ವರ ದೇವ, (ಇಮ್ಮಡಿ) ಕಾಶ್ಮೀರ ದೇವ, ಕಾಶ್ಮೀರ ದೇವನ ಶಿಷ್ಯ ಜ್ಞಾನಶಕ್ತಿ ಆತನ ಶಿಷ್ಯ ಸದ್ಯೋಜಾತ, ಸದ್ಯೋಜಾತನ ಶಿಷ್ಯ ಲಕುಲೀಶ ಇವರ ಹೆಸರುಗಳು ಶಾಸನಗಳಲ್ಲಿ ಕಂಡುಬರುತ್ತವೆ.[೧೧೫] ಇವರಲ್ಲದೆ ಅನೇಕ ಪಂಡಿತರುಗಳ ಹೆಸರು ಇಲ್ಲಿಯ ಶಾಸನಗಳಲ್ಲಿ ಕಂಡುಬರುತ್ತದೆ. ಅವುಗಳೆಂದರೆ ಚಿಮ್ನಹಳ್ಳಿ ಕಲಿದೇವ ದೇವಾಲಯದ ದುಗ್ಗರಾಜ ಪಂಡಿತ, ನಂದಿಕಂಬದ ಕದಂಬೇಶ್ವರ ದೇವಾಲಯದ ಸೋಮೇಶ್ವರಪಂಡಿತ, ಚಿರಸ್ತಿಹಳ್ಳಿಯ ಮೂಲಸ್ಥಾನ ಶಂಕರ ದೇವಾಲಯದ ತೇಜೋರಾಶಿ ಪಂಡಿತರ ಶಿಷ್ಯ ವಿದ್ಯಾನಿಧಿ ಪಂಡಿತ, ಬಾಗಳಿ ಕಲಿದೇವ ದೇವಾಲಯದ ಶಿವಶಕ್ತಿ ಪಂಡಿತ, ನೀಲೇಶ್ವರ ದೇವಾಲಯದ ನಾಗರಾಶಿ ಪಂಡಿತ, ಹನಶಿಯ ಪರಶುರಾಮೇಶ್ವರ ದೇವಾಲಯದ ಸೋಮೇಶ್ವರ ಪಂಡಿತ, ಕೊಂಚಗೇರಿಯ ಮೂಲಸ್ಥಾನ, ಬೈಲೂರು ಮಲ್ಲಿಕಾರ್ಜುನ ದೇವಾಲಯಗಳ ದೇವರಾಸಿ ಪಂಡಿತ, ಉಲುವತ್ತಿಯ ರಾಮೇಶ್ವರ ದೇವಾಲಯದ ಬ್ರಹ್ಮರಾಸಿ ಪಂಡಿತ, ಕೋಳೂರಿನ ಮಲ್ಲಿಕಾರ್ಜುನ, ಆದಿತ್ಯ, ದೇಸವ, ಮೇಳೇಶ್ವರ ದೇವಾಲಯಗಳಿಗೆ ಕ್ರಮವಾಗಿ ಕೇಶವಜೀಯ, ಕಾಮರಾಸಿ ಪಂಡಿತ, ಸೋಮಜೀಯ, ಮಾದಿಜೀಯ, ಕುರುಗೋಡು ಸ್ವಯಂಭು ದೇವಾಲಯದ ಬಾಲಶಿವಾಚಾರ್ಯ, ಹಲುವಾಗಿಲ ಕಲಿದೇವಾಲಯದ ರಾಜಗುರು ದೇವಾಲಯದ ಬಾಲಶಿವಾಚಾರ್ಯ, ಹುಲುವಾಗಿಲ ಕಲಿದೇವಾಲಯದ ರಾಜಗುರು ಜೋಗರಾಸಿ ಪಂಡಿತ, ದುಗ್ಗವತ್ತಿಯ ದುಗ್ಗವತಿ ದೇವಾಲಯದ ವಾಮಶಕ್ತಿ ಪಂಡಿತ, ಕುಡತಿನಿ ಕಲ್ಯಾಣಶಕ್ತಿ ಗುರು ಮತ್ತು ಅಣಜಿಗೆರೆ ಕಲಿದೇವಾಲಯದ ಕೇಶವರಾಜ ಪಂಡಿತ.[೧೧೬]

ಬ್ರಾಹ್ಮಣೇತರ ವರ್ಗಗಳಲ್ಲಿ ಕೂಡ ಪುರೋಹಿತಶಾಹಿ ವ್ಯವಸ್ಥೆ ಚಾಲ್ತಿಯಲ್ಲಿದ್ದು ಆ ಊರಿನ ಆ ದೇವಾಲಯವನ್ನು ಗೊರವರಿಗೆ ಸಲ್ಲದು ಎಂದು ಉಲ್ಲೇಖಿಸಿರುವುದು ವಿಶೇಷ ವೆನಿಸುತ್ತದೆ. ಪ್ರಾಯಶಃ ಗೊರವರು ಕಾರಣಿಕಗಳನ್ನು ಹೇಳುವ ಸಂಪ್ರದಾಯದವರಾಗಿದ್ದು

ಶಾಸನ ಹಾಕಿಸುವ ಪೂರ್ವದಲ್ಲಿ ಗೊರವರು ಆ ದೇವಾಲಯದ ಅರ್ಚಕರಾಗಿದ್ದು ರಾಜನು ಆ ದೇವಾಲಯವನ್ನು ಗ್ರಾಮದ ದೇವಾಲಯವಾಗಿ ಅಥವಾ ಗ್ರಾಮದ ಸರ್ವರಿಗೂ ಆ ದೇವಾಲಯದ ವಿನಿಯೋಗಕ್ಕಾಗಿ ಸಮಾಜದಲ್ಲಿ ಉನ್ನತ ಸ್ಥಾನವನ್ನು ಹೊಂದಿದ್ದ ಬ್ರಾಹ್ಮಣರನ್ನು ಆ ದೇವಾಲಯದ ಅರ್ಚಕರಾಗಿ ಅಥವಾ ಪೂಜಾರಿಗಳಾಗಿ ಮುಂದುವರಿಯುವಂತೆ ಕೇಳಿಕೊಂಡಿರುವ ಸಾಧ್ಯತೆ ಇರಬಹುದು. ಈ ಎರಡೂ ಶಾಸನಗಳನ್ನು ಗಮನಿಸಿದಾಗ ಕಾಳಾಮುಖ ಪಂಥದವರಿಗಾಗಲೀ ಮತ್ತು ಬ್ರಾಹ್ಮಣರ ನಡುವೆ ಇದ್ದ ವೈಮನಸ್ಯದ ಕುರುಹು ಕಾಣದಿರುವುದರಿಂದ ಈ ಅಭಿಪ್ರಾಯವನ್ನು ಪಡಬಹುದು. ಕಾಳಾಮುಖ ಯತಿಗಳು ನೈಷ್ಠಿಕ ಬ್ರಹ್ಮಚಾರಿಗಳಾಗಿದ್ದು ದೇವಾಲಯಗಳಿಗೆ ಹೊಂದಿಕೊಂಡಂತಿದ್ದ ಮಠಗಳಲ್ಲಿ ಜೀವಿಸುತ್ತ ವೇದಗಳನ್ನು ವೇದಾಂಗಗಳನ್ನು ಅಲ್ಲಿನ ಛಾತ್ರರಿಗೆ ಬೋಧಿಸುತ್ತಿದ್ದರು. ಈ ಹಿನ್ನೆಲೆಯಲ್ಲಿ ಕೂಡ ಈ ಮೇಲಿನ ಎರಡು ಶಾಸನಗಳ ಉಲ್ಲೇಖ ಮತ್ತು ಸಂಪಾದಕರು ಅಭಿಪ್ರಾಯಪಡುವಂತೆ ಕಾಳಾಮುಖರು ಮತ್ತು ಬ್ರಾಹ್ಮಣರ ನಡುವಿನ ಹೋರಾಟ ಇತ್ತೆಂದು ಭಾವಿಸಲಾಗುವುದಿಲ್ಲ.

ಈ ಉಲ್ಲೇಖಗಳನ್ನು ಗಮನಿಸಿ ಹೇಳುವುದಾದರೆ ಉಚ್ಚಂಗಿಯ ಪಾಂಡ್ಯರು ವೈದಿಕ ಶೈವ ಪರಂಪರೆಯನ್ನು ಕಾಳಾಮುಖ ಶೈವ ಪರಂಪರೆಯನ್ನು ಪೋಷಿಸಿ ಬೆಳೆಸಿದರು. ಇಡೀ ಶಾಸನಗಳ ಸಮೀಕ್ಷೆಯನ್ನು ಗಮನಿಸಿದಾಗ ಬೆರಳೆಣಿಕೆಯ ಶಾಸನಗಳು ಮಾತ್ರ ಇತರ ಪಂಥಗಳಿಗೆ ಸೇರಿದವುಗಳಾಗಿದ್ದು ಪಾಂಡ್ಯರ ಶಾಸನಗಳ ಅತಿದೊಡ್ಡ ಸಿಂಹಪಾಲನ್ನು ಶೈವ ದೇವಾಲಯಗಳು ಪಡೆದುಕೊಂಡಿರುವುದು ಕಂಡುಬರುತ್ತದೆ. ಬೆರಳೆಣಿಕೆಯ ಭಾಗವತ ಸಂಪ್ರದಾಯದ ವೈಷ್ಣವ ದೇವಾಲಯಗಳು ಜಿಲ್ಲೆಯಲ್ಲಿ ಇದ್ದವೆಂದು ತಿಳಿದುಬರುತ್ತದೆ. ಜೊತೆಗೆ ಶಾಕ್ತಾರಾಧನೆ ಸೂರ್ಯಾರಾಧನೆ ಮತ್ತು ಕಾರ್ತಿಕೇಯನ ಆರಾಧನೆ ಕೂಡ ಈ ಪ್ರದೇಶದಲ್ಲಿ ಜಾರಿಯಲ್ಲಿತ್ತು.

ಪಾಂಡ್ಯರ ಶಾಸನಗಳಲ್ಲಿ ವೈಷ್ಣವ ಧರ್ಮ ಸ್ವತಂತ್ರವಾಗಿ ಅಸ್ತಿತ್ವವನ್ನು ಹೊಂದಿರುವುದು ಬಹಳ ಕಡಿಮೆ. ಹೂವಿನಹಡಗಲಿಯ ಕೇಶವ, ಅಂಬಲಿಯ ಕೇಶವ, ಕೊಟ್ಟೆಕಲ್ಲು ಕೇಶವ, ಬಾಗಳಿಯ ನರಸಿಂಹ, ಕೊಟ್ಟೂರಿನ ನರಸಿಂಹ ದೇವಾಲಯಗಳು ಮಾತ್ರ ಸ್ವತಂತ್ರವಾಗಿ ವೈಷ್ಣವ ಪಂಥಕ್ಕೆ ಸೇರಿವೆ. ಈ ದೇವಾಲಯಗಳು ಪಾಂಡ್ಯರ ನೇರ ಕೃಪೆಗೆ ಪಾತ್ರವಾಗಿರದೇ ಅವರ ದಂಡನಾಯಕರು ಮತ್ತು ಸಾಮಂತರು ನಿರ್ಮಾಣ ಮಾಡಿರುವುದು ಇಲ್ಲಿ ವಿಶೇಷವಾಗಿದೆ. ಅಂದಿನ ಸಾಮಾಜಿಕ ಮತ್ತು ಧಾರ್ಮಿಕ ಹಿನ್ನೆಲೆಯನ್ನು ಗಮನಿಸಿದರೆ ಪ್ರಚಲಿತದಲ್ಲಿದ್ದ ಶೈವ ಕಾಳಾಮುಖ ಸಂಪ್ರದಾಯದೊಂದಿಗೆ ವೈಷ್ಣವ ಧರ್ಮ ಬೆರತುಕೊಂಡಿತ್ತು. ಬಹುಶಃ ಈ ಹಿನ್ನೆಲೆಯಲ್ಲಿಯೇ ತ್ರೈಪುರುಷ ದೇವಾಲಯಗಳ ಪರಿಕಲ್ಪನೆ ಆರಂಭವಾಗಿ, ತ್ರೈಪುರುಷ ದೇವರುಗಳ ಮೂರ್ತಿ ಪ್ರತಿಷ್ಠಾಪನೆಯೂ ಕೂಡ ಆರಂಭವಾಯಿತು. ಶಿವದೇವಾಲಯದಲ್ಲಿ ಚನ್ನಕೇಶವ, ಕೇಶವ, ವಿಷ್ಣು, ಲಕ್ಷ್ಮೀ, ನರಸಿಂಹ, ಗರುಡು ಶಿಲ್ಪಗಳು ನೆಲೆ ಕಂಡುಕೊಂಡವು. ಇದರೊಂದಿಗೆ ಕಾಳಾಮುಖ ಸಂಪ್ರದಾಯದಲ್ಲಿ ಪ್ರಮುಖ ಅಂಗವಾಗಿರುವ ಸೌರ ಅಥವಾ ಸೂರ್ಯ ಆರಾಧನೆ ಆದಿತ್ಯ ಶಿಲ್ಪಗಳ ಪ್ರತಿಷ್ಠಾಪನೆಗೆ ಎಡೆಮಾಡಿ ಕೊಡುತ್ತದೆ. ವೈಷ್ಣವ ಧರ್ಮ ಅಂದಿನ ಪ್ರಚಲಿತ

ಧಾರ್ಮಿಕ ನಂಬಿಕೆಯೊಂದಿಗೆ ಬೆಳೆದುಕೊಂಡು ಬಂದಿದೆ. ಆದರೆ ಶ್ರೀವೈಷ್ಣವ ಪಂಥ ಅಂದರೆ ಪಂಚರಾತ್ರಾಗಮ, ವೈಖಾನಸ ಆಗಮ ಮೂಲಕ ವಿಶಿಷ್ಟಾದ್ವೈತ ಪರಂಪರೆಯ ವೈಷ್ಣವ ದೇವಾಲಯಗಳು ಈ ಪ್ರದೇಶದಲ್ಲಿ ಇದ್ದವೆಂದು ಊಹಿಸಲೂ ಸಾಧ್ಯವಿಲ್ಲ. ಕಾರಣ ಮೇಲಿನ ಸಮೀಕ್ಷೆಗೆ ಒಳಪಟ್ಟ ಶಾಸನಗಳಾವುವೂ ರಾಮಾನುಜಾಚಾರ್ಯರನ್ನಾಗಲಿ ಅಥವಾ ಅವರ ಹಿಂದಿನ ಆಳ್ವಾರರನ್ನಾಗಲೀ ಉಲ್ಲೇಖಿಸುವುದಿಲ್ಲ. ಹಾಗಾಗಿ ಇದು ಸಂಪೂರ್ಣವಾಗಿ ಭಾಗವತ ಪ್ರಧಾನ ವೈಷ್ಣವ ಪರಂಪರೆಯಾಗಿತ್ತೆಂದು ಕಂಡು ಬರುತ್ತದೆ.

ಉಚ್ಚಂಗಿಯ ಅಧಿದೇವತೆಯಾದ ಕಾಳಿಕಾದೇವಿಯನ್ನು ಅನೇಕ ಶಾಸನಗಳು ಉಲ್ಲೇಖಿಸುತ್ತವೆ. ಕೆಲವು ಶಾಸನಗಳು ಉಚ್ಚಂಗಿದುರ್ಗ ಬೇರೆ ಯುಗಗಳಲ್ಲಿ ಅನೇಕ ಹೆಸರುಗಳನ್ನು ಹೊಂದಿದುದನ್ನು ತಿಳಿಸುತ್ತವೆ. ಉಚ್ಚಂಗಿದೇವಿಯು ಈ ಪ್ರದೇಶದ ಅತ್ಯಂತ ಪ್ರಸಿದ್ಧ ದೇವತೆಯಾಗಿದ್ದಳಲ್ಲದೆ ಒಂದು ಪ್ರಮುಖ ಶಕ್ತಿಕೇಂದ್ರವಾಗಿ ಕೂಡ ಇದು ಉತ್ತಮ ಸ್ಥಾನವನ್ನು ಗಳಿಸಿದ್ದುದರ ಜೊತೆಗೆ ಅನೇಕ ಅಧಿಕಾರಿಗಳು ವ್ಯಾಪಾರಿಗಳು ಮುಂತಾದವರು ಇದಕ್ಕೆ ದಾನ ನೀಡಿರುವುದನ್ನು ಶಾಸನಗಳು ಉಲ್ಲೇಖಿಸುತ್ತವೆ.[೧೧೭] ಉಚ್ಚಂಗಿ ಪಾಂಡ್ಯರ ಸಾಮಂತ ಮಹಾಮಂಡಳೇಶ್ವರರಾದ ಕೊಟ್ಟೂರಿನ ಕದಂಬರು ಉಚ್ಚಂಗಿದೇವಿಯ ವರಪ್ರಸಾದರೆಂದು ಹೇಳಿಕೊಂಡಿರುವುದು ಅವರ ಶಾಸನಗಳಲ್ಲಿ ಕಂಡು ಬರುತ್ತದೆ. ಉಚ್ಚಂಗಿ ದೇವಿಯ ಉಲ್ಲೇಖ ಪಾಂಡ್ಯರ ಕಾಲಕ್ಕಿಂತ ಮುಂಚಿತವಾಗಿಯೇ ಕಂಡುಬರುತ್ತದೆ. ಆದರೆ ಉಚ್ಚಂಗಿ ದೇವಿಗೆ ದಾನ ನೀಡಿದ ಮೊದಲ ಉಲ್ಲೇಖ ಪಾಂಡ್ಯರ ಶಾಸನದಲ್ಲಿ ದೊರೆಯುತ್ತದೆ. ಇಲ್ಲಿ ಕೋಟೆಯನ್ನು ಕಾಯುವ ಉಚ್ಚಂಗಿ ಎಂದು ಹೇಳಲಾಗಿದೆ. ನಂತರದ ಕಾಲದಲ್ಲಿ ಹರಪ್ಪನಹಳ್ಳಿಯ ಪಾಳೆಯಗಾರರು ಇದಕ್ಕೆ ದಾನ-ದತ್ತಿಗಳನ್ನು ನೀಡುತ್ತಾರೆ. ಉಚ್ಚಂಗಿ ದೇವಿಯ ಆರಾಧನೆ ಚಾಳುಕ್ಯರ ಕಾಲದಿಂದ ಆರಂಭವಾಗಿ ಪ್ರಸ್ತುತ ಸಮಾಜದಲ್ಲಿ ಇಂದಿನ ಜಿಲ್ಲೆಗಳಲ್ಲಿ ಗುರುತಿಸುವ ನೊಳಂಬವಾಡಿ ಪ್ರದೇಶದ ವ್ಯಾಪ್ತಿಯನ್ನು ಮೀರಿ ಶಾಕ್ತಾರಾಧನೆಯ ಮುಖ್ಯ ಕೇಂದ್ರವಾಗಿ ಉಳಿದುಕೊಂಡಿದೆ. ಕುಡುತಿನಿ ಗ್ರಾಮದ ಕುಮಾರಸ್ವಾಮಿ ದೇವಾಲಯದಲ್ಲಿರುವ ಕ್ರಿ.ಶ. ೧೦೯೯ರ ಕೊಟ್ಟತ್ತೊಂಣಿಯ ಭಗವತಿ ದೇವಿಯನ್ನು ಉಲ್ಲೇಖಿಸುತ್ತದೆ. ಪಾಂಡ್ಯರ ಕಾಲದ ಈ ಎರಡು ಶಾಸನಗಳು ಅಂದಿನ ಶಾಕ್ತಾರಾಧನೆಯ ಮೇಲೆ ಬೆಳಕು ಚೆಲ್ಲುತ್ತವೆ.

ಹೊಳಗುಂದಿ, ಅಂಬಳಿ, ಕೋಗಳಿ, ಬಾಗಳಿ, ಬೇತೂರು, ದುಗ್ಗವತಿ, ನೀಲಗುಂದ, ಉಚ್ಚಂಗಿದುರ್ಗ, ಮೊರಗೇರಿ, ಉಲವತ್ತಿ ಶಾಸನಗಳಲ್ಲಿ ಜೈನ ಧರ್ಮದ ಉಲ್ಲೇಖಗಳು ಸಿಗುತ್ತವೆ. ಈ ಪ್ರದೇಶದಲ್ಲಿ ಜೈನ ಧರ್ಮ ವೈಷ್ಣವ ಧರ್ಮಕ್ಕಿಂತ ಹೆಚ್ಚು ಪ್ರಾಶಸ್ತ್ಯ ಪಡೆದಿತ್ತು ಮತ್ತು ಜೈನ ಧರ್ಮದವರು ಪಾಂಡ್ಯರ ಆಡಳಿತದಲ್ಲಿ ಉನ್ನತ ಹುದ್ದೆಗಳನ್ನು ಪಡೆದುಕೊಂಡಿರುವುದು ಶಾಸನಗಳು ತಿಳಿಸುತ್ತವೆ. ಜೈನ ಜಿನಾಲಯಗಳ ನಿರ್ಮಾಣ ಜೀರ್ಣೋದ್ಧಾರ ಪ್ರಕ್ರಿಯೆ ನಿರಂತರ ವಾಗಿ ಹೊಯ್ಸಳರ ಕಾಲಕ್ಕೂ ಮುಂದುವರಿದಿರುವುದು ಗಮನಾರ್ಹ. ಬೆರಳೆಣಿಕೆಯ ಶಾಸನಗಳು ಬಸವೇಶ್ವರ ದೇವರನ್ನು ದಾಖಲಿಸುತ್ತವೆ. ಪ್ರಾಯಶಃ ಅವರು ಈಶ್ವರನ ಪ್ರತಿರೂಪದಲ್ಲಿ ಆ ಹೆಸರನ್ನು ದಾಖಲಿಸಿರುವಂತಿದೆ. ಕಲ್ಯಾಣದ ಕ್ರಾಂತಿಯ ಹರಿಕಾರರಾದ ಬಸವೇಶ್ವರರಿಗೂ

ಮತ್ತು ಶಾಸನೋಲ್ಲೇಖವಾದ ಬಸವೇಶ್ವರ ದೇವರಿಗೂ ಸಂಬಂಧ ಕಲ್ಪಿಸುವ ಯಾವ ಕುರುಹುಗಳೂ ಶಾಸನಗಳಲ್ಲಿ ಉಕ್ತವಾಗಿಲ್ಲ.

ಉಚ್ಚಂಗಿಯ ಪಾಂಡ್ಯರು ಬಹುತೇಕವಾಗಿ ಶೈವ ಧರ್ಮದ ಅನುಯಾಯಿಗಳಾಗಿದ್ದು ಸನಾತನ ಶೈವ ಧರ್ಮವನ್ನು ಲಕುಲೀಶ ಪಂಥವನ್ನೂ ಜೊತೆಜೊತೆಯಾಗಿ ನಡೆಸಿಕೊಂಡರಲ್ಲದೆ ಅದರ ಜೊತೆಗೆ ಸ್ಥಾನಿಕವಾಗಿ ಚಾಲ್ತಿಯಲ್ಲಿದ್ದ ಭಾಗವತ ಸಂಪ್ರದಾಯವನ್ನು ಉದಾಹರಣೆಗೆ ನರಸಿಂಹದೇವರು, ಕೇಶವದೇವರು, ವಿಷ್ಣು ದೇವರು ಮುಂತಾದ ದೇವಾಲಯಗಳನ್ನು ನಿರ್ಮಿಸಿದರು. ಅಲ್ಲದೆ ತ್ರೈಪುರಷ ದೇವಾಲಯಗಳ ಬೆಳವಣಿಗೆಗೆ ಅಸ್ತಿಭಾರ ಹಾಕಿ ಶೈವ ಮತ್ತು ವೈಷ್ಣವ ಧರ್ಮಗಳನ್ನು ಸಮೀಕರಿಸಿದರು. ಅಲ್ಲದೇ ಜೈನ ಜಿನಾಲಯಗಳನ್ನು ನಿರ್ಮಿಸಿದರು. ಅವುಗಳಿಗೆ ದಾನ-ದತ್ತಿಗಳನ್ನು ನೀಡಿದಲ್ಲದೆ ಶಾಕ್ತದೇವತೆಗಳನ್ನು ಪ್ರೋತ್ಸಾಹಿಸಿ ಶೈವ ದೇವಾಲಯಗಳಲ್ಲಿ ಅನೇಕ ಇತರ ಪಂಥೀಯ ದೇವತೆಗಳ ಪೂಜೆಗಳಿಗೂ ಅವಕಾಶ ಮಾಡಿಕೊಟ್ಟು ಸರ್ವಧರ್ಮ ಸಮನ್ವಯ ಪದ್ಧತಿಯನ್ನು ಉಳಿಸಿ, ಬೆಳೆಸಿಕೊಂಡುದುದು ಕಂಡುಬರುತ್ತದೆ. ಈ ವೈಷ್ಣವ ಪರಂಪರೆಯ ಕೆಲ ದೇವಾಲಯಗಳು ಹೊಯ್ಸಳರ ಶಾಸನಗಳಲ್ಲಿ ಉಲ್ಲೇಖಗೊಂಡಿರುವುದರಿಂದ ಮತ್ತು ಹೊಯ್ಸಳರು ತಾವು ವೈಷ್ಣವರಾಗಿದ್ದುದರ ಹಿನ್ನೆಲೆಯಲ್ಲಿ ಅಂದಿನ ವೈಷ್ಣವ ಧರ್ಮದ ಪ್ರಭಾವ ಹೊಯ್ಸಳರ ಕಾಲದಲ್ಲಿ ಮುಂದುವರಿಯಿತು.

**೪.೨. ಸಾಮಾಜಿಕ ಸ್ಥಿತಿಗತಿ**

ಕರ್ನಾಟಕವನ್ನು ಆಳಿದ ಎರಡು ಪ್ರಮುಖ ರಾಜಮನೆತನಗಳಾದ ಕಲ್ಯಾಣದ ಚಾಳುಕ್ಯರು ಮತ್ತು ಕೊನೆಯ ದಿನಗಳಲ್ಲಿ ಹೊಯ್ಸಳರ ಮಹಾಮಾಂಡಲೀಕರುಗಳಾಗಿ ಕಾರ್ಯನಿರ್ವಹಿಸಿದ ಉಚ್ಚಂಗಿಯ ಪಾಂಡ್ಯರು ಅವರ ಕಾಲದಲ್ಲಿಯೇ ಬದುಕಿ ಬಾಳಿದ ಒಂದು ಸ್ಥಾನಿಕ ಆಡಳಿತ ಮನೆತನ. ಈ ಮಹಾಮಾಂಡಲೀಕರುಗಳು ತಾವು ಶೈವರಾಗಿರುವುದರ ಜೊತೆಗೆ ಸಾಮ್ರಾಜ್ಯದಲ್ಲಿ ಪ್ರಚಲಿತದಲ್ಲಿದ್ದ ಸಾಮಾಜಿಕ ವ್ಯವಸ್ಥೆಯನ್ನು ತಮ್ಮದಾಗಿಸಿಕೊಂಡು ಮುಂದುವರಿದಂತಹ ಪರಂಪರೆ. ಕಲ್ಯಾಣದ ಚಾಳುಕ್ಯರ ಆಳ್ವಿಕೆಯ ಅಂತ್ಯಕಾಲದಲ್ಲಿ ವೀರಶೈವ ಪಂಥ ಅತಿಹೆಚ್ಚು ಮನ್ನಣೆಯನ್ನು ಪಡೆಯಲಾರಂಭಿಸಿತಾದರೂ ಕಲ್ಯಾಣದ ಕ್ರಾಂತಿಯಿಂದಾಗಿ ಅದಕ್ಕೆ ಕೆಲ ದಿನಗಳ ಕಾಲ ಮಂಕು ಕವಿಯಿತೆಂದೇ ಭಾವಿಸಬಹುದು. ಈ ಮೇಲೆ ಉಲ್ಲೇಖಿಸಿದ ಶಾಸನಗಳ ಸಮೀಕ್ಷೆಯು ನಮಗೆ ಈ ದಿಸೆಯಲ್ಲಿ ಯಾವುದೇ ಬೆಳಕನ್ನು ಅಥವಾ ಸೂಚನೆಯನ್ನು ನೀಡುವುದಿಲ್ಲ. ಪ್ರಾಯಶಃ ಅಂದಿನ ಶಿಷ್ಟ ಸಮಾಜಕ್ಕೆ ತನ್ನೊಳಗಾಗುತ್ತಿದ್ದ ಬದಲಾವಣೆಗಳನ್ನು ಅರಗಿಸಿಕೊಳ್ಳಲು ಇನ್ನೂ ಸಾಧ್ಯವಾಗಿರಲಿಲ್ಲ. ಹಾಗಾಗಿ ತನ್ನ ಮೂಲ ಪರಂಪರೆಯನ್ನು ಹಾಗೆಯೇ ಮುಂದುವರೆಸಿಕೊಂಡು ಹೋಗುವ ಅನಿವಾರ್ಯ ಅದಕ್ಕಿದ್ದಿರಬೇಕು. ಏನೇ ಇರಲಿ ಅಂದಿನ ಸಾಮಾಜಿಕ ವ್ಯವಸ್ಥೆಯು ಚತುರ್ವಿಧ ವರ್ಣಾಶ್ರಮ ವ್ಯವಸ್ಥೆಯನ್ನು ಅನುಸರಿಸಿಕೊಂಡು ಹೋಗುತ್ತಿತ್ತೆಂದು ಕಂಡುಬರುತ್ತದೆ.

ಸಮಾಜದ ಮೂಲವ್ಯವಸ್ಥೆಯಲ್ಲಿ ವರ್ಣಾಶ್ರಮ ಪದ್ಧತಿ ಅತಿ ಪ್ರಮುಖ ಸ್ಥಾನವನ್ನು ಪಡೆದುಕೊಂಡಿದ್ದಿತು. ಹಿಂದೂ ಧರ್ಮ ಅಥವಾ ವೈದಿಕ ಸಂಪ್ರದಾಯದ ಜೀವನ ಶೈಲಿ

ಸಾಮಾನ್ಯವಾಗಿದ್ದಂತೆ ಶಾಸನಗಳು ತಿಳಿಸುತ್ತವೆ. ಇಲ್ಲಿ ಶೈವ, ವೈಷ್ಣವ, ಜೈನ ಮುಂತಾದ ಧರ್ಮೀಯರು ಜೀವಿಸುತ್ತಿದ್ದರು; ಎಲ್ಲರೂ ಕೊಡುಕೊಳ್ಳುವ ಸಂಪ್ರದಾಯಗಳನ್ನು ಅನುಸರಿಸಿಕೊಂಡು ಬದುಕಿದ್ದುದಕ್ಕೆ ಸಾಕ್ಷಿಗಳು ಕಂಡುಬರುತ್ತವೆ. ಕಾರಣ ಜೈನರು ಶೈವ ಮತ್ತು ವೈಷ್ಣವ ದೇವಾಲಯಗಳನ್ನು ನಿರ್ಮಿಸಿರುವುದಲ್ಲದೆ ಜಿನ ಶಾಸನಗಳನ್ನು ಶೈವ ಮತ್ತು ವೈಷ್ಣವ ದೇವಾಲಯಗಳ ಮುಂದೆ ನಿಲ್ಲಿಸಿ ಅವುಗಳನ್ನು ಕಾಪಾಡುವ ಪರಂಪರೆಯನ್ನು ವೈದಿಕ ಪಂಥದವರಿಗೆ ವಹಿಸಿದ್ದುದು ತಿಳಿಯುತ್ತದೆ.

ಆ ಕಾಲದ ಸಮಾಜದಲ್ಲಿ ಕಂಡುಬರುತ್ತಿದ್ದ ಚಾತುರ್ವರ್ಣ ವ್ಯವಸ್ಥೆಯನ್ನು ಅನುಸರಿಸುತ್ತಿತ್ತೆಂದು ಹೇಳಬಹುದು.[೧೧೮] ಬ್ರಹ್ಮ, ಕ್ಷತ್ರಿಯ, ವೈಶ್ಯ ಹಾಗೂ ಶೂದ್ರ ವರ್ಗಗಳು ಸಮಾಜದಲ್ಲಿ ಇದ್ದುದನ್ನು ಉಲ್ಲೇಖಿಸುವ ಆಕರಗಳಿಗೆ ಕೊರತೆಯಿಲ್ಲ. ಈ ನಾಲ್ಕು ವರ್ಣಗಳ ಪಾಲನೆಯು ರಾಜನ ಕರ್ತವ್ಯವಾಗಿತ್ತು. ಆದರೆ ಈ ವರ್ಗಗಳ ವಿಂಗಡಣೆಯಲ್ಲಿ ನಿಬಂಧನೆಗಳು ಅಥವಾ ನಿರ್ಬಂಧಗಳು ಇರಲಿಲ್ಲ. ಸಾಮಾಜಿಕ ಸ್ಥಿತಿಗತಿಗಳನ್ನು ಅವಲೋಕಿಸಿದಾಗ ಹುಟ್ಟು ಈ ವರ್ಣವನ್ನು ನಿರ್ಧರಿಸುತ್ತಿತ್ತೆಂದು ಹೇಳಬಹುದು. ಭಾರತದಲ್ಲಿ ವರ್ಣಾಶ್ರಮ ವ್ಯವಸ್ಥೆಯನ್ನು ಬಹುತೇಕ ವಿದ್ವಾಂಸರುಗಳು ಪಾಶ್ಚಿಮಾತ್ಯ ವಿದ್ವಾಂಸರನನ್ನುಕರಿಸಿ ವರ್ಣಾಶ್ರಮ ವ್ಯವಸ್ಥೆಯು ಜಾತಿ ವ್ಯವಸ್ಥೆಯ ಮೂಲವೆಂದು ಮತ್ತು ಅದು ಹುಟ್ಟಿನಿಂದ ಬರುತ್ತದೆಂದು ಭಾವಿಸುತ್ತಾರಾದರೂ ಈ ಚಾತುರ್ವರ್ಣ ವ್ಯವಸ್ಥೆಯು ಹುಟ್ಟಿನಿಂದ ಬರದೆ ಅದು ಆ ವ್ಯಕ್ತಿಯು ಅನುಸರಿಸುವ ವೃತ್ತಿಯ ಗುಣಧರ್ಮ ವಿಶೇಷಗಳಿಂದ ಆತನು ಬ್ರಹ್ಮ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರನೆಂದು ವಿಭಾಗಿಸಲ್ಪಡುತ್ತಿದ್ದನು. ಹಾಗಾಗಿ ಮೇಲಿನ ಮೂರು ವರ್ಗದವರಿಗೆ ದ್ವಿಜರೆಂದು ಅಂದರೆ ಎರಡು ಬಾರಿ ಹುಟ್ಟಿದವರೆಂದು ಕರೆಯಲಾಗುತ್ತಿತ್ತು. ಕಾರಣ ಇವರು ಸದಾ ಬ್ರಹ್ಮಜ್ಞಾನದ ಅನ್ವೇಷಣೆಯಲ್ಲಿ ತೊಡಗದಿದ್ದರೂ ಅದನ್ನು ಸಾಧಿಸಲು ಅವಶ್ಯಕವಾದ ಮಾರ್ಗಾನುಸರಣೆಯಲ್ಲಿರುತ್ತಿದ್ದರು. ಕ್ರಮೇಣ ಇದನ್ನು ಹುಟ್ಟಿನೊಂದಿಗೆ ಆರೋಪಿಸಿಕೊಳ್ಳುವ ಸಂಪ್ರದಾಯವಿತ್ತಾದರೂ ಬ್ರಾಹ್ಮಣರು, ಜೈನರು ಕ್ಷತ್ರಿಯ ಪರಂಪರೆಯನ್ನು ಅನುಸರಿಸಿರುವ ಉಲ್ಲೇಖಗಳು ಅಲ್ಲದೆ ವೈಶ್ಯರು ಹಾಗೂ ಇತರರು ಕ್ಷತ್ರಿಯ ಪರಂಪರೆಯನ್ನು ಅನುಸರಿಸಿರುವುದನ್ನು ಕಾಣುತ್ತೇವೆ. ಈ ವರ್ಗಾವಣೆಗಳನ್ನು ಅಥವಾ ವೃತ್ತಿ ಪಲಾಯನಗಳನ್ನು ಅಂದಿನ ಸಮಾಜ ಒಪ್ಪಿಕೊಂಡಿದ್ದರೂ ಅವುಗಳನ್ನು ಮುಚ್ಚಿಹಾಕುವ ಐತಿಹ್ಯಗಳು ಆನಂತರದ ದಿನಗಳಲ್ಲಿ ಬೆಳೆದು ಪರಸ್ಪರ ಬದಲಾವಣೆಯನ್ನು ನುಂಗಿಹಾಕಿದುದು ಅಥವಾ ಅಸಾಧುವೆಂದು ಬಿಂಬಿಸಲಾಯಿತು. ಆನಂತರ ಕಾಲಘಟ್ಟದಲ್ಲಿ ಅದೇನೇ ಆದರೂ ಉಚ್ಚಂಗಿ ಪಾಂಡ್ಯರ ಕಾಲಘಟ್ಟದಲ್ಲಿ ಈ ನಾಲ್ಕು ವರ್ಣಾಶ್ರಮ ಪರಂಪರೆ ಚಾಲ್ತಿಯಲ್ಲಿದ್ದುದನ್ನು ಕಾಣಬಹುದು.

**ಸಾಮಾಜಿಕ ವರ್ಗಗಳು**

ನೊಳಂಬವಾಡಿ ೩೨೦೦೦ದ ಶಾಸನಗಳ ಅಧ್ಯಯನದಿಂದ ಸಮಾಜದಲ್ಲಿ ನಾಲ್ಕು ವರ್ಗಗಳನ್ನು ಕಾಣಬಹುದು. ಮೊದಲನೆಯ ವರ್ಗ ಮಹಾಜನರು ಮತ್ತು ಬ್ರಾಹ್ಮಣರು, ಎರಡನೆಯ ವರ್ಗ ವ್ಯಾಪಾರಿಗಳು ನಖರು, ಸೆಟ್ಟಿಗುತ್ತರು ಇತ್ಯಾದಿ ವ್ಯಾಪಾರಿಗಳು, ಮೂರನೆಯವರು ಹಿಟ್ಟುಗಳು, ನಾಲ್ಕನೆಯವರು ಒಕ್ಕಲುಗಳು, ಅರವತ್ತೊಕ್ಕಲು, ಮೂವತ್ತೊಕ್ಕಲು ಇತ್ಯಾದಿ. ಈ

ನಾಲ್ಕು ಪ್ರಬೇಧಗಳಲ್ಲಿಯೇ ಎಲ್ಲಾ ಜಾತಿಗಳೂ ಅಂತರ್ಗತವಾಗಿರುತ್ತಿದ್ದವು. ಅಲ್ಲದೆ ಇವು ಸಾಮಾಜಿಕವಾಗಿ ೧೮ ಸಮಯವಾಗಿ ಅಥವಾ ಪಣವಾಗಿ ಸಹ ವಿಂಗಡಣೆಯಾಗಿದ್ದವು.[೧೧೯]

**ಬ್ರಾಹ್ಮಣರು:** ಅಧ್ಯಯನದ ಕಾಲಘಟ್ಟದ ಸಮಾಜವು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂಬ ನಾಲ್ಕು ಪ್ರಮುಖ ವರ್ಣಗಳನ್ನು ಹೊಂದಿದ್ದಿತು. ಈ ವರ್ಣಗಳು ಅನೇಕ ಉಪಜಾತಿಗಳನ್ನು ಹೊಂದಿದ್ದವು. ಈ ಪದ್ಧತಿ ಬ್ರಾಹ್ಮಣ ಸಮುದಾಯಕ್ಕೂ ಆ ಕಾಲಘಟ್ಟದಲ್ಲಿಯೂ ಹೊರತಾಗಿರಲಿಲ್ಲ. ಉದಾಹರಣೆಗೆ ಬ್ರಾಹ್ಮಣರಲ್ಲಿ ಸ್ಮಾರ್ಥ, ಶ್ರೀವೈಷ್ಣವ ಮತ್ತು ಮಾಧ್ವ ಮುಂತಾದ ಪಂಥಗಳೂ ಸ್ಮಾರ್ಥರಲ್ಲಿ ಹೊಯ್ಸಳ ಕರ್ನಾಟಕರು, ಕಮ್ಮೆಗಳು, ಬಡಗನಾಡು, ತೆಲುಗು, ಬ್ರಾಹ್ಮಣರು ಉಲ್ಚ್ ಕಮ್ಮೆಗಳು, ಬಬ್ಬುರು ಕಮ್ಮೆಗಳು ಇತ್ಯಾದಿ ಒಳಪಂಗಡಗಳು ಕಂಡುಬರುತ್ತವೆ. ಶ್ರೀವೈಷ್ಣವರಲ್ಲಿ ವಡಗಲೆ, ತೆಂಕಲೆ ಒಳಪಂಗಡಗಳು, ಮಾಧ್ವರಲ್ಲಿ ದೇಶಸ್ಥರು ಇತ್ಯಾದಿ ಹಲವಾರು ಮಠಗಳನ್ನು ಅನುಕರಿಸುವ ಸಂಪ್ರದಾಯದಲ್ಲಿನ ಸಣ್ಣ ಸಣ್ಣ ವ್ಯತ್ಯಾಸಗಳಿಂದ ಗುರುತಿಸಿಕೊಳ್ಳುವ ಹಲವಾರು ಮಠದ ಪಂಗಡಗಳು ಕಂಡುಬರುತ್ತವೆ.

ಹಾಗೆಂದ ಮಾತ್ರಕ್ಕೆ ಇಡೀ ಬ್ರಾಹ್ಮಣ ಸಮುದಾಯ ಹರಿದು ಹಂಚಿ ಹೋಗಿತ್ತೆಂದು ಹೇಳಲಾಗುವುದಿಲ್ಲ. ಇದರ ಜೊತೆಗೆ ಶುದ್ಧ ಶೈವಾಚಾರದಲ್ಲಿದ್ದ ಬ್ರಾಹ್ಮಣ ವರ್ಗವೊಂದಿತ್ತು. ಅದನ್ನು ಅಂದಿನ ಕಾಲದಲ್ಲಿ ಕಾಳಾಮುಖರು, ಪಾಶುಪತರು ಎಂದು ಕರೆಯಲಾಗುತ್ತಿತ್ತು.[೧೨೦] ಆನಂತರ ಇವರಿಗೆ ಶುದ್ಧ ಶೈವರೆಂಬ ಹೆಸರನ್ನು ನೀಡಿ ಆ ಪರಂಪರೆಯನ್ನು ಮುಂದುವರೆಸುವ ಸಂಪ್ರದಾಯಸ್ಥರು ಕಂಡುಬರುತ್ತಾರೆ. ಈ ಎಲ್ಲ ಬದಲಾವಣೆಗಳಿದ್ದರೂ ಶಾಸನಗಳಲ್ಲಿ ಎಲ್ಲಿಯೂ ಬ್ರಾಹ್ಮಣರನ್ನು ಜಾತಿಗಳ ರೀತಿ ಗುರುತಿಸದಿರುವುದು ಅವರುಗಳಲ್ಲಿದ್ದ ಏಕತೆಯ ಧರ್ಮಾಚರಣೆ ಪ್ರಮುಖವಾಗುತ್ತಿತ್ತು. ಆದರೆ ಇವರಲ್ಲಿ ಶೈವ ಮತ್ತು ವೈಷ್ಣವ ಪ್ರಬೇಧಗಳನ್ನು ಮಾತ್ರ ಅಂದಿನ ದಿನಗಳಲ್ಲಿ ಗುರುತಿಸಲಾಗುತ್ತಿತ್ತು.[೧೨೧]

ಹೆಚ್ಚು ವಿದ್ಯಾವಂತರಾಗಿದ್ದ ಬ್ರಾಹ್ಮಣರು ಸಮಾಜದಲ್ಲಿ ಉನ್ನತ ಸ್ಥಾನವನ್ನು ಅಲಂಕರಿಸಿದ್ದರು. ಗ್ರಾಮದ ಸ್ಥಾನಿಕ ಆಡಳಿತದ ಪ್ರಮುಖ ಹುದ್ದೆಗಳನ್ನು ಅಲಂಕರಿಸುತ್ತಿದ್ದುದರಿಂದ ಇವರಿಗೆ ಆ ಗೌರವ ಪ್ರಾಪ್ತವಾಗಿತ್ತು. ಅಲ್ಲದೆ ಕೆಲವೊಂದು ಅಗ್ರಹಾರಗಳ ರಚನೆಯಲ್ಲಿ ಕೂಡ ಏಕವ್ಯಕ್ತಿ ಅಗ್ರಹಾರಗಳು, ಬಹುವ್ಯಕ್ತಿ ಅಗ್ರಹಾರಗಳು ರಚನೆಯಾಗಿ ಅವರು ಭೂಮಿಯ ಮೇಲಿನ ಹಕ್ಕನ್ನು ಹೊಂದಿದ್ದರಿಂದ ಸಾಮಾನ್ಯವಾಗಿ ಕೆಳವರ್ಗದ ಜನ ಇವರನ್ನು ಅತಿ ಗೌರವದಿಂದ ಕಾಣುತ್ತಿದ್ದುದೇ ಇದಕ್ಕೆ ಕಾರಣವಿರಬಹುದು.[೧೨೨]

ಸಮಾಜದಲ್ಲಿದ್ದ ಕ್ಷತ್ರಿಯ ಮತ್ತು ವೈಷ್ಣವ ಪಂಥಗಳೆರಡೂ ತಮ್ಮ ಗೃಹಗಳಲ್ಲಿನ ಷೋಡಶ ಸಂಸ್ಕಾರಗಳಿಗೆ ಬ್ರಾಹ್ಮಣರನ್ನೇ ಅವಲಂಬಿಸಿದ್ದರಿಂದ ಪುರೋಹಿತ ವರ್ಗ ಕೂಡ ಬ್ರಾಹ್ಮಣ ಸಮುದಾಯದಲ್ಲಿ ಬೆಳೆದುಬಂದಿತು. ಗ್ರಾಮಗಳಲ್ಲಿ ಬ್ರಾಹ್ಮಣರನ್ನು ಜೋಯಿಸ, ಪುರೋಹಿತ, ಇತ್ಯಾದಿ ಹೆಸರುಗಳಿಂದ ಕರೆಯುತ್ತಿದ್ದು ಆಯಾ ಗ್ರಾಮಗಳು ಪುರೋಹಿತರಿಗೆ ವಾರ್ಷಿಕ ಭೂ ಉತ್ಪನ್ನದ ಪಾಲೊಂದನ್ನು ನೀಡಿ ಆತನನ್ನು ಗ್ರಾಮದ ಒಬ್ಬ ಪ್ರಮುಖ ಸದಸ್ಯನನ್ನಾಗಿ ನೇಮಕ

ಮಾಡಿಕೊಂಡು ಆತನ ಮಾರ್ಗದರ್ಶನವನ್ನು ಧಾರ್ಮಿಕ ಕಾರ್ಯಗಳಿಗೆ ಬಳಸುತ್ತಿದ್ದರು. ಆನಂತರದ ದಿನಗಳಲ್ಲಿ ಈ ಪದ್ಧತಿ ವಂಶಪಾರಂಪರ್ಯವಾಗಿ ಮುಂದುವರೆದಿದ್ದರಿಂದ ಸಮಾಜದಲ್ಲಿ ಅವರಿಗೆ ಗಣ್ಯವಾದ ಸ್ಥಾನವಿರುತ್ತಿತ್ತು. ಅಂದರೆ ದೇವಾಲಯದ ಪೂಜಾವೃತ್ತಿಗೆ ಬಂದ ಬ್ರಾಹ್ಮಣ ಬೇರೆ ಯಾವ ಕಾರ್ಯದಲ್ಲೂ ತೊಡಗಲು ಸಾಧ್ಯವಿರಲಿಲ್ಲ. ಉದಾಹರಣೆಗೆ ಅಧ್ಯಯನ ಕಾಲದ ತ್ರಿಕಾಲ ಪೂಜೆಯಲ್ಲಿ ತೊಡಗಿದ ಬ್ರಾಹ್ಮಣನೋರ್ವ ಸಮಾಜದ ಯಾವುದೇ ಇತರ ಅವಶ್ಯಕತೆಗಳನ್ನು ಪೂರೈಸಲು ಶಕ್ತನಾಗಿರಲಿಲ್ಲ. ಕಾರಣ ಆತ ದೇವಾಲಯದ ಕೈಂಕರ್ಯಗಳನ್ನು ಬಿಟ್ಟು ಬೇರೆ ಯಾವ ಕೈಂಕರ್ಯಗಳನ್ನು ಅನುಸರಿಸುವ ಹಾಗಿರಲಿಲ್ಲ. ಪ್ರಾಯಶಃ ಅವನು ಪುತ್ರನನ್ನು ಹೊಂದಿದ್ದರೆ ಆತನನ್ನು ದೇವಾಲಯದ ಕೈಂಕರ್ಯದಲ್ಲಿ ಬಳಸಿಕೊಂಡು ತಾನು ಸಮುದಾಯದ ಷಟ್ಕರ್ಮಗಳ ಆಚರಣೆಗೆ ತೊಡಗಿಕೊಳ್ಳಬಹುದಾದ ಸಂದರ್ಭಗಳಿರುತ್ತಿದ್ದವು. ಇವುಗಳಲ್ಲೂ ದೇವಾಲಯದ ಅರ್ಚಕ ವೃಂದ ತಮ್ಮ ನೀತಿ, ನಡವಳಿಕೆಗಳು, ಸಂಪ್ರದಾಯಗಳು ಇತ್ಯಾದಿಗಳ ಅಂಗವಾಗಿ ಮಗನು ಅನಿವಾರ್ಯವಾಗಿ ದೇವಾಲಯದಲ್ಲಿರಬೇಕಾದ ಪ್ರಸಂಗ ಒದಗುತ್ತಿತ್ತು. ದೇವಾಲಯದ ಅರ್ಚಕನು ತನ್ನ ಪೂಜಾ ಕಾಲಘಟ್ಟದಲ್ಲಿ ಸಂಪೂರ್ಣ ಬ್ರಹ್ಮಚರ್ಯ ವ್ರತದಲ್ಲಿ ಇರಬೇಕಾಗಿತ್ತು. ಅಧ್ಯಯನಗಳು ಮತ್ತು ವಿಶೇಷ ಪರ್ವಗಳಲ್ಲಿ ಆತನಿಗೆ ದೇವಾಲಯವೇ ಮನೆಯಾಗಿರುತ್ತಿತ್ತು. ಕಾರಣ ಆ ದಿನಗಳು ಆತನಿಗೆ ಗೃಹಸ್ಥಾಶ್ರಮದ ಶೂನ್ಯ ದಿನಗಳೂ ಆಗಿದ್ದವು. ಇದಲ್ಲದೆ ಆತನ ಹೆಂಡತಿ ರಜಸ್ವಲೆಯಾದ ದಿನಗಳಲ್ಲಿ ಕೂಡ ದೈವ ಕಾರ್ಯವನ್ನು ನೆರವೇರಿಸುವಂತಿರಲಿಲ್ಲ. ಅಲ್ಲದೆ ಹುಟ್ಟು, ಸಾವಿನಿಂದ ಬರುವ ಪುರುಡು ಸಾವಿನ ಸೂತಕದ ದಿನಗಳು ಪಿತೃಶ್ರಾದ್ಧ ಇತ್ಯಾದಿಗಳಲ್ಲಿ ಆತನು ದೈವಕಾರ್ಯವನ್ನು ನೆರವೇರಿಸುವಂತಿರಲಿಲ್ಲ. ಬಹುತೇಕ ಅಂದಿನ ಕಾಲಘಟ್ಟದಲ್ಲಿ ಒಟ್ಟು ಕುಟುಂಬವಾಗಿದ್ದುದರಿಂದ ಈ ಬಗೆಯ ಅಡಚಣೆಗಳು ಆಗಾಗ್ಗೆ ಬರುತ್ತಿದ್ದುದರಿಂದ ಆತನು ದೈವಕಾರ್ಯಗಳಿಗೆ ತನ್ನ ಕುಟುಂಬದವರನ್ನು ಅಥವಾ ಇತರರನ್ನು ಆಶ್ರಯಿಸಬೇಕಾಗಿತ್ತು. ಈ ಕಾರಣಗಳಿಂದಾಗಿಯೇ ದೇವಾಲಯದ ಅರ್ಚಕರ ವರ್ಗ ಭಿನ್ನವಾಗಿ ಕಾರ್ಯ ನಿರ್ವಹಿಸುತ್ತಿದ್ದರು.[೧೩]

ಷೋಡಶ ಸಂಸ್ಕಾರಗಳನ್ನು ಅನುಸರಿಸುತ್ತ ಬಂದ ಸಮಾಜದ ಬ್ರಾಹ್ಮಣ, ಕ್ಷತ್ರಿಯ ಹಾಗೂ ವೈಶ್ಯ ಆಚರಣೆಯಲ್ಲಿರುವ ವರ್ಗಗಳಲ್ಲಿ ಸವ್ಯ ಮತ್ತು ಅಪರವೆಂಬ ಎರಡು ಬಗೆಯ ಸಂಸ್ಕಾರಗಳನ್ನು ಒಬ್ಬರೇ ನೆರವೇರಿಸುವಂತಿರಲಿಲ್ಲ. ಮದುವೆ, ಮುಂಜಿ ಇತ್ಯಾದಿ ಶುಭಸಂಸ್ಕಾರಗಳನ್ನು ಯಾರು ಬೇಕಾದರೂ ನೆರವೇರಿಸಬಹುದಾದರೂ ಪಿತೃಯಜ್ಞಕ್ಕೆ ಅತ್ಯುತ್ತಮ ವಿದ್ವಾಂಸರು ಶಾಸ್ತ್ರಗಳನ್ನು ಚೆನ್ನಾಗಿ ಅರಿತವರು ಮಾತ್ರವೇ ನೆರವೇರಿಸಬೇಕೆಂಬ ನಿಯಮವೂ ಇದ್ದುದರಿಂದ ಅಪರ ಕಾರ್ಯಗಳನ್ನು ಕೆಲವೇ ಕೆಲವು ವ್ಯಕ್ತಿಗಳು ಮಾತ್ರ ನೆರವೇರಿಸುತ್ತಿದ್ದರು.[೧೪] ಹೀಗಾಗಿ ಗ್ರಾಮದ ಪೌರೋಹಿತ್ಯ ಕೆಲವೇ ಕೆಲವು ಬ್ರಾಹ್ಮಣರ ಪರಂಪರೆಯಾಗಿ ಬೆಳೆಯಿತು. ಈ ವಿವರಗಳಿಂದಾಗಿ ಎಲ್ಲ ಬ್ರಾಹ್ಮಣರು ಪುರೋಹಿತರಾಗಿರಲಿಲ್ಲ. ದೇವಾಲಯದ ಅರ್ಚಕರಾಗಿರಲಿಲ್ಲ ಅಥವಾ ಅಗ್ರಹಾರದ ವೃತ್ತಿಗಳನ್ನು ಪಡೆದವರಾಗಿರಲಿಲ್ಲ. ಇವರೆಲ್ಲರೂ ಆ ಸಮುದಾಯದ ಒಂದು

ಭಾಗವಾಗಿ ಮಾತ್ರ ಇದ್ದರು. ಉಳಿದ ಬಹುತೇಕ ಬ್ರಾಹ್ಮಣರು ಸ್ಥಾನಿಕ ಆಡಳಿತದ ವಿದ್ಯಾವಂತ ಅಥವಾ ಅಕ್ಷರವಂತನಾಗಿ ಗ್ರಾಮದ ಲೆಕ್ಕ ಇತ್ಯಾದಿಗಳನ್ನು ನಿರ್ವಹಣೆ ಮಾಡುವ ವೃತ್ತಿಯನ್ನು ಅವಲಂಬಿಸಿ ಕೆಲವೊಮ್ಮೆ ಕೆಲವೊಂದು ಶ್ರೀಮಂತ ಕುಟುಂಬದ ಕುಲಕರ್ಣಿಗಳಾಗಿ, ಕರಣಿಕರುಗಳಾಗಿ ಗ್ರಾಮದ ಆಡಳಿತಾತ್ಮಕ ವ್ಯವಸ್ಥೆಯಲ್ಲಿ ಲೇಖಕರುಗಳಾಗಿ, ಲೆಕ್ಕಿಗರಾಗಿ ಇತ್ಯಾದಿ ಹುದ್ದೆಗಳನ್ನು ಅನುಸರಿಸುತ್ತಿದ್ದರು.

ಆದರೆ ಬಹುತೇಕ ಶಾಸನಗಳಲ್ಲಿ ಕಂಡುಬರುವ ದಾನಗಳು ದೇವಾಲಯದ ಅರ್ಚಕರನ್ನು ಅಗ್ರಹಾರದ ಅರ್ಚಕರನ್ನು ಮತ್ತು ದಾನ ಪಡೆದ ಇತರ ಬ್ರಾಹ್ಮಣರನ್ನು ಮಾತ್ರ ಉಲ್ಲೇಖಿಸುವುದರಿಂದ ಎಲ್ಲ ಬ್ರಾಹ್ಮಣರು ಅತ್ಯಂತ ಶ್ರೀಮಂತ ವೈಭವದ ಜೀವನವನ್ನು ನೆರವೇರಿಸುತ್ತಿದ್ದರು ಮತ್ತು ಅವರು ಭೂಮಿಯ ಒಡೆಯರಾಗಿದ್ದರು. ಹಾಗಾಗಿಯೇ ಅವರಿಗೆ ಸಮಾಜದಲ್ಲಿ ಉನ್ನತ ಗೌರವವಿತ್ತು ಎಂಬೆಲ್ಲಾ ಭಾವನೆಗಳು ಬರುವಂತೆ ಈ ಶಾಸನಗಳ ಅಧ್ಯಯನವನ್ನು ಆಧರಿಸಿ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಆದರೆ ಈ ಶಾಸನಗಳು ಆ ಸಮುದಾಯದ ಒಂದು ಭಾಗವನ್ನು ಮಾತ್ರ ಪ್ರತಿನಿಧಿಸುತ್ತವೆ ಎಂಬ ಅಂಶವನ್ನು ಹೊರಹಾಕುವುದಿಲ್ಲ.

ಬ್ರಾಹ್ಮಣರು ಸಾಮಾನ್ಯವಾಗಿ ಅಧ್ಯಯನ, ಅಧ್ಯಾಪನ, ಯಜನ, ಯಾಜನ, ದಾನ ಮತ್ತು ಅಪರಿಗ್ರಹವೆಂಬ ಷಟ್ಕರ್ಮಗಳನ್ನು ನೆರವೇರಿಸಿಕೊಂಡು ಧರ್ಮದಲ್ಲಿ ಶ್ರದ್ಧೆಯುಳ್ಳವನಾಗಿ ಜಗದ ಸೃಷ್ಟಿಕರ್ತನಾದ ದೇವರು ಇತ್ಯಾದಿ ಅಲೌಕಿಕ ಪ್ರಪಂಚದ ಜ್ಞಾನದೆಡೆಗೆ ಅಥವಾ ತನ್ನ ಮುಕ್ತಿಯೆಡೆಗೆ ಅಧ್ಯಯನದಲ್ಲಿ ತೊಡಗಿಸಿಕೊಂಡವನನ್ನು ಬ್ರಾಹ್ಮಣನೆಂದು ಕರೆಯಬಹುದು ಮತ್ತು ಕರೆಯಲಾಗುತ್ತದೆ.[೧೨೫] ಅಧ್ಯಯನ ಕಾಲಘಟ್ಟದಲ್ಲಿನ ಅಗ್ರಹಾರಗಳ ರಚನೆ ಮತ್ತು ಅವುಗಳಲ್ಲಿನ ಬ್ರಾಹ್ಮಣರಿಗೆ ದಾನ ನೀಡಿದ ಉದ್ದೇಶಗಳನ್ನು ಗಮನಿಸುವುದಾದರೆ ಬಹುತೇಕವಾಗಿ ಅಗ್ರಹಾರಗಳು ರಚನೆಗೊಂಡಿದುದು ರಾಜನಿಗೆ ಪುಣ್ಯಪ್ರಾಪ್ತಿಯಾಗಲೆಂದು ಅಥವಾ ದಾನ ಕೊಟ್ಟ ವ್ಯಕ್ತಿಗೆ ಪುಣ್ಯಪ್ರಾಪ್ತಿಯಾಗಲೆಂದು ಅಥವಾ ದಾನ ಕೊಟ್ಟ ವ್ಯಕ್ತಿಯ ಅಥವಾ ರಾಜನ ವಂಶೋದ್ಧಾರ ವಾದುದಕ್ಕೆ ದಾನ ಕೊಟ್ಟಿದುದು; ದಾನಿಯ ಮಾತಾಪಿತೃಗಳಿಗೆ ರಾಜನ ಮಾತಾಪಿತೃಗಳಿಗೆ ಅಕ್ಷಯ ಪುಣ್ಯಲೋಕ ಪ್ರಾಪ್ತಿಯಾಗಲೆಂದು ದಾನ ಕೊಟ್ಟಿದುದನ್ನು ಮಾತ್ರ ಕಾಣುತ್ತೇವೆ.[೧೨೬] ಶೈಕ್ಷಣಿಕ ಉದ್ದೇಶಕ್ಕಾಗಿ ದಾನ ಕೊಟ್ಟ ಉದಾಹರಣೆಗಳು ಇಲ್ಲವೆನ್ನುವಷ್ಟರ ಮಟ್ಟಿಗೆ ಕಡಿಮೆ ಇವೆ. ಕುಡುತಿನಿ ಶಾಸನ ಶಿಕ್ಷಣಕ್ಕೆ ಮೀಸಲಾಗಿ ಅಗ್ರಹಾರ ರಚನೆ ಮಾಡಿದುದನ್ನು ದಾಖಲಿಸುತ್ತದೆ.[೧೨೭] ಅಗ್ರಹಾರಗಳ ರಚನೆ, ಶಿಕ್ಷಣಕ್ಕೆ ಆಯಿತೆಂದು ಸಹ ಕೆಲವು ಶಾಸನಗಳು ದಾಖಲಿಸುತ್ತವೆ.[೧೨೮]

ಈ ಕಾಲಘಟ್ಟದಲ್ಲಿ ಬ್ರಾಹ್ಮಣನು ತನ್ನ ಷಟ್ಕರ್ಮ ಪರಿಪಾಲನೆಗಾಗಿಯೂ ಸಹ ಕೆಲವು ವಿದ್ಯಾರ್ಥಿಗಳಿಗೆ ಶಿಕ್ಷಣವನ್ನು ಒದಗಿಸುತ್ತಿದ್ದನೆಂಬುದನ್ನು ಗಮನಿಸಬೇಕು. ಅಂದ ಮೇಲೆ ತನ್ನ

ಸೀಮಿತ ಹಣಕಾಸಿನ ಪರಿಮಿತಿಯಲ್ಲಿ ತನ್ನ ಮನೆಯಲ್ಲೇ ವಿದ್ಯಾರ್ಥಿಗಳನ್ನಿಟ್ಟುಕೊಂಡು ಅವರಿಗೆ ಶಿಕ್ಷಣ ನೀಡಿ ಅವರನ್ನು ಸಮಾಜದ ಗಣ್ಯ ಪ್ರಜೆಗಳನ್ನಾಗಿ ರೂಪಿಸುವ ಗುರುಕುಲ ಪದ್ಧತಿ ಈ ಕಾಲದಲ್ಲಿ ಮುಂದುವರಿದುದನ್ನು ಸಹ ಗುರುತಿಸಬಹುದು. ಹಾಗಿದ್ದ ಮೇಲೆ ಬ್ರಾಹ್ಮಣ ಶ್ರೀಮಂತನಾಗಿ ಮುಂದುವರಿದನೆಂಬ ಪರಿಕಲ್ಪನೆಯೇ ಕಷ್ಟವಾಗುತ್ತದೆ. ಪ್ರಾಯಶಃ ಕೆಲವೇ ಕೆಲವು ಬ್ರಾಹ್ಮಣ ಮನೆತನಗಳು ಯಾವು ರಾಜಾಶ್ರಯವನ್ನು ಪಡೆದಿದ್ದವೋ ಅಂತಹ ಮನೆತನಗಳ ವ್ಯಕ್ತಿಗಳು ಅಥವಾ ದಂಡನಾಯಕರಾಗಿದ್ದಂಥವರು, ಆಡಳಿತಾತ್ಮಕ ವ್ಯವಸ್ಥೆಯಲ್ಲಿ ಉನ್ನತ ಹುದ್ದೆಯಲ್ಲಿದ್ದವರು ಶ್ರೀಮಂತರಾಗಿದ್ದವರು ಮುಂದಿನ ಒಂದೆರಡು ತಲೆಮಾರುಗಳವರು ಸುಖೀ ಜೀವನ ನಡೆಸಬಹುದಾದಷ್ಟು ಉಳಿಸಿದ್ದರೆನ್ನಬಹುದು. ನಿಜ ಅರ್ಥದಲ್ಲಿ ಬ್ರಾಹ್ಮಣನಾದವನು ತನ್ನ ಷಟ್ಕರ್ಮ ಪರಿಪಾಲನೆಯನ್ನು ಮಾಡಿದರೆ ಆತನು ದ್ರವ್ಯವನ್ನಾಗಲಿ, ಆಸ್ತಿಯನ್ನಾಗಲಿ ಅಂದರೆ ಭೂಮಿಯನ್ನಾಗಲಿ ಮತ್ತಾವುದೇ ಬಗೆಯ ದಾನಗಳನ್ನಾಗಲಿ ಬೇಡುವಂತಿರಲಿಲ್ಲ; ಅದೇ ಅಪರಿಗ್ರಹ. ಬೇರೆಯವರು ಅಂದರೆ ದಾನ ಕೊಡುವವರೇ ಅರ್ಥ ಮಾಡಿಕೊಂಡು ಅರ್ಹ ಬ್ರಾಹ್ಮಣನನ್ನು ಹುಡುಕಿ ತಾನು ಕೊಡುವ ದಾನ ಆತನ ಜೀವನ ಕ್ರಮವನ್ನು ಬದಲಿಸುತ್ತದೆ ಎಂದು ಖಚಿತಪಡಿಸಿಕೊಂಡು ದಾನ ನೀಡಬೇಕಿತ್ತು. ಹಾಗೆ ದಾನ ಕೊಡುವ ವ್ಯಕ್ತಿ ಕೂಡ ಅಂದಿನ ಕಾಲದಲ್ಲಿ ಒಬ್ಬನ ಪರಂಪರೆಗೆ ಸಾಕಾಗುವಷ್ಟು ದಾನವನ್ನು ನೀಡಲಾ ಗುತ್ತಿರಲಿಲ್ಲ.

ಹೀಗಾಗಿ ಬ್ರಾಹ್ಮಣ ಸಮುದಾಯ ಸಮಾಜದ ಎಲ್ಲ ವರ್ಗಗಳ ಸಹಾಯಕನಾಗಿ ಆತನ ಧಾರ್ಮಿಕ ವಿಚಾರಗಳಿಗೆ ಪೋಷಕನಾಗಿ, ಪುರೋಹಿತನಾಗಿ, ಜ್ಯೋತಿಷಿಯಾಗಿ, ವೈದ್ಯನಾಗಿ, ಲೆಕ್ಕಿಗನಾಗಿ, ಬರಹಗಾರನಾಗಿ ಹಲವು ಪಾತ್ರಗಳನ್ನು ನಿರ್ವಹಿಸಿ ತನ್ನ ಜೀವನ ನಿರ್ವಹಣೆಯನ್ನು ನೆರವೇರಿಸುತ್ತಿದ್ದನು. ಆದರೂ ಆ ಕಾಲಘಟ್ಟದಲ್ಲಿ ಬ್ರಾಹ್ಮಣರು ತಮ್ಮ ಧಾರ್ಮಿಕ ನಿಷ್ಠೆ, ನೈತಿಕತೆ, ವಚನಶುದ್ಧತೆ, ಕರ್ತವ್ಯನಿಷ್ಠೆ, ವಿಶ್ವಾಸಾರ್ಹತೆ ಇತ್ಯಾದಿ ಗುಣಗಳನ್ನು ಬೆಳೆಸಿಕೊಂಡು ಸಮಾಜದಲ್ಲಿ ಗೌರವಯುತವಾದ ಸ್ಥಾನವನ್ನು ಪಡೆದುಕೊಂಡಿದ್ದರು.[೧೫] ಇದು ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ವರ್ಗಕ್ಕೂ ಅನ್ವಯಿಸುತ್ತದೆ. ಆದರೆ ಅವರವರ ಮನೆತನದ ಮತ್ತು ವರ್ಣದ ಆಚಾರಗಳು ವಿಭಿನ್ನವಾದುದರಿಂದ ಈ ನಾಲ್ಕೂ ವರ್ಗಗಳ ಸಹಭೋಜನವಾಗಲಿ, ಹೆಣ್ಣುಮಕ್ಕಳನ್ನು ಕೊಡುವ ಮತ್ತು ತರುವ ಸಂಪ್ರದಾಯವಾಗಲಿ ಮುಂದುವರಿಯಲಿಲ್ಲ. ಹಾಗೆಂದ ಮಾತ್ರಕ್ಕೆ ಬ್ರಾಹ್ಮಣ ಸಮಾಜ ವಿರೋಧಿಯಾಗಿದ್ದನೆಂದು ಬಿಂಬಿಸಲು ಬರುವುದಿಲ್ಲ. ಶಾಸನಗಳನ್ನು ಗಮನಿಸಿದಾಗ ಅಗ್ರಹಾರಗಳಲ್ಲಿ, ಬ್ರಹ್ಮಪುರಿಗಳಲ್ಲಿ ವಾಸಿಸುತ್ತಿದ್ದ ಬ್ರಾಹ್ಮಣರನ್ನು ಅತ್ಯಂತ ಗೌರವಯುತವಾಗಿ ಕಾಣಲಾಗುತ್ತಿತ್ತು. ಬಹುತೇಕ ಶಾಸನಗಳು ಬ್ರಾಹ್ಮಣರನ್ನು ಉಲ್ಲೇಖಿಸುವಾಗ ಅವರುಗಳಿಗಿದ್ದ ಅರ್ಹತೆಯನ್ನು ಹೀಗೆ ದಾಖಲಿಸುತ್ತದೆ.

ಯಮನಿಯಮಸ್ವಾಧ್ಯಾಯ ಧ್ಯಾನಧಾರಣ ಮೌನಾನುಷ್ಠಾಣಜಪಸಮಾಧಿಶೀಳ ಗುಣಸಂಪನ್ನರುಂ ಸುಜನಪ್ರಸನ್ನರುಂ ಚತುಃಸಮುದ್ರಮೇಖಳಾವನೀತಳ ಪ್ರಖ್ಯಾತರುಂ ದ್ವಿಜವಂಶಾವತಂಸರುಂ

ತ್ರಿಕಾಣ್ಡಮೀಮಾಂಸಾಸರೋವರರಾಜಹಂಸರುಂ ಚತುರ್ವ್ವೇದ ವೇದಾಂಗೋಪಾಂಗಾಷ್ಟಾದಶಸ್ಮೃತಿ ಪುರಾಣಾನೇಕ ಶಾಸ್ತ್ರಸಾಹಿತ್ಯಪಾರಾವಾರಪಾರಂಗತರುಂ ಪಂಚಮಹಾಯಜ್ಞ ಕ್ರಿಯಾನಿರತರುಂ ಷಟ್ಕರ್ಮ್ಮಪರರುಂ ಸಪ್ತಸೋಮಸಂಸ್ಥಾವಭ್ರಿತಾವ ಗಾಹನಪವಿತ್ರೀಕ್ರಿತ - ಶರೀರರುಮಷ್ಟಾಂಗ ಯೋಗಪ್ರಯೋಗರುಂ ನವಸೂತ್ರ ವಿರಾಜಮಾನವಿ ಶಾಳೋರಸ್ಕರುಂ ದಶದಿಶಾಧವಳಿತ ಮಹಾಯಶಸ್ಕರುಂ ಚತುರ್ದ್ದಶವಿದ್ಯಾ ಪಾರಗರುಂ ದ್ವಾತ್ರಿಂಶತುಸಹಸ್ರಸಮಯಾಗ್ರಗಣ್ಯರುಮನವರತ ಸಮುಪಾರ್ಜ್ಜಿತಪುಣ್ಯರುಂ....[೧೩೦].

ಕುರುವತ್ತಿಯ ಮಹಾಜನರು: ಸ್ವಸ್ತಿಯ ಮನಿಯಮಸ್ವಾಧ್ಯಾಯಧ್ಯಾನಧಾರಣ ಜಪಸಮಾಧಿಶೀಲ ಸಂಪನ್ನರು ಸುಜನಪ್ರಸನ್ನರು ಅತಿಪವಿತ್ರನಿಜಗೋತ್ರಶತಪತ್ರಮಿತ್ರರು ಮನುಮುನಿಚರಿತ್ರರು ಶ್ರುತಿಸ್ಮೃತೀತಿಹಾಸ ಪರಾಶರಾದಿಮುನಿಪ್ರಣೀತ ಪುರಾಣಸಂದರ್ಭ್ಭಶರಣರು ಬ್ರಾಹ್ಮಧರ್ಮ್ಮ ಸಮುದ್ಧರಣರು ಮೀಮಾಂಸಾದಿಶಾಸ್ತ್ರಪಾರಾವಾರಪಾರೋತ್ತರಣಧುರ್ಯ್ಯರು ಅಚಲಿತಧೈರ್ಯ್ಯರು ದೀನಾಭಿಜನಮನೀಷಿಮಾನವನಿಯಕಾಯ ಶುಕಕುಳಫಲಿತಸಹಕಾರರು ಶರಣಾಗತವಜ್ರಪ್ರಾಕಾರರು ಅಗಣಿತಗುಣಗಣದ್ವಿಗುಣಿತಯಶಃಪ್ಪಟಿಲಪಾಂಡು ರಿತದಿಗ್ವೇದಂಡರು ಕದನಪ್ರಚಂಡರು ಕಲಿಕಾಲಖಳ ಪ್ರಭಾವಾಭಿಭೂತ ಭೀತಿಧಾವಿತಧರ್ಮ್ಮಸಮುದ್ಧರಣಧೌರೇಯರು ಸತ್ಯರಾಧೇಯರು.....[೧೩೧].

ಇಷ್ಟೇ ಅಲ್ಲದೆ ಅಂದಿನ ಬ್ರಾಹ್ಮಣರುಗಳು ಅನೇಕ ಕೈಂಕರ್ಯಗಳನ್ನು ನೆರವೇರಿಸಲೇ ಬೇಕಾಗಿದ್ದಿತು. ಬ್ರಾಹ್ಮಣರು ಅಥವಾ ಮಹಾಜನರು ದೇವಾಲಯಕ್ಕೆ ದಾನಿಗಳು ನೀಡಿದ ದಾನವನ್ನು ಸರಿಯಾಗಿ ನಿರ್ವಹಣೆ ಮಾಡಬೇಕಾಗಿತ್ತು. ದೇವಾಲಯದ/ಮಠದ ತಪೋಧನರು, ನೈಷ್ಠಿಕ ಬ್ರಹ್ಮಚಾರಿಗಳು, ವಿದ್ಯಾರ್ಥಿಗಳು ಮಾಣಿಗಳು ತಮ್ಮ ವೃತ್ತಿ ಸಂಬಂಧದ ಆಚರಣೆಗಳನ್ನು ನಿಖರವಾಗಿ ಆಚರಿಸುತ್ತಿರುವುದನ್ನು ನಿತ್ಯವೂ ಗಮನಿಸುವ, ನಿಯಮಗಳನ್ನು ಮುರಿದಾಗ ಅವರನ್ನು ಶಿಕ್ಷಿಸುವ ಅಥವಾ ಗುರುತರವಾದ ತಪ್ಪನ್ನು ಮಾಡಿದಾಗ ಅಂತಹವರನ್ನು ಆಯಾ ಸ್ಥಾನಗಳಿಂದ ಉಚ್ಚಾಟಿಸಿ ಸೂಕ್ತ ವ್ಯಕ್ತಿಗಳನ್ನು ಅಲ್ಲಿ ಕೆಲಸಕ್ಕೆ ನಿಯೋಜಿಸುವ ಅಧಿಕಾರ ಉಳ್ಳವರಾಗಿದ್ದರು. ಬಹುತೇಕ ಮಹಾರಾಜರುಗಳು ದೇವಾಲಯದ ಮತ್ತು ಅಗ್ರಹಾರದ ಅಭಿವೃದ್ಧಿಗಾಗಿ ಬಂಡವಾಳ ಹಾಕಿ, ಕೆರೆ ಕಟ್ಟಿಸಿ, ಕಾಲುವೆಗಳನ್ನು ತೋಡಿಸಿ ವ್ಯವಸಾಯಕ್ಕೆ ಉತ್ತೇಜನ ನೀಡಿ ದೇವಾಲಯವನ್ನು ಅಭಿವೃದ್ಧಿಪಡಿಸುವುದರ ಜೊತೆಗೆ ತಮ್ಮ ಷಟ್ಕರ್ಮದ ಅಂಗವಾಗಿ ಅಧ್ಯಯನ, ಅಧ್ಯಾಪನ, ಯಜನ, ಯಾಜನ, ದಾನ ಈ ಅಪರಿಗ್ರಹ ಮುಂತಾದ ಕೈಂಕರ್ಯಗಳನ್ನು ನೆರವೇರಿಸಲೇ ಬೇಕಾಗಿದ್ದಿತು. ಇವರುಗಳು ಶೀಲಕ್ಕೆ ಅತ್ಯುತ್ತಮ ನಡೆನುಡಿಗೆ ಸಂಸ್ಕಾರಕ್ಕೆ ಮತ್ತು ಸ್ವಅಧ್ಯಾಯ ಮತ್ತು ಅಧ್ಯಾಪನಕ್ಕೆ ಹೆಸರಾಗಿದ್ದುದರಿಂದ ಆಡಳಿತಾತ್ಮಕ ವ್ಯವಸ್ಥೆಯ ಅನೇಕ ಅಧಿಕಾರಿಗಳಿಗೆ ಮಾರ್ಗದರ್ಶಕರಾಗಿಯೂ ಕಾರ್ಯನಿರ್ವಹಿಸುತ್ತಿದ್ದರು.[೧೩೨]

ಈ ಮೇಲಿನ ಶಾಸನಗಳಲ್ಲಿ ಕೆಲವು ಬ್ರಾಹ್ಮಣ ಸಮುದಾಯಕ್ಕೆ ಸೇರಿದ ಮಹಾಮಾಂಡಲೀಕರ ಹೆಸರುಗಳು ಉಲ್ಲೇಖವಾಗುವುದರಿಂದ ಬ್ರಾಹ್ಮಣರು ಕೇವಲ ವೇದ ವೇದಾಂಗಗಳನ್ನು ಕಲಿತು

ಮುಕ್ತಿ ಸಾಧನೆಗಾಗಿ ತಮ್ಮ ಜೀವನವನ್ನು ತೊಡಗಿಸಿಕೊಳ್ಳುತ್ತಿದ್ದಂತೆ ಲೌಕಿಕ ವಿದ್ಯೆಗಳನ್ನು ಕಲಿತು ಕ್ಷಾತ್ರ ವೃತ್ತಿಯನ್ನು ಅನುಸರಿಸಿ ಉತ್ತಮ ಆಡಳಿತಗಾರರಾಗಿ ಕೂಡ ಹೆಸರು ಮಾಡಿದ್ದನ್ನು ಶಾಸನಗಳು ಅಲ್ಲಲ್ಲಿ ದಾಖಲಿಸುತ್ತವೆ. ನೊಳಂಬವಾಡಿ ೩೨೦೦೦ ಪ್ರದೇಶದ ಬ್ರಾಹ್ಮಣ ಸಮುದಾಯವು ಪಾಂಡ್ಯ ಆಡಳಿತದಲ್ಲಿ ಗಾವುಂಡ, ಊರೊಡೆಯ, ಸೇನಾಧಿಪತಿ, ದಂಡನಾಯಕ, ಪ್ರಚಂಡ ದಂಡನಾಯಕ, ಸಂಧಿವಿಗ್ರಹಿ ಮಹಾಪ್ರಧಾನರಂತಹ ಹುದ್ದೆಗಳಲ್ಲೂ ಕಾರ್ಯ ನಿರ್ವಹಿಸಿದ್ದರು. ಬ್ರಾಹ್ಮಣರು ಕೇವಲ ನಿಂತ ನೀರಾಗಿರದೆ ಧಾರ್ಮಿಕಾಚರಣೆಗೆ ಸೀಮಿತವಾಗಿರದೆ ಸಾಮಾಜಿಕ, ಆಡಳಿತಾತ್ಮಕ ಮತ್ತು ರಕ್ಷಣಾ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಅತಿಹೆಚ್ಚು ಗಣ್ಯ ಕಾರ್ಯಗಳನ್ನು ನೆರವೇರಿಸಿದ್ದರೆಂಬುದನ್ನು ಶಾಸನಗಳು ಖಚಿತಪಡಿಸುತ್ತವೆ.

ಶೂರ ಸೇನಾಧಿಪತಿ ರವಿಗ ಮಹಾಪ್ರಧಾನ ದಂಡನಾಯಕನಾಗಿ ಮನುಮಾರ್ಗ ಚರಿತ ಋಗ್ವೇದರತ್ನಾಕರೆನೆನಿಸಿಕೊಂಡಿದ್ದನು.[೧೩೩] ಸೋಮೇಶ್ವರ ಭಟ್ಟೋಪಾಧ್ಯಾಯರು ಮಹಾಪ್ರಧಾನ ದಂಡನಾಯಕರಾಗಿ ಅವರೂ ಕೂಡ ಮನುಮಾರ್ಗಚರಿತ ಋಗ್ವೇದರತ್ನಾಕರರೆನಿಸಿಕೊಂಡಿದ್ದನ್ನು ಶಾಸನ ಹೇಳುತ್ತದೆ.[೧೩೪] ಸೋಮೇಶ್ವರ ಭಟ್ಟೋಪಾಧ್ಯಾಯರ ಮೈದುನ ಅಚ್ಚುಪನ್ನಾಯದ ದಂಡನಾಯಕ ಮಹಾವಿಷ್ಣು ಅರಸ ಕೂಡ ಸೇನಾನಾಯಕನಾಗಿದ್ದನು.[೧೩೫] ಇವರಲ್ಲದೆ ಮಹಾಪ್ರಧಾನ ರಾಗಿದ್ದ ಸಾಯಿದೇವ, ಆತನ ಮಗ ರೇಚಿರಾಜ, ಮಂತ್ರಿಚೂಡಾಮಣಿ ಎನಿಸಿದ್ದ ಆಚರಸನ ಮಗ ಬೀಚಿರಾಜ ಮುಂತಾದ ಬ್ರಾಹ್ಮಣರುಗಳ ಹೆಸರು ಶಾಸನಗಳಲ್ಲಿ ಉಲ್ಲೇಖಿತವಾಗಿವೆ.[೧೩೬]

ಈ ಪ್ರದೇಶದ ಶಾಸನಗಳಲ್ಲಿ ಅನೇಕ ವಿದ್ಯಾವಂತ ಭಟ್ಟರುಗಳ ಅಥವಾ ಬ್ರಾಹ್ಮಣರುಗಳ ಹೆಸರು ಕಂಡುಬರುತ್ತದೆ. ಕುಡಿತಿನಿ, ಕುರುವತ್ತಿ, ಬಾಗಳಿ, ಬೆಣ್ಣೆಹಳ್ಳಿಗಳಲ್ಲಿ ಇದ್ದ ಬ್ರಹ್ಮಪುರಿಗಳಲ್ಲಿ ವಾಸಿಸುತ್ತಿದ್ದ ಹನ್ನೆರಡು ಜನ ಬ್ರಾಹ್ಮಣರ ಹೆಸರನ್ನು ಬೆಣ್ಣೆಹಳ್ಳಿ ಶಾಸನವು ಯಮನಿಯಮಸ್ವಾಧ್ಯಾಯ ಧ್ಯಾನಧಾರಣ ಮೋನಾನುಷ್ಟಾನ ಜಪಸಮಾಧಿಶೀಲಾದ್ಯನೇಕ ಗುಣಸಂಪನ್ನರುಂ ಅವುಪಾಸನಾಗ್ನಿ ಹೋತ್ರ ದ್ವಿಜಗುರು ಪೂಜಾತತ್ಪರರುಂ ಮಾರ್ತ್ತಣ್ಡೋಜ್ಜ್ವಳಕೀರ್ತ ಶಾಸ್ತ್ರವಿಶಾರದರುಮಪ್ಪ'ರಾದ ಕಾಶ್ಯಪಗೋತ್ರದಶಿವದೇವ, ಘಟ್ಟಿವರ್ದ್ಧನ, ಕೇಸವಘೈಸ್ಸ, ಆದಿತ್ಯಭಟ್ಟ, ದಣ್ಣಾಯಕರಳಿಯ ದಾಶ್ಯಣಭಟ್ಟ, ಶಿವದೇವಪುತ್ರಲಕ್ಷ್ಮಭಟ್ಟ, ಭಾರದ್ವಜಗೋತ್ರದ ಗೋವಿಂದಭಟ್ಟ, ದೇವಣಭಟ್ಟನಾಚ್ಚಣಭಟ್ಟ, ಶ್ರೀವತ್ಸಗೋತ್ರದ ಬಸವಣಭಟ್ಟ, ವಿಶ್ವಾಮಿತ್ರಗೋತ್ರದ ಶ್ರೀಧರಭಟ್ಟ ಮತ್ತು ಮೋನಭಾರ್ಗ್ಗವಗೋತ್ರದ ಈಶ್ವರಘೈಸ್ಸರು. ಕುರುಗೋಡು ಶಾಸನ ಬ್ರಾಹ್ಮಣರ ಓಣಿ ತರ್ಕ ಶಾಸ್ತ್ರಗಳ ವಿವಾದಗಳಿಂದಲೂ, ವೇದಮಂತ್ರಗಳ ಶಬ್ದದಿಂದಲೂ ಹೋಮಾದಿಗಳ ಧೂಮದಿಂದಲೂ ಶೋಭಿಸುತ್ತಿತ್ತೆಂದು ಹೇಳಿದೆ.[೧೩೭]

### ಕ್ಷತ್ರಿಯರು ಅಥವಾ ಆಡಳಿತ ವರ್ಗ

ಭಾರತದ ಕ್ಷತ್ರಿಯರ ಮೂಲವನ್ನು ಹುಡುಕುತ್ತ ರಾಮಾಯಣದ ರಾಮನು ಮತ್ತು ಮಹಾಭಾರತ ಕಾಲದ ಯಾದವ ವಂಶಸ್ಥರು ಕುರು ಪಾಂಚಾಲರು ಮಹಾವೀರನ ವಂಶಸ್ಥರು, ಗೌತಮಬುದ್ಧನ ವಂಶಸ್ಥರು; ಇತ್ಯಾದಿ ವರ್ಗಗಳು ಕ್ಷತ್ರಿಯ ವರ್ಗಗಳಾಗಿದ್ದವೆಂದು ತಿಳಿದುಬರುತ್ತದೆ. ಆದರೆ ಶಾಸನಗಳ ಉಲ್ಲೇಖಗಳನ್ನು ಗಮನಿಸುವುದಾದರೆ ಕರ್ನಾಟಕವನ್ನು ಆಳಿದ ಅತಿಪ್ರಾಚೀನ

ರಾಜಮನೆತನ ಶಾತವಾಹನರು ತಮ್ಮನ್ನು ವೈದಿಕ ಸಂಪ್ರದಾಯಸ್ಥರೆಂದು ಬ್ರಾಹ್ಮಣೋದ್ಧಾರಕರೆಂದು ಗುರುತಿಸಿಕೊಳ್ಳುತ್ತಾರೆ.

ಇತ್ತೀಚಿನ ಅಧ್ಯಯನಗಳನ್ನಾಧರಿಸಿ ಹೇಳುವುದಾದರೆ ವೇದ ಕಾಲ ಮತ್ತು ವೇದೋತ್ತರ ಸಮಾಜದಲ್ಲಿ ಮಹಾಕಾವ್ಯಗಳು ಹಾಗೂ ಪುರಾಣಗಳ ಕಾಲಘಟ್ಟದಲ್ಲಿ ಆಯಾ ಕೃತಿಗಳಲ್ಲಿ ಉಲ್ಲೇಖವಾಗಿರುವಂತೆ ಕ್ಷತ್ರಿಯ ವರ್ಗ ಒಂದು ವಿಶಿಷ್ಟ ಗೋತ್ರಸೂತ್ರವನ್ನು ಅನುಸರಿಸುತ್ತಿತ್ತೆಂದು ಮತ್ತು ಅದೇ ಪರಂಪರೆ ಭಾರತದ ಎಲ್ಲ ಆಡಳಿತಾತ್ಮಕ ವರ್ಗವಾದ ಕ್ಷತ್ರಿಯ ಪರಂಪರೆಯಲ್ಲಿ ಮುಂದುವರಿಯಿತೆಂಬ ಹೇಳಿಕೆಯನ್ನು ಒಪ್ಪಲು ಸಾಧ್ಯವಿಲ್ಲದ ಮಟ್ಟಿಗೆ ಮಾಹಿತಿಗಳು ದೊರಕುತ್ತಿವೆ.

ಪ್ರಾಚೀನ ಮತ್ತು ಮಧ್ಯಕಾಲೀನ ರಾಜಮನೆತನಗಳ ಅರಸರುಗಳು ರಾಜಸೂಯ, ಅಶ್ವಮೇಧಯಾಗ ಮುಂತಾದ ಯಾಗಗಳನ್ನು ಆಚರಿಸಿದವರೆಂದು ಗುರುತಿಸಿಕೊಳ್ಳುತ್ತಾರೆ. ಕದಂಬ ವಂಶದ ಮೂಲಪುರುಷ ಬ್ರಾಹ್ಮಣನಾಗಿದ್ದ ಮಯೂರ ಶರ್ಮ, ಮಯೂರ ವರ್ಮನಾದುದನ್ನು ತಾಳಗುಂದದ ಶಾಸನ ಖಚಿತವಾಗಿ ದಾಖಲಿಸುತ್ತದೆ. ಬಾದಾಮಿ ಚಾಳುಕ್ಯರ ಶಾಸನಗಳಲ್ಲಿ ಉಲ್ಲೇಖವಾಗಿರುವ ಪೌರಾಣಿಕ ಕಥೆಯನ್ನು ಗಮನಿಸುವುದಾದರೆ ಹಾರೀತಿ ಮುನಿಯ ಮಾನಸ ಪುತ್ರನೇ ಚಾಳುಕ್ಯ ವಂಶದ ಮೂಲ ಪುರುಷ. ಈ ಹಿನ್ನೆಲೆಯಲ್ಲಿಯೂ ಕಲ್ಯಾಣಿ ಚಾಳುಕ್ಯರು ಮತ್ತು ಬಾದಾಮಿ ಚಾಳುಕ್ಯರು ಋಷಿ ಗೋತ್ರದವರಾಗುತ್ತಾರೆ. ಹೊಯ್ಸಳರು ತಮ್ಮನ್ನು ದ್ವಾರಾವತಿ ಪ್ರವರಾಧೀಶ್ವರ ಯದುಕುಲ ತಿಲಕ ಇತ್ಯಾದಿ ಹೆಸರುಗಳಿಂದ ಕರೆಸಿಕೊಂಡು ತಮ್ಮನ್ನು ಮಹಾಭಾರತದ ಯಾದವ ಕುಲದೊಂದಿಗೆ ಸಮೀಕರಿಸಿಕೊಳ್ಳುತ್ತಾರೆ. ಪಾಂಡ್ಯರ ಮೂಲವನ್ನು ಗಮನಿಸಿದರೆ ಅವರೂ ಕೂಡ ಯಾದವ ಕುಲದವರು ಎಂದು ಹೇಳಿಕೊಳ್ಳುತ್ತಾನೆ. ಹೀಗಾಗಿ ದಕ್ಷಿಣ ಭಾರತದಲ್ಲಿ ರಾಜ್ಯವಾಳಿದ ಬಹುತೇಕ ರಾಜಮನೆತನಗಳು ಕ್ಷತ್ರಿಯ ರಾಜಮನೆತನವಾಗಿರಲಿಲ್ಲ. ಬದಲಿಗೆ ಇವು ಸ್ಥಾನಿಕ ಸಮುದಾಯದಿಂದಲೇ ಬೆಳೆದುಬಂದ ಪರಂಪರೆಯೆಂದು ಗುರುತಿಸಲಾಗಿದೆ.[೧೩೮] ಇದರ ಬಗ್ಗೆ ಚಾಳುಕ್ಯರ ಮೂಲದಿಂದ ಆರಂಭ ಮಾಡಿ ಅಧ್ಯಯನ ಕಾಲಘಟ್ಟದ ಪಾಂಡ್ಯರ ಮೂಲದವರೆಗೆ ಎಲ್ಲ ಅಧ್ಯಯನಗಳು ಅವರ ಶಾಸನಗಳಲ್ಲಿ ಅವರು ಕರೆದುಕೊಳ್ಳುವ ಗೋತ್ರ, ಸೂತ್ರಗಳಿಗೆ ಅವರು ಬದ್ಧರಾಗಿರಲಿಲ್ಲ. ಬದಲಿಗೆ ಅವರುಗಳಿಗೆ ಆ ಗೋತ್ರ ಸೂತ್ರಗಳನ್ನು ಆರೋಪಿಸಲಾಗಿದೆಯೆಂದು ಇತಿಹಾಸ ವಿದ್ವಾಂಸರುಗಳು ತಮ್ಮ ಸುದೀರ್ಘ ಅಧ್ಯಯನಗಳಲ್ಲಿ ಕಂಡುಕೊಂಡಿರುವುದರಿಂದ ಮಧ್ಯಯುಗೀನ ಇತಿಹಾಸ ಕಾಲಘಟ್ಟದಲ್ಲಿಯೂ ಕ್ಷತ್ರಿಯ ವರ್ಗ ಅಥವಾ ವರ್ಣ ತನ್ನ ಅಸ್ತಿತ್ವವನ್ನು ಕಳೆದುಕೊಂಡಿತೆಂದು ಭಾವಿಸಬೇಕಾಗುತ್ತದೆ.

ಆಡಳಿತಾತ್ಮಕ ವ್ಯವಸ್ಥೆಯಲ್ಲಿ ಅಂದಿನ ಕಾಲಘಟ್ಟದಲ್ಲಿ ಜೈನ, ಬ್ರಾಹ್ಮಣ ವರ್ಗದವರು, ವೈಶ್ಯ ಮತ್ತು ಶೂದ್ರ/ಶ್ರಮಿಕ ವರ್ಗದವರು ಇದ್ದುದನ್ನು ಕಾಣುತ್ತೇವೆ. ಬಹುತೇಕವಾಗಿ ನೊಳಂಬವಾಡಿ ೩೨೦೦೦ ಪ್ರದೇಶದಲ್ಲಿ ಸ್ಥಾನಿಕ ಆಡಳಿತದಲ್ಲಿ ತೊಡಗಿಕೊಂಡವರು ಎಲ್ಲರೂ ಇತರ ವರ್ಗದವರು ಮತ್ತು ಶೂದ್ರವರ್ಗದವರೇ.[೧೩೯] ಹಾಗೆಂದ ಮಾತ್ರಕ್ಕೆ ಆತನಿಗೆ ಆಡಳಿತ

ನಿರ್ವಹಣೆಯಲ್ಲಿ ಜ್ಞಾನವಿರಲಿಲ್ಲವೆಂದು ಭಾವಿಸಕೂಡದು. ಒಬ್ಬ ವ್ಯಕ್ತಿ ಯಾವುದೇ ವರ್ಗದಿಂದ ಬಂದಿದ್ದರೂ ಆತನು ತನ್ನ ಬುದ್ಧಿಮತ್ತೆಯನ್ನು ಬಳಸಿ ಹೇಗೆ ಆಡಳಿತಾತ್ಮಕ ವ್ಯವಸ್ಥೆಗಳಲ್ಲಿ ತೊಡಗಿಕೊಳ್ಳುತ್ತಾನೆಂಬುದನ್ನು ಆಧರಿಸಿ ಆತನ ಶ್ರೇಷ್ಠತೆ ಮತ್ತು ಕನಿಷ್ಠತೆಗಳನ್ನು ಗುರುತಿಸಬೇಕೆ ಹೊರತು ಕೇವಲ ಆತನ ಹುಟ್ಟಿನಿಂದಲ್ಲ. ಈ ಹಿನ್ನೆಲೆಯಲ್ಲಿ ನೋಡಿದಾಗ ಆಡಳಿತಾತ್ಮಕ ವರ್ಗದಲ್ಲಿ ಎರಡೂ ಕಾಲಘಟ್ಟಗಳಲ್ಲಿ ನೊಳಂಬವಾಡಿನಾಡಿನಲ್ಲಿ ಜೈನರು, ಬ್ರಾಹ್ಮಣರು ಮತ್ತು ಶೂದ್ರರು ಅಪರೂಪಕ್ಕೆ ವೈಶ್ಯರು ತೊಡಗಿಸಿಕೊಂಡಿದುದನ್ನು ಶಾಸನಗಳು ಸ್ಪಷ್ಟಪಡಿಸುತ್ತವೆ. ಬಹುತೇಕ ಪಟ್ಟಣಶೆಟ್ಟಿಗಳು ವೈಶ್ಯ ವರ್ಗದವರಾಗಿದ್ದು ಅವರು ಸ್ಥಾನಿಕ ಆಡಳಿತದಲ್ಲಿ ಹೆಚ್ಚಾಗಿ ತೊಡಗಿಕೊಂಡಿದ್ದರು.

**ವೈಶ್ಯ ವರ್ಗ**

ಮಧ್ಯಕಾಲೀನ ಯುಗದ ಆಂತರಿಕ ವ್ಯಾಪಾರ ಮತ್ತು ಇತರ ವ್ಯಾಪಾರಗಳನ್ನು ವೈಶ್ಯರು ನಿರ್ವಹಿಸುತ್ತಿದ್ದಂತೆ ಕಂಡುಬರುತ್ತದೆ. ಪಟ್ಟಣಗಳ ಮುಖ್ಯಸ್ಥನನ್ನು ಪಟ್ಟಣಶೆಟ್ಟಿಯೆಂದು ಆತನು ಆ ಪಟ್ಟಣದ ಇಡೀ ವ್ಯವಸ್ಥೆಯನ್ನು ನಿರ್ವಹಿಸುತ್ತಿದ್ದನೆಂದು ಕಲ್ಯಾಣದ ಚಾಳುಕ್ಯರು, ಪಾಂಡ್ಯರು, ಹೊಯ್ಸಳರ ಕಾಲದ ಶಾಸನಗಳು ಖಚಿಪಡಿಸುತ್ತವೆ.[೧೪೦] ಪಟ್ಟಣಶೆಟ್ಟಿಯು ಆ ಗ್ರಾಮದ ಎಲ್ಲ ಆರ್ಥಿಕ ವ್ಯವಸ್ಥೆಯ ಮತ್ತು ಆಡಳಿತಾತ್ಮಕ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಿದ್ದನು. ಇದು ಒಂದು ರೀತಿ ಸಾಮಾಜಿಕ ಸೇವೆಯಾಗಿ ಪ್ರಾರಂಭವಾಗಿ ನಂತರ ಆಡಳಿತಾತ್ಮಕ ವ್ಯವಸ್ಥೆಯಾಗಿ ಪರಿವರ್ತಿತವಾಯಿತು. ನಗರಗಳ ಬೆಳವಣಿಗೆಯ ಹಿನ್ನೆಲೆಯನ್ನು ಗುರುತಿಸುವಾಗ ಪಟ್ಟಣಶೆಟ್ಟಿಗಳು ಪಟ್ಟಣವನ್ನು ಅಥವ ಒಂದು ಸಂತೆಯನ್ನು ಆಯೋಜಿಸುವ ಹಕ್ಕನ್ನು ಪಡೆದು ನಂತರ ಆ ಸಂತೆ ನೆರವೇರುತ್ತಿದ್ದ ಪಕ್ಕದ ಗ್ರಾಮ ನಿಧಾನವಾಗಿ ಒಂದು ವ್ಯಾಪಾರಿ ಕೇಂದ್ರವಾಗಿ ನಂತರ ದೊಡ್ಡ ಪಟ್ಟಣವಾಗಿ ಬೆಳವಣಿಗೆ ಹೊಂದುತ್ತಿದ್ದವು.[೧೪೧] ಹೀಗೆ ಪಟ್ಟಣಗಳ ಮೂಲ ಬೆಳವಣಿಗೆಗೆ ಕಾರಣರಾದವರು ವೈಶ್ಯ ವರ್ಗದವರು.

ನೊಳಂಬವಾಡಿ ಪ್ರದೇಶದ ವ್ಯಾಪಾರಿಗಳ ಹೆಸರುಗಳನ್ನು ಉಲ್ಲೇಖಿಸುವಾಗ ಮಲಯಾಳೀ ವಡ್ಡ ವ್ಯವಹಾರಿಗಳ ಹೆಸರುಗಳು ಅನೇಕ ಶಾಸನಗಳಲ್ಲಿ ಉಲ್ಲೇಖವಾಗುತ್ತದೆ.[೧೪೨] ಪ್ರಾರಂಭದಲ್ಲಿ ಇವರು ಕೆಲವೊಂದು ವಸ್ತುಗಳಿಗೆ ಮಾತ್ರ ತಮ್ಮ ವ್ಯಾಪಾರವನ್ನು ಸೀಮಿತವಾಗಿರಿಸಿಕೊಂಡು ಆನಂತರ ಸಣ್ಣ ವ್ಯಾಪಾರಿಗಳು ಎಲ್ಲ ಬಗೆಯ ವಸ್ತುಗಳನ್ನು ವ್ಯಾಪಾರ ಮಾಡಲು ಪ್ರಾರಂಭಿಸಿದರು. ಹೀಗಾಗಿ ಸಣ್ಣ ಪಟ್ಟಣಗಳು ಮತ್ತು ದೊಡ್ಡ ಗ್ರಾಮಗಳ ಪಕ್ಕದಲ್ಲಿಯೇ ಸಂತೆ ನೆರವೇರಲು ಪ್ರಾರಂಭವಾದುದರಿಂದ ಮತ್ತು ನಿಧಾನವಾಗಿ ಸಗಟು ಮತ್ತು ಚಿಲ್ಲರೆ ವ್ಯಾಪಾರ ಗ್ರಾಮದಲ್ಲಿ ಬೇರೂರಿದ್ದರಿಂದ ಆ ಗ್ರಾಮಗಳು ಪಟ್ಟಣಗಳಾಗಿ ನಂತರ ಮಹಾನಗರಗಳಾಗಿ ಬೆಳವಣಿಗೆ ಹೊಂದಿದುದನ್ನು ಕಾಣಬಹುದು. ಈ ವ್ಯವಸ್ಥೆಯಲ್ಲಿ ಯಾವ ವರ್ಗವು ತನ್ನ ಪ್ರತಿಷ್ಠೆಯನ್ನು ಮರೆಯದೆ ನಗರದ ಬೆಳವಣಿಗೆಗೆ ಅವಶ್ಯಕವಾದ ಎಲ್ಲ ವ್ಯವಸ್ಥೆಯಲ್ಲಿಯೂ ತನ್ನ ಕೊಡುಗೆಯನ್ನು

ನೀಡಿವೆ. ವೈಶ್ಯ ಸಮುದಾಯ ಮತ್ತು ಎಲ್ಲ ಸಮುದಾಯಗಳು ಅಲ್ಲಿ ನೆಲೆಸಿ ಒಂದು ಗ್ರಾಮವನ್ನು ಪಟ್ಟಣವನ್ನಾಗಿ ಪರಿವರ್ತಿಸಿದವು.[೧೪೩] ಆದರೆ ವೈಶ್ಯರು ವ್ಯಾಪಾರದ ಬೆನ್ನೆಲುಬಾಗಿ ನಿಂತು ತಮ್ಮ ವೃತ್ತಿಯನ್ನು ಮತ್ತು ಪ್ರವೃತ್ತಿಯನ್ನು ಏಕೀಕರಿಸಿ ಜೀವನ ನಿರ್ವಹಣೆಗೆ ಮುಂದುವರಿದರು. ಉಚ್ಚಂಗಿದುರ್ಗವು ಆ ಕಾಲದ ಅತಿದೊಡ್ಡ ಪಟ್ಟಣವಾಗಿತ್ತೆಂದು ತಿಳಿದುಬರುತ್ತದೆ. ಹಾಗಲ್ಲದೆ ಬಾಗಳಿ, ಕುರುಗೋಡು, ನೀಲಗುಂದ, ದುಗ್ಗವತ್ತಿ, ಹನಸಿ, ಕೋಗಳಿ, ಹಡಗಲಿ, ಹೊಳಗುಂದಿ, ಚಿತ್ರದುರ್ಗ, ಹೊಳಲ್ಕೆರೆ, ಹರಿಹರ, ಬೆತ್ತೂರು, ಅಸಗೋಡು, ಕೊಟ್ಟೂರು ಮುಂತಾದ ನಗರಗಳು ಮಹಾ ಅಗ್ರಹಾರಗಳಾಗಿ ಮತ್ತು ದೊಡ್ಡ ವ್ಯಾಪಾರಿ ಕೇಂದ್ರಗಳಾಗಿ ಕಾರ್ಯನಿರ್ವಹಿಸಿವೆ.

ವೈಶ್ಯ ಸಮುದಾಯದ ರಕ್ಷಣೆ ಅಂದಿನ ಆಡಳಿತಗಾರರ ಕರ್ತವ್ಯವಾಗಿದ್ದಂತೆ ಅಂದಿನ ಆಡಳಿತಗಾರರ ಆರ್ಥಿಕ ಸಂಪನ್ಮೂಲಗಳನ್ನು ವೃದ್ಧಿಸುವುದು ವೈಶ್ಯರ ಕರ್ತವ್ಯವಾಗಿತ್ತು. ಹೀಗಾಗಿ ರಾಜನಿಗೆ ಶಿಷ್ಟ ಪರಿಪಾಲನೆ ದುಷ್ಟನಿಗ್ರಹ ಧರ್ಮದಡಿಯಲ್ಲಿ ಶ್ರೀಮಂತವಾಗಿದ್ದ ವರ್ತಕ ಸಮುದಾಯವು ಕ್ಷತ್ರಿಯರಿಗೆ ಬೆಂಬಲಿಗರಾಗಿ ನಿಂತುಕೊಂಡರು. ಕ್ಷತ್ರಿಯರು ವೈಶ್ಯರಿಗೆ ಬೆಂಬಲವಾಗಿ ನಿಂತರು. ಶಾಸನಗಳನ್ನು ಗಮನಿಸಿದಾಗ ಕೆಲವು ಶಾಸನಗಳಲ್ಲಿ ಮಲೆಯಾಳಿ ವಡ್ಡವ್ಯವಹಾರಿಗಳು,[೧೪೪] ಐಹೊಳೆ ೫೦೦ ವರ್ತಕ ಸಂಘ,[೧೪೫] ನಖರ ವರ್ತಕ ಸಂಘ[೧೪೬] ಮತ್ತು ಅನೇಕ ಶ್ರೇಷ್ಠಿಗಳ ಗುಂಪನ್ನು ಕಾಣಬಹುದು. ನಾನಾ ದೇಸಿಗಳು, ಸೆಟ್ಟಿಗುತ್ತರು, ಉಗುರಮುನೂರ್ವರು, ಉಳಿಯ ಮುನೂರ್ವರು, ತುಂಬುಲಿಗ ಸಾಸಿರ್ವರು, ಐವ ದಿಂಬರು, ಎಲೆಬೋಜಂಗರ ಉಲ್ಲೇಖಗಳು ಈ ಪ್ರದೇಶದ ಶಾಸನಗಳಲ್ಲಿ ಕಂಡುಬರುತ್ತವೆ. ಹೀಗಾಗಿ ವ್ಯಾಪಾರ ವಹಿವಾಟು ವರ್ತಕ ಸಮುದಾಯದ ಮೂಲವೃತ್ತಿಯಾಗಿತ್ತೆಂದು ಗುರುತಿಸಬಹುದು.

ವೈಶ್ಯರು ವ್ಯಾಪಾರದಲ್ಲಿ ತೊಡಗಿದ್ದಾಗ ಅವರನ್ನು ಕಳ್ಳಕಾಕರಿಂದ, ದರೋಡೆಕೋರರಿಂದ ರಕ್ಷಿಸುವ ಜವಾಬ್ದಾರಿ ಕ್ಷತ್ರಿಯರದ್ದಾಗಿತ್ತು.. ಕ್ಷತ್ರಿಯರು ಒದಗಿಸಿದ ರಕ್ಷಣೆಗೆ ಪೂರಕವಾಗಿ ಸುಂಕ ಮತ್ತು ತೆರಿಗೆಯ ರೂಪದಲ್ಲಿ ವೈಶ್ಯರು ಹಣಸಂದಾಯ ಮಾಡಿ ಸ್ಥಾನಿಕ ಆಡಳಿತದ ಆರ್ಥಿಕ ವ್ಯವಸ್ಥೆಯನ್ನು ಬಲಪಡಿಸಿದರು. ಕೊಡುಕೊಳ್ಳುವಿಕೆಯ ಹಂತದಲ್ಲಿ ಒಂದು ಒಡಂಬಡಿಕೆಯಾಗಿದ್ದಿತು. ಇದು ಎಲ್ಲ ವರ್ಗದ ವ್ಯಾಪಾರಿಗಳ ಒಡಂಬಡಿಕೆ ಕೂಡ ಆಗಿದ್ದಿತು. ಕಂಬಾರ, ಕುಂಬಾರ, ಕಮ್ಮಾರ, ಮಗ್ಗ ನೇಯುವವರು, ಬಣ್ಣ ಹಾಕುವವರು, ಚಮ್ಮಾರ ಎಲ್ಲ ವೃತ್ತಿಯ ಸಮುದಾಯ ಕ್ಷತ್ರಿಯರು ತಮಗೆ ರಕ್ಷಣೆ ಒದಗಿಸಿದ್ದುದಕ್ಕೆ ಪ್ರತಿರೂಪವಾಗಿ ತೆರಿಗೆಗಳನ್ನು ಸಲ್ಲಿಸುತ್ತಿದ್ದುದರಿಂದ ಆ ಸ್ಥಾನಿಕ ಆಡಳಿತ ಮತ್ತು ಪ್ರಭುತ್ವದ ನಡುವೆ ಒಂದು ಬಾಂಧವ್ಯ ಬೆಳೆದಿತ್ತು. ಆರ್ಥಿಕ ಶಕ್ತಿಯೇ ರಾಜಕೀಯ ಶಕ್ತಿಯ ಜೀವಾಳವಾಗಿದ್ದುದರಿಂದ ಎಲ್ಲ ವ್ಯಾಪಾರಿ ಸಮುದಾಯದ ರಕ್ಷಣೆ ರಾಜನ ಕರ್ತವ್ಯವಾಗಿದ್ದುದರ ಜೊತೆಗೆ ಅದಕ್ಕೆ ಪ್ರತಿಫಲವಾಗಿ ತೆರಿಗೆಗಳನ್ನು ಪಾವತಿಸುವ ಜವಾಬ್ದಾರಿಯೂ ಉತ್ಪಾದಕನಾಗಿರುತ್ತಿತ್ತು. ಹೀಗೆ ಆಡಳಿತಾತ್ಮಕ ವ್ಯವಸ್ಥೆಗಳು ಸಾಮಾಜಿಕ ಪರಂಪರೆಯ ಮೇಲೆ ಪ್ರಭಾವ ಬೀರಿ ಕೊಡುಕೊಳ್ಳುವಿಕೆಯನ್ನು ಗಟ್ಟಿಗೊಳಿಸಿದುದಕ್ಕಾಗಿ ಅನೇಕ

ವರ್ಣ, ಜಾತಿ, ಮತ ಬೇಧವಿಲ್ಲದೆ ಕೇವಲ ರಕ್ಷಕ ಮತ್ತು ಉತ್ಪಾದಕನ ನಡುವಿನ ಸಂಬಂಧ ರಾಜಕಾರಣ ಪ್ರಕ್ರಿಯೆಯಾಗಿ ಆರ್ಥಿಕ ರೂಪ ಪಡೆದು ಗ್ರಾಮ ಮತ್ತು ಪಟ್ಟಣ ವ್ಯವಸ್ಥೆಯನ್ನು ಗಟ್ಟಿಗೊಳಿಸಿದುದರ ಪ್ರತಿಫಲನವನ್ನು ಇವರ ಆಡಳಿತಾತ್ಮಕ ವ್ಯವಸ್ಥೆಯಲ್ಲಿ ಕಾಣುತ್ತೇವೆ.[೧೪೭]

**ಶೂದ್ರ / ಶ್ರಮಿಕ ವರ್ಗ**

ಕೆಲವು ವಿದ್ವಾಂಸರು ತಮ್ಮ ಇತಿಹಾಸದ ಅಧ್ಯಯನಗಳಲ್ಲಿ ಈ ವರ್ಗವನ್ನು ಇತರರ ಗುಂಪೆಂದು ವರ್ಗೀಕರಿಸುತ್ತಾರೆ. ಅಲ್ಲದೆ ಈ ಗುಂಪಿಗೆ ಸೇರಿದವರನ್ನು ನಾಲ್ಕನೆಯ ವರ್ಣದವರೆಂದು ಅಥವಾ ಶೂದ್ರ ವರ್ಗದವರೆಂದು ಕರೆಯುವ ಪದ್ಧತಿಯಿದೆ.[೧೪೮] ಕೆಲವು ವಿದ್ವಾಂಸರು ಶೂದ್ರರಲ್ಲದೆ ಅಂತಿಮ ವರ್ಗವಾದ ಅಂತ್ಯಜರನ್ನು ಹೊರತುಪಡಿಸಿದ ವರ್ಗವಿದೆಂದು ಭಾವಿಸಿ ವ್ಯವಸಾಯ ಮತ್ತು ಇತರ ಕಸುಬುಗಳಲ್ಲಿ ನಿರತರಾದವರನ್ನು ಶೂದ್ರರೆಂದು ಗುರುತಿಸುವ ಪದ್ಧತಿಯನ್ನು ದಾಖಲಿಸುತ್ತಾರೆ.[೧೪೯] ವರ್ಣವ್ಯವಸ್ಥೆಯಲ್ಲಿ ಶೂದ್ರ ವರ್ಗವನ್ನು ಬಹುತೇಕ ಒಕ್ಕಲುತನವನ್ನು ಅನುಸರಿಸಿದ ಎಲ್ಲರನ್ನು ಶೂದ್ರರೆಂದು ಕರೆಯಬೇಕಾಗುತ್ತದೆ. ಒಕ್ಕಲುತನಕ್ಕೆ ಪೂರಕವಾಗಿ ಕಾರ್ಯನಿರ್ವಹಿಸುವ ಇತರ ವರ್ಗಗಳೂ ಶೂದ್ರ ವರ್ಗಗಳೇ ಆಗಿವೆ. ಇದಲ್ಲದೆ ಸಮಾಜದಲ್ಲಿ ಎಲ್ಲಾ ವರ್ಗಗಳಿಗೂ ಅಗತ್ಯವಾದ ಅವಶ್ಯಕತೆಗಳನ್ನು ಪೂರೈಸುವ ಅನೇಕ ಉಪಜಾತಿಗಳು ಕಂಡುಬರುತ್ತವೆ. ಆದರೆ ಈ ಕೌಶಲ ವರ್ಗವನ್ನು ಶೂದ್ರ ವರ್ಗವಾಗಿ ಭಾವಿಸಿ ಇಡೀ ಸಮುದಾಯವನ್ನು ಅವರವರ ಕೌಶಲ, ವೃತ್ತಿಪರತೆ ಮತ್ತು ಕೊಡುಕೊಳ್ಳುವಿಕೆಯನ್ನು ಕಡೆಗಣಿಸಿ ಹುಟ್ಟಿನ ಜಾತಿಯ ಆಧಾರದ ಮೇಲೆ ಅವರ ಜಾತಿಯನ್ನು ನಿರ್ಧರಿಸಿ ಹೇಳುವುದು ಸಮಾಜದ ಏಕತೆಯ ದೃಷ್ಟಿಯಿಂದ ಮತ್ತು ಕೊಡುಕೊಳ್ಳುವಿಕೆಯ ಪ್ರಕ್ರಿಯೆಗೆ ಹೊರತಾದ ಅಧ್ಯಯನವಾಗುತ್ತದೆ. ಹೀಗಾಗಿ ಈ ವರ್ಗದಲ್ಲಿ ಕಂಡುಬರುವ ಕೊಡುಕೊಳ್ಳುವಿಕೆಯ ವ್ಯವಸ್ಥೆ ಹಾಗೂ ಪೂರಕ ಪ್ರೇರಕ ಸ್ವಭಾವಗಳನ್ನು ಅಧ್ಯಯನ ಮಾಡಿ ಇದನ್ನು ಶ್ರಮಿಕ ವರ್ಗವೆಂದು ಹೇಳಬಹುದು.[೧೫೦]

ವ್ಯವಸಾಯ ಕೇವಲ ರೈತನೋರ್ವನಿಂದಲೇ ಆರಂಭವಾಗಿ ಪೂರ್ಣವಾಗುವ ಪ್ರಕ್ರಿಯೆಯಲ್ಲ. ವಿವಿಧ ಹಂತಗಳಲ್ಲಿ ಹಲವು ಕೌಶಲಗಳ, ಕುಶಲಕರ್ಮಿಗಳ ಸೇವೆಯನ್ನು ರೈತನು ವ್ಯವಸಾಯ ಕ್ಷೇತ್ರದಲ್ಲಿ ಬಳಸಿಕೊಳ್ಳುತ್ತಾನೆ. ಉದಾಹರಣೆಗೆ ಗ್ರಾಮದ ಪುರೋಹಿತನನ್ನು ಕೇಳಿ ಆ ವರ್ಷದ ಮಳೆ, ಬೆಳೆ ಇತ್ಯಾದಿ ಸಮಯಗಳನ್ನು ಅರಿತು ಆ ಕಾಲಕ್ಕೆ ಭೂಮಿಯನ್ನು ಉಳುಮೆ ಮಾಡಿ ಪುರೋಹಿತರ ಮೂಲಕ ದೇವರಲ್ಲಿ ಉತ್ತಮ ಮಳೆಗಾಗಿ ಪ್ರಾರ್ಥಿಸಿ ಕಾರ್ಯ ಪ್ರಾರಂಭಿಸುತ್ತಾನೆ. ತನ್ನ ವ್ಯವಸಾಯಕ್ಕೆ ಅವಶ್ಯಕವಾದ ಸಲಕರಣೆಗಳನ್ನು ತಯಾರು ಮಾಡಿಕೊಡಲು ಬಡಗಿ ಮತ್ತು ಕಮ್ಮಾರನ ಸಹಾಯವನ್ನು ಪಡೆದುಕೊಳ್ಳುತ್ತಾನೆ. ಗೋಪಾಲರು ವ್ಯವಸಾಯದ ಚಟುವಟಿಕೆಯ ದಿನಗಳಲ್ಲಿ ಆ ರೈತನ ದನವನ್ನು ಸಾಕಿ ಸಲಹಿ, ಸದೃಢಗೊಳಿಸಿ ವ್ಯವಸಾಯಕ್ಕೆ ಬೇಕಾದ ಕಾಲಕ್ಕೆ ಒದಗಿಸುತ್ತಾನೆ. ವ್ಯವಸಾಯದ ಅನೇಕ ಹಂತಗಳಲ್ಲಿ ಅಂದರೆ ಬಿತ್ತನೆ/ನಾಟಿ ಮಾಡುವ ಸಮಯದಲ್ಲಿ, ಕಳೆ ತೆಗೆಯುವ ಸಂದರ್ಭದಲ್ಲಿ ಮತ್ತು ಧಾನ್ಯಗಳನ್ನು ಒಕ್ಕಲು ಮಾಡುವ ಸಮಯಗಳಲ್ಲಿ ಅನೇಕ ಶ್ರಮಿಕರ ಅವಶ್ಯಕತೆ ಉಂಟಾಗುತ್ತದೆ. ಈ ಎಲ್ಲ ಹಂತಗಳಲ್ಲಿ ಶ್ರಮಿಕ

ವರ್ಗವೆಲ್ಲ ಒಟ್ಟಾಗಿ ಹೊಲದಲ್ಲಿ ಭೂರಹಿತ ಕೃಷಿಕರಾಗಿ ದುಡಿದು ರೈತನಿಗೆ ಸಹಕಾರ ನೀಡುತ್ತಾರೆ. ಬೆಳೆಯ ಕಟಾವಿನ ನಂತರದ ಸಮಯದಲ್ಲಿ ಅನೇಕ ವೃತ್ತಿಪರರು ರೈತನಿಗೆ ಸಹಕಾರಿಯಾಗುತ್ತಾರೆ. ಕುಂಬಾರನು ದೊಡ್ಡ ದೊಡ್ಡ ಗುಡಾಣಗಳನ್ನು, ಮಡಕೆಗಳನ್ನು ನಿರ್ಮಿಸಿ ಬೆಳೆಯನ್ನು ಸಂಗ್ರಹಿಸಲು ಒದಗಿಸುತ್ತಾನೆ. ಮೇದರು, ಮೊರ, ಪೆಟ್ಟೆ ಇತ್ಯಾದಿ ಬಿದಿರಿನ ಉಪಕರಣಗಳನ್ನು ನಿರ್ಮಿಸಿಕೊಟ್ಟು ರೈತನಿಗೆ ಸಹಕರಿಸುತ್ತಾರೆ. ಹೀಗಾಗಿ ಸಮಾಜದ ಎಲ್ಲ ಶ್ರಮಿಕ ವರ್ಗವು ವ್ಯವಸಾಯದಲ್ಲಿ ಪ್ರತ್ಯಕ್ಷವಾಗಿ ಇಲ್ಲವೇ ಪರೋಕ್ಷವಾಗಿ ತನ್ನನ್ನು ತೊಡಗಿಸಿ ಕೊಂಡಿದ್ದಿತು. ಈ ಕಾರಣದಿಂದಾಗಿಯೇ ಪ್ರತಿಯೊಂದು ಹಳ್ಳಿಗಳೂ ಆ ಕಾಲಘಟ್ಟದಲ್ಲಿ ಹಲವು ಜಾತಿಗಳಿದ್ದರೂ ತಮ್ಮ ನಡುವಿದ್ದ ಹೊಂದಾಣಿಕೆ ಕೊಡುಕೊಳ್ಳುವ ವ್ಯವಸ್ಥೆಗೆ ಅನುಗುಣವಾಗಿ ಅನ್ಯೋನ್ಯತೆಯಿಂದ ಸಮಾಜದ ವ್ಯವಸ್ಥೆಗನುಗುಣವಾಗಿ ನಡೆದುಕೊಳ್ಳುತ್ತಿದ್ದವು.[೧೫೧]

ಇದೆಲ್ಲವು ಸಾಧ್ಯವಾದುದು ಅವರಲ್ಲಿದ್ದ ಪರಸ್ಪರ ಗೌರವ ಮತ್ತು ಸಹಾಯ ಮಾಡುವ ಮನೋಭಾವದಿಂದಾಗಿ. ಇದು ಆಧುನಿಕ ಸಮಾಜದ ಕಾಲಘಟ್ಟದಲ್ಲಿ ಅಸಾಧ್ಯ. ಹಾಗಾಗಿ ಶ್ರಮಿಕ ವರ್ಗ ಅಥವಾ ಶೂದ್ರ ವರ್ಗ ತನ್ನ ನಡುವೆಯೇ ಜಾತಿ ವ್ಯವಸ್ಥೆಯೆಂಬ ಸಂಕೋಲೆಯನ್ನು ಹಾಕಿಕೊಂಡಿದ್ದರೂ ಕೆಲವೊಂದು ಆಚರಣೆಗಳನ್ನು ಹೊರತುಪಡಿಸಿ ಸಾಮಾಜಿಕ ನ್ಯಾಯದಲ್ಲಿ ಮತ್ತು ವೃತ್ತಿಪರತೆಯಲ್ಲಿ ಏಕತೆಯನ್ನು ಮೆರೆದಿದ್ದರು. ಅವರು ಸಮಾಜಕ್ಕೆ ಪೂರಕವಾಗಿ ಪೋಷಕವಾಗಿ ಕಾರ್ಯನಿರ್ವಹಿಸಿ ಅಸಾಧ್ಯವಾದ ಏಕತೆಯನ್ನು ಸಾಧಿಸಿದ್ದರು.[೧೫೨] ಅನೇಕ ವೃತ್ತಿಗಳಲ್ಲಿ ನಿರತರಾದ ಶ್ರಮಿಕ ವರ್ಗ ಸಾಮಾಜಿಕ, ಆರ್ಥಿಕ ಕ್ಷೇತ್ರಗಳಿಗೆ ಅವರ ಕೊಟ್ಟ ಕೊಡುಗೆ ಅಪಾರವಾದದ್ದು. ಉತ್ಪಾದನೆ, ವಿತರಣೆ, ಮಾರಾಟದಲ್ಲಿ ಇವರು ತೊಡಗಿದ್ದರು. ಈ ಪ್ರದೇಶದ ಶಾಸನಗಳು ವೃತ್ತಿನಿರತವಾದ ಶ್ರಮಿಕವರ್ಗ ಅವರ ಸಂಘ ಅಥವಾ ಒಕ್ಕಲುಗಳನ್ನು ಹೆಸರಿಸುತ್ತವೆ. ಕಮ್ಮಾರ, ಬಡಿಗ, ಅಕ್ಕಸಾಲಿ, ಕಂಚುಗಾರ ಮತ್ತು ಶಿಲ್ಪಿ ಎಂಬ ಐದು ವರ್ಗಗಳಿದ್ದವು. ಇವರು ಕಬ್ಬಿಣ, ಕಟ್ಟಿಗೆ, ಚಿನ್ನ, ಕಂಚು ಇತರ ಲೋಹದ ಶಿಲ್ಪದ ಕೆಲಸ ಮಾಡುತ್ತಿದ್ದರು. ಹೆಸರಿಗೆ ತಕ್ಕಂತೆ ಆಯಾ ವರ್ಗದವರು ಅದೇ ಉದ್ಯೋಗವನ್ನು ನಿರ್ವಹಿಸಬೇಕೆಂಬ ಕಟ್ಟಳೆಗಳಿರಲಿಲ್ಲ. ಕ್ಷೌರದ ಕೆಲಸ ಮಾಡುತ್ತಿದ್ದ ನಾವಿದ, ಮಡಿಕೆ ತಯಾರಿಸುತ್ತಿದ್ದ ಕುಂಬಾರ, ಬಟ್ಟೆ ಮಡಿಮಾಡುವ ಅಗಸ, ಬಿದುರಿನ ವಸ್ತುಗಳನ್ನು ತಯಾರಿಸುತ್ತಿದ್ದ ಮೇದ, ಚರ್ಮದ ವಸ್ತುಗಳನ್ನು ಮಾಡುತ್ತಿದ್ದ ಸಮಗಾರ ಮತ್ತು ಚಮ್ಮಾರರ ಉಲ್ಲೇಖಗಳು ಶಾಸನಗಳಲ್ಲಿ ಕಂಡುಬರುತ್ತವೆ. ಇವರು ವೃತ್ತಿ ಸಂಬಂಧಿಸಿದಂತೆ ಪ್ರತ್ಯೇಕವಾಗಿ ವಾಸಿಸುತ್ತಿದ್ದ ಅಂಶ ಶಾಸನಗಳಿಂದ ತಿಳಿಯುತ್ತದೆ. ತಂಬುಲಿಗರು, ತೆಲ್ಲಿಗರು, ಮಾಲೆಗಾರರು, ಉಳಿಗರು, ಉಗುರರು, ತೋಟಿಗರು, ಒಕ್ಕಲಿಗರು ತಮ್ಮದೆಯಾದ ಸಂಘಗಳನ್ನು ಕಟ್ಟಿಕೊಂಡಿದ್ದರು. ಅವುಗಳನ್ನು ತೆಲ್ಲಿಗರಯ್ವತ್ತೊಕಲು, ಗಾಣದೊಕ್ಕಲು, ಒಕ್ಕಲುಮಕ್ಕಳು, ರಾಮಘಟ್ಟದರತ್ತೊಕ್ಕಲು ಮೊದಲಾದ ವೃತ್ತಿ ಸಂಬಂಧಿತ ಹೆಸರುಗಳಿಂದ ಕರೆಯುತ್ತಿದ್ದರು.

**ಸಾಮಾಜಿಕ ವರ್ಣ**

ಆ ಕಾಲದಲ್ಲಿ ಈ ನಾಲ್ಕು ವರ್ಣಗಳ ಸೇವೆಯನ್ನು ಮಾಡುವ ಮತ್ತು ನಾಲ್ಕೂ ಹಂತಗಳಿಗೆ ಒಳಪಡದ ವರ್ಗವೊಂದಿತ್ತು. ಇವರನ್ನು ಅಸ್ಪೃಶ್ಯರೆಂದು ಅಂತ್ಯಜರೆಂದು ಇತ್ತೀಚಿನ

ಅಧ್ಯಯನಗಳಲ್ಲಿ ಗುರುತಿಸಲಾಗಿದೆಯಾದರೂ ಇದು ಆನಂತರದ ಬೆಳವಣಿಗೆಯೇ ಸರಿ. ಇವರು ಸಮಾಜದ ವ್ಯವಸ್ಥೆಯಲ್ಲಿ ಅತ್ಯಂತ ಕೆಳಮಟ್ಟದ ಕಾರ್ಯಗಳನ್ನು ನಿರ್ವಹಿಸುತ್ತಿದ್ದುದರಿಂದ ಇವರನ್ನು ಸಾಮಾನ್ಯವಾಗಿ ಗ್ರಾಮಗಳ ಹೊರಗೆ ತಮ್ಮದೇ ಆದ ಕೇರಿಗಳಲ್ಲಿ ವಾಸಿಸುತ್ತಿದ್ದರು ಮತ್ತು ಇವರನ್ನು ಮುಟ್ಟಿದರೆ ಮೈಲಿಗೆಯೆಂಬ ಭಾವನೆ ಎಲ್ಲ ವರ್ಗದಲ್ಲಿಯೂ ಬೇರೂರಿತ್ತು.[೧೫೩] ಆದರೂ ಗ್ರಾಮದ ಕೆಲವೊಂದು ಕರ್ತವ್ಯಗಳಿಗೆ ಇವರನ್ನು ನೇಮಿಸಿಕೊಳ್ಳಲಾಗುತ್ತಿತ್ತು. ಕುಳವಾಡಿ, ತಳವಾರ ಇತ್ಯಾದಿ ಗ್ರಾಮದ ವೃತ್ತಿಗಳು ಈ ವರ್ಗದವರಿಗೆ ಮೀಸಲಾಗಿತ್ತು. ಇವರು ಗ್ರಾಮದ ಸಭೆಯ ನಿರ್ಣಯಗಳನ್ನು ಎಲ್ಲ ಜನಾಂಗಗಳಿಗೆ ಅರುಹುವ ಗ್ರಾಮ ಸಭೆಯನ್ನು ಸೇರಿಸುವ ಇತ್ಯಾದಿ ವೃತ್ತಿಗಳಲ್ಲಿ ಸಹಾಯಕವಾಗುತ್ತಿದ್ದವು. ಆದರೂ ಇವರುಗಳ ಜೀವನಶೈಲಿ ಬೇರೆ ಯಾಗಿದ್ದುದರಿಂದ ಸಮಾಜದಲ್ಲಿ ಅತಿ ಕನಿಷ್ಠ ಸ್ಥಾನವನ್ನು ಪಡೆದಿದ್ದರೆಂಬುದು ಒಪ್ಪಿಕೊಳ್ಳಲೇಬೇಕಾದ ಕಟುಸತ್ಯ

**ಆಚರಣೆಗಳು**

ವಿವಿಧ ಬಗೆಯ ಹಬ್ಬ-ಹರಿದಿನಗಳು ಬಹು ಪ್ರಾಚೀನ ಕಾಲದಲ್ಲಿಯೇ ರೂಢಿಗತವಾಗಿ ಮುಂದುವರೆದುಕೊಂಡು ಬಂದಿದ್ದವು. ಈ ಪ್ರದೇಶದ ಸಾಸನಗಳಲ್ಲಿ ಮಾರ್ಗಶಿರ(ಎಳ್ಳ) ಬಾದುಬೆ, ಕಾರ್ತಿಕ(ದೀಪಾವಳಿ) ಅಮವಾಸೆಗಳು, ಕಾರ್ತಿಕ ಪೌರ್ಣಿಮೆ(ಗೌರಿ ಹುಣ್ಣಿಮೆ), ಕಾರ್ತಿಕ ಶ್ರಾವಣಶುದ್ಧ(ನಾಗರ ಪಂಚಮಿ), ಪಾಲ್ಗುಣ ಶುದ್ಧ(ಹೋಳಿ ಹುಣ್ಣಿಮೆ), ಉತ್ತಾರಾಯಣ ಸಂಕ್ರಾಂತಿಪರ್ವ, ಶ್ರಾವಣ ಗ್ರಹಣದ ಪರ್ವ ಮೊದಲಾದ ಹಬ್ಬಗಳ ಉಲ್ಲೇಖಗಳು ಶಾಸನಗಳಲ್ಲಿ ಕಾಣಿಸುತ್ತವೆ. ಈ ಹಬ್ಬಗಳಲ್ಲಿ ದಾನ-ದತ್ತಿಗಳನ್ನು ಬಿಡುವ ಪದ್ಧತಿ ರೂಢಿಯಲ್ಲಿತ್ತು. ಕಾರಹುಣ್ಣಿಮೆಯಲ್ಲಿ ಎತ್ತುಗಳಿಗೆ ಶೃಂಗಾರ ಮಾಡಿ ಎತ್ತು ಓಡಿಸುವ ಪದ್ಧತಿ ಪ್ರಾಚೀನ ಕಾಲದಲ್ಲೂ ರೂಢಿಯಲ್ಲಿತ್ತು. ಅಂಬಳಿ ಶಾಸನ ಕಾರಪುಣ್ಣಿಮೆಯಲು ಗೆಲ್ವೆತ್ತಿನ ಸೇಸ ಗದ್ಯಾಣವೊಂದನ್ನು ಪೂರ್ವದ ಕೆರೆಗೆ ದಾನ ಕೊಟ್ಟ ವಿಷಯ ಹೇಳುತ್ತದೆ. ಹಬ್ಬ, ಉತ್ಸವ, ಜಾತ್ರೆಗಳಿಗೆ ಬೇರೆ ಬೇರೆ ಭಾಗಗಳಿಂದ ಜನರು ಬಂದು ಸೇರುತ್ತಿದ್ದರು. ಇಂತಹ ಸಮಯದಲ್ಲಿ ತಮ್ಮ ತಂದೆ-ತಾಯಿಗಳಿಗೆ ಪುಣ್ಯವಾಗಲೆಂದು ದೇವರಿಗೆ ದಾನ ಮಾಡಿರುವ ಉಲ್ಲೇಖಗಳು ದೊರೆಯುತ್ತವೆ.

**ಆಹಾರ ಪಾಣೆಯಗಳು**

ನೊಳಂಬನಾಡಿನ ಶಾಸನಗಳು ಅಡುಗೆಗೆ ಸಂಬಂಧಿಸಿದಂತೆ ನೇರವಾಗಿ ಉಲ್ಲೇಖಗಳು ದೊರೆಯುವುದಿಲ್ಲ. ದಿನನಿತ್ಯ ಆಹಾರ ಪದಾರ್ಥಕ್ಕಾಗಿ ಬಳಸುತ್ತಿದ್ದ ಜೋಳ, ಭತ್ತ, ಬೇಳೆ, ಸಕ್ಕರೆ, ಬೆಲ್ಲ, ಉಪ್ಪು, ಅರಿಶಿಣ, ಮೆಣಸು, ಜೀರಿಗೆ, ಅಜವಾನ, ಜಿಡ್ಡು ಪದಾರ್ಥಗಳಾದ ಹಾಲು, ಮೊಸರು, ಬೆಣ್ಣೆ, ಎಣ್ಣೆ, ವ್ಯಂಜನ ಪದಾರ್ಥಗಳಾದ ಬಾಡು, ಕಾಯಿ ಮುಂತಾದ ಹಣ್ಣುಗಳನ್ನು ಮತ್ತು ಎಲೆ, ಅಡಿಕೆ, ಹರಿಶಿಣ, ತೆಂಗು ಮೊದಲಾದ ಪದಾರ್ಥಗಳು ದಾನ-ದತ್ತಿ ಬಿಡುವಾಗ ಉಲ್ಲೇಖವಾಗಿ ದೇವರ ಉತ್ಸವ, ಹಬ್ಬದ ದಿನಗಳಲ್ಲಿ ವಿಶೇಷ ಅಡುಗೆ

ಮಾಡುತ್ತಿದ್ದ ವಿವರವನ್ನು ಮಾನ್ಯರ ಮಸಲವಾಡ ಶಾಸನ ಹೇಳುತ್ತದೆ. ಈ ಎಲ್ಲಾ ಪದಾರ್ಥಗಳಲ್ಲಿ ವೀಳ್ಯ-ಅಡಿಕೆ ಪ್ರಮುಖ ಪಾತ್ರ ವಹಿಸಿದೆ. ದೇವರ ಪೂಜಾ ಕಾರ್ಯಗಳಿಗೆ ಮತ್ತು ಊಟವಾದ ಮೇಲೆ ಬಳಸುವ ಇವುಗಳನ್ನು ಹೆಚ್ಚಿನ ಶಾಸನಗಳು ಉಲ್ಲೇಖಿಸುತ್ತವೆ.

**ವಿವಾಹ**

ಪ್ರಾಚೀನ ಭಾರತದಲ್ಲಿ ಸಾಮಾನ್ಯವಾಗಿ ಬಾಲ್ಯವಿವಾಹ ರೂಢಿಯಲ್ಲಿರಲಿಲ್ಲ. ಅಷ್ಟೇ ಏಕೆ ಆನಂತರದ ಯುಗಗಳು ಮಹಾಕಾವ್ಯಗಳ ಕಾಲದಲ್ಲಿಯೂ ಪ್ರಾಪ್ತ ವಯಸ್ಸನ್ನು ತಲುಪಿದ ಮಕ್ಕಳಿಗೆ ಮಾತ್ರ ವಿವಾಹ ಮಾಡುತ್ತಿದ್ದರು. ಹೆಣ್ಣುಮಕ್ಕಳ ವಿವಾಹದ ವಯಸ್ಸನ್ನು ನಿಷ್ಕರ್ಷಿಸುವ ಸ್ಮೃತಿಕಾರರು ಹೆಣ್ಣುಮಗಳು ತನ್ನ ಬಾಲ್ಯಾವಸ್ಥೆಯಲ್ಲಿಯೇ ಮದುವೆಯಾಗಬೇಕೆಂಬುದನ್ನು ಪ್ರಸ್ತಾಪಿಸುತ್ತಾರೆ. ಬ್ರಾಹ್ಮಣ ವಧು ಸಾಮಾನ್ಯವಾಗಿ ೧೨ ವರ್ಷದವಳಾಗಿದ್ದಾಗ ಮದುವೆ ಯಾಗುತ್ತಿದ್ದಳೆಂದು ಆಲ್ಬರೂನಿ ಹೇಳುತ್ತಾರೆ. ಈ ಪದ್ಧತಿ ಭಾರತದಲ್ಲಿ ಬೆಳೆಯಲು ಅನೇಕ ಸಾಮಾಜಿಕ ಮತ್ತು ಧಾರ್ಮಿಕ ಕಾರಣಗಳು ಕಂಡುಬಂದವಾದರೂ ಹೆಣ್ಣುಮಗಳು ಮೊದಲ ಋತುಚಕ್ರವನ್ನು ಕಾಣುವ ಮೊದಲೇ ವಿವಾಹ ಮಾಡಿಕೊಡಬೇಕಾಗಿತ್ತೆಂಬುದು ಸ್ಮೃತಿಕಾರರ ಅಭಿಪ್ರಾಯ. ವಿವಾಹದ ನಂತರ ಆಕೆ ಪ್ರಥಮ ರಜೋದರ್ಶನವನ್ನು ಕಂಡ ನಂತರ ಪ್ರಾಯಶಃ ಒಂದೆರಡು ವರ್ಷಗಳ ಆರೈಕೆಯ ನಂತರ ಗಂಡನ ಮನೆಗೆ ಕಳುಹಿಸಿಕೊಡುವ ಸಂಪ್ರದಾಯವಿತ್ತು ಅಥವಾ ಆ ಕಾಲಘಟ್ಟದ ಕೆಲವು ದಿನಗಳ ವಿಶ್ರಾಂತಿಯ ನಂತರ ಆಕೆಯನ್ನು ಗಂಡನ ಮನೆಗೆ ಕಳುಹಿಸಲಾಗುತ್ತಿತ್ತು.

ಶಾಸನಗಳಲ್ಲಿ ವಿವಾಹದ ವಯಸ್ಸು ಇತ್ಯಾದಿ ವಿಚಾರಗಳು ಕಂಡುಬರದಿದ್ದರೂ ಕೆಲವೊಂದು ದಂಡನಾಯಕರುಗಳು, ಮೇಲ್ವರ್ಗದ ಅಧಿಕಾರಿಗಳು ಬಹುಪತ್ನಿತ್ವವನ್ನು ಹೊಂದಿದ್ದ ಬಗ್ಗೆ ಶಾಸನಗಳು ಉಲ್ಲೇಖಿಸುತ್ತವೆ. ಆಡಳಿತವನ್ನು ನೆರವೇರಿಸುತ್ತಿದ್ದ ಕೆಲಕಾಲದ ದಂಡನಾಯಕರು ಅನೇಕ ಹೆಂಡತಿಯರನ್ನು ಹೊಂದಿದ್ದಂತೆ ಶಾಸನಗಳು ದಾಖಲಿಸುತ್ತವೆ.[೧೫೪] ಸಾಮಾನ್ಯವಾಗಿ ಸಮಾಜದಲ್ಲಿ ಏಕಪತ್ನಿತ್ವ ಬಹುವ್ಯಾಪಕವಾಗಿ ಆಚರಣೆಯಲ್ಲಿದ್ದಿತು. ಕೆಲವೊಂದು ವಿಶೇಷ ಸಂದರ್ಭಗಳಲ್ಲಿ ಶ್ರೀಮಂತರು, ಸ್ಥಾನಿಕ ಆಡಳಿತಗಾರರು ರಾಜಕೀಯ ಮತ್ತಿತರ ಕಾರಣಗಳಿಗಾಗಿ ಬಹುಪತ್ನಿಯರನ್ನು ಅಂಗೀಕರಿಸುತ್ತಿದ್ದರು. ಕೆಲವೊಮ್ಮೆ ಉಪಪತ್ನಿಯರನ್ನು ಹೊಂದುವುದು ಪ್ರತಿಷ್ಠೆಯ ಸಂಕೇತವಾಗಿತ್ತೆಂದು ಭಾವಿಸಬಹುದು.[೧೫೫]

ಉನ್ನತ ಸ್ಥಾನದ ಅಧಿಕಾರಿ ವರ್ಗದಲ್ಲಿ ಬಹುಪತ್ನಿತ್ವ ವ್ಯವಸ್ಥೆ ಇತ್ತು. ದಂಡನಾಯಕ, ಮಂತ್ರಿ, ಮಹಾಮಂಡಳೇಶ್ವರ, ಅರಸರಿಂದ ಹಿಡಿದು ಊರ ಗೌಡನವರೆಗೂ ಬಹುಪತ್ನಿಯರನ್ನು ಹೊಂದಿರುವುದು ಕಂಡುಬರುತ್ತದೆ. ಆರನೆಯ ವಿಕ್ರಮಾದಿತ್ಯನಿಗೆ ೧೬ ಜನ ರಾಣಿಯರಿದ್ದರೆಂದು ದಾಖಲೆಗಳಿಂದ ತಿಳಿದುಬರುತ್ತದೆ. ವೀರಪಾಂಡ್ಯನಿಗೆ ವಿಜಯದೇವಿ ಮತ್ತು ಗಂಗಾದೇವಿ, ಕುರುಗೋಡು ಸಿಂಧರ ಒಂದನೆಯ ರಾಚಮಲ್ಲನಿಗೆ ಮಾಕಲದೇವಿ, ಸೋವಲದೇವಿ, ಇರಿವನೊಳಂಬ ಘಟೆಯಂಕಕಾರನಿಗೆ ಮಹಾದೇವಿ, ದಿವಬ್ಬರಸಿಯರು, ಚಾವುಂಡರಾಯನ

ತಂದೆ ಕಂಬನಿಗೆ ಹಮ್ಮಿಕಬ್ಬೆ ಕನಕಯಬ್ಬೆಯರು, ಹಡವಳ ಬೇಚಿರಾಜನಿಗೆ ವೈಳಿಯಕ್ಕ ಹಾಗೂ ಮೆಲ್ಪಾಣಿಯಕ್ಕರು ಹೀಗೆ ಅನೇಕರು ಬಹುಪತ್ನಿಯರನ್ನು ಹೊಂದಿದ್ದರೆಂದು ಶಾಸನಗಳು ಸ್ಪಷ್ಟಪಡಿಸುತ್ತವೆ. ವಿವಿಧ ಪ್ರದೇಶದ ಆಡಳಿತವನ್ನು ನೋಡಿಕೊಳ್ಳುವ ಮೂಲಕ ಅನೇಕ ರಾಣಿಯರು ರಾಜ್ಯ ನಿರ್ವಹಣೆಯಲ್ಲಿ ರಾಜರಿಗೆ ನೆರವಾಗುತ್ತಿದ್ದರು. ರವಿಗನ ಹೆಂಡತಿ ರಬ್ಬಲದೇವಿಯನ್ನು 'ಪತಿಹಿತವ್ರತಾರುನ್ವತಿ' ಎಂದು, ಚಟ್ಟನಮತ್ತು ಚಾಮವ್ವೆಳನ್ನು'ಆ ದಂಪತಿಗಳನ್ನಯೋನ್ಯಬ್ರತಿವೆರ ಸುವೆರತಿಯುಂ ಕಾಮನುಮಿರ್ಪ್ಪಂತೆ ಸುಖದಿಮಿರೆದೂ' ಎಂದಿದೆ. ಮಲ್ಲಿನಾಥನ ಹೆಂಡತಿ ಮಲ್ಲಿಗಾವುಂಡಿಯನ್ನು 'ಸಲೆದಿವಿಜರಾಜನೊಳೆ ಕುಲವಧುವಾದಂತೆಮಲ್ಲಗಾವುಂಡನೋಳೆಂ ಕುಲವಧುವಾಗಿ ನೆಗಳ್ತೆಗೆ ನೆಲೆಯಾದ ಮಲ್ಲಿಗೌವುಂಡಿ' ಎಂದು ಶಾಸನ ವರ್ಣಿಸುತ್ತದೆ.[೧೫೬]

ಬ್ರಾಹ್ಮಣ ಸಮುದಾಯದಲ್ಲಿ ಏಕಪತ್ನಿತ್ವ ಪ್ರಚಲಿತದಲ್ಲಿತ್ತಾದರೂ ಪುರುಷರು ಮರುವಿವಾಹಕ್ಕೆ ಒಪ್ಪಿಕೊಳ್ಳುತ್ತಿದ್ದರು. ಕಾರಣ ವಿಧುರನಾದವನಿಗೆ ಯಾವ ಧಾರ್ಮಿಕ ಕ್ರಿಯೆಗಳಲ್ಲಿಯೂ ಭಾಗವಹಿಸುವ ಹಕ್ಕು ಕಳೆದು ಹೋಗುತ್ತಿದ್ದುದರಿಂದ ಪತ್ನಿ ಯಾವುದೇ ಕಾರಣಕ್ಕೆ ಪುರುಷನಿಗಿಂತ ಮೊದಲು ಮೃತಳಾದಲ್ಲಿ ಆತ ಮರುವಿವಾಹವನ್ನು ಮಾಡಿಕೊಳ್ಳುತ್ತಿದ್ದನು. ಕಾರಣ ತನ್ನ ಕುಟುಂಬದ ಧಾರ್ಮಿಕ ಕಾರ್ಯಾಚರಣೆಗಳಲ್ಲಿ ಅವನು ಭಾಗಿಯಾಗಲು ಅದು ಒಂದು ಪ್ರಮುಖ ಅವಶ್ಯಕತೆಯಾಗಿದ್ದಿತು. ಎನ್. ಸರಸ್ವತಿಯವರು[೧೫೭] ಹೇಳುವಂತೆ ಹೊಯ್ಸಳರ ಕಾಲಘಟ್ಟದಲ್ಲಿ ಸುಮಾರು ೧೫–೨೦ ವರ್ಷದ ಬಾಲಕರು ೧೨ ರಿಂದ ೧೬ ವರ್ಷದ ಬಾಲಕಿಯರೊಂದಿಗೆ ವಿವಾಹವಾಗುತ್ತಿದ್ದರು ಎಂದು ದಾಖಲಿಸುತ್ತಾರೆ. ಅಲ್ಬೆರೂನಿಯರ ಪ್ರಕಾರ ಪ್ರತಿಯೊಬ್ಬ ಪುರುಷನು ತನ್ನ ಜಾತಿಯದೇ ಮಹಿಳೆಯನ್ನು ಅಥವಾ ತನ್ನ ಜಾತಿಗಿಂತ ಕೆಳಮಟ್ಟದ ಜಾತಿಗಳ ಮಹಿಳೆಯನ್ನು ವಧುವಾಗಿ ಸ್ವೀಕರಿಸುತ್ತಿದ್ದನು. ಆದರೆ ತನ್ನ ಜಾತಿಗಿಂತ ಮೇಲ್ಮಟ್ಟದ ಮಹಿಳೆಯರನ್ನು ವಿವಾಹವಾಗಲು ಯಾರಿಗೂ ಅವಕಾಶವಿರಲಿಲ್ಲ. ಬ್ರಾಹ್ಮಣರು ಕ್ಷತ್ರಿಯ, ವೈಶ್ಯ ಶೂದ್ರ ವರ್ಗದಿಂದ ವಿವಾಹವಾಗುತ್ತಿರಲಿಲ್ಲ. ಅಂತೆಯೇ ಇತರೇ ಜಾತಿಯವರು ಬ್ರಾಹ್ಮಣರನ್ನು ವಿವಾಹವಾಗುತ್ತಿರಲಿಲ್ಲ.[೧೫೮] ಹಿಂದೂ ಧರ್ಮಶಾಸ್ತ್ರಗಳ ಕಾನೂನಿನ ಪ್ರಕಾರ ಸಂಬಂಧದಲ್ಲಿ ವಿವಾಹವಾಗುವುದಕ್ಕಿಂತ ಹೊಸ ಸಂಬಂಧವನ್ನು ಹುಡುಕುವುದು ಉತ್ತಮವೆಂದು ಪರಿಗಣಿಸಲಾಗಿತ್ತು. ದೂರದ ಸಂಬಂಧವು ವಿವಾಹಕ್ಕೆ ಪ್ರಶಸ್ತವೆಂದು ಭಾವಿಸಲಾಗಿತ್ತು. ಸಗೋತ್ರ ವಿವಾಹ, ಸಮಾನ ವಯಸ್ಸಿನ ಮಹಿಳೆಯ ವಿವಾಹ ನಿಷೇಧಿತವಾಗಿತ್ತು. ರಾಜಮನೆತನದ ವಿವಾಹದ ಸಂದರ್ಭದಲ್ಲಿ ಯಾವ ಧರ್ಮವೂ ಅಡ್ಡಿಯಾಗುತ್ತಿರಲಿಲ್ಲ. ಶೈವರು, ಜೈನರು ಮತ್ತು ವೈಷ್ಣವರಲ್ಲಿ ಧಾರ್ಮಿಕ ಭಿನ್ನತೆಗಳಿದ್ದರೂ ಮಹಾರಾಜರು ಆ ಧರ್ಮದ ಕನ್ಯೆಯನ್ನು ವರಿಸುವಾಗ ಹೆಚ್ಚಿನ ತೊಡಕನ್ನು ಅನುಭವಿಸುತ್ತಿರಲಿಲ್ಲ.[೧೫೯] ಹೊಯ್ಸಳ ರಾಜನಾದ ವಿಷ್ಣುವರ್ಧನ ವೈಷ್ಣವನಾಗಿದ್ದರೂ ಶೈವ ಧಾರ್ಮಿಕ ಪರಂಪರೆಯ ಶಾಂತಲೆಯನ್ನು ವಿವಾಹವಾಗಿದ್ದನು. ಈ ಪದ್ಧತಿ ಜನಸಾಮಾನ್ಯರಲ್ಲಿಯೂ ಇದ್ದಿತು. ಬಹುತೇಕ ಇದೇ ಪರಿಸ್ಥಿತಿ ೧೬೦೦ರವರೆಗೂ ಯಾವ ವ್ಯತ್ಯಾಸವಿಲ್ಲದೆ ಮುಂದುವರಿಯಿತು.

ಕೆಳವರ್ಗದಲ್ಲಿ ಅಂದರೆ ಶೂದ್ರವರ್ಗದಲ್ಲಿ ವಿಧವಾ ವಿವಾಹ ನೆರವೇರುತ್ತಿತ್ತು. ಇದನ್ನು ಕೂಡಾವಳಿ ಎಂದು ಕರೆಯಲಾಗುತ್ತದೆ. ಇತರ ಯಾವ ವರ್ಗಗಳಲ್ಲೂ ವಿಧವಾ ವಿವಾಹಕ್ಕೆ ಅವಕಾಶವಿರಲಿಲ್ಲ. ಕೂಡಾವಳಿಯಲ್ಲಿ ವಿಧುರನೋರ್ವ ವಿಧವೆಯನ್ನು ವಿವಾಹವಾಗಲು ಒಪ್ಪಿದರೆ ತನ್ನ ಹೊಸ ಪತ್ನಿಯು ಈ ಹಿಂದೆ ತನ್ನ ಗಂಡನಿಂದ ಪಡೆದ ಮಕ್ಕಳನ್ನು ಈತ ತನ್ನ ಮಕ್ಕಳೆಂದೇ ಭಾವಿಸಬೇಕಾಗಿತ್ತು. ಅಲ್ಲದೆ ತನ್ನ ಹಿಂದಿನ ಗಂಡನ ಮನೆಯ ಆಸ್ತಿಯಲ್ಲಿ ಆಕೆ ಯಾವ ಪಾಲನ್ನೂ ಕೇಳುವಂತಿರಲಿಲ್ಲ. ಈ ಎಲ್ಲ ನಿರ್ಬಂಧಗಳಿಗೆ ಒಪ್ಪಿಕೊಂಡ ಪುರುಷ ಮತ್ತು ಸ್ತ್ರೀ ಅದರಲ್ಲೂ ಶೂದ್ರ ವರ್ಗದ ಪುರುಷ–ಸ್ತ್ರೀಯರು ಮರುವಿವಾಹ ಮಾಡಿಕೊಳ್ಳ ಬಹುದಾಗಿತ್ತು. ಇದನ್ನು ಆಯಾ ಜಾತಿಯ ಮುಖಂಡರ ಮುಂದೆ ಒಪ್ಪಿಕೊಂಡು ರಾತ್ರಿಯ ವೇಳೆ ವಿವಾಹವನ್ನು ನೆರವೇರಿಸುತ್ತಿದ್ದರು. ಬಹುತೇಕವಾಗಿ ಅಧ್ಯಯನ ಕಾಲಘಟ್ಟದಲ್ಲಿ ಸತಿಸಹಗಮನ ಪದ್ಧತಿ ಪ್ರಸಿದ್ಧವಾಗಿರದಿದ್ದರೂ ಆಯ್ಕೆಯಾಗಿ ಚಾಲ್ತಿಯಲ್ಲಿತ್ತು. ಈ ಪದ್ಧತಿ ಹೆಚ್ಚು ಕಡಿಮೆ ದಕ್ಷಿಣ ಭಾರತದಲ್ಲಿಯೂ ಚಾಲ್ತಿಯಲ್ಲಿದ್ದ ಬಗ್ಗೆ ದಾಖಲೆಗಳು ಸಿಗುತ್ತವೆ.

ಜಾತಿಸಂಕರಗಳು ಮತ್ತು ಜಾತಿಗಳ ಉಲ್ಲೇಖಗಳು ನೊಳಂಬವಾಡಿ ೩೨೦೦೦ ಶಾಸನಗಳಲ್ಲಿ ಕಂಡುಬರುತ್ತವೆ. ಬಾಗಳಿಯ ೧೨೭೩ರ ಶಾಸನದಲ್ಲಿ ಜಾತಿಭ್ರಷ್ಟತೆಯ ಉಲ್ಲೇಖವಿದ್ದು ಅಂಗಡಿ ಕಾಳಯ್ಯನ ಮಗಳು ಜಾತಿಸಂಕರವಾದಾಗ ಬಾಗಳಿಯ ೫೦ ಮಹಾಜನ ಮಹಾಪ್ರಧಾನ ಕುಮಾರ ಪಂಡಿತಯ್ಯ, ಹೆಗ್ಗಡೆ ಮಲ್ಲಯ್ಯ, ಗೋಪಯ್ಯಗಳು ಇದ್ದಾಗ ಸಭೆ ಸೇರಿ ಕಾಳಯ್ಯನು ದಂಡರೂಪದಲ್ಲಿ ೮೦ ಕಮ್ಮ ಭೂಮಿಯನ್ನು ದೇವರಿಗೆ ಬಿಡುತ್ತಾನೆ.[೧೬೦] ನೊಣಬರ ಚೌಡಯ್ಯ ಶಿವಾಚಾರಕ್ಕೆ ಕುಲಾಚಾರಕ್ಕೆ ತಪ್ಪಿದವರು, ಮುಸುವರಾದಿತ್ಯ ಮುಸುವವಂಶ, ಕುಡಿಯೊಕ್ಕಲು, ಕೊರವರ ಕನಕ, ಕಮ್ಮೆ ವೈಶ್ಯೆ ಕುಲೋತ್ತಮ ಸೂರಿಸೆಟ್ಟಿ ಮುಂತಾದ ಹೆಸರುಗಳನ್ನು ಶಾಸನಗಳಲ್ಲಿ ಕಾಣಬಹುದು.

**ದೇವದಾಸಿ ಪದ್ಧತಿ**

ಹೆಸರೇ ಸೂಚಿಸುವಂತೆ ದೇವದಾಸಿಯರು ದೇವರ ರಂಗಭೋಗಕ್ಕೆ ಮೀಸಲಾದ ಸ್ತ್ರೀಯರು. ಅವರ ಜೀವನವು ದೇವಾಲಯದಲ್ಲಿ ಪರಮಾತ್ಮನ ಸೇವೆಗಾಗಿ ಮುಡಿಪಾಗಿದ್ದಿತು. ದೇವಾಲಯಗಳ ನಿತ್ಯೋತ್ಸವ, ನೈಮಿತ್ಯಕೋತ್ಸವ ಮುಂತಾದ ವಿಶೇಷ ಸಂದರ್ಭಗಳಲ್ಲಿ ಸಂಗೀತ, ನೃತ್ಯ, ಕಲೆಗಳನ್ನು ಪ್ರದರ್ಶಿಸುವುದು ಇವರ ಕರ್ತವ್ಯವಾಗಿದ್ದಿತು.[೧೬೧] ದೇವಾಲಯದ ರಂಗಭೋಗದಲ್ಲಿ ದಾನ ನೀಡುವಾಗ ಈ ವೃತ್ತಿಯವರಿಗೂ ಒಂದು ಭಾಗ ಅಥವಾ ಒಂದು ವೃತ್ತಿಯನ್ನು ದಾನ ನೀಡಿರುವುದನ್ನು ಆ ಕಾಲದ ಶಾಸನಗಳು ಉಲ್ಲೇಖಿಸುತ್ತವೆ.

ದೇವಾಲಯದಲ್ಲಿ ನರ್ತಿಸುವ ನರ್ತಕಿ ಪದ್ಧತಿ ಕ್ರಿ.ಶ. ೬ನೇ ಶತಮಾನದಿಂದೀಚೆಗೆ ಪ್ರಾರಂಭವಾಗಿರಬೇಕೆಂದು ಅಭಿಪ್ರಾಯಪಡುತ್ತಾರೆ. ದಕ್ಷಿಣ ಭಾರತದಲ್ಲಿ ೯ನೇ ಶತಮಾನದಲ್ಲಿ ಈ ಪದ್ಧತಿ ಜಾರಿಗೆ ಬಂದಿತು. ದೇವದಾಸಿಯರು ಅಥವಾ ದೇವಾಲಯದ ನರ್ತಕಿಯರು

ವಿಜಯನಗರೋತ್ತರ ಕಾಲಘಟ್ಟದಲ್ಲಿ ಬಹುತೇಕವಾಗಿ ತಮ್ಮ ಅಸ್ತಿತ್ವವನ್ನು ಕಳೆದುಕೊಂಡು ಒಂದು ಬಗೆಯ ಕೆಳಮಟ್ಟದ ಜೀವನವನ್ನು ನಡೆಸಬೇಕಾಗಿ ಬಂದಿತು.[೧೬೨] ಇದಕ್ಕೆ ಕಾರಣಗಳು ಇಲ್ಲದಿಲ್ಲ. ದೇವಾಲಯಗಳಿಗೆ ದತ್ತಿಗಳು ಹರಿದುಬಂದವಾದರೂ ಆ ಎಲ್ಲ ದತ್ತಿಗಳು ದೇವರ ಕೈಂಕರ್ಯಗಳಿಗೆ ವಿಶೇಷವಾಗಿ ನೀಡಲ್ಪಟ್ಟವುಗಳಾದ್ದರಿಂದ ದೇವಾಲಯದ ರಂಗಭೋಗದ ಹೆಣ್ಣುಮಕ್ಕಳಿಗೆ ವಿಶೇಷ ದಾನ ದತ್ತಿಗಳು ಬರದೇ ಹೋದುದರಿಂದ ದೇವಾಲಯ ಸಮಿತಿ ಈ ಕೈಂಕರ್ಯಕ್ಕೆ ಅತ್ಯಲ್ಪ ಹಣವನ್ನು ಕೊಟ್ಟು ಈ ಸೇವೆಯನ್ನು ಮುಂದುವರಿಸುವ ಪದ್ಧತಿಯನ್ನು ಒಳಗು ಮಾಡಿಕೊಂಡಿತು. ಜೊತೆಗೆ ಕೆಲವೊಂದು ಹೆಣ್ಣುಮಕ್ಕಳು ಅಂದಿನ ಸ್ಥಾನಿಕ ಪ್ರಭುಗಳ ಅವಕೃಪೆಗೆ ಒಳಗಾಗಿ ಅವರ ಉಪಪತ್ನಿಯರಾಗಿ ಜೀವಿಸಬೇಕಾದ ಪರಿಸ್ಥಿತಿಯನ್ನು ಅನಿವಾರ್ಯವಾಗಿ ಒಪ್ಪಿಕೊಳ್ಳಬೇಕಾಯಿತು.[೧೬೩]

ಇಟಗಿಯ ಮಹಾದೇವಿಯ ದೇವಾಲಯವನ್ನು ನಿರ್ಮಿಸಿದಾಗ ಅತ್ಯಂತ ಸೌಂದರ್ಯವತಿಯರಾದ ನರ್ತಕಿಯರನ್ನು ದೇವದಾಸಿಯರಾಗಿ ನೇಮಿಸಿ ಅವರಿಗೆ ವಿಶೇಷ ದಾನದತ್ತಿಗಳನ್ನು ನೀಡಿ ವಸತಿ ಗೃಹಗಳಲ್ಲಿ ಅವರು ಜೀವಿಸುವಂತೆ ವ್ಯವಸ್ಥೆ ಮಾಡಿ ಈ ಎಲ್ಲ ವ್ಯವಸ್ಥೆಯನ್ನು ದಾನಿ ನೀಡಿದ ಭೂಮಿಯ ಉತ್ಪನ್ನದಿಂದ ನೆರವೇರಿಸುವಂತೆ ವ್ಯವಸ್ಥೆ ಮಾಡಲಾಗಿದ್ದಿತು. ಕೆಲವೊಂದು ದೇವದಾಸಿಯರು ವೇಶ್ಯ ಮನೆತನದಿಂದ ಬಂದವರಾಗಿದ್ದರೂ ಅವರು ಬ್ರಹ್ಮಚರ್ಯ ಪರಿಪಾಲನೆ ಮಾಡಬೇಕಾಗಿತ್ತು. ಆದರೆ ದೇವದಾಸಿಯರೆಲ್ಲರೂ ವೇಶ್ಯೆಯರಾಗಿರಲಿಲ್ಲ. ವೇಶ್ಯೆಯರೆಲ್ಲರೂ ದೇವದಾಸಿಗಳಾಗಿರಲಿಲ್ಲ. ದೇವದಾಸಿಯರಿಗೆ ಮಧ್ಯಯುಗೀನ ಕಾಲದಲ್ಲಿ ಗೌರವಯುತವಾದ ಸ್ಥಾನವಿತ್ತು. ಆನಂತರದ ದಿನಗಳಲ್ಲಿ ಹಲವಾರು ಸಾಮಾಜಿಕ ಮತ್ತು ಆರ್ಥಿಕ ಕಾರಣಗಳಿಂದಾಗಿ ಅವರ ನೈತಿಕತೆಯಲ್ಲಿ ಉಂಟಾದ ಕುಸಿತದಿಂದಾಗಿ ಸಮಾಜದಲ್ಲಿ ತಮ್ಮ ಸ್ಥಾನವನ್ನು ಕಳೆದುಕೊಂಡರು.[೧೬೪]

ಕ್ರಿ.ಶ. ೧೦೧೮ರಲ್ಲಿ ಜಗದೇಕಮಲ್ಲ ನೊಳಂಬಪಲ್ಲವ ಪೆರ್ಮಾನಡಿ ಉದಯಾದಿತ್ಯದೇವ ಉತ್ತರಾಯಣ ಸಂಕ್ರಾಂತಿಯಯೆಂದು ಪಂಪಾಪುರ ಕ್ಷೇತ್ರಕ್ಕೆ ಬಿಜಯಂಗೆಯ್ದು, ಬಾಳ್ಗುಳಿಯ ಕಲಿದೇವಸ್ವಾಮಿಗೆ, ತಪೋದನ, ಸತ್ರಕ್ಕೆ, ಪನ್ನಿರ್ವಸ್ಸೂಳೆಯಗಳ ಸೂಳೆವಾಳ ವಂಚಿಗಂಗ, ಪರಿಕಾರ, ಪಾತ್ರಕ್ಕೆ, ದೇಸಿಗಛಾತ್ರ ಭೋಜನಕ್ಕೆ ಸೋಮಸಿಂಗಭಳಾರರ ಪಾದಪೂಜೆ ಮಾಡಿ ದಾನ ಕೊಟ್ಟನು.[೧೬೫] ಈ ಪದ್ಧತಿ ಅರಸುಮನೆತನಗಳ ಕಾಲದಲ್ಲಿ ಆರಂಭವಾಗಿದ್ದರೂ ಪ್ರಸ್ತುತ ಸಂದರ್ಭದಲ್ಲಿ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದೆ. ಪಾಂಡ್ಯರ ರಾಜಧಾನಿಯಾದ ಉಚ್ಚಂಗಿ ದುರ್ಗದಲ್ಲಿ ಉಚ್ಚಂಗಿ ದೇವಿಯ ಸೇವಾಕಾರ್ಯವಾಗಿ ಈ ಪದ್ಧತಿ ಆಧುನಿಕ ಸಮಾಜದಲ್ಲಿ ಬೇರೆ ರೂಪ ಪಡೆದುಕೊಂಡು ಇಂದೂ ಜೀವಂತವಾಗಿ ಉಳಿದುಕೊಂಡಿದೆ.

**ಆಭರಣಗಳು ಮತ್ತು ವಸ್ತ್ರಾಲಂಕಾರ**

ಆಭರಣವು ಸೌಂದರ್ಯಕ್ಕೆ ಅತ್ಯಂತ ಮೆರುಗನ್ನು ನೀಡುವ ವಸ್ತುವಾಗಿದ್ದರಿಂದ ಅತೀ ಪ್ರಾಚೀನ ಕಾಲದಿಂದಲೂ ಆಭರಣಗಳನ್ನು ಬಳಸುವ ಪದ್ಧತಿ ಕಂಡುಬರುತ್ತದೆ. ಪಾಂಡ್ಯರು,

ಕಲ್ಯಾಣದ ಚಾಳುಕ್ಯರು ಮತ್ತು ಹೊಯ್ಸಳರ ಕಾಲಘಟ್ಟದಲ್ಲಿಯೂ ಇದು ಮುಂದುವರಿಯಿತು. ಹೊಯ್ಸಳರ ಶಿಲ್ಪಗಳಂತೂ ಆಭರಣಗಳಿಂದಲೇ ಅಲಂಕೃತಗೊಂಡಿವೆ. ಇದನ್ನು ಗಮನಿಸಿದಾಗ ರಾಜ ರಾಣಿಯರು ಅಂದಿನ ಕಾಲದಲ್ಲಿ ಹೇಗೆ ಅಲಂಕರಿಸಿಕೊಳ್ಳುತ್ತಿದ್ದರೆಂಬುದನ್ನು ಅರ್ಥ ಮಾಡಿಕೊಳ್ಳಬಹುದು.[೧೬೬] ಬೆಲೆಬಾಳುವ ಹರಳುಗಳು, ವಜ್ರ, ನೀಲಮಣಿ, ಹವಳ, ಚಂದ್ರಕಾಂತಮಣಿ, ನೀಲಿ ಹವಳ, ಗೋಮೇದಿಕಾ, ಪುಷ್ಯರಾಗ, ಕೆಂಪುಹವಳ, ರತ್ನಗಳು ಮುಂತಾದವುಗಳನ್ನು ಚಿನ್ನ ಮತ್ತು ಬೆಳ್ಳಿಗಳ ಜೊತೆ ಬಳಸಿ ಹಲವು ಬಗೆಯ ಆಭರಣಗಳನ್ನು ರಚಿಸಿ ಅವುಗಳನ್ನು ಶ್ರೀಮಂತರು, ರಾಜರು, ದೊಡ್ಡ ಅಧಿಕಾರಿಗಳು ಧರಿಸುತ್ತಿದ್ದರು. ಪುರುಷರು ಮತ್ತು ಸ್ತ್ರೀಯರು ಕಿವಿಯೋಲೆಗಳನ್ನು ಧರಿಸುತ್ತಿದ್ದರು. ಹೆಣ್ಣುಮಕ್ಕಳು ಕಿವಿಯೋಲೆ, ಮೂಗುತಿ ಅಥವಾ ನತ್ತು, ಕೈಕಡಗ, ಕಾಲಂದಿಗೆ, ಕಾಲುಂಗುರ ಇವುಗಳನ್ನು ಸಾಮಾನ್ಯವಾಗಿ ಬಳಸುತ್ತಿದ್ದರು. ಇದಲ್ಲದೆ ಶ್ರೀಮಂತರ ಮನೆಯ ಹೆಣ್ಣುಮಕ್ಕಳು ಡಾಬು ಅಥವಾ ನಡುಪಟ್ಟಿ, ತೋಳ್ಬಂದಿ, ಅನೇಕ ಮಾದರಿಯ ಸರಗಳು, ಬೈತಲೆ ಬೊಟ್ಟು, ಸೂರ್ಯ, ಚಂದ್ರ, ಬುಗುಡಿ, ಜಡೆಬಿಲ್ಲೆ, ರಾಗಟಿ ಮುಂತಾದ ಚಿನ್ನದ ಆಭರಣಗಳನ್ನು ಧರಿಸುತ್ತಿದ್ದರು. ಮಧ್ಯಮ ವರ್ಗದ ಹೆಣ್ಣುಮಕ್ಕಳು ಈ ಎಲ್ಲ ಆಭರಣಗಳನ್ನು ಬೆಳ್ಳಿಯಲ್ಲಿ ಮಾಡಿಸಿ ಹಾಕಿಕೊಳ್ಳುತ್ತಿದ್ದರು.[೧೬೭]

ಸ್ತ್ರೀಯರು ಮತ್ತು ಪುರುಷರು ಸಾಮಾನ್ಯವಾಗಿ ಉತ್ತಮವಾದ ಹತ್ತಿ ಮತ್ತು ರೇಷ್ಮೆ ಬಟ್ಟೆಗಳನ್ನು ವಿಶೇಷ ಸಂದರ್ಭಗಳಲ್ಲಿ ಬಳಸುತ್ತಿದ್ದರು. ರಾಜ, ರಾಣಿಯರು ಮತ್ತು ಶ್ರೀಮಂತರು ದಿನನಿತ್ಯವೂ ರೇಷ್ಮೆಯ ವಸ್ತ್ರಗಳನ್ನು ಧರಿಸುತ್ತಿದ್ದರು. ಬ್ರಾಹ್ಮಣರು ದಿನನಿತ್ಯವೂ ಹತ್ತಿಯ ಬಟ್ಟೆಗಳನ್ನು ಧರಿಸುತ್ತಿದ್ದರು. ಒಂದು ಅಂಗವಸ್ತ್ರ, ಪಂಚೆ ಬ್ರಾಹ್ಮಣರ ಸಾಮಾನ್ಯ ಉಡುಗೆಯಾಗಿದ್ದಿತು. ಎಲ್ಲ ಪುರುಷರು ಇದೇ ಬಗೆಯ ಉಡುಗೆಯನ್ನು ತೊಡುತ್ತಿದ್ದರಾದರೂ ಅದನ್ನು ಧರಿಸುವ ಕ್ರಮದಲ್ಲಿ ಅವರ ಜಾತಿ ಮತ್ತು ಅಂತಸ್ತನ್ನು ಹೇಳಬಹುದಾಗಿತ್ತು. ಶ್ರೀಮಂತರುಗಳು ರೇಷ್ಮೆಯ ಜರತಾರಿಯ ಬಟ್ಟೆಗಳನ್ನು ಬಳಸಿದರೆ, ಬಡವರು ಮತ್ತು ಮಧ್ಯಮ ವರ್ಗದವರು ಹತ್ತಿಯ ಬಟ್ಟೆಗಳನ್ನು ಬಳಸುತ್ತಿದ್ದರು. ಹೆಣ್ಣುಮಕ್ಕಳು ಸೀರೆಯನ್ನು, ಕಂಚುಕಗಳನ್ನು ಧರಿಸುತ್ತಿದ್ದರು. ಇಲ್ಲಿಯೂ ಕೂಡ ಸೀರೆಯನ್ನು ಧರಿಸುವ ಕ್ರಮ ಅವರ ಸಾಮಾಜಿಕ ಸ್ತರವನ್ನು ಅವರ ಧಾರ್ಮಿಕ ಹಿನ್ನೆಲೆಯನ್ನು ಸೂಚಿಸುತ್ತಿತ್ತು. ಸಾಮಾನ್ಯವಾಗಿ ಕೆಳವರ್ಗದ ಹೆಣ್ಣುಮಕ್ಕಳು ಕಂಚುಕವನ್ನು ಧರಿಸುತ್ತಿರಲಿಲ್ಲ. ಸೀರೆಯಲ್ಲಿಯೇ ತಮ್ಮ ಇಡೀ ದೇಹದ ಯಾವುದೇ ಅಂಗ ಕಾಣದಂತೆ ಧರಿಸುವ ಪದ್ಧತಿ ಚಾಲ್ತಿಯಲ್ಲಿತ್ತು. ಪಾಂಡ್ಯರ ಶಾಸನಗಳಲ್ಲಿ ಆಭರಣ ಮತ್ತು ವಸ್ತ್ರಗಳ ಬಗೆಗೆ ಉಲ್ಲೇಖಗಳು ದೊರೆಯುವುದು ಅತಿ ವಿರಳ. ದೇವಾಲಯಗಳಿಗೆ ದಾನ ನೀಡುವ ಸಮಯದಲ್ಲಿ ಬಟ್ಟೆ ಅಥವಾ ವಸ್ತ್ರಗಳ ಉಲ್ಲೇಖ ಬರುತ್ತದೆ. ಆಭರಣಗಳ ಉಲ್ಲೇಖ ಬರದಿದ್ದರೂ ಅವರ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳ ಮೂರ್ತಿಶಿಲ್ಪ, ವೀರಗಲ್ಲು, ಮಹಾಸತಿ ಸ್ಮಾರಕ ಶಿಲ್ಪಗಳು ಈ ಬಗೆಗೆ ಮಾಹಿತಿ ನೀಡುತ್ತವೆ ಹಾಗೂ ಆಭರಣ ತಯಾರಿಕೆಯಲ್ಲಿ ನಿರತರಾದ ಅಕ್ಕಸಾಲಿಗ / ಕಂಚುಗಾರ ಮೊದಲಾದ ವೃತ್ತಿಯವರ ಉಲ್ಲೇಖಗಳು ದೊರೆಯುತ್ತವೆ.

**ಶಿಕ್ಷಣ**

ಪ್ರಾಚೀನ ಕಾಲದಲ್ಲಿ ಭಾರತದ ಎಲ್ಲೆಡೆ ಪ್ರಚಲಿತವಿದ್ದ ಗುರುಕುಲ ಪದ್ಧತಿಯು ಚಾಲ್ತಿಯಲ್ಲಿತ್ತು. ಗುರುಮುಖೇನ ಮೌಖಿಕವಾಗಿ ವೇದಪಾಠಗಳನ್ನೂ, ವ್ಯಾಕರಣವನ್ನೂ ಬಾಯಿಪಾಠ ಮಾಡಿ ಅಭ್ಯಾಸ ಮಾಡಲಾಗುತ್ತಿತ್ತು. ಇಂಥ ಅನೇಕ ಶಿಕ್ಷಣ ಕೇಂದ್ರಗಳು ನೊಳಂಬವಾಡಿ ಪ್ರದೇಶದಲ್ಲಿ ಚಾಲ್ತಿಯಲ್ಲಿದ್ದವು. ಆದರೆ ಸಾಂಸ್ಥಿಕ ವ್ಯವಸ್ಥೆಯಲ್ಲಿ ಕಲಿಯುವುದಕ್ಕಿಂತ ಹೆಚ್ಚಾಗಿ ಕೌಟುಂಬಿಕ ವ್ಯವಸ್ಥೆಯಲ್ಲಿ, ಅಂದರೆ ತಂದೆಯಿಂದ ಮಕ್ಕಳು ಕಲಿಯುತ್ತಿದ್ದುದೇ ಹೆಚ್ಚಾಗಿತ್ತು. ಆದ್ದರಿಂದ ಶಿಕ್ಷಣದ ಬಹುಭಾಗ ಔಪಚಾರಿಕವಲ್ಲದ ರೀತಿಯಲ್ಲಿ ನಡೆಯುತ್ತಿತ್ತು.

ಕಲ್ಯಾಣದ ಚಾಳುಕ್ಯರು ಅವರ ಸಾಮಂತರಾದ ಉಚ್ಚಂಗಿ ಪಾಂಡ್ಯರು, ಹೊಯ್ಸಳರ ಕಾಲಘಟ್ಟದಲ್ಲಿ ಶಿಕ್ಷಣವು ಅಗ್ರಹಾರಗಳು, ಬ್ರಹ್ಮಪುರಿಗಳು, ಮಠಗಳು ಮತ್ತು ಘಟಿಕಾಸ್ಥಾನಗಳಲ್ಲಿ ನೆರವೇರುತ್ತಿತ್ತು. ಅತ್ಯಂತ ಪ್ರಾಥಮಿಕ ಶಿಕ್ಷಣವು ಪ್ರತಿಯೊಂದು ಗ್ರಾಮದಲ್ಲಿ ಸ್ಥಾನಿಕ ವಿದ್ವಾಂಸರ ಅವಗಾಹನೆಯಲ್ಲಿ ಜರುಗುತ್ತಿತ್ತು. ಆದರೆ ಕಲ್ಯಾಣದ ಚಾಳುಕ್ಯರ ಕಾಲಘಟ್ಟದಲ್ಲಿ ಅನೇಕ ಬಗೆಯ ಅಗ್ರಹಾರಗಳು ಚಾಲ್ತಿಯಲ್ಲಿದ್ದುದನ್ನು ಗುರುತಿಸಲಾಗಿದೆ. ಅಂದರೆ ಏಕವ್ಯಕ್ತಿ ಅಗ್ರಹಾರಗಳು, ಸರ್ವಮಾನಿ ಅಗ್ರಹಾರಗಳು ಇತ್ಯಾದಿ. ಒಂದು ಅಗ್ರಹಾರದ ಬ್ರಾಹ್ಮಣರನ್ನು ಮತ್ತು ಮಹಾಜನರನ್ನು ಉಲ್ಲೇಖಿಸುವಾಗ ಅನೇಕ ಬಾರಿ ಶಾಸನಗಳು ಸಂಖ್ಯೆಗಳನ್ನು ಉಲ್ಲೇಖಿಸುತ್ತವೆ. ಕೆಲವೊಂದು ಅಗ್ರಹಾರಗಳನ್ನು ದಾಖಲಿಸುವಾಗ ಹರಿಶ್ಚಂದ್ರರ ದತ್ತಿ, ಜನಮೇಜಯ ಅಗ್ರಹಾರ ಇತ್ಯಾದಿ ಉಲ್ಲೇಖಗಳು ಕಂಡುಬರುತ್ತವೆ.[೧೬೮] ಈ ಬಗೆಯ ಅಗ್ರಹಾರಗಳನ್ನು ಸ್ಥಾಪನೆ ಮಾಡಿದ ವ್ಯಕ್ತಿಗಳ ಹೆಸರು ಮರೆತುಹೋದ ಹಿನ್ನೆಲೆಯಲ್ಲಿ ಆ ಅಗ್ರಹಾರಗಳನ್ನು ಜನಮೇಜಯ ಅಗ್ರಹಾರ, ಹರಿಶ್ಚಂದ್ರ ಅಗ್ರಹಾರ ಇತ್ಯಾದಿಯಾಗಿ ದಾಖಲಿಸುತ್ತಾರೆ. ಬ್ರಾಹ್ಮಣರ ಸಂಖ್ಯೆಗಳನ್ನು ಗುರುತಿಸುವಾಗ ದಾಖಲಾಗಿರುವ ಸಂಖ್ಯೆಗಳು ಆ ಅಗ್ರಹಾರದಲ್ಲಿ ವೃತ್ತಿಯನ್ನು ಹೊಂದಿದ ದಾನವನ್ನು ಪಡೆದ ಬ್ರಾಹ್ಮಣ ಸಮುದಾಯದ ಸಂಖ್ಯೆಯನ್ನು ಅದು ದಾಖಲಿಸುತ್ತದೆ ಎಂದು ಭಾವಿಸಲು ಅನೇಕ ಶಾಸನಗಳು ಸಹಾಯ ಮಾಡುತ್ತವೆ. ಕಾರಣ ದಾನ ಕೊಡುವಾಗ ಶಾಸನಗಳಲ್ಲಿ ವೃತ್ತಿಗಳ ಸಂಖ್ಯೆಯನ್ನು ಬ್ರಾಹ್ಮಣರ ಹೆಸರುಗಳನ್ನು ಮತ್ತು ದೇವಾಲಯಗಳಲ್ಲಿ ಅರ್ಚಕರು ನೆರವೇರಿಸಬೇಕಾದ ಕೈಂಕರ್ಯ ಮತ್ತು ಇತ್ಯಾದಿಗಳನ್ನು ವಿವರಿಸುತ್ತವೆ.

ಇವುಗಳ ಹಿನ್ನೆಲೆಯಲ್ಲಿ ಗಮನಿಸಿದಾಗ ಒಂದೊಂದು ಕಾರ್ಯಕ್ಕೂ ಪ್ರತ್ಯೇಕ ವೃತ್ತಿಗಳಿದ್ದುದರಿಂದ ಅಗ್ರಹಾರದಲ್ಲಿ ವಾಸಿಸುತ್ತಿದ್ದ ಬ್ರಾಹ್ಮಣರ ಸಂಖ್ಯೆಯು ಅಧಿಕವಾಗಿರುತ್ತಿತ್ತು. ಉದಾಹರಣೆಗೆ ಚತುರ್ವೇದಿ ಅಗ್ರಹಾರವಾದರೆ ಅಂತಹ ಕಡೆ ಕನ್ನಡ ಪ್ರಾಥಮಿಕ ಶಿಕ್ಷಣಕ್ಕೆ ಒಬ್ಬ ಉಪಾಧ್ಯಾಯ, ಸಂಸ್ಕೃತ ಪ್ರಾಥಮಿಕ ಶಿಕ್ಷಣಕ್ಕೆ ಒಬ್ಬ ಉಪಾಧ್ಯಾಯ, ನಾಲ್ಕು ವೇದಗಳಿಗೆ ನಾಲ್ಕು ಜನ ಅಧ್ಯಾಪಕರು, ಖಂಡಿಕ ಉಪಾಧ್ಯಾಯಿಗಳು ನಾಲ್ಕು ಇಷ್ಟಲ್ಲದೆ ಆರು ವೇದಾಂಗಗಳಿಗೆ ಆರು ಜನ ಹೀಗೆ ಶಾಸ್ತ್ರಗಳು ಹೆಚ್ಚು ವಿಸ್ತೃತವಾದಂತೆ ಅಧ್ಯಯನ ವಿಸ್ತೃತವಾದಂತೆ ಅನೇಕ ಸಂಖ್ಯೆಯ ಮಹಾಜನರು ಕಂಡುಬರುತ್ತಾರೆ. ಹೀಗಾಗಿ ಅಗ್ರಹಾರದ ಮಹಾಜನರುಗಳನ್ನು ಉಲ್ಲೇಖಿಸುವಾಗ

ಅನೇಕ ಸಂಖ್ಯೆಯ ಮಹಾಜನರುಗಳ ಉಲ್ಲೇಖ ಕಂಡುಬರುತ್ತದೆ. ಈ ಹಿಂದೆ ಬ್ರಾಹ್ಮಣ ಸಮುದಾಯವನ್ನು ಉಲ್ಲೇಖಿಸುವಾಗ ಅವರ ಗುಣಗಾನ ಮಾಡುವ ಶಾಸನದ ಪಾಠವನ್ನು ಹೇಳಲಾಗಿದೆ. ಅದರಂತೆ ಬ್ರಾಹ್ಮಣರುಗಳು ಷಟ್ಕರ್ಮ ನಿರತರಾಗಿಯೂ ವೇದಾಧ್ಯಯನ ಸಂಪನ್ನ ರಾಗಿಯೂ, ಒಂದಕ್ಕಿಂತ ಹೆಚ್ಚು ವೇದಗಳಲ್ಲಿ ಪರಿಣಿತರಾಗಿದ್ದರಲ್ಲದೆ ವೇದಾಂಗಗಳು, ಭರತನಾಟ್ಯ ಶಾಸ್ತ್ರ, ಕಾವ್ಯ ಇತ್ಯಾದಿ ಅನೇಕ ಶಾಸ್ತ್ರಗಳಲ್ಲಿ ಪರಿಣತರಾಗಿದ್ದುದನ್ನು ಆ ಕಾಲದ ಶಾಸನಗಳು ಖಚಿತಪಡಿಸುತ್ತವೆ.

ಈ ಹಿನ್ನೆಲೆಯಲ್ಲಿ ಪ್ರಾಚೀನ ಕಾಲದ ಮತ್ತು ಮಧ್ಯಕಾಲೀನ ಯುಗದ ಅಗ್ರಹಾರಗಳು ಇಂದಿನ ವಿಶ್ವವಿದ್ಯಾನಿಲಯಗಳಂತೆ ಉನ್ನತ ಶಿಕ್ಷಣವನ್ನು ನೀಡುತ್ತಿದ್ದವೆಂದು ಪರಿಭಾವಿಸಲಾಗಿದೆ. ನೊಳಂಬವಾಡಿಯಲ್ಲಿ ಅಂತರ್ಗತವಾಗಿದ್ದ ನೀಲಗುಂದ ಅಥವಾ ನೀರ್ಗುಂದ ಅಗ್ರಹಾರ ವಾಗಿದ್ದಿತು.[೧೫೯] ಯಲ್ಲಾಪುರದ ಶಾಸನವು ಅಗ್ರಹಾರ ಮಾದಾಪುರವನ್ನು ಉಲ್ಲೇಖಿಸುತ್ತದೆ.[೧೬೦] ಹಗರಿಬೊಮ್ಮನಹಳ್ಳಿ ಮೋರಿಗೆರೆಯ ಶಾಸನವು ಮಠವನ್ನು ಮಠದಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದ ವಿದ್ಯಾರ್ಥಿಗಳನ್ನು ದಾಖಲಿಸುತ್ತದೆ.[೧೬೧] ಇಷ್ಟಲ್ಲದೆ ಕುಡಿತಿನಿಯ ದರ್ಗಾದಲ್ಲಿನ ಶಾಸನವು ಸಿರಿವಾರದ ಬ್ರಹ್ಮಪುರಿಯನ್ನು ಉಲ್ಲೇಖಿಸುತ್ತದೆ. ಇದಲ್ಲದೆ ಹರಪನಹಳ್ಳಿ ತಾಲ್ಲೂಕಿನ ಶಾಸನವೊಂದು ಬೆಣ್ಣೆಗನೂರಿನಲ್ಲಿ ಬ್ರಹ್ಮಪುರಿ ಇದ್ದುದನ್ನು ದಾಖಲಿಸುತ್ತದೆ.[೧೬೨] ಹಿರಿಯ ಹಡಗಲಿ, ಹೂವಿನಹಡಗಲಿ, ಕುರುವತ್ತಿ, ಬಾಗಳಿಗಳೂ ಕೂಡ ಅತ್ಯುತ್ತಮ ಶಿಕ್ಷಣ ಕೇಂದ್ರಗಳಾಗಿದ್ದವೆಂದು ಅಲ್ಲಿನ ಶಾಸನಗಳು ಹೇಳುತ್ತವೆ. ಅಗ್ರಹಾರಗಳಲ್ಲಿ ವಾಸಿಸುತ್ತಿದ್ದ ಬ್ರಾಹ್ಮಣರುಗಳ ಉಲ್ಲೇಖ ಕೂಡ ಅತ್ಯಂತ ವಿಶೇಷವಾದವುಗಳಾಗಿವೆ. ಮೋರಿಗೆರೆಯ ಸೋಮೇಶ್ವರ ಪಂಡಿತರು ಸಮಸ್ತ ಶಾಸ್ತ್ರ ಪಾರವಾರಗ ರಾಗಿದ್ದರೆಂದು ಶಾಸನವೊಂದು ದಾಖಲಿಸುತ್ತದೆ.[೧೬೩] ಶ್ರೀಮತ್ಕಂಟೇಯ ವಾಕಣೀದೇವರ ಶಿಷ್ಯ ಸೋಮೇಶ್ವರ ಪಂಡಿತ ಕಲಿಶಾಸ್ತ್ರ ಬಲ್ಲವನಾಗಿದ್ದನೆಂದು ಇವನನ್ನು ಸರಸ್ವತೀ ಕರ್ಣಾವಸಂತನೆಂದು ಶಾಸನವು ದಾಖಲಿಸುತ್ತದೆ.[೧೬೪] ಕುರುವತ್ತಿಯ ಜ್ಞಾನೇಶ್ವರ ಪಂಡಿತರು ಸರಸ್ವತೀ ಕರ್ಣಾ ವಸಂತನೆನಿಸಿಕೊಂಡಿದ್ದರು.[೧೬೫] ಇದೇ ಸ್ಥಳದ ಲಕುಲೀಶ ಪಂಡಿತರು ಸಕಲ ಆಗಮ ವಿಶಾರದ ಪ್ರಕಟಿತ ಕೀರ್ತಿಗಳ ಶೇಷ ಶಾಸ್ತ್ರಪ್ರವೀಣರಾಗಿದ್ದರೆಂದು ಶಾಸನ ಹೊಗಳುತ್ತದೆ. ಮತ್ತೊಂದು ಶಾಸನ ವಿನಯ ಸಮಾಧಿಶೀಲಗುಣ ಶೌಚಚರಿತ್ರ ತಪಃಪ್ರಭಾವದೊಳ್ ಮನುಮುನಿಂದಗಸ್ತ್ಯ...... ವಿನಯನಿಧಿ ಸತ್ಯದಾಗರ ಮನುಧರ್ಮ್ಮಚಾರಿ' ಎಂದುವರ್ಣಿಸಿದೆ.[೧೬೬] ಆಬಲೂರಿನ ಮಹಾಜನರು 'ಯಮನಿಯಮಸ್ವಾಧ್ಯಾಯಧಾರಣ ಮೋನಾನುಷ್ಠಾನಪರಾಯಣರುಂ ಜೋತಿಷ್ಟೋಮದ್ವಾರ ಕ್ರೀಯೆಯಲ್ಲಿ ನಿರತರಾಗಿದ್ದರೆಂದು ಶಾಸನವುದಾಖಲಿಸುತ್ತದೆ.[೧೬೭] ಹೊಳಲ ಮಹಾಜನರನ್ನು ಚತುಸ್ಸಮಯ ಸಮುದ್ಧರಣರಾದ ಇವರು ತ್ರೈಲೋಕ್ಯೋಪಾಧ್ಯಾಯರೆಂದು ಶಾಸನವು ಕೊಂಡಾಡಿದೆ.[೧೬೮]

ಇಷ್ಟಲ್ಲದೆ ಕುಡಿತಿನಿಯ ಪಂಚಮಠ, ಕೊಳಗಲ್ಲು ಮಠ, ಪಾಪೆಕಲ್ಲು ಮಠ, ದಮ್ಮೂರದ ಮಹಾದೇವ ದೇವಾಲಯ, ಕುರುವತ್ತಿಯ ಅಹವಮಲ್ಲೇಶ್ವರ ದೇವಾಲಯ, ಉಚ್ಚಂಗಿಯ

ತ್ರೈಲೋಕ್ಯ ನಕರೇಶ್ವರ ದೇವಾಲಯ, ಗುಡಿಹಳ್ಳಿಯ ನೊಳಂಬೇಶ್ವರ ದೇವಾಲಯ, ಮೇಹೂರು ತ್ರೈಪುರುಷ ದೇವಾಲಯ, ಹಡಗಲಿಯ ಕಲಿದೇವರ ದೇವಾಲಯ, ಮೋರಗೆರೆಯ ನೊಳಂಬೇಶ್ವರ ದೇವಾಲಯ, ಕೆರೆ ಗುಡಿ ಹಳ್ಳಿಯ ನೊಳಂಬೇಶ್ವರ ದೇವಾಲಯ, ಕೊಟ್ಟೂರು ರಾಮೇಶ್ವರ ದೇವಾಲಯ, ಹನಶಿ ಪರಶುರಾಮೇಶ್ವರ ದೇವಾಲಯ, ಅಂಬಳಿ ಮೂಲಸ್ಥಾನ ದೇವಾಲಯ, ಕೋಗಳಿ ಪಂಚಮಠ, ಸಿಂದವಾಳ ಸೋಮೇಶ್ವರ ದೇವಾಲಯ, ಬೈಲೂರು ಮಲ್ಲಿಕಾರ್ಜುನ ದೇವಾಲಯ, ಮುಳಗುಂದದ ಸ್ವಯಂಭುದೇವರ ದೇವಾಲಯ, ಉಲುವತ್ತಿಯ ರಾಮೇಶ್ವರ ದೇವಾಲಯ, ಆಲಬೂರು ಮೂಲಸ್ಥಾನ ಸ್ವಯಂಭು ದೇವಾಲಯ, ಹಿರೇಹಡಗಲಿ ಮಲ್ಲಿಕಾರ್ಜುನ ದೇವಾಲಯ, ಓರವಾಯಿ ಕಲಿದೇವರ ದೇವಾಲಯ, ಯೆಳೆಹ(ಹಳ್ಳ) ಅಗಸ್ತೇಶ್ವರ ದೇವಾಲಯ, ಬಾಗಳಿ ಕಲಿದೇವರ ದೇವಾಲಯ, ಹಲವಾಗಿಲು ಸ್ವಯಂಭು ಕಲಿಮಠ ದೇವಾಲಯ, ಕೋಳೂರು, ಕುರುಗೋಡು ಮೊದಲಾದವು ವಿದ್ಯಾಕೇಂದ್ರಗಳಾಗಿದ್ದವು.[೧೭೯] ಈ ಪ್ರದೇಶದಲ್ಲಿ ಅಗ್ರಹಾರಗಳಿಗಿಂತ ಅಧಿಕವಾಗಿ ಮಠಗಳು ಹೆಚ್ಚು ಪ್ರಬಲವಾಗಿದ್ದುದನ್ನು ಪ್ರಸ್ತುತ ಅಧ್ಯಯನ ಖಚಿತಪಡಿಸುತ್ತದೆ. ಜಗದೇಕಮಲ್ಲ ವೀರಪಾಂಡ್ಯ ತನ್ನ ಹೆಸರಿನಲ್ಲಿ ವೀರಪಾಂಡ್ಯ ಮಠವನ್ನು ಸ್ಥಾಪಿಸಿ, ಅದಕ್ಕೆ ದಾನ ನೀಡಿರುವುದು ಇದಕ್ಕೆ ಮತ್ತಷ್ಟು ಪುಷ್ಠಿ ನೀಡುತ್ತದೆ. ದೇವಾಲಯಗಳ ಪಟ್ಟಿಯನ್ನು ಗಮನಿಸುವಾಗಲೂ ಕೂಡ ಬೆರಳೆಣಿಕೆಯ ವೈಷ್ಣವ ದೇವಾಲಯಗಳು ಇಲ್ಲಿ ನಿರ್ಮಾಣಗೊಂಡಿವೆ. ಹಾಗೆ ಅನೇಕ ಶೈವ ದೇವಾಲಯಗಳು ಇಲ್ಲಿ ಇದ್ದು, ಎಲ್ಲ ದೇವಾಲಯಗಳಲ್ಲಿ ಸ್ಥಾನಪತಿಗಳಿದ್ದಂತೆ ತಿಳಿದುಬರುತ್ತದೆ. ಬಹುತೇಕ ಈ ಎಲ್ಲ ಸ್ಥಾನಪತಿಗಳು ಲಕುಲೀಶ ಪಂಥದ ಸ್ಥಾನಪತಿಗಳಾಗಿದ್ದು ನೈಷ್ಠಿಕ ಬ್ರಹ್ಮಚಾರಿಗಳಾಗಿದ್ದುಕೊಂಡು ತಾವು ಪಂಡಿತರಾಗಿದ್ದ ವಿಷಯಗಳನ್ನು ಸ್ಥಳೀಯ ವಿದ್ಯಾರ್ಥಿಗಳಿಗೆ ನಿರ್ವಂಚನೆಯಿಂದ ಬೋಧಿಸುತ್ತಿದ್ದರೆಂದು ಖಚಿತಪಡಿಸಿಕೊಳ್ಳಬಹುದು. ನೊಳಂಬವಾಡಿ ಪರಿಸರದಲ್ಲಿ ಅದರಲ್ಲೂ ಪಾಂಡ್ಯರ ಅಧೀನಕ್ಕೆ ಒಳಪಟ್ಟ ಪ್ರದೇಶದಲ್ಲಿ ಮತ್ತು ಕಾಲಘಟ್ಟದಲ್ಲಿ ಶಿಕ್ಷಣ ಅತ್ಯುತ್ತಮವಾಗಿ ಪಸರಿಸಿತ್ತಲ್ಲದೆ ಅನೇಕ ವಿಷಯಗಳನ್ನು ಅಧ್ಯಯನ ಮಾಡಲಾಗುತ್ತಿತ್ತು.

ಘಟಿಕಾಸ್ಥಾನವೆಂಬುದರ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಬಿಪ್ರಾಯಗಳಿವೆ. ಅರ್ಥ ಮತ್ತು ಸ್ವರೂಪದ ಬಗೆಗೂ ಏಕಾಭಿಪ್ರಾಯವಿಲ್ಲ. ಘಟಿಕ ಎಂದರೆ ಮಣ್ಣಿನ ಪಾತ್ರೆಯೊಂದು ಕಾಲವನ್ನು ಅಳೆಯಲು ಬಳಸುತ್ತಿದ್ದ ಸಾಧನವೆಂದೂ ಕರೆಯುತ್ತಾರೆ. ಪ್ರಾಚೀನ ಕರ್ನಾಟಕದಲ್ಲಿನ ಅಗ್ರಹಾರಗಳು, ಬ್ರಹ್ಮಪುರಿಗಳು, ದೇವಾಲಯಗಳು ಮತ್ತು ಮಠಗಳಂತೆ ಘಟಿಕಾಸ್ಥಾನಗಳು ಸಹ ವಿದ್ಯಾ ಕೇಂದ್ರಗಳಾಗಿದ್ದವೆಂದು ತಿಳಿದುಬರುತ್ತದೆ. ಘಟಿಕಾಸ್ಥಾನವೆಂದರೆ ಧಾರ್ಮಿಕ ಶಿಕ್ಷಣ ಕ್ಷೇತ್ರ ಮಹಾವಿದ್ಯಾಲಯ" ಎಂಬ ಅರ್ಥಬರುತ್ತದೆ.[೧೮೦] ಕಲ್ಯಾಣಿ ಚಾಳುಕ್ಯರ ಕಾಲದಲ್ಲಿ ನಾವು ಕೆಲವು ಘಟಿಕಾಸ್ಥಾನಗಳನ್ನು ಕಾಣುತ್ತೇವೆ. ನಾಗಾವಿಯ ಕಲ್ಯಾಣಿ ಚಾಳುಕ್ಯರ ಕಾಲದಲ್ಲಿ ಘಟಿಕಾ ಸ್ಥಾನವಾಗಿತ್ತೆಂದು ಕ್ರಿ.ಶ. ೧೦೫೮ರ ಒಂದನೇ ಸೋಮೇಶ್ವರನ ಕಾಲದ ಶಾಸನವೊಂದು ತಿಳಿಸುತ್ತದೆ.[೧೮೧] ಕರ್ನಾಟಕದ ಕುಂತಳದಲ್ಲಿ ಘಟಿಕಾಸ್ಥಾನಗಳು ಇದ್ದಂತೆ ತೋರುತ್ತದೆ (ಕುಂತಳದ

ಶಿವಮೊಗ್ಗ ಜಿಲ್ಲೆ). ಘಟಿಕಾ ಸ್ಥಾನಗಳ ಬಗ್ಗೆ ವಾದ ವಿವಾದಗಳಿವೆ. ಅಂದರೆ ಇವುಗಳ ಸ್ವರೂಪದ ಬಗೆಗೆ ಒಮ್ಮತದ ಅಭಿಪ್ರಾಯವಿಲ್ಲ. ಆದರೆ ಕಲ್ಯಾಣ ಚಾಳುಕ್ಯರ ರಾಜನಾದ ಒಂದನೇ ಸೋಮೇಶ್ವರನ ಕಾಲದ ಕ್ರಿ.ಶ. ೧೦೫೮ ನಾಗಾವಿಯ ಶಾಸನವು ಈ ರೀತಿ ಉಲ್ಲೇಖಿಸುತ್ತದೆ. 'ಘಟಿಕಾಸ್ಥಾನದಮೆನಿಪಶಾಲೆಗೆ' ಇದರಿಂದ ಘಟಿಕಾಸ್ಥಾನಗಳು ವಿದ್ಯಾಕೇಂದ್ರಗಳೆಂದು ತಿಳಿದುಬರುತ್ತದೆ." ಮಯೂರಶರ್ಮನುವೀರಶರ್ಮನೆಂಬ ತನ್ನ ಗುರುವಿನೊಡನೆಪಲ್ಲವ ರಾಜಧಾನಿಯಾದ ಕಂಚಿಯ ಘಟಿಕಾಸ್ಥಾನಕ್ಕೆ 'ನಿಖಿಲಪ್ರವಚನಕ್ಕಾಗಿ ಹೋದನು' ಎಂದೂ ತಿಳಿದುಬರುತ್ತದೆ. ಇದರಿಂದಲೂ ಘಟಿಕಾಸ್ಥಾನಗಳು ಉತ್ತಮ ಅಥವಾ ಪ್ರೌಢ ವಿದ್ಯಾಕೇಂದ್ರ ಗಳಾಗಿದ್ದವು ಎಂಬುದನ್ನು ದೃಢಪಡಿಸಬಹುದು.[೧೮೨]

ಹಲವರು ವಿದ್ವಾಂಸರು ಇದನ್ನು ಒಂದು ಧಾರ್ಮಿಕ ಕೇಂದ್ರವೆಂದು ಕರೆದಿದ್ದಾರೆ. ಆದರೆ ಇನ್ನೋರ್ವ ವಿದ್ವಾಂಸರು "ಇದು ಬ್ರಹ್ಮಪುರಿಯನ್ನು ಹೋಲುತ್ತಿತ್ತು" ಎಂದು ಅಭಿಪ್ರಾಯ ಪಡುತ್ತಾರೆ. ಡಾ. ವೆಂಕಟೇಶ್ವರವರ ಪ್ರಕಾರ "ಘಟಿಕಾ ಸ್ಥಾನಗಳು ವಿದ್ಯಾರ್ಥಿಗಳು, ಉಪಾಧ್ಯಾಯರೂ ಕೂಡಿ ಚರ್ಚೆ ನಡೆಯುತ್ತಿದ್ದ ಮತ್ತು ಮಹಾವಿದ್ವಾಂಸರ ಸಂಪರ್ಕದಿಂದ ಧಾರ್ಮಿಕ ಸಾಹಿತ್ಯದಲ್ಲಿ ಅತ್ಯುತ್ತಮವಾದ ಜ್ಞಾನವನ್ನು ಪಡೆಯಲು ಸಾಧ್ಯವಾಗಿದ್ದ ಶ್ರೇಷ್ಠ ಸಂಸ್ಥೆಯೇ ಘಟಿಕಾಸ್ಥಾನ."[೧೮೩]

ಈ ಮೇಲಿನ ಎಲ್ಲಾ ಉಲ್ಲೇಖಗಳಿಂದ ಈ ಕೆಳಗಿನ ನಿರ್ಣಯಕ್ಕೆ ಬರಬಹುದು. ಶಾಸನಗಳು ಘಟಿಕಾಸ್ಥಾನಗಳೆಂದು ಕರೆದಿರುವುದು ಮತ್ತು ಇತರರ ಅಭಿಪ್ರಾಯದಲ್ಲಿ ಘಟಿಕಾ ಸ್ಥಾನಗಳು ವಿದ್ಯಾಭ್ಯಾಸ ಕೇಂದ್ರಗಳೆಂಬುದಂತೂ ನಿಜ. ಶಾಸನಾಧ್ಯಯನದಿಂದ ಅವುಗಳ ಸ್ವರೂಪ ತಿಳಿಯುವುದಿಲ್ಲ. ಆದ್ದರಿಂದ ಅವುಗಳ ಸ್ವರೂಪವನ್ನು ತಿಳಿಯಲು ಪ್ರಯತ್ನಿಸಲಾಗಿದೆ. ಘಟಿಕಾ ಸ್ಥಾನಗಳಿಗೆ ದಾನ ಕೊಟ್ಟಿರುವ ಶಾಸನಗಳಲ್ಲಿ ಅನೇಕ ಧರ್ಮಗಳು ಮತ್ತು ಇತರ ಗ್ರಂಥಗಳ ಅಧ್ಯಯನಕ್ಕೆ ಅವಕಾಶ ಮಾಡಿಕೊಡುವುದನ್ನು ನೋಡಿದರೆ ಪ್ರೊ. ಕೀಲ್ ಹಾರ್ನ್‌ರವರ ಘಟಿಕೆಗಳು ಬ್ರಹ್ಮಪುರಿಗಳನ್ನು ಹೋಲುತ್ತದೆ ಎಂಬ ಅಭಿಪ್ರಾಯವೇ ಸಮಂಜಸವೆನಿಸುತ್ತದೆ.[೧೮೪] ಅಂದರೆ ಘಟಿಕಾಸ್ಥಾನಗಳು ಬ್ರಹ್ಮಪುರಿಗಳನ್ನು ಹೋಲುತ್ತವೆ ಎಂದಾಯಿತು. ಬ್ರಹ್ಮಪುರಿಗಳು ಸಂಪೂರ್ಣವಾಗಿ ಅಗ್ರಹಾರಗಳನ್ನು ಹೋಲುತ್ತಿದ್ದು, ಅವು ಕೇವಲ ಪಟ್ಟಣದ ಒಂದು ಭಾಗವಾಗಿತ್ತೆಂದು ತಿಳಿದುಬರುವುದರಿಂದ ಘಟಿಕಾ ಸ್ಥಾನಗಳು ಅಗ್ರಹಾರ ಬ್ರಹ್ಮಪುರಿಗಳಂತೆ ಧಾರ್ಮಿಕ ಮತ್ತು ಲೌಕಿಕ ವಿದ್ಯಾಭ್ಯಾಸವನ್ನು ಹೊಂದಲು ಅವಕಾಶವಿದ್ದ ಪ್ರೌಢ ವಿದ್ಯಾಕೇಂದ್ರ ಗಳೆಂದರೆ ತಪ್ಪಾಗಲಾರದು.[೧೮೫] ಘಟಿಕಾಸ್ಥಾನದ ಪ್ರಾಚೀನತೆಯ ಬಗ್ಗೆ ತಿಳಿಯಬೇಕಾದುದು ಅವಶ್ಯಕ. ಕದಂಬ ದೊರೆಯಾದ ಕಾಕುಸ್ತವರ್ಮನ ಶಾಸನವೊಂದು ಘಟಿಕಾಸ್ಥಾನವನ್ನು ಹೆಸರಿಸಿದೆ. ಅಂದರೆ ತಾಳಗುಂದದ ಆ ಶಾಸನದಂತೆ ತಾಳಗುಂದವು ಒಂದು ಘಟಿಕಾ ಸ್ಥಾನವಾಗಿತ್ತೆಂದು ತಿಳಿದುಬರುತ್ತದೆ.[೧೮೬] ಶಾಸನಗಳ ಅಧ್ಯಯನ ಸಮಯದಲ್ಲಿ ಕೆಲವು ವ್ಯಕ್ತಿಗಳ ಹೆಸರುಗಳ ಮುಂದೆ 'ಘಟಿಕಾಸಾಹಸಿ' ಎಂಬ ಅರ್ಥ ಬರುವ ವಿಷಯಗಳು ಕಂಡು ಬರುತ್ತದೆ.[೧೮೭]

ಘಟಿಕಾ ಸಾಹಸಿ ಎಂದರೆ "ಘಟಿಕಾ ಸ್ಥಾನಗಳಲ್ಲಿ ಜ್ಞಾನದಸಾಹಸವನ್ನು ಪ್ರದರ್ಶಿಸಿದವನು ಎಂದು ಅರ್ಥೈಸಬೇಕಾಗುತ್ತದೆ. ಅಂದರೆ ಘಟಿಕಾ ಸ್ಥಾನಗಳಲ್ಲಿ ಚರ್ಚೆಗಳು ಹಾಗೂ ಶಾಸ್ತ್ರರ್ಥಗಳು ನಡೆಯುತ್ತಿದ್ದವೆಂದು ತಿಳಿದುಬರುತ್ತದೆ. ವಿದ್ವಾಂಸರುಗಳು ಓರ್ವ ವಿದ್ವಾಂಸರನ್ನು ಶಾಸ್ತ್ರಾರ್ಥಕ್ಕೆ ಕರೆದಾಗ ಈ ಬಗೆಯ ಚರ್ಚೆಗಳು ಮತ್ತು ವಾದ ವಿವಾದಗಳು ನಡೆಯುತ್ತಿದ್ದವು ಎಂದು ಹೇಳಬಹುದು. ಕುಕ್ಕನೂರಿನ ಶಾಸನವು ಅಲ್ಲಿ ವಾಸುದೇವ ಪೈಸಾಸರು ಇದ್ದರೆಂದು ತಿಳಿದುಬರುತ್ತದೆ. ಘಟಿಕಾಸಾಹಸಿ ಎಂಬ ಹೆಸರು ಕಾಲಕ್ರಮದಲ್ಲಿ ಬದಲಾಯಿತೆಂದು ಕೊನೆಗೆ ಪೈಸಾವಾಗಿರಬೇಕೆಂದು ತಿಳಿದುಬರುತ್ತದೆ. ಅದರ ಮಾರ್ಪಾಡುಗಳನ್ನು ಈ ರೀತಿ ಗುರ್ತಿಸಬಹುದು. ಘಟಿಕಾಸಾಹಸಿ, ಘಳಿಸಾಸ, ಪೈಸಾಸ, ಪೈಸಾ.[೧೮೮]

ಈ ವಿದ್ಯಾಕೇಂದ್ರಗಳಿಗೆ ಘಟಿಕಾ ಸ್ಥಾನಗಳು ಎಂದು ಹೆಸರು ಏಕೆ ಬಂದಿತೆಂಬುದನ್ನು ಕೇವಲ ನಮ್ಮ ಊಹೆಗೆ ತಕ್ಕಂತೆ ಹೇಳಬಹುದು. ಘಟಿಕಾ ಎಂದರೆ ಕನ್ನಡದಲ್ಲಿ ಗಡಿಗೆ, ಮಣ್ಣಿನ ಪಾತ್ರೆ ಎಂದಾಗುತ್ತದೆ. ಘಟಿಕಾ ಸಂಸ್ಕೃತ ಪದ. ಇದರ ತತ್ಸಮ "ಗಡಿಗೆ. ನಿಮಿಷಗಳ ಅವಧಿಯನ್ನು ಅಥವ ಘಟಿಕೆ ಎಂದು ಕರೆಯುತ್ತಾರೆ. ಇದರಿಂದಲೇ ಘಳಿಗೆ ಹಿಂದಿನ ಕಾಲದಲ್ಲಿ ಕಾಲವನ್ನು ತಿಳಿಯಲು ಮರಳು ಗಡಿಯಾರ ಅಥವಾ ನೀರಿನ ಗಡಿಯಾರವನ್ನು ಹೊಂದುತ್ತಿದ್ದರು. ಗಡಿಯಾರ ಎಂದರೆ ಮರಳು ಅಥವಾ ನೀರು ತುಂಬಿರುವ ಒಂದು ಪಾತ್ರೆ ಮೇಲೆ ಇದ್ದು ಅದರಲ್ಲಿನ ವಸ್ತು ಕೆಳಗಿನ ಪಾತ್ರೆಗೆ ಸೇರಲು ಒಂದು ಗಳಿಗೆ ತೆಗೆದು ಕೊಳ್ಳುತ್ತಿದ್ದುದರಿಂದ ಅದನ್ನು ಗಡಿಯಾರ ಎಂದು ಕರೆದಿರಬೇಕು. ಇಂತಹ ಗಡಿಯಾರಗಳು ಪ್ರಾಚೀನ ಕರ್ನಾಟಕದ ಮಠ ಮತ್ತು ದೇವಾಲಯಗಳಲ್ಲಿ ಇದ್ದುದರಿಂದ ಅದಕ್ಕೆ ಘಟಿಕಾ ಸ್ಥಾನವೆಂಬ ಹೆಸರು ಬಂದಿರಬಹುದೆಂದು ತಿಳಿದುಬರುತ್ತದೆ. ಹಲವಾರು ಶಾಸನಗಳಲ್ಲಿ ದೇವಾಲಯ ಗಳಿಗೆ ದತ್ತಿಯನ್ನು ಬಿಡುವಾಗ ದೇವಾಲಯದಲ್ಲಿ ಓದುತ್ತಿದ್ದ ವಿದ್ಯಾರ್ಥಿಗಳಲ್ಲಿ ಗಡಿಯಾರವನ್ನು ನೋಡಿಕೊಳ್ಳುವವರಿಗೆ ದತ್ತಿಯನ್ನು ಬಿಟ್ಟುಕೊಟ್ಟಂತೆ ತಿಳಿದುಬರುತ್ತದೆ.

ಕ್ರಿ.ಶ. ೧೦೪೫ರ ಶಾಸನವೊಂದು ಮೋರಿಗೆರೆಯ ಮಠದಲ್ಲಿನ ನಾಲ್ವರು "ಘಳಿಗೆಯ ಮಾಣಿ"ಗಳಿಗೆ ದಾನ ಕೊಟ್ಟಂತೆ ತಿಳಿಸುತ್ತದೆ. ಆ ಶಾಸನದ ಉಲ್ಲೇಖ ಹೀಗಿದೆ.[೧೮೯] "ಘಳಿಗೆಯ ಮಾಣಿಗಳ್ನಾಲ್ವರ್ಗ್ಗವೆಂಟುಮತ್ತರ". ಅಲ್ಲದೆ ತಾಳಗುಂದದ ಕ್ರಿ.ಶ. ೧೧೫೮ರ ಶಾಸನವು "ಗಳಿಯಾರ"ಕ್ಕೂ ದತ್ತಿಯನ್ನು ಬಿಟ್ಟುಕೊಟ್ಟಂತೆ ತಿಳಿದುಬರುತ್ತದೆ.[೧೯೦](ಗಳಿಯಾರ, ಹೊಸ ಕನ್ನಡದ ಗಡಿಯಾರಕ್ಕೆ ಹೋಲಿಸಲಾಗಿದೆ). ಬಟ್ಟಲುಗಳು ವೈದಿಕರಿಗೆ ಮತ್ತು ಜ್ಯೋತಿಷಿಗಳಿಗೆ ಅವಶ್ಯಕ ವಿದ್ದುದರಿಂದ ಅವುಗಳನ್ನು ದೇವಾಲಯ ಮತ್ತು ಮಠಗಳಲ್ಲಿ ಇಡುತ್ತಿದ್ದರು. ಘಟಿಕಾ ಸ್ಥಾನಗಳಲ್ಲಿ ಪ್ರತಿಸ್ಪರ್ಧಿ ವಾದಕರುಗಳ ನಡುವೆ ಕಾಲ ನಿಗದಿ ಮಾಡಲು ಅದನ್ನು ಬಳಸುತ್ತಿದ್ದಿರಬೇಕೆಂದು ಊಹಿಸಲಾಗಿದೆ. ಆಧುನಿಕ ವಿಶ್ವವಿದ್ಯಾನಿಲಯಗಳು ಪದವಿ ದಾನ ಸಮಾರಂಭವನ್ನು ಘಟಿಕೋತ್ಸವ ಎಂದು ಹೆಸರಿಸಿರುವುದು ಪ್ರಾಚೀನ ಕರ್ನಾಟಕದ ಘಟಿಕಾಸ್ಥಾನವನ್ನು ಆಧರಿಸಿಯೇ ಕರೆದಿರಬಹುದು. ಇದನ್ನು ಕರ್ನಾಟಕದ ವಿದ್ವಾಂಸರು ಪ್ರಚಾರಕ್ಕೆ ತಂದಂತೆ ಕಾಣುತ್ತದೆ.

ಘಟಿಕಾ ಸ್ಥಾನ, ವಿದ್ಯಾಕೇಂದ್ರವಾಗಿದ್ದವೆಂಬುದನ್ನು ತಿಳಿದ ಮೇಲೆ ಘಟಿಕಾಸ್ಥಾನದಲ್ಲಿ ಯಾವ ಯಾವ ಶಾಸ್ತ್ರಗಳನ್ನು ಅಧ್ಯಯನ ಮಾಡುತ್ತಿದ್ದರೆಂದು ತಿಳಿಯುವುದು ಯುಕ್ತ. ಘಟಿಕಾ ಸ್ಥಾನಗಳಲ್ಲಿ ಮೊದಲು ವೈದಿಕ ಸಾಹಿತ್ಯಕ್ಕೆ ಅವಕಾಶವಿತ್ತು. ಅಂದರೆ ಧಾರ್ಮಿಕವಾದ ಶಿಕ್ಷಣಕ್ಕೆ ಪ್ರಾಶಸ್ತ್ಯವಿತ್ತು. ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣ ವೇದ, ವೇದಾಂಗಗಳಾದ ವ್ಯಾಕರಣ, ತರ್ಕ, ಜ್ಯೋತಿಷ, ನಾಟಕ, ಕಾವ್ಯ, ನೃತ್ಯ(ಭರತಶಾಸ್ತ್ರ), ೧೮ ಪುರಾಣಗಳು, ತತ್ವಶಾಸ್ತ್ರ ಇತ್ಯಾದಿ ಗ್ರಂಥಗಳು ಬೋಧಿಸಲ್ಪಡುತ್ತಿದ್ದವು. ಆ ಕಾಲದಲ್ಲಿ ಬಳಕೆಯಲ್ಲಿದ್ದ ವ್ಯಾಕರಣಗಳೆಂದರೆ ಕೌಮಾರ, ರೂಪಾವತಾರ, ಪಾಣಿನಿಯ ಅಷ್ಟಾಧ್ಯಾಯಿ, ಶಾಕ್ತಾಯನನ ವ್ಯಾಕರಣ ಗ್ರಂಥವೂ ಅಧ್ಯಾಯದ ವಿಷಯವಾಗಿತ್ತು.[೯೧] ತಾಳಗುಂದ, ಲಕ್ಕುಂಡಿ, ಬಳ್ಳಿಗಾವೆ, ಸಾಲೊಟಗಿ, ನಾಗಾವಿ ತಿಂಥಿಣಿ, ಕುಳಗೇರಿ ಪ್ರಮುಖ ವಿದ್ಯಾಕೇಂದ್ರಗಳು ಮತ್ತು ಘಟಿಕಾ ಸ್ಥಾನಗಳಾಗಿದ್ದಂತೆ ತಿಳಿದುಬರುತ್ತದೆ.

ಈ ಪ್ರದೇಶದ ಶಾಸನಗಳಲ್ಲಿ ವಾಸುದೇವ ಗೈಸಾಸ ಮುಂತಾದ ಹೆಸರುಗಳು ಕಂಡುಬರುತ್ತವೆ. ಇಷ್ಟಲ್ಲದೆ ಘಟ್ಟಿದೇವ, ಘಟ್ಟಿದೇವರಸ, ಘಟ್ಟಿಯರಸ, ಘಳಿಗೆಯಮಾಣಿ, ಗೈಸಾಸಗೇರಿ ಇತ್ಯಾದಿ ಉಲ್ಲೇಖಗಳು ಶಾಸನಗಳಲ್ಲಿ ಕಂಡುಬರುತ್ತವೆ. ಈ ಎಲ್ಲ ಉಲ್ಲೇಖಗಳು ಘಟಿಕಾ ಸ್ಥಾನಗಳು ಒಂದು ಬಗೆಯ ಉನ್ನತ ಶೈಕ್ಷಣಿಕ ಕೇಂದ್ರಗಳಾಗಿದ್ದವೆಂದು ಭಾವಿಸಲು ಅವಕಾಶ ಮಾಡಿ ಕೊಡುತ್ತವೆ.[೯೨]

ಈ ಪ್ರದೇಶದ ಅನೇಕ ಸ್ತ್ರೀಯರು ಪುರುಷರ ಅಧ್ಯಯನಕ್ಕೆ ದಾನ ಕೊಟ್ಟಿರುವುದನ್ನು ಬಿಟ್ಟರೆ ಅವರ ವಿದ್ಯಾಭ್ಯಾಸದ ಪ್ರಸ್ತಾಪ ಶಾಸನಗಳಲ್ಲಿ ಕಂಡು ಬರುವುದಿಲ್ಲ. ಮಧ್ಯಕಾಲೀನ ಕರ್ನಾಟಕದಲ್ಲಿ ಸ್ತ್ರೀ ವಿದ್ಯಾಭ್ಯಾಸ ಕುರಿತ ಉಲ್ಲೇಖಗಳು ಅತಿ ವಿರಳ. ಪುರುಷರಿಗೆ ಹೋಲಿಸಿದರೆ ಸ್ತ್ರೀಯರು ವಿದ್ಯಾಭ್ಯಾಸದಲ್ಲಿ ತೊಡಗಿರುವುದು ಬಹಳ ಕಡಿಮೆಯಾಗಿತ್ತು. ವೇದ ಯುಗದಲ್ಲಿ ಪುರುಷ ಸಮಾನಳಾದ ಸ್ತ್ರೀ, ಸ್ಮೃತಿಗಳ ಕಾಲಕ್ಕೆ ಅದನ್ನು ಕಳೆದುಕೊಂಡಳು. ಸ್ತ್ರೀಯನ್ನು ಸ್ಮೃತಿಶಾಸ್ತ್ರದ ಕಟ್ಟಳೆ ಪರತಂತ್ರಳನ್ನಾಗಿಸಿತು. ಪ್ರಭುವರ್ಗದ ಸ್ತ್ರೀಯರಿಗೆ ಅದು ತಕ್ಕಮಟ್ಟಿಗೆ ದಕ್ಕಿದಂತೆ ಕಾಣುತ್ತದೆ. ರಾಜಮನೆತನದ ಸ್ತ್ರೀಯರು ಸಂಗೀತ, ನೃತ್ಯಕಲೆಗೆ ಮಾರುಹೋಗಿದ್ದರು. ಇದನ್ನು ಸಮರ್ಥಿಸಲು ಅವರು ಪಡೆದುಕೊಂಡ ಬಿರುದುಗಳು ಮಾತ್ರ ಸಾಕ್ಷಿಯಾಗಿವೆ. ಈ ರಾಣಿಯರು, 'ಶ್ರೀಮದಭಿನವಸರಸ್ವತಿ', 'ಸಕಳಕಳಾಧಾರಿ', 'ಸಹಸ್ರಕಲಾಫಳಭೋಗಭಾಗಿನಿ', 'ಮನುನೀತಿಮಾರ್ಗ', 'ಪ್ರತ್ಯಕ್ಷಪ್ರಭಾವಸರಸ್ವತಿ' ಮೊದಲಾಗಿ ಕರೆದುಕೊಂಡಿರುವರು. ಬ್ರಾಹ್ಮಣ ಸ್ತ್ರೀ ರವಿದೇವನ ಅರ್ಧಾಂಗಿ ರಬ್ಬಲದೇವಿ ಪ್ರತಿಭಾ ಸರಸ್ವತಿ, ಸಕಳಕಳಾ ಪ್ರವೀಣೆ ಎಂದು ಕರೆದುಕೊಂಡಿದ್ದಾಳೆ. ಇದನ್ನು ಬಿಟ್ಟರೆ ದೇವಾಲಯಗಳಲ್ಲಿ ಕಾಣಿಸಿಕೊಳ್ಳುವ ದೇವದಾಸಿ, ಪಾತರದವರು ಇಲ್ಲವೆ ಸೂಳೆಯರು ಸಂಗೀತ, ನೃತ್ಯ ಪ್ರವೀಣೆಯರಾದ ಇವರಿಗೆ ಯಾವ

ರೀತಿ ವಿದ್ಯಾಭ್ಯಾಸ ದೊರೆಯುತ್ತಿತ್ತೆಂದು ಸ್ಪಷ್ಟವಾಗುವುದಿಲ್ಲ.[೧೯೩] ಜನಸಾಮಾನ್ಯರ ಶಿಕ್ಷಣ ಕ್ರಮದ ಬಗ್ಗೆ ಶಾಸನಗಳಲ್ಲಿ ಸ್ಪಷ್ಟವಾದ ಉಲ್ಲೇಖಗಳು ಕಂಡು ಬರುವುದಿಲ್ಲ.

**ಅಧ್ಯಯನದ ವಿಷಯಗಳು**

ಅಧ್ಯಯನದ ವಿಷಯಗಳನ್ನು ಅಗ್ರಹಾರಗಳು, ಬ್ರಹ್ಮಪುರಿ, ಮಠ ಮತ್ತು ದೇವಾಲಯ ಹಾಗೂ ಘಟಿಕಾಸ್ಥಾನಗಳನ್ನು ಅಧ್ಯಯನ ಮಾಡುವಾಗ ಅಲ್ಲಲ್ಲಿಯೇ ಚರ್ಚಿಸಲಾಗಿದೆ. ಅವುಗಳ ಆಧಾರದ ಮೇಲೆ ಆ ಕಾಲದಲ್ಲಿ ಅಧ್ಯಯನ ಮಾಡುತ್ತಿದ್ದ ವಿಷಯಗಳನ್ನು ಸಮಗ್ರವಾಗಿ ಇಲ್ಲಿ ವಿವರಿಸಲೆತ್ನಿಸಲಾಗಿದೆ.

ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ, ವೇದಾಂಗಗಳಾದ ಶಿಕ್ಷ, ಕಲ್ಪ, ನಿರೂಕ್ತ, ವ್ಯಾಕರಣ, ಚಂದಸ್ಸು ಮತ್ತು ಜ್ಯೋತಿಷ, ವ್ಯಾಕರಣಗಳಾದ ಕೌಮಾರ, ರೂಪಾವತಾರ, ಪಾಣಿನಿಯ ಅಷ್ಟಾಧ್ಯಾಯಿ, ಅಲ್ಲದೆ ಜೈನರಲ್ಲಿ ಪೂಜ್ಯಪಾದ ಮತ್ತು ಶತವಾಯನನ ವ್ಯಾಕರಣಗಳು ಬಳಕೆಯಲ್ಲಿದ್ದವು. ಜ್ಯೋತಿಷ ಪುರಾಣ, ನಾಟಕ, ಅರ್ಥಶಾಸ್ತ್ರ (ಕೌಟಿಲ್ಯನ) ಭರತಶಾಸ್ತ್ರ (ಭರತ ಮುನಿಯ ನಾಟ್ಯಶಾಸ್ತ್ರ), ವಾತ್ಸಾಯನನ ಕಾಮಶಾಸ್ತ್ರ, ೧೮ ಸ್ಮೃತಿಗಳು, ೧೮ ಪುರಾಣಗಳು, ಷಡ್ದರ್ಶನಗಳಾದ ಸಾಂಖ್ಯೆ, ಯೋಗ, ನ್ಯಾಯ ವೈಶೇಷಿಕ, ಮೀಮಾಂಸೆ, ವೇದಾಂತಗಳನ್ನು ಬೋಧಿಸುವುದು ಅಧ್ಯಯನ ಮಾಡುವುದು ಬಳಕೆಯಲ್ಲಿತ್ತೆಂದು ಶಾಸನಗಳು ತಿಳಿಯಪಡಿಸುತ್ತದೆ. ಶೈವರು ಶಿವಾಗಮನಗಳನ್ನು ಅದರಲ್ಲಿ ಲಿಕುಲೀಶನಿಂದ ಉಕ್ತವಾದುದೆಂದು ಹೇಳಲಾದ ಲಾಕುಳಾಗಮವನ್ನು ಅಧ್ಯಯನ ಮಾಡುತ್ತಿದ್ದರು. ಪ್ರಾಚೀನ ಕಾಲದ ಎಲ್ಲಾ ಬೋಧನಾ ಕ್ರಮಗಳಲ್ಲಿ ವೇದ-ವೇದಾಂಗ ಪುರಾಣ-ಶಾಸ್ತ್ರಗಳಿಗೆ ಹೆಚ್ಚಿನ ಮಹತ್ವ ಕೊಡಲಾಗಿತ್ತು. ಲಾಕುಳ ಸಿದ್ಧಾಂತ, ಸಕಳಾಗಮ, ಶಿವಾಗಮ, ಯಂತ್ರ, ತಂತ್ರ, ಸಕಲ ದರ್ಶನ, ಕಾವ್ಯ, ನಾಟಕ, ಅಭಿದಾನ, ಅಲಂಕಾರ, ಪ್ರತಿಶೃತಿ, ಇತಿಹಾಸ, ಮೀಮಾಂಸೆ, ನೀತಿಶಾಸ್ತ್ರ, ಧರ್ಮಶಾಸ್ತ್ರ ಮನುಮಾರ್ಗ ಚರಿತ್ರ ಮೊದಲಾದವುಗಳನ್ನು ಗಮನದಲ್ಲಿಟ್ಟುಕೊಂಡು ಅಧ್ಯಯನ ಮಾಡಲಾಗುತ್ತಿತ್ತು.[೧೯೪] ದಾನ ಶಾಸನಗಳಲ್ಲಿ ದೇವಾಲಯದ ಸ್ಥಾನಾಚಾರ್ಯರು, ಬ್ರಾಹ್ಮಣರು ಮಹಾಜನಗಳನ್ನು ವರ್ಣಿಸುವಾಗ ಅವರ ವ್ಯಕ್ತಿತ್ವ ಗುಣ ವಿಶೇಷಣಗಳಲ್ಲಿ ಈ ಮೇಲಿನ ವಿದ್ಯೆಗಳ ಪಾಂಡಿತ್ಯದ ಉಲ್ಲೇಖಗಳು ಉಕ್ತವಾಗಿವೆ.

ಔದ್ಯೋಗಿಕ ವಿದ್ಯೆಗಳು ವಂಶಪಾರಂಪರ್ಯವಾಗಿ ತಂದೆಯಿಂದ ಮಗನಿಗೆ ಬರುತ್ತಿದ್ದವೆಂದು ತಿಳಿಯಲಾಗಿದೆ. ಅಂದರೆ ಮಡಿಕೆ ಮಾಡುವಿಕೆ, ಮರಗೆಲಸ, ಲೋಹಗಾರಿಕೆ, ಪಾತ್ರೆ ಇತ್ಯಾದಿ ಗೃಹೋಪಕರಣಗಳ ತಯಾರಿಕೆ, ರಥ ತಯಾರಿಕೆ, ಮನೆ ಕಟ್ಟುವಿಕೆ, ಆಭರಣ ತಯಾರಿಕೆ, ನಾಣ್ಯ ಮುದ್ರಣ ಇತ್ಯಾದಿ ಕಾರ್ಯಗಳು ವಂಶಪಾರಂಪರ್ಯವಾಗಿದ್ದವು.

ಈ ಬಗೆಯ ಶಿಕ್ಷಣಗಳಲ್ಲದೆ ರಾಜಕುಮಾರರು ಮತ್ತು ಕ್ಷತ್ರಿಯರಿಗೆ ಯುದ್ಧ ವಿದ್ಯೆಗಳಾದ ಕತ್ತಿ ವರಸೆ, ಬಿಲ್ಲು, ವಿದ್ಯೆ, ಕುದುರೆ ಸವಾರಿ, ಕುದುರೆ ಮತ್ತು ರಥಗಳಲ್ಲಿ ಯುದ್ಧ ಮಾಡುವಿಕೆ

ಇತ್ಯಾದಿಗಳ ಜೊತೆಗೆ ಅವರು ಆಡಳಿತದ ವಿಷಯಗಳು ಹಾಗೂ ವೇದ, ನ್ಯಾಯ, ಧರ್ಮ ಶಾಸ್ತ್ರಗಳನ್ನು ಸಂಪೂರ್ಣವಾಗಿ ತಿಳಿದಿರಬೇಕಾಗಿತ್ತು. ಸೋಮೇಶ್ವರನ ಕೃತಿಯಾದ ಮಾನಸೋಲ್ಲಾಸ ದಲ್ಲಿ ರಾಜಕುಮಾರರು ಸೈನಿಕ ವಿದ್ಯೆಗಳನ್ನು ಕಲಿಯುವುದರ ಜೊತೆಗೆ ವೇದಗಳನ್ನೂ ತಿಳಿಯಬೇಕಾಗಿತ್ತು ಎಂದು ನಿರ್ಣಯಿಸುತ್ತದೆ. ಅವರು ತರಬೇತಿಯ ಕಾಲದಲ್ಲಿ ಕುದುರೆ ಮತ್ತು ಆನೆಗಳ ಸವಾರಿ ಮತ್ತು ರಥಗಳನ್ನೂ ನಿಯಂತ್ರಿಸುವುದನ್ನೂ ಕಲಿಯಬೇಕಾಗಿತ್ತು. ಪರೀಕ್ಷೆಯ ಕಾಲದಲ್ಲಿ ರಾಜನು ಎಲ್ಲಾ ಬಗೆಯ ಶಿಕ್ಷಣ ಶಾಖೆಗಳು ಸಾಹಿತ್ಯ ಮತ್ತು ಇತರ ವಿಷಯಗಳನ್ನು ಒಂದಾದ ಮೇಲೆ ಒಂದರಂತೆ ಪ್ರದರ್ಶಿಸಬೇಕಿತ್ತು ಎಂದು ಹೇಳಲಾಗಿದೆ.[೧೯೫] ಅರಸ ಮತ್ತು ಅಧಿಕಾರವರ್ಗವನ್ನು ವರ್ಣಿಸುವಾಗ ಅವರ ಕ್ಷತ್ರಿಯ ಕಲೆಗಳ ವಿವರವನ್ನು ಶಾಸನಗಳು ಕಟ್ಟಿಕೊಡುತ್ತವೆ.

**ಪರೀಕ್ಷೆ ಮತ್ತು ಪದವಿಗಳು**

ಪ್ರಾಚೀನ ಶಿಕ್ಷಣದಲ್ಲಿ ವಿದ್ಯಾರ್ಥಿಗಳಿಗೆ ಉಪನ್ಯಾಸ ಮಾಡುವ ಪದ್ಧತಿಯಾಗಲೀ ಅಥವಾ ಓರ್ವ ಉಪಾಧ್ಯಾಯನಿಗೆ ಹಲವು ಮಂದಿ ವಿದ್ಯಾರ್ಥಿಗಳಾಗಲೀ ಇರಲಿಲ್ಲ. ಪ್ರತಿಯೊಬ್ಬ ಉಪಾಧ್ಯಾಯನಿಗೂ ಬೆರಳೆಣಿಕೆಯ ವಿದ್ಯಾರ್ಥಿಗಳಿದ್ದುದರಿಂದ ಅವರ ಸಂಪೂರ್ಣ ಬೆಳವಣಿಗೆಗೆ ಉಪಾಧ್ಯಾಯರು ಗಮನಕೊಡಲು ಸಾಧ್ಯವಾಗುತ್ತಿತ್ತು. ವಿದ್ಯಾರ್ಥಿಗಳಿಗೆ ಇಂದಿನಂತೆ ವರ್ಷದ ಕೊನೆಯಲ್ಲಿ ಪರೀಕ್ಷೆಯನ್ನು ನಡೆಸುವ ಪರಿಪಾಟವಿರಲಿಲ್ಲ. ಹಿಂದಿನ ದಿನದ ಪಾಠವನ್ನು ಒಪ್ಪಿಸಿದ ಮೇಲೆಯೇ ಮುಂದಿನ ಪಾಠಕ್ಕೆ ಹೋಗುವ ಕ್ರಮವಿದ್ದುದರಿಂದ ಅವರಿಗೆ ಪ್ರತಿದಿನವೂ ಪರೀಕ್ಷೆ ನಡೆಯುತ್ತಿತ್ತು. ಆದರೂ ಅಧ್ಯಯನದ ಕೊನೆಯಲ್ಲಿ ಅವರು ಕಲಿತಿರುವ ವಿದ್ಯೆಯಲ್ಲಿ ಹೊಂದಿರುವ ಪ್ರಾವಿಣ್ಯವನ್ನು ತೋರಲು ವಿದ್ವಾಂಸರ ನಡುವೆ ನಡೆಯುವ ಚರ್ಚೆಯಲ್ಲಿ ವಿದ್ಯಾರ್ಥಿಗಳು ಭಾಗವಹಿಸುತ್ತಿದ್ದಂತೆ ತಿಳಿದುಬರುತ್ತದೆ. ಅದರಲ್ಲಿ ಉತ್ತೀರ್ಣರಾದವರು ತಮ್ಮ ಜೀವನದ ಮುಂದಿನ ಹಂತಕ್ಕೆ ಕಾಲಿಡುತ್ತಿದ್ದರೆಂದು ತಿಳಿಯಬಹುದು.[೧೯೬]

"ವಿದ್ಯಾಭ್ಯಾಸವನ್ನು ಪೂರ್ಣಗೊಳಿಸಿದ ವಿದ್ಯಾರ್ಥಿಗಳನ್ನು ಸ್ನಾತಕ ಎಂದು ಕರೆಯುತ್ತಿದ್ದರು. ಸ್ನಾತಕೋತ್ತರ, 'ಸಮಾವರ್ತನ' ಸಮಾರಂಭದ ವಿಷಯವು ಕೆಲವು ಶಾಸನಗಳಲ್ಲಿ ಮಾತ್ರ ಉಲ್ಲೇಖಿಸಲ್ಪಟ್ಟಿದೆ. ವಿದ್ಯಾರ್ಥಿಯು ಸಮಾವರ್ತನ ಸಮಾರಂಭದ ದಿನ ಕ್ಷೌರ, ಮಂಗಳ ಸ್ನಾನ ಮಾಡಿ ಹೊಸ ವಸ್ತ್ರಗಳನ್ನು ಧರಿಸಿ ಅಲಂಕಾರಭೂಷಿತನಾಗಿ ಸಮಾವರ್ತನ ಸಭೆಗೆ ಹೋಗುತ್ತಿದ್ದನು. ಅಲ್ಲಿ ಆತನ ಗುರುವು ಅವನನ್ನು ಓರ್ವ ವಿದ್ವಾಂಸನೆಂದು ಸಭೆಗೆ ಪರಿಚಯಿಸುತ್ತಿದ್ದನು. ಆತನು ಸಭೆಯಲ್ಲಿ ಭಾಗವಹಿಸಿ, ಎಲ್ಲರಿಂದಲೂ ವಿದ್ವಾಂಸನೆಂದು ಅಂಗೀಕರಿಸಲ್ಪಟ್ಟ ಮೇಲೆ ಆತನು ವಿದ್ಯಾರ್ಥಿ ದೆಸೆಯಿಂದ ಮುಕ್ತನಾಗುತ್ತಿದ್ದನು. ಅಲ್ಲಿಂದ ಕಠಿಣ ಜೀವನದ ವಿದ್ಯಾರ್ಥಿ ದೆಸೆ ಮುಗಿದು ಗೃಹಸ್ಥ ಜೀವನ ಪ್ರಾರಂಭಿಸುವುದಕ್ಕೆ ಅವಕಾಶವಿರುತ್ತಿತ್ತು.[೧೯೭] ಆ ಕಾಲದಲ್ಲಿ ಕೊಡುತ್ತಿದ್ದ ಪದವಿಗಳ ಬಗ್ಗೆ ನಿಖರವಾದ ಆಧಾರವಿಲ್ಲ. ಆದರೆ ಬ್ರಾಹ್ಮಣರ ಹೆಸರುಗಳ ಮುಂದೆ ಉಲ್ಲೇಖಿಸುತ್ತಿದ್ದ (ಕ್ರಮವಿತ್) ಕ್ರಮಿತ, ಷಡಂಗಿ, (ಷಂಗವಿತ್), ಫೈಸಾ, (ಘಟಿಕಾ ಸಾಹಸಿ) ಭಟ್ಟೋಪಾಧ್ಯಾಯ, ಸಾಮವೇದಿ, ಸರ್ವಜ್ಞ ಪದವಿಗಳೆಂದು ತಿಳಿಯಲಾಗಿದೆ.[೧೯೮]

### ೪.೩. ಆರ್ಥಿಕ ಸ್ಥಿತಿಗತಿ

ಉಚ್ಚಂಗಿಯ ಪಾಂಡ್ಯರು ಪ್ರಭುತ್ವ ನಡೆಸುತ್ತಿದ್ದ ಭೂಪ್ರದೇಶವು ಸಮುದ್ರ ಮಾರ್ಗದೊಂದಿಗೆ ಸಂಪರ್ಕವನ್ನು ಹೊಂದಿರಲಿಲ್ಲ. ಕಾರಣ ಇವರು ನೊಳಂಬವಾಡಿ ೩೨೦೦೦ ಮಂಡಲದ ಒಡೆಯರಾಗಿದ್ದರು. ನೊಳಂಬವಾಡಿಯು ಇಂದಿನ ಬಳ್ಳಾರಿ, ದಾವಣಗೆರೆ, ಚಿತ್ರದುರ್ಗ ಜಿಲ್ಲೆಯ ಕೆಲ ಭಾಗಗಳು ತುಮಕೂರು ಜಿಲ್ಲೆಯ ಕೆಲವು ಭಾಗಗಳನ್ನು ಒಳಗೊಂಡಿತ್ತು. ನೊಳಂಬವಾಡಿಯ ಪ್ರದೇಶದಲ್ಲಿ ಬೆಳೆಯುತ್ತಿದ್ದ ಪದಾರ್ಥಗಳು, ಆಮದಾಗುತ್ತಿದ್ದ ಪದಾರ್ಥಗಳು, ಇಲ್ಲಿ ವಿಧಿಸುತ್ತಿದ್ದ ತೆರಿಗೆಗಳು ಹಾಗೂ ಈ ಪ್ರದೇಶಗಳಲ್ಲಿ ನಡೆಯುತ್ತಿದ್ದ ಇತರ ಚಟುವಟಿಕೆಗಳನ್ನಾಧರಿಸಿಯೇ ಇಲ್ಲಿನ ಆರ್ಥಿಕ ಮತ್ತು ಕೈಗಾರಿಕಾ ಚಟುವಟಿಕೆಗಳನ್ನು ದಾಖಲಿಸಬೇಕಾಗುತ್ತದೆ. ನೊಳಂಬವಾಡಿಯ ದಕ್ಷಿಣ ಭಾಗ ಅಂದರೆ ಚಿತ್ರದುರ್ಗ ಜಿಲ್ಲೆಯ ಭಾಗಗಳು, ತುಮಕೂರು ಜಿಲ್ಲೆಯ ಭಾಗಗಳು ಮತ್ತು ಅದಕ್ಕೆ ಸೇರಿದ ಆಂಧ್ರಪ್ರದೇಶದ ಭಾಗಗಳು ಮಳೆಯ ನೆರಳಿನ ಪ್ರದೇಶವಾಗಿತ್ತು. ಗಂಗವಾಡಿ-೯೬೦೦೦ಕ್ಕೆ ಹೊಂದಿಕೊಂಡಿದ್ದವು. ನೊಳಂಬವಾಡಿಯ ರಾಜಧಾನಿ ಹೇಮಾವತಿಯು ಗಂಗವಾಡಿ-೯೬೦೦೦ದ ರಾಜಧಾನಿಯೊಂದಿಗೆ ಸಂಪರ್ಕವನ್ನು ಹೊಂದಿದ್ದಿತು.[೧೯೯]

ಎಸ್. ಗುರುರಾಜಾಚಾರ್‌ರವರ ಗ್ರಂಥದಲ್ಲಿ ವ್ಯಾಪಾರಿ ಮಾರ್ಗಗಳನ್ನು ಗುರುತಿಸುವ ಹಂತದಲ್ಲಿ ತಲಕಾಡು, ಹರದನಹಳ್ಳಿ, ಶ್ರವಣಬೆಳಗೊಳ, ತೊಂಡನೂರು, ಸೋಮನಾಥಪುರ, ಡಣಾಯಕನ ಕೋಟೆ ಮತ್ತು ಧರ್ಮಪುರಂ ಮಾರ್ಗವಾಗಿ ದಕ್ಷಿಣದ ಮಹಾ ವ್ಯಾಪಾರಿ ಮಾರ್ಗವನ್ನು ಸಂಪರ್ಕಿಸಿತ್ತೆಂದು ಉಲ್ಲೇಖಿಸುತ್ತಾರೆ.[೨೦೦] ಇಷ್ಟೇ ಅಲ್ಲದೆ ಕಾಂಚಿಪುರವನ್ನು ಸಂಪರ್ಕಿಸುತ್ತಿದ್ದ ದಕ್ಷಿಣಾಪಥ ವ್ಯಾಪಾರಿ ಮಾರ್ಗವು ಈ ನೊಳಂಬವಾಡಿ ಪ್ರದೇಶದಲ್ಲಿಯೇ ಸಾಗುತ್ತಿತ್ತೆಂದು ಕೂಡ ತಿಳಿದುಬರುತ್ತದೆ. ತುಮಕೂರು ಜಿಲ್ಲೆಯ ಭೂಪ್ರದೇಶದಿಂದ ಹೇಮಾವತಿ ಪ್ರದೇಶಕ್ಕೆ ನೇರವಾಗಿ ಸಂಪರ್ಕ ಹೊಂದಿದ ಮಾರ್ಗಗಳಿದ್ದವಲ್ಲದೆ ತುಮಕೂರು, ಗುಬ್ಬಿ, ಚಿಕ್ಕನಾಯಕನಹಳ್ಳಿ, ಹುಳಿಯಾರು, ಹಿರಿಯೂರು, ಚಿತ್ರದುರ್ಗ, ಅಲ್ಲಿಂದ ಬಲಕ್ಕೆ ತಿರುಗಿ ಕೂಡಲಗಿ ಮಾರ್ಗವಾಗಿ ಹಂಪೆಯನ್ನು ಮತ್ತು ತುಂಗಭದ್ರಾ ನದಿಯ ಮಾರ್ಗವಾಗಿ ಪೂರ್ವದ ಸಮುದ್ರ ತೀರವನ್ನು ಸಂಪರ್ಕಿಸುವ ಹೆದ್ದಾರಿಗಳೊಂದಿಗೆ ಚಿತ್ರದುರ್ಗದಿಂದ ಎಡಕ್ಕೆ ತಿರುಗಿ ಹೊಳಲ್ಕೆರೆ, ಭದ್ರಾವತಿ ಶಿವಮೊಗ್ಗ ಹಾಗೆ ಮುಂದುವರಿದು ಘಟ್ಟಗಳನ್ನಿಳಿದು ಮಂಗಳೂರು ಮತ್ತು ಇತರ ಬಂದರುಗಳೊಂದಿಗೆ ವ್ಯಾಪಾರ ಸಂಪರ್ಕವನ್ನು ಸಾಧಿಸುವ ಕಡಲ ಕಿನಾರೆಗೆ ಸಾಗುವ ಮಾರ್ಗದೊಂದಿಗೆ ಸಂಪರ್ಕವನ್ನು ಹೊಂದಿದ್ದಿತು.[೨೦೧]

ಈ ಮಾರ್ಗಗಳಲ್ಲದೆ ತಲಕಾಡು, ಶ್ರೀರಂಗಪಟ್ಟಣ, ನಾಗಮಂಗಲ, ಶ್ರವಣಬೆಳಗೊಳ, ದೋರಸಮುದ್ರದಿಂದ ಹಾಸನ ಮಾರ್ಗವಾಗಿ ಅರಸೀಕೆರೆ ಅಲ್ಲಿಂದ ಚಿತ್ರದುರ್ಗ, ಚಿತ್ರದುರ್ಗದಿಂದ ವಿಜಯನಗರ ಅಥವಾ ಹಂಪೆಯನ್ನು ಸಂಪರ್ಕಿಸುವ ಮಾರ್ಗ ಕೂಡ ಚಾಲ್ತಿಯಲ್ಲಿದ್ದಿತು.[೨೦೨] ಹೊಯ್ಸಳರು ಕಲ್ಯಾಣಿ ಚಾಳುಕ್ಯರ ಕಾಲದಲ್ಲಿ ಕರ್ನಾಟಕದಲ್ಲಿ ಪಶ್ಚಿಮ ಕಡಲ ತೀರವನ್ನು ಸಂಪರ್ಕಿಸಲು ಸಾಧ್ಯವಾಗದಿದ್ದಾಗ ಅವರು ಘಟ್ಟ ಪ್ರದೇಶಗಳನ್ನು ಗೆದ್ದು ಉದಕಮಂಡಲ

ಪ್ರದೇಶದ ಮೂಲಕ ಕಣ್ಣಾನೂರು ಪ್ರದೇಶವನ್ನು ಕಣ್ಣಾನೂರಿನಿಂದ ಕೇರಳದ ಮಲಬಾರ್ ತೀರಪ್ರದೇಶಗಳೊಂದಿಗೆ ಸಂಪರ್ಕವನ್ನು ಸಾಧಿಸಿದ್ದರು.[೨೦೩]

ಹೀಗಾಗಿ ಮಲಯಾಳಿ ವಡ್ಡ ವ್ಯವಹಾರಿಗಳ ಹೆಸರು ಪಾಂಡ್ಯ ಅರಸರ ಶಾಸನಗಳಲ್ಲಿ ಉಲ್ಲೇಖವಾಗುವುದರೊಂದಿಗೆ ಈ ಪ್ರದೇಶವು ಮಲಯಾಳ ಕಡಲ ತೀರದೊಂದಿಗೆ ಪ್ರಾಯಶಃ ತಲಕಾಡಿನ ಮೂಲಕ ಸಂಪರ್ಕ ಸಾಧಿಸಿತ್ತೆಂಬುದನ್ನು ದಾಖಲಿಸಬಹುದು. ಆದರೆ ಇದಕ್ಕೆ ಯಾವ ನೇರ ಶಾಸನ ದಾಖಲೆಗಳಾಗಲಿ ಅಥವಾ ಇತರ ಆನುಷಂಗಿಕ ಆಕರಗಳಾಗಲಿ ಕಂಡುಬರುವುದಿಲ್ಲ. ಈ ಎಲ್ಲ ಹಿನ್ನೆಲೆಯಲ್ಲಿ ಗಮನಿಸಿದಾಗ ನೊಳಂಬವಾಡಿ-೩೨೦೦೦ ಭೂಪ್ರದೇಶವು ಅತ್ಯಂತ ಸಂಪದ್ಭರಿತ ಪ್ರದೇಶವಾಗಿದ್ದು, ಅನೇಕ ವ್ಯಾಪಾರಿ ಸಮುದಾಯವನ್ನು ಹೊಂದಿತ್ತೆಂದು ತಿಳಿದುಬರುತ್ತದೆ. ಇಷ್ಟೇ ಅಲ್ಲದೆ ತುಂಗಭದ್ರಾ ನದಿಯ ತೀರದುದ್ದಕ್ಕೂ ಮತ್ತು ಇತರ ಪ್ರದೇಶಗಳನ್ನು ಸಂಪರ್ಕಿಸುವ ಅನೇಕ ಆಂತರಿಕ ಮಾರ್ಗಗಳು ಈ ಪ್ರದೇಶದಲ್ಲಿ ಚಾಲ್ತಿಯಲ್ಲಿದ್ದವು. ನೊಳಂಬವಾಡಿ ಪ್ರದೇಶವು ಭೂಮಾರ್ಗಗಳಿಂದ ಆವೃತವಾಗಿದ್ದರೂ ಪರೋಕ್ಷವಾಗಿ ಪೂರ್ವ ಮತ್ತು ಪಶ್ಚಿಮ ಕಡಲ ತೀರದೊಂದಿಗೆ ಸಂಪರ್ಕ ಸಾಧಿಸುವ ಮಹಾಮಾರ್ಗಗಳನ್ನು ಸಂಧಿಸುವ ಇತರ ಮಾರ್ಗಗಳನ್ನು ಹೊಂದಿ ಆ ಪ್ರದೇಶಗಳೊಂದಿಗೆ ಪರೋಕ್ಷ ಸಂಪರ್ಕವನ್ನು ಸಾಧಿಸಿದ್ದಿತು. ಇದೆಲ್ಲವನ್ನು ಬದಿಗಿರಿಸಿ ಸ್ಥಾನಿಕ ಆರ್ಥಿಕ ಸ್ಥಿತಿಯ ಬಗೆಗೆ ಮಾತನಾಡುವುದಾದರೆ ನೊಳಂಬವಾಡಿ ೨೭೦೦೦ ಭೂಪ್ರದೇಶದ ಕೆಲವೇ ಕೆಲವು ಪ್ರದೇಶ ಉದಾಹರಣೆಗೆ ತುಂಗಭದ್ರಾ ನದಿಯ ಆಸುಪಾಸಿನ ಪ್ರದೇಶಗಳನ್ನು ಹೊರತುಪಡಿಸಿದರೆ ಇತರ ಎಲ್ಲ ಭೂಪ್ರದೇಶಗಳು ಮಳೆಯಾಧಾರಿತ ಕೃಷಿಗೆ ಹೆಚ್ಚು ಅವಲಂಬಿತವಾಗಿದ್ದವು.

ಹೀಗಾಗಿ ಈ ಭೂಪ್ರದೇಶದ ಆರ್ಥಿಕ ವ್ಯವಸ್ಥೆಯು ವ್ಯವಸಾಯೋತ್ಪನ್ನ ಕೈಗಾರಿಕೆಗಳು ಮತ್ತು ಉತ್ಪನ್ನಗಳನ್ನು ಆಧರಿಸಿತ್ತು. ಈ ಭೂಪ್ರದೇಶದಲ್ಲಿ ಅಧಿಕವಾಗಿ ಎಣ್ಣೆಕಾಳುಗಳು, ಹತ್ತಿ, ಕಬ್ಬು, ಅಡಿಕೆ, ವೀಳ್ಯದೆಲೆ ಮುಂತಾದವುಗಳನ್ನು ಬೆಳೆಯಲಾಗುತ್ತಿತ್ತೆಂದು ಶಾಸನದಲ್ಲಿ ಉಲ್ಲೇಖವಿದೆ. ಈ ಪ್ರದೇಶದ ಬೆಳೆಗಳಿಗೆ ದತ್ತಿ ಬಿಟ್ಟಿದುದನ್ನು ಉಲ್ಲೇಖಿಸುವಾಗಿ ಪ್ರಮುಖವಾಗಿ ಈ ಮೇಲೆ ಉಲ್ಲೇಖಿಸಿದ ಪದಾರ್ಥಗಳ ಮೇಲಿನ ಸುಂಕವನ್ನು ಬಿಟ್ಟುಕೊಟ್ಟಿರುವುದನ್ನು ಗಮನಿಸಬಹುದು. ಇಷ್ಟೆಲ್ಲದೆ ಈ ಪ್ರದೇಶದಲ್ಲಿ ಪ್ರಮುಖವಾಗಿ ಅಕ್ಕಿ, ರಾಗಿ ಮತ್ತು ಇತರ ಆಹಾರ ಬೆಳೆಗಳನ್ನು ಅನೇಕ ದ್ವಿದಳ ಧಾನ್ಯಗಳನ್ನು, ಹತ್ತಿ, ವೀಳ್ಯದೆಲೆ ಮುಂತಾದ ಬೆಳೆಗಳನ್ನು ಬೆಳೆಯುತ್ತಿದ್ದರೆಂದು ಖಚಿತವಾಗುತ್ತದೆ.[೨೦೪]

ಭಾರತೀಯ ಗ್ರಾಮ ಜೀವನವು ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗೆ ಹೆಚ್ಚು ಪರಿವರ್ತಿತವಾಗದೆ ಬದಲಾವಣೆಗಳನ್ನು ಅತ್ಯಂತ ನಿಧಾನವಾಗಿ ಕಂಡುಕೊಂಡ ಕಾರಣದಿಂದಾಗಿ ಇಲ್ಲಿನ ಔದ್ಯೋಗೀಕರಣ ವ್ಯಾಪಾರ ಮತ್ತು ವಹಿವಾಟು ಒಂದು ರೀತಿಯಲ್ಲಿ ಸ್ಥಾನಿಕವಾಗಿತ್ತೆಂಬುದು ಖಚಿತವಾಗುತ್ತದೆ. ಮೇಲೆ ಉಲ್ಲೇಖಿಸಿದಂತೆ ಈ ಪ್ರದೇಶಗಳಲ್ಲಿ ಕೆರೆಗಳ ನಿರ್ಮಾಣ, ಬಾವಿಗಳ ನಿರ್ಮಾಣಕ್ಕೆ ಕಲ್ಯಾಣದ ಚಾಳುಕ್ಯರು, ಹೊಯ್ಸಳರು, ಪಾಂಡ್ಯರು ಅತಿಹೆಚ್ಚು ಪ್ರಾಮುಖ್ಯತೆಯನ್ನು

ಕೊಟ್ಟರಲ್ಲದೆ ಪ್ರತಿಯೊಂದು ಊರು, ಗ್ರಾಮ ಮತ್ತು ಜನವಾಸ್ತವ್ಯದ ಸಣ್ಣ ಪ್ರದೇಶಗಳು ಕೂಡ ತಮ್ಮ ಜೀವನಾವಶ್ಯಕ ನೀರಿನ ಅವಶ್ಯಕತೆಗಳಿಗಾಗಿ ಕೆರೆಗಳನ್ನು, ಕಟ್ಟೆಗಳನ್ನು, ಕುಂಟೆಗಳನ್ನು, ಕೊಳಗಳನ್ನು, ಬಾವಿಗಳನ್ನು, ಪುಷ್ಕರಣಿಗಳನ್ನು ಹಾಗೂ ನದಿಪಾತ್ರದಲ್ಲಿ ಕಾಲುವೆಗಳನ್ನು ಆಧರಿಸಿದ್ದವು. ಬೀಳುವ ಮಳೆಯನ್ನು ಆಧರಿಸಿ ಕೆರೆಗಳಲ್ಲಿ ಅದನ್ನು ಶೇಖರಿಸಿಟ್ಟುಕೊಂಡು ವರ್ಷಪೂರ್ತಿ ಬಳಸಿ ವ್ಯವಸಾಯ ಮಾಡುವ ಪದ್ಧತಿ ಸಾಮಾನ್ಯವಾಗಿ ಕಂಡುಬರುತ್ತದೆ.

ಮಳೆಯಾಶ್ರಿತ ವ್ಯವಸಾಯ ಮತ್ತು ನೀರಾವರಿ ವ್ಯವಸಾಯಗಳೆರಡೂ ಈ ಪ್ರದೇಶದಲ್ಲಿ ಚಾಲ್ತಿಯಲ್ಲಿದ್ದವು. ಕೆರೆ, ಕಾಲುವೆ, ಏತದ ಬಾವಿಗಳಿಂದ ನೀರನ್ನು ಹರಿಸಿ ನೀರಾವರಿ ಬೆಳೆಗಳನ್ನು ಮಳೆಯಾಶ್ರಿತ ಬೆಳೆಗಳನ್ನು ಬೆಳೆಯುತ್ತಿದ್ದುದರ ಜೊತೆಗೆ ತೋಟಗಾರಿಕೆ ಕೂಡ ಆ ಕಾಲದಲ್ಲಿ ಚಾಲ್ತಿಯಲ್ಲಿದ್ದಿತು. ಉದಾಹರಣೆಗೆ ಅನೇಕ ಶಾಸನಗಳಲ್ಲಿ ವೀಳ್ಯದೆಲೆಯ ತೋಟ, ಅಡಿಕೆ ತೋಟ, ಹೂವಿನ ತೋಟ, ತೆಂಗಿನ ತೋಟ ಇತ್ಯಾದಿಗಳ ಉಲ್ಲೇಖಗಳು ಕಂಡುಬರುತ್ತವೆ. ದೇವಾಲಯಕ್ಕೆ ದಾನಬಿಟ್ಟ ಭೂಮಿಯನ್ನು ಮತ್ತು ವ್ಯಕ್ತಿಗಳು ಹೊಂದಿದ್ದ ಗದ್ದೆ ತೋಟಗಳನ್ನು ಶಾಸನಗಳು ಉಲ್ಲೇಖಿಸುತ್ತವೆ. ಸಾಮಾನ್ಯವಾಗಿ ನೊಳಂಬವಾಡಿ–೩೨೦೦೦ ಪ್ರದೇಶದಲ್ಲಿ ಕಂಡುಬಂದಿರುವ ಗದ್ದೆಗಳ ಹೆಸರು, ತೋಟಗಳ ಹೆಸರು ಈ ರೀತಿಯಾಗಿದೆ. ಮಾನ್ಯ ಗದ್ದೆ ಅಥವಾ ತೋಟ, ಮಾನ್ಯದೆರೆಯ ಕೆಯ್, ವೃತ್ತಿಕೊಳಗದ ಪೊಲಂ, ರಾಮೇಶ್ವರ ದೇವರ ಹೂದೋಟ, ದೇವಂಬೊಲ ಸೂರ್ಯದೇವರ ಕೆಯ್, ತ್ರೈಪುರುಷ ದೇವರ ತೋಂಟ, ಶ್ರೀಧರ ದೇವರ ಕೆಯಿ, ನರಸಿಂಹದೇವರ ಹೂದೋಟ, ಭಾಸ್ಕರ ತೋಟ, ಭೋಗಭಟದೇವರ ತೋಟ, ಕಾರ್ತಿಕ ದೇವರ ಕೆಯಿ, ಗುತ್ತೇಶ್ವರ ದೇವರ ಕೆಯ್, ಊರೊಡೆಯರ ತೋಟ, ಊರೊಡೆಯ ಮಾನ್ಯ, ಮೂಲಿಗ ಕೆಯ್, ಗೌಡಗಳ ಕೆಯಿ, ಬಡಗಿ ಕಮ್ಮಾರರ ಕೆಯಿ, ಕುರುಂಬಗದ್ದೆ, ಕುಂಬಾರ ಗುಯ್ಯಲ ಗದ್ದೆ, ಬೊವಿಮಯ್ಯಂಗಳ ಮಗ ಸೊವಿಮಯ್ಯಂಗೆ ವರ್ಗ್ಗ ಬಿಟ್ಟ ಕೆಯಿ, ಗಾಣಿಗಗೆಯಿ, ಬ್ರಹ್ಮಪುರಿಗೆಯಿ, ಮಾಲೆಕೇತನ ಕೆಯಿ, ದೇವಿಸೆಟ್ಟಿಯ ಕೆಯಿ, ಯಿಂಮಡಿ ಗಾನವರ ಕೆಯಿ ಮತ್ತು ಮಾಚಬೋವನ ಕೆಯಿ[೨೦೫] ಮೊದಲಾದ ಹೆಸರಿನಿಂದ ಉಲ್ಲೇಖಿಸುತ್ತವೆ.

ಇದೆಲ್ಲವನ್ನು ಗಮನಿಸಿದಾಗ ಪ್ರತಿಯೊಂದು ಗ್ರಾಮವು ಸಂಪೂರ್ಣವಾಗಿ ತನ್ನ ಉತ್ಪಾದನೆಯನ್ನು ಅವಲಂಬಿಸಿಯೇ ತನ್ನ ಅವಶ್ಯಕತೆಗಳನ್ನು ಪೂರೈಸಿಕೊಳ್ಳುತ್ತಿತ್ತು. ಆದರೆ ತನ್ನ ಪ್ರದೇಶದಲ್ಲಿ ಬೆಳೆಯದ ಸಾಂಬಾರ ಪದಾರ್ಥ ಮುಂತಾದವುಗಳನ್ನು ಬೇರೆ ಪ್ರದೇಶಗಳಿಂದ ಆಮದು ಮಾಡಿಕೊಳ್ಳುತ್ತಿತ್ತು. ಉದಾಹರಣೆಗೆ ದಿನನಿತ್ಯದ ಆಹಾರದಲ್ಲಿ ಬಳಸುವ ಮೆಣಸು, ಜೀರಿಗೆ ಇತ್ಯಾದಿ ಸಾಂಬಾರ ಪದಾರ್ಥಗಳನ್ನು ಪಶ್ಚಿಮ ಘಟ್ಟದ ಮಾರುಕಟ್ಟೆಗಳಿಂದ ಅಂದರೆ ಶಿವಮೊಗ್ಗ, ದಕ್ಷಿಣ ಕನ್ನಡ, ಉತ್ತರ ಕನ್ನಡ, ಪ್ರದೇಶಗಳಿಂದ ಆಮದು ಮಾಡಿಕೊಳ್ಳುತ್ತಿದ್ದವು. ಅಲ್ಲಿಗೆ ತಮ್ಮಲ್ಲಿ ಬೆಳೆಯುವ ಎಣ್ಣೆಕಾಳು, ಹತ್ತಿ, ಉತ್ತಮ ದರ್ಜೆಯ ಅಕ್ಕಿ ಮುಂತಾದವುಗಳನ್ನು ರಫ್ತು ಮಾಡುತ್ತಿದ್ದವು. ಉಣ್ಣೆ ಬಟ್ಟೆ, ಕಂಬಳಿಗಳು ಮಲೆನಾಡಿನ ಪ್ರದೇಶಕ್ಕೆ ನೊಳಂಬವಾಡಿ

ಪ್ರದೇಶದಿಂದ ರಫ್ತಾಗುತ್ತಿದ್ದವು. ಬಹುಮುಖ್ಯವಾಗಿ ಆ ಕಾಲದಲ್ಲಿ ಉಪ್ಪನ್ನು ಬೇರೆ ಪ್ರದೇಶಗಳಿಂದ ತರಿಸಿಕೊಳ್ಳಲಾಗುತ್ತಿತ್ತೆಂದು ಭಾವಿಸಬಹುದು. ಈ ಎಲ್ಲ ಆರ್ಥಿಕ ವಹಿವಾಟಿನ ನಡುವೆ ಸ್ಥಾನಿಕವಾಗಿ ಕಬ್ಬಿಣ ತಯಾರಿಕೆ, ಅದರಿಂದ ಗೃಹೋಪಯೋಗಿ ಮತ್ತು ವ್ಯವಸಾಯ ಉಪಕರಣಗಳನ್ನು ತಯಾರಿಸುವುದನ್ನು ಕಮ್ಮಾರನು ನಿರ್ವಹಿಸುತ್ತಿದ್ದನು. ಕಬ್ಬಿಣದ ಉತ್ಪಾದನೆಯು ಪಂಚಮಸಾಲಿಗಳು ಅಥವಾ ವಿಶ್ವಕರ್ಮ ಸಮುದಾಯದ (ಒಂದು ವರ್ಗದ) ಉದ್ಯಮವಾಗಿದ್ದಿತು. ಇದಲ್ಲದೆ ಆಭರಣ ತಯಾರಿಕೆ, ಚಿನ್ನ, ಬೆಳ್ಳಿಯ ಆಭರಣಗಳು ಮತ್ತು ವಿಗ್ರಹಗಳನ್ನು ಮಾಡುವುದು ಈ ವಿಶ್ವಕರ್ಮ ಸಮುದಾಯದ ಒಂದು ಉಪಜಾತಿಯ ಕಸುಬಾಗಿದ್ದಿತು. ಅಲ್ಲದೆ ಬಡಗಿಗಳು, ಕಂಚುಗಾರರು, ಈ ವೃತ್ತಿಯಲ್ಲಿ ಬರುತ್ತಾರೆ.

ಹೀಗಾಗಿ ಒಂದು ಪ್ರದೇಶದಲ್ಲಿ ಎಲ್ಲ ವೃತ್ತಿಯ ಜನರೂ ವಾಸವಾಗಿರುತ್ತಿದ್ದುದನ್ನು ಶಾಸನಗಳು ದಾಖಲಿಸುತ್ತವೆ. ನೊಳಂಬವಾಡಿ-೩೨೦೦೦ ಪ್ರದೇಶದಲ್ಲಿನ ಶಾಸನಗಳಲ್ಲಿ ವಡ್ಡ ವ್ಯವಹಾರಿಗಳು ಮಲಯಾಳಿ ವಡ್ಡ ವ್ಯವಹಾರಿಗಳು, ನಖರು, ಸೆಟ್ಟಿಗುತ್ತರು, ಅಯ್ಯಹೊಳೆ ೫೦೦ರ ಸಂಘದ ಉಲ್ಲೇಖ ಕಂಡುಬರುವುದರಿಂದ ಇಲ್ಲಿನ ವರ್ತಕ ಸಮುದಾಯ ಕಡಲ ತೀರದೊಂದಿಗೆ ವಿದೇಶಗಳೊಂದಿಗೆ ಮತ್ತು ದಕ್ಷಿಣ ಭಾರತದ ಅನೇಕ ಪ್ರದೇಶದೊಂದಿಗೆ ಸಂಪರ್ಕ ಹೊಂದಿ ವ್ಯಾಪಾರ ನಡೆಸುತ್ತಿದ್ದರೆಂಬುದು ಖಚಿತವಾಗುತ್ತದೆ.[೨೦೬] ಈ ಹಿನ್ನೆಲೆಯಲ್ಲಿ ಗಮನಿಸಿದರೆ ಕ್ರಿ.ಶ. ೧೦೦೦ದಿಂದ ಪ್ರಾರಂಭ ಮಾಡಿ ಕ್ರಿ.ಶ. ೧೩೦೦ರವರೆಗೆ ದಕ್ಷಿಣ ಭಾರತದ ಇತರ ಭೂಪ್ರದೇಶಗಳಲ್ಲಿ ಕಂಡುಬಂದ ಆರ್ಥಿಕ ಪರಿಸ್ಥಿತಿಯ ಎಲ್ಲ ಲಕ್ಷಣಗಳೂ ಈ ಪ್ರದೇಶದಲ್ಲಿಯೂ ಚಾಲ್ತಿಯಲ್ಲಿದ್ದುದನ್ನು ಖಚಿತಪಡಿಸಿಕೊಳ್ಳಬಹುದು.

**ವಾಣಿಜ್ಯ ಮತ್ತು ವ್ಯವಹಾರ**

ಆರ್ಥಿಕವಾಗಿ ವ್ಯವಸಾಯದ ಭೂಮಿಯ ಮೇಲೆ ಮತ್ತು ಭೂ ಉತ್ಪನ್ನದ ವಸ್ತುಗಳ ಮೇಲೆ ಹಾಕುತ್ತಿದ್ದ ತೆರಿಗೆ, ವ್ಯಾಪಾರದ ಸರಕು ಸಾಗಾಣಿಕೆ ಮೇಲೆ ವಿಧಿಸುತ್ತಿದ್ದ ಸುಂಕ ಅಲ್ಲದೆ ಗಣಿಗಾರಿಕೆ ಅಥವಾ ಇತರ ವಸ್ತು ಉತ್ಪಾದನೆಗಳ ಮೇಲೆ ವಿಧಿಸುತ್ತಿದ್ದ ಸುಂಕಗಳು ರಾಜ್ಯದ ಪ್ರಮುಖ ಆದಾಯದ ಮೂಲಗಳಾಗಿದ್ದವು. ಪ್ರಾದೇಶಿಕವಾಗಿಯೂ ಸಂಘ ಸಂಸ್ಥೆಗಳು ವ್ಯವಹಾರ ನಡೆಸುತ್ತಿದ್ದವು.[೨೦೭] ಪಾಂಡ್ಯರ ಆಡಳಿತ ಕ್ಷೇತ್ರದಲ್ಲಿನ ಕುರುಗೋಡು, ಕುಡಿತಿನಿ, ಕೊಟ್ಟೂರು, ಬೆಣ್ಣೆಕಲ್ಲು, ಕಂಪ್ಲಿ, ಕೋಗಳಿ, ಹಡಗಲಿ, ಕುರುವತ್ತಿ, ಬಾಗಳಿ ಮುಂತಾದವು ಪ್ರಮುಖ ವಾಣಿಜ್ಯ ಕೇಂದ್ರಗಳಾಗಿದ್ದವು.[೨೦೮] ಚಿತ್ರದುರ್ಗ ಜಿಲ್ಲೆಯ ಚಿತ್ರದುರ್ಗ, ಹೊಳಲ್ಕೆರೆ ಮುಂತಾದ ಪ್ರದೇಶಗಳು ಕೈಗಾರಿಕಾ ಕ್ಷೇತ್ರಗಳಾಗಿದ್ದವು. ಉಚ್ಚಂಗಿದುರ್ಗ ಪ್ರಮುಖ ವ್ಯಾಪಾರಿ ಪಟ್ಟಣವಾಗಿದ್ದಿತು. ಕುರುಗೋಡು ಪಟ್ಟಣವನ್ನು ಅಭಿನವ ದ್ವಾರಾವತಿ ಎಂದು ಶಾಸನಗಳು ಉಲ್ಲೇಖಿಸುತ್ತವೆ.[೨೦೯] ಉಚ್ಚಂಗಿಯ ವರ್ತಕರನ್ನು ಪಟ್ಟಣಸೆಟ್ಟಿಗಳೆಂದು ಕರೆಯಲಾಗುತ್ತಿತ್ತು. ಇದಲ್ಲದೆ ಈ ಪ್ರದೇಶದ ಅನೇಕ ಸ್ಥಳಗಳಲ್ಲಿ ಸಂತೆಗಳು ನಡೆಯುತ್ತಿದ್ದವು. ಈ ಮೊದಲೇ ವಿಶ್ಲೇಷಿಸಿರುವಂತೆ ಪ್ರಾಚೀನ ಕಾಲದಲ್ಲಿ ಮತ್ತು ಮಧ್ಯಯುಗೀನ ಕಾಲದಲ್ಲಿ ಗ್ರಾಮಗಳು ಬಹುತೇಕ ತಮ್ಮ ಅವಶ್ಯಕತೆಗಳನ್ನು ತಾವೇ

ಪೂರೈಸಿಕೊಳ್ಳುವಷ್ಟರಮಟ್ಟಿಗೆ ವ್ಯವಸಾಯ ಕೌಶಲ್ಯವನ್ನು ಸಾಧಿಸಿದ್ದವು. ಆ ಪ್ರದೇಶದಲ್ಲಿ ಬೆಳೆಯದ ಅವಶ್ಯಕ ಸಾಮಗ್ರಿಗಳನ್ನು ಮಾತ್ರ ಅವು ಎಲ್ಲಿ ಬೆಳೆಯುತ್ತವೋ ಅಲ್ಲಿಂದ ಆಮದು ಮಾಡಿಕೊಳ್ಳುವ ಪ್ರಕ್ರಿಯೆ ಚಾಲ್ತಿಯಲ್ಲಿತ್ತು. ಹೀಗಾಗಿ ಸಾಂಬಾರ ಪದಾರ್ಥ ಮುಂತಾದ ಜೀವನಾವಶ್ಯಕ ವಸ್ತುಗಳನ್ನು ಮಾತ್ರ ರೈತರು ಅಥವಾ ಜನಸಾಮಾನ್ಯರು ಕೊಂಡುಕೊಳ್ಳುತ್ತಿದ್ದರು. ಉಳಿದಂತೆ ಬಹುತೇಕ ಪದಾರ್ಥಗಳನ್ನು ತಾವೇ ಬೆಳೆದುಕೊಳ್ಳುತ್ತಿದ್ದರು.[೨೧೦] ಹತ್ತಿಬಟ್ಟೆ, ಉಣ್ಣೆಬಟ್ಟೆ, ಕಬ್ಬಿಣದ ಸಾಮಾನುಗಳು, ಸಾಂಬಾರ ಪದಾರ್ಥ ಇತ್ಯಾದಿಗಳನ್ನು ಗ್ರಾಮಗಳಲ್ಲಿ ಹೊರಪ್ರದೇಶಗಳಿಂದ ತರಿಸಿ ಕೊಂಡುಕೊಳ್ಳುವ ಪ್ರಕ್ರಿಯೆ ಸಂತೆಗಳಲ್ಲಿ ನಡೆಯುತ್ತಿತ್ತು.[೨೧೧] ಸಂತೆಗಳು, ಹೆಚ್ಚಾಗಿ ವಿನಿಮಯ ಕೇಂದ್ರಗಳಾಗಿದ್ದವು. ಅಂದರೆ ತಾನು ತನ್ನ ವ್ಯವಸಾಯ ಕ್ಷೇತ್ರದಲ್ಲಿ ಬೆಳೆದ ತನಗೆ ಅಧಿಕವಾದ ಪದಾರ್ಥಗಳನ್ನು ಕೊಟ್ಟು ಅದಕ್ಕೆ ಬದಲಾಗಿ ತನಗೆ ಅವಶ್ಯಕವಿರುವ ವಸ್ತುಗಳನ್ನು ಮಾತ್ರ ಕೊಳ್ಳಲಾಗುತ್ತಿತ್ತು. ಉಳಿದಂತೆ ಗ್ರಾಮದಲ್ಲಿನ ಉತ್ಪಾದನೆಗಳನ್ನು ಹೊರತುಪಡಿಸಿ ಇತರ ಪದಾರ್ಥಗಳನ್ನು ಮಾತ್ರ ಕೊಳ್ಳಲಾಗುತ್ತಿತ್ತು. ಶಾಸನಗಳಲ್ಲಿ ಉಲ್ಲೇಖವಾಗಿರುವ ಹೇರು ವ್ಯಾಪಾರಗಳನ್ನು ಗಮನಿಸಿದಾಗ ಇದು ಖಚಿತವಾಗುತ್ತದೆ. ಬಂಡಿಯ ಮೇಲೆ, ಎತ್ತುಗಳ ಮೇಲೆ, ಕತ್ತೆಗಳ ಮೇಲೆ ಹೇರಿಕೊಂಡು ತರುತ್ತಿದ್ದ ಪದಾರ್ಥಗಳ ಉಲ್ಲೇಖಗಳು ಶಾಸನಗಳಲ್ಲಿವೆ. ಕಾರಡಕೆ, ಅಡಿಕೆ, ಮೆಣಸು, ಎಲೆ ಮುಂತಾದವುಗಳನ್ನು ವ್ಯಾಪಾರಕ್ಕಾಗಿ ಬೇರೆ ಪ್ರದೇಶದಿಂದ ತರಲಾಗುತ್ತಿತ್ತು. ಈ ಪ್ರದೇಶದಲ್ಲಿ ಭತ್ತ, ವೀಳ್ಯದೆಲೆ, ಹತ್ತಿ ಮುಂತಾದವುಗಳು ಬೆಳೆಯಲ್ಪಡುತ್ತಿದ್ದವು.

**ವರ್ತಕ ಸಮುದಾಯ**

ಈ ಪ್ರದೇಶದಲ್ಲಿ ಬಣಜಿಗ ಸೆಟ್ಟಿಗಳು ಕಾರ್ಯ ನಿರ್ವಹಿಸುತ್ತಿದ್ದಂತೆ ತಿಳಿದುಬರುತ್ತದೆ. ಇವರು ಪಾರಂಪರಿಕವಾಗಿ ವ್ಯಾಪಾರದಲ್ಲಿ ತೊಡಗಿದ್ದ ಒಂದು ವರ್ಗವಾಗಿದ್ದರು. ಸಂಸ್ಕೃತದ ವಣಿಜ ಶಬ್ದ ಕನ್ನಡದ ಬಣಜಿಗವಾಗಿ ಮಾರ್ಪಟ್ಟಿದೆಯೆಂದು ಹೇಳಲಾಗಿದೆ. ಇವರನ್ನು ಬಣಜಿಗ, ಬಿರುದರ ಬಣಜಿಗ, ವೀರ ಬಣಜಿಗ ಮುಂತಾದ ಹೆಸರುಗಳಿಂದ ಕರೆಯಲಾಗುತ್ತದೆ. ವಣಿಜ ಸ್ವಾಮಿ, ತಳಗಾತ್ರದ ಸೆಟ್ಟಿ, ವಿಭೂತಿ ಕುಲ, ಮಾಹೇಶ್ವರ ವರ್ತಕ ಮುಂತಾದ ಹೆಸರುಗಳಿಂದ ಕೂಡ ಕರೆಯಲಾಗುತ್ತಿತ್ತೆಂದು ತಿಳಿದುಬರುತ್ತದೆ. ವೀರವಣಿಗ ಪದವೇ ವೀರಬಣಜಿಗರು ಎಂದು ಹೆಸರಿಸಲಾಗಿದೆ.[೨೧೨] ಇವರು ವೀರರಾಗಿದ್ದರು ಎಂದು ತಿಳಿದುಬರುತ್ತದೆ. ಕೆಲವೊಂದು ವೀರಬಣಜಿಗ ವ್ಯಾಪಾರಿಗಳು ಮಡಿದ ಉಲ್ಲೇಖಗಳನ್ನು ಶಾಸನಗಳಲ್ಲಿ ಕಾಣಬಹುದು. ವೀರಬಣಜಿಗರನ್ನು ವೀರಶೈವರೆಂದು ಅರ್ಥೈಸಿರುವುದು ತಪ್ಪೆಂದು, ವರ್ತಕರನ್ನು ಮಹೇಶ್ವರ ವರ್ತಕ, ವಿಭೂತಿ ಕುಲಜಾತಿ, ಜಂಗಮ ಲಿಂಗ ಪ್ರಸಾದ ಎಂದು ಕರೆದಿರುವುದನ್ನು ಗಮನಿಸಿದರೆ ೧೨ನೆಯ ಶತಮಾನದಲ್ಲಿ ಪ್ರಚಲಿತದಲ್ಲಿದ್ದ ವೀರಶೈವ ಪರಂಪರೆಯ ಪ್ರಭಾವಕ್ಕೆ ಇವರು ಒಳಗಾಗಿದ್ದರೆಂದು ಭಾವಿಸಬಹುದು. ವರ್ತಕರಾದ ವೀರಬಣಜಿಗರು ದೇವ ಬ್ರಾಹ್ಮಣ ಪಾದ ಆರಾಧಕರೆಂದು ತಿಳಿದುಬರುತ್ತದೆ. ಇದಲ್ಲದೆ ಮುಮ್ಮುರಿದಂಡವೆಂಬ ವರ್ತಕ ಗುಂಪನ್ನು ಕುರುಗೋಡಿನ ಶಾಸನ ಹೇಳುತ್ತದೆ. ಸಂತೆಪೇಟೆಗಳಿಗೆ ವ್ಯಾಪಾರದಲ್ಲಿ ಇವರು ತೊಡಗಿದ್ದು

ಎಲೆ, ಅಡಿಕೆ, ಅರಿಶಿಣ, ಜೀರಿಗೆ, ಮೆಣಸು, ಅಜವಾನ ಮುಂತಾದವುಗಳನ್ನು ಇವರು ಮಾರುತ್ತಿದ್ದರು. ಅಯ್ಯಹೊಳೆ ೫೦೦ರ ವರ್ತಕ ಸಂಘಕ್ಕೆ ಸೇರಿದವರೆಂದು ಇವರು ಕರೆಸಿ ಕೊಂಡಿದ್ದಾರೆ.[೨೧೩] ಇವರಲ್ಲಿ ಕೆಲವರು ಪಟ್ಟಣ ಸ್ವಾಮಿಗಳಾಗಿದ್ದರಲ್ಲದೆ ಇವರು ಪಟ್ಟಣ ಮೂಲಸ್ತಂಭರೆನಿಸಿದ್ದರೆಂದು ತಿಳಿಯುತ್ತದೆ. ಇವರು ಗವೇಶ್ವರನ ಆರಾಧಕರಾಗಿದ್ದರು. ವ್ಯವಹಾರ ಪ್ರವೀಣರೂ, ಪರಾಕ್ರಮಿಗಳೂ, ಪರೋಪಕಾರಶೀಲರೂ, ಸರ್ವಧರ್ಮ ಸಮನ್ವಯ ಬುದ್ಧಿಯುಳ್ಳವರೂ ಆಗಿದ್ದರೆಂದು ಶಾಸನಗಳು ಹೇಳುತ್ತವೆ.

ನಖರು ಇದೇ ಗುಂಪಿಗೆ ಅಥವಾ ವ್ಯಾಪಾರಿಗಳ ಸಾಲಿಗೆ ಸೇರಿದ ಮತ್ತೊಂದು ವರ್ತಕ ಸಂಘ. ಇವರು ಅಂಗಡಿ ಸೆಟ್ಟಿಯರೆಂದು, ಸಂತೇಪೇಟೆಗಳಿಗೆ ಬಂದ ವಸ್ತುಗಳನ್ನು ಖರೀದಿಸಿ ಅಂಗಡಿಯಲ್ಲಿಟ್ಟು ವ್ಯಾಪಾರ ಮಾಡುತ್ತಿದ್ದಂತೆ ಕಂಡುಬರುತ್ತದೆ. ಕುರುಗೋಡು ಶಾಸನ ಪಟ್ಟಣದ ನಖರೆಂದು ಕರೆದಿದೆ. ಹುಲುವಾಗಿಲು ಮತ್ತು ಉಚ್ಚಂಗಿ ಶಾಸನಗಳಲ್ಲಿಯೂ ಇವರ ಉಲ್ಲೇಖ ಕಂಡುಬರುತ್ತದೆ.[೨೧೪]

ವಡ್ಡ ವ್ಯವಹಾರಿಗಳು ಈ ಪ್ರದೇಶದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಮತ್ತೊಂದು ವ್ಯಾಪಾರಿ ಗುಂಪು. ದುಗ್ಗವತಿ ಶಾಸನದಲ್ಲಿ ಇವರನ್ನು ಕುರಿತು ಅತ್ಯುತ್ತಮವಾದ ವಿವರಣೆ ದೊರೆಯುತ್ತದೆ. ಅಲ್ಲದೆ ಬಾಗಳಿಯ ಶಾಸನ ಕೂಡ ವಡ್ಡವ್ಯವಹಾರಿಗಳನ್ನು ಉಲ್ಲೇಖಿಸುತ್ತದೆ. ಕೌಂಡಿನ್ಯ ಗೋತ್ರಕ್ಕೆ ಸೇರಿದ ಮುದ್ದರಾಜನು ವಡ್ಡವ್ಯವಹಾರಿಗಳ ಗುಂಪಿಗೆ ಸೇರಿದವನಾಗಿದ್ದು ಪರಮ ಶಿವಭಕ್ತನಾಗಿದ್ದು ಕುರುಗೋಡಿನಲ್ಲಿ ತನ್ನ ಹೆಸರಿನಲ್ಲಿ ಶಿವಾಲಯವನ್ನು ಕಟ್ಟಿಸಿದ್ದನ್ನು ಇಲ್ಲಿ ದಾಖಲಿಸಬಹುದು. ಮಲ್ಲಿಸೆಟ್ಟಿ ಎಂಬ ಮತ್ತೊಬ್ಬ ಶೆಟ್ಟಿಯು ಕುರುಗೋಡಿನಲ್ಲಿ ಮಲ್ಲಿಕಾರ್ಜುನಸ್ವಾಮಿ ದೇವರನ್ನು ಪ್ರತಿಷ್ಠಾಪನೆ ಮಾಡಿದ್ದನು. ಈತನನ್ನು ವಡ್ಡವ್ಯವಹಾರಿ ಎಂದು ಉಲ್ಲೇಖಿಸುತ್ತದೆ. ಇವರು ಟಂಕಸಾಲೆ ಉಳ್ಳವರಾಗಿದ್ದರೆಂದು ತಿಳಿದುಬರುತ್ತದೆ.[೨೧೫]

ಉಭಯ ನಾನಾ ದೇಶಿಗಳು ಈ ಪ್ರದೇಶದಲ್ಲಿ ವ್ಯಾಪಾರದಲ್ಲಿ ತೊಡಗಿಕೊಂಡಿದ್ದರು. ಇವರು ಲಾಟ, ಮಲಯಾಳ, ಚೋಳ, ಕನ್ನಡ, ತೆಲುಗು, ತೆಂಕ, ಕಂಚಿ, ಬಡಗ ಮುಂತಾದ ನಾನಾ ದೇಶಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದು, ವಿಸ್ತೃತವಾದ ಸಂಪರ್ಕ ಹೊಂದಿದ್ದ ವ್ಯಾಪಾರಿ ಸಮುದಾಯವಾಗಿತ್ತೆಂದು ತಿಳಿದುಬರುತ್ತದೆ. ನಾನಾ ದೇಶಿಗಳು ಮತ್ತು ವಡ್ಡ ವ್ಯವಹಾರಿಗಳಲ್ಲಿ ಸಾಮ್ಯತೆ ಕಂಡುಬರುತ್ತದೆ.[೨೧೬] ಪ್ರಾಯಶಃ ಇವರು ವಿವಿಧ ಪ್ರದೇಶಗಳ ನಡುವೆ ವ್ಯಾಪಾರ ನಡೆಸುತ್ತಿದ್ದ ವರ್ತಕರಿರಬೇಕೆಂದು ಗುರುತಿಸಬಹುದು. ಕೆಲವೊಂದು ಶಾಸನಗಳಲ್ಲಿ ಮಲಯಾಳಿ ವಡ್ಡ ವ್ಯವಹಾರಿಯ ಹೆಸರು ಕಂಡುಬರುವುದರಿಂದ ಅವರು ಮಲಯಾಳ ಪ್ರದೇಶಕ್ಕೂ ನೊಳಂಬವಾಡಿ ಪ್ರದೇಶಕ್ಕೂ ನಡುವೆ ವ್ಯಾಪಾರ ನಡೆಸುತ್ತಿದ್ದರೆಂದು ಭಾವಿಸಬಹುದು. ಇವರಲ್ಲದೆ ಗವರೆಗಾತ್ರಿಕ ಗುಂಪುಗಳು, ಐಯ್ಯಹೊಳೆ ೫೦೦ ವರ್ತಕ ಶ್ರೇಣಿಯು ಈ ಪ್ರದೇಶದಲ್ಲಿ ಕರ್ತವ್ಯ ನಿರ್ವಹಿಸುತ್ತಿತ್ತೆಂದು ಶಾಸನಗಳಿಂದ ತಿಳಿದುಬರುತ್ತದೆ.[೨೧೭]

**ಮಾಪಕಗಳು**

ತೂಕ ಮತ್ತು ಅಳತೆಯ ಅನೇಕ ಪದ್ಧತಿ ಜಾರಿಯಲ್ಲಿದ್ದಿತು. ಪದಾರ್ಥಗಳನ್ನು ಅಳೆದು, ತೂಗಿ ಕೊಡುವ ಕ್ರಮ ಭಾರತೀಯ ವ್ಯಾಪಾರ ಪರಂಪರೆಗೆ ಹೊಸತೇನೂ ಅಲ್ಲ. ದಾನ ನೀಡುವ ಸಮಯದಲ್ಲಿ ಅಂದು ಜಾರಿಯಲ್ಲಿದ್ದ ಅಳತೆ ಮಾಪಕಗಳ ವಿವರಣೆ ಪ್ರತಿ ದಾನಶಾಸನಗಳಲ್ಲಿ ಕಂಡುಬರುತ್ತದೆ. ಬಣಜಿಗರು ತೂಗಲು ಬೆಣಕವನ್ನು ಉಪಯೋಗಿಸುತ್ತಿದ್ದರು. ಭಾರ, ಮಳವೆ, ಪಲ, ಬಿಸಿಗೆ, ಹೂಡಿಗೆ, ಬೆಳ್ಳಲಿಗೆ ಮುಂತಾದ ವಸ್ತುಗಳನ್ನು ತೂಗಲು ಬಳಸಲಾಗುತ್ತಿತ್ತು. ರಾಜಾದಿತ್ಯನ ಗಣಿತದಲ್ಲಿ ತೂಕಗಳನ್ನು ಈ ರೀತಿಯಾಗಿ ಉಲ್ಲೇಖಿಸಲಾಗಿದೆ. ನಾಲ್ಕು ಸುವರ್ಣ ಒಂದು ಕರ್ಷ, ನಾಲ್ಕು ಕರ್ಷ ಒಂದು ಪಲ, ಇಪ್ಪತ್ತು ಪಲ ಒಂದು ಬಿಸಿಗೆ, ಐದು ಬಿಸಿಗೆ ಒಂದು ತೊಲ, ಒಂದು ತೊಲ ಒಂದು ಬಾರ; ಇದನ್ನು ಕೇವಲ ಪದಾರ್ಥಗಳನ್ನು ತೂಕ ಮಾಡಲು ಅದರಲ್ಲೂ ಅತ್ಯಂತ ಅಗತ್ಯವಾದ ವಿಶೇಷ ವಸ್ತುಗಳನ್ನು ತೂಗಲು ಬಳಸುತ್ತಿದ್ದರು.[೨೧೮]

ಧಾನ್ಯ ಮತ್ತು ಎಣ್ಣೆ ಪದಾರ್ಥಗಳನ್ನು ಅಳತೆಯ ಮೂಲಕ ಅಳೆಯಲಾಗುತ್ತಿತ್ತು. ಭತ್ತ, ರಾಗಿ, ಅಕ್ಕಿ, ಆಹಾರ ಧಾನ್ಯಗಳು, ಬೇಳೆ ಕಾಳುಗಳು ಮುಂತಾದವುಗಳನ್ನು ಅಳೆಯಲು ಬಳ್ಳವನ್ನು, ಮಾನವನ್ನು, ಫಳಿಗೆ, ಖಂಡುಗವನ್ನು ಬಳಸಲಾಗುತ್ತಿತ್ತು. ದ್ರವ ಪದಾರ್ಥಗಳಾದ ಎಣ್ಣೆ, ತುಪ್ಪ ಔಷಧಿಯ ವಸ್ತುಗಳು, ಮಧು ಮುಂತಾದವುಗಳನ್ನು ಅಳೆಯಲು ಸೊಲ್ಲಿಗೆ ಅರ್ಧ ಸೊಲ್ಲಿಗೆ, ಸಟ್ಟುಗ, ಸೊಳಸ, ದಳ, ಹಾಸೆ ಮುಂತಾದವುಗಳನ್ನು ಬಳಸಲಾಗುತ್ತಿತ್ತು. ನಾಲ್ಕು ಗಿದ್ದ ಒಂದು ಸೊಲ್ಲಿಗೆ, ನಾಲ್ಕು ಸೊಲ್ಲಿಗೆ ಒಂದು ಮಾನ, ನಾಲ್ಕು ಮಾನ ಒಂದು ಬಳ್ಳ, ನಾಲ್ಕು ಬಳ್ಳ ಒಂದು ಕೊಳಗ, ಇಪ್ಪತ್ತು ಕೊಳಗ ಒಂದು ಖಂಡುಗವೆಂದು ಅಳತೆಯ ಪ್ರಮಾಣವನ್ನು ನಿರ್ಧರಿಸಲಾಗಿದ್ದಿತು. ಬಟ್ಟೆ, ಹಣ್ಣು-ಹಂಪಲು, ಕಬ್ಬು, ಅಡಿಕೆ ಮೊದಲಾದವುಗಳನ್ನು ಎಣಿಸಿ ಕೊಡಲಾಗುತ್ತಿತ್ತು.[೨೧೯]

ಭೂಮಿಯನ್ನು ಅಳೆಯಲು ಬಳಸುತ್ತಿದ್ದ ಅಳತೆ ಮಾಪಕಗಳಾದ ಕೋಲನ್ನು ಸ್ಥಳದ ಪ್ರಮುಖ ದೇವರು ಮತ್ತು ಊರಿನ ಹೆಸರಿನಿಂದ ಕರೆಯಲಾಗುತ್ತಿತ್ತು. ಶ್ರೀಮತ್ತಾದಿತ್ಯದೇವರಕೋಲು, ನವಿಲುಕೋಲು, ಹಿರಿಯರ ಕೋಲು, ನಾಡ ಮತ್ತರಫಳೆ, ಕೋಗಳಿಗಳೆ, ನಾಲ್ವತುಗೇಣಗಳೆ, ಹದಿನೆಂಟು ಕೋಲು, ನವಿಲುಮತ್ತರ, ಕೆಯಿಮತ್ತರ, ಭಜೆ, ಚಿಂತಾಮಣಿ ಕೋಲು, ಮಾಣಿಕೇಶ್ವರದ ಕೋಲು ಮುಂತಾದ ಹೆಸರಿನ ಗಳಗಳಿಂದ ಅಳೆಯಲಾಗುತ್ತಿತ್ತು. ಗೇಣು, ತೋಳು ಎಂಬ ಮಾನವನ ಅಳತೆ ಪ್ರಮಾಣವನ್ನು ಬಳಸಲಾಗುತ್ತಿತ್ತು. ಅಳತೆಗೋಲುಗಳ ಸಹಾಯದಿಂದ ಭೂಮಿಯನ್ನು ಕಮ್ಮ, ಮತ್ತರು, ನಿವರ್ತನಗಳಲ್ಲಿ ಅಳೆಯುತ್ತಿದ್ದರು. ಆದರೆ ಎಷ್ಟು ಕೋಲುಗಳ ಅಳತೆಯಿಂದ ಕಂಬ ಮತ್ತರು ಬರುತ್ತಿತ್ತೆಂದು ತಿಳಿದುಬರುವುದಿಲ್ಲ. ಇದರಲ್ಲಿ ಜಿಜ್ಞಾಸೆಗಳಿವೆ.[೨೨೦]

**ನಾಣ್ಯ**

ನಾಣ್ಯಗಳ ಮೌಲ್ಯ ಎಲ್ಲಾ ಕಾಲಕ್ಕೂ ಒಂದೇ ರೂಪದಲ್ಲಿ ನಿರ್ದಿಷ್ಟವಾಗಿರಲಿಲ್ಲ. ಕಾಲಕಾಲಕ್ಕೆ ಅದರ ಮೌಲ್ಯದಲ್ಲಿ ಬದಲಾವಣೆ ಆಗಿರುವುದನ್ನು ಶಾಸನಗಳು ತಿಳಿಸುತ್ತವೆ. ನಾಣ್ಯಗಳನ್ನು

ಟಂಕಿಸುವ ಸ್ಥಳಗಳನ್ನು ಕಮ್ಮಟಗಳೆಂದು ಅಚ್ಚಿನ ಟಂಕಶಾಲೆಗಳೆಂದು ಕರೆಯಲಾಗಿದೆ.[೨೨೧] ಅಕ್ಕಸಾಲಿಗಳು ಇಂತಹ ಕಮ್ಮಟ ಅಥವಾ ಟಂಕಶಾಲೆಗಳಲ್ಲಿ ಕೆಲಸ ಮಾಡುತ್ತಿದ್ದರು. ನಾಣ್ಯಗಳನ್ನು ಟಂಕಿಸುವ ಶಾಲೆಗಳು ಹೆಚ್ಚಾಗಿ ರಾಜಧಾನಿಗಳಲ್ಲಿ ದೇವಸ್ಥಾನ ಮತ್ತು ಪಟ್ಟಣಗಳಲ್ಲಿ ಕೆಲಸ ನಿರ್ವಹಿಸುತ್ತಿದ್ದವು. ಅಂದು ಬಳಕೆಯಲ್ಲಿದ್ದ ನಾಣ್ಯಗಳ ಸಂಬಂಧವನ್ನು ರಾಜ್ಯಾದಿತ್ಯನು ತನ್ನ ವ್ಯವಹಾರ ಗಣಿತದಲ್ಲಿ ಹೇಳಿದ್ದಾನೆ. ಆತನ ಲೀಲಾವತಿ ಗಣಿತ ವಿವರವಾಗಿ ನಾಣ್ಯಗಳ ಸಂಬಂಧವನ್ನು ಸ್ಪಷ್ಟಪಡಿಸುತ್ತದೆ.[೨೨೨]

| | |
|---|---|
| ೧ ವರಹ = ೨ ಹೊನ್ನು | ೧ ಹೊನ್ನು = ೫ ಹಣ |
| ೧ ಹಣ = ೨ ಅಡ್ಡ | ೧ ಅಡ್ಡ = ೨ ಹಾಗ |
| ೧ ಹಾಗ = ೨ ಬೇಳೆ | ೧ ಬೇಳೆ = ೨ ವೀಸ |
| ೧ ವೀಸ = ೨ ಅರೇವೀಸ | ೧ ಅರೇವೀಸ ೨ ಕಾಣೆ |
| ೧ ಕಾಣೆ = ೪ ಗಿದ್ದಾಣಿ | |

ನಾಣ್ಯಗಳನ್ನು ಮುದ್ರಿಸುವ ಅಧಿಕಾರ ಅರಸರಿಗೆ ಮಾತ್ರ ಸಿಮೀತವಾಗಿರಲಿಲ್ಲ. ಸಾಮಂತ ಮಹಾಮಂಡಳೇಶ್ವರರು ಕೂಡ ನಾಣ್ಯಗಳನ್ನು ಟಂಕಿಸುವ ಸ್ವಾತಂತ್ರ್ಯವನ್ನು ಹೊಂದಿದ್ದರು. ಆ ನಾಣ್ಯಗಳ ಮೇಲೆ ತಮ್ಮ ರಾಜ ಚಿಹ್ನೆ, ಶ್ರೇಷ್ಠ ಬಿರುದು, ಸೂರ್ಯ, ಚಂದ್ರ ಮೊದಲಾದ ದೇವ ಶಿಲ್ಪಗಳನ್ನು ಅಚ್ಚು ಹಾಕುತ್ತಿದ್ದರು. ಉಚ್ಚಂಗಿ ಪಾಂಡ್ಯರು ನಾಣ್ಯ ಟಂಕಿಸುವ ಸ್ವಾತಂತ್ರ್ಯವನ್ನು ಪಡೆದುಕೊಂಡಿದ್ದರು. ರಾಜ ಚಿಹ್ನೆ ಮತ್ಸ್ಯ ಅಥವಾ ಮೀನು, ನಂದಿ, ಸೂರ್ಯ, ಚಂದ್ರ ಹಾಗೂ 'ಪರಿಚ್ಛೇದಿ ಗಂಡ' ಎಂಬ ಬಿರುದಿನ ಗದ್ಯಾಣವನ್ನು ಟಂಕಿಸಿರುವುದಕ್ಕೆ ಎರಡು ಗದ್ಯಾಣಗಳು ಸಾಕ್ಷಿಯಾಗಿವೆ. ನಾಣ್ಯ ಟಂಕಿಸುವ ಟಂಕಶಾಲೆ ಮತ್ತು ನಾಣ್ಯದ ಮೌಲ್ಯದ ಬಗ್ಗೆ ಮಾಹಿತಿ ಲಭ್ಯವಾಗುವುದಿಲ್ಲ.

**ಗದ್ಯಾಣ-೧[೨೨೩]**

ಲೋಹ: ಚಿನ್ನ, ವ್ಯಾಸ: ೧೫ ಮಿ.ಮೀ. ತೂಕ: ೩.೭ ಗ್ರಾಂ.

**ಮುಂಭಾಗ:** ಬಲಗಡೆ ಮುಖ ಮಾಡಿ ಪೀಠದ ಮೇಲೆ ಕುಳಿತಿರುವ ನಂದಿಯಿದ್ದು ಮೇಲೆ ಸೂರ್ಯ ಚಂದ್ರರಿದ್ದಾರೆ.

**ಹಿಂಭಾಗ:** ಹೂವಿನ ವಿನ್ಯಾಸದ ನಡುವೆ ಒಂದು ಸಾಲಿನ "ಶ್ರೀ ಪರಿಚ್ಛೇದಿ ಗಂಡ" ಎಂಬ ಬರಹವಿದೆ. ಈ ಬರಹದ ಕೆಲ ಅಕ್ಷರಗಳು ಸ್ವಲ್ಪಮಟ್ಟಿಗೆ ಶಿಥಿಲವಾಗಿವೆ. ನಾಣ್ಯ ತಜ್ಞರು ಈ ಲಿಪಿಯನ್ನು "ಶ್ರೀ ಪರಿಜ್ವಲ ಗಂಡ" ಎಂದು ಓದಿ ಈ ನಾಣ್ಯವನ್ನು ಕ್ರಿ.ಶ. ೮೯೭-೯೩೩ರ ನೊಳಂಬ ದೊರೆ ಒಂದನೇ ಅಯ್ಯಪ್ಪ ದೇವನೆಂದು ಹೇಳಿದ್ದಾರೆ. ಪರಿಜ್ವಲ ಗಂಡ ಅಥವಾ ಪರಿಚ್ಛೇದಿ ಗಂಡ ಎಂಬ ಬಿರುದು ನೊಳಂಬ ಪಲ್ಲವರಿಗೆ ಇರಲಿಲ್ಲ.

**ಗದ್ಯಾಣ-೨**

**ಲೋಹ:** ಚಿನ್ನ, **ವ್ಯಾಸ:** ೧೫ ಮಿ.ಮೀ. **ತೂಕ:** ೩.೮ ಗ್ರಾಂ.

**ಮುಂಭಾಗ:** ಬಲಗಡೆ ಮುಖಮಾಡಿ ಪೀಠದ ಮೇಲೆ ಕುಳಿತಿರುವ ನಂದಿಯ ಚಿತ್ರವಿದೆ. ನಂದಿಯ ಎದುರು ಭಾಗದಲ್ಲಿ ಚಾಮರವಿದೆ. ಚಾಮರದ ಮೇಲೆ 'ಮೀನಿ'ನ ಚಿತ್ರವಿರುವುದು ವಿಶೇಷವಾಗಿದೆ. ಈ ನಾಣ್ಯದ ಮೇಲಿರುವ ನಂದಿಯ ಮೊದಲನೆಯ ನಾಣ್ಯದಲ್ಲಿರುವ ನಂದಿಗಿಂತಲೂ ಹೆಚ್ಚಾಗಿ ಅಲಂಕೃತವಾಗಿದೆ. ನಂದಿಯ ಮೇಲ್ಭಾಗದಲ್ಲಿ ಸೂರ್ಯ ಚಂದ್ರರಿದ್ದು, ನಾಣ್ಯದ ಮೇಲ್ಭಾಗದ ಅಂಚಿನಿಂದ ಸಣ್ಣ ಸಣ್ಣ ಗಂಟೆಗಳನ್ನು ನೇತಾಡಿಸಿದ್ದಂತೆ ಚಿತ್ರಣ ಕಂಡುಬರುತ್ತದೆ.

**ಹಿಂಭಾಗ:** ಹಿಂಬದಿಯ ಹೂವಿನ ವಿನ್ಯಾಸ ಮೊದಲನೆಯ ನಾಣ್ಯಕ್ಕಿಂತ ಸ್ವಲ್ಪ ಭಿನ್ನವಾಗಿದ್ದು ನಾಣ್ಯದ ಮಧ್ಯಭಾಗದಲ್ಲಿ ೧೧-೧೨ನೇ ಶತಮಾನದ ಕನ್ನಡ ಲಿಪಿಯಲ್ಲಿ "ಶ್ರೀ ಪರಿಚ್ಛೇದಿ ಗಂಡ" ಎಂಬ ಒಂದು ಸಾಲಿನ ಬರಹ ಇದೆ. "ಪರಿಚ್ಛೇದಿ ಗಂಡ" ಎಂದರೆ ಸುತ್ತಲೂ ಆಕ್ರಮಿಸಿದ ಶತ್ರುಗಳನ್ನು ಕತ್ತರಿಸುವವನು? ಎಂದಾಗುತ್ತದೆ. ನೊಳಂಬ ಪಲ್ಲವ ಅರಸರಿಗೆ "ಪರಿಚ್ಛೇದಿ ಗಂಡ" ಎಂಬ ಬಿರುದು ಇರುವ ಯಾವ ಶಾಸನಗಳು ಲಭ್ಯವಿಲ್ಲ. ಉಚ್ಚಂಗಿ ಪಾಂಡ್ಯರಿಗೆ ಆರಂಭದ ಅರಸರಿಂದ ವಿಜಯಪಾಂಡ್ಯನ ಕಾಲದವರೆಗೂ ಎಲ್ಲಾ ಅರಸರು ಈ ಬಿರುದನ್ನು ವಂಶಪಾರಂಪರಿಕವಾಗಿ ಹೊಂದಿದ್ದರು. ಪಾಂಡ್ಯರ ರಾಜ್ಯ ಲಾಂಛನವಾದ 'ಮೀನು' ಮತ್ತು "ಪರಿಚ್ಛೇದ ಗಂಡ" ಎಂಬ ಪಾಂಡ್ಯರ ಬಿರುದು ಈ ಎರಡು ನಾಣ್ಯಗಳಲ್ಲಿ ಇರುವುದರಿಂದ ಉಚ್ಚಂಗಿ ಪಾಂಡ್ಯರ ನಾಣ್ಯಗಳು ಎಂದು ಸ್ಪಷ್ಟವಾಗುತ್ತದೆ. ಉಚ್ಚಂಗಿ ಪಾಂಡ್ಯರಲ್ಲಿ ಪರಾಕ್ರಮಿ ಹಾಗೂ ಸ್ವತಂತ್ರವಾಗಿ ಆಳ್ವಿಕೆ ನಡೆಸಿದ ವಿಜಯಪಾಂಡ್ಯದೇವನು ಈ ನಾಣ್ಯಗಳನ್ನು ಟಂಕಿಸಿರ ಬಹುದೆಂದು ಗ್ರಹಿಸಲಾಗಿದೆ.

ಪಾಂಡ್ಯರ ಶಾಸನಗಳಲ್ಲಿ ಗದ್ಯಾಣ, ಹಾಗ, ಕಾಣೆ, ವೀಸ, ಬೇಳೆ, ಪಣ/ಹಣ ಎಂಬ ನಾಣ್ಯಗಳ ಹೆಸರುಗಳು ಕಂಡುಬರುತ್ತವೆ. ಅವುಗಳ ಮೌಲ್ಯದ ಬಗೆಗೆ ಶಾಸನಗಳಲ್ಲಿ ಯಾವುದೇ ಮಾಹಿತಿ ದೊರೆಯುವುದಿಲ್ಲ.

**ಸಂಪತ್ತಿನ ವಿನಿಯೋಗ**

ಈ ಎಲ್ಲ ಆದಾಯಗಳನ್ನು ರಾಜನು ಅನೇಕ ವಿಧದಲ್ಲಿ ವ್ಯಯ ಮಾಡುತ್ತಿದ್ದನು. ಬಹುಮುಖ್ಯವಾಗಿ ಸೈನ್ಯಕ್ಕೆ ಆತನ ವೆಚ್ಚ ಹೋಗುತ್ತಿತ್ತು. ಇದಲ್ಲದೆ ಆತನು ಕೆರೆಗಳ ನಿರ್ಮಾಣಕ್ಕೆ ದೇವಾಲಯಗಳ ನಿರ್ಮಾಣಕ್ಕೆ ತನ್ನ ಅಧಿಕಾರಿ ವರ್ಗದ ಸಂಬಳಕ್ಕೆ ಹಣವನ್ನು ಖರ್ಚು ಮಾಡುತ್ತಿದ್ದನು. ಸೈನ್ಯದ ಕಾರ್ಯಾಚರಣೆಯ ಸಂದರ್ಭದಲ್ಲಿ ರೈತರಿಗುಂಟಾಗುತ್ತಿದ್ದ ಬೆಳೆಯ ನಾಶಕ್ಕೆ ಪ್ರತ್ಯಾಮ್ನಾಯ ಕೊಡುವುದರಲ್ಲಿ ಸಹ ವೆಚ್ಚವಾಗುತ್ತಿತ್ತು. ರಾಜ್ಯದ ರಕ್ಷಣೆ, ಕೋಟೆ, ಸೈನ್ಯ, ಆಡಳಿತ ಮುಂತಾದ ವ್ಯವಹಾರಗಳಿಗೆ ಕೂಡ ರಾಜ್ಯಾದಾಯದ ಬಹುಪಾಲು ಖರ್ಚಾಗುತ್ತಿತ್ತು.

ಆದರೂ ಜನಗಳ ಮೇಲೆ ವಿಧಿಸಿದ ಸುಂಕ, ತೆರಿಗೆ ಇತ್ಯಾದಿಗಳು ಜನರ ಶಕ್ತಿಗೆ ಮೀರಿದ ವಾಗಿದ್ದವೆಂದು ತಿಳಿದುಬರುವುದಿಲ್ಲ.[೨೪] ತನ್ನ ಕರ್ತವ್ಯದ ಭಾಗವಾಗಿ ವಿನಿಯೋಗಿಸುತ್ತಿದ್ದ ಸಂಪತ್ತನ್ನು ತೆರಿಗೆಯ ಮೂಲಕ ಸಂಗ್ರಹಿಸಲಾಗುತ್ತಿತ್ತು. ಪಾಂಡ್ಯರ ಶಾಸನಗಳು ಭೂಮಿ ಮತ್ತು ಭೂ ಉತ್ಪನ್ನ ವಸ್ತುಗಳ ಮಾರಾಟದ ಮೇಲೆ ವ್ಯಾಪಾರ-ವಾಣಿಜ್ಯ ವಸ್ತುಗಳು ಮತ್ತು ಸಂಸ್ಥೆಗಳ ಮೇಲೆ ಉತ್ಪಾದಿತ ಕೈಗಾರಿಕೆಗಳ ಮೇಲೆ ಸಾರಿಗೆ - ಸಂಪರ್ಕದ ಮೇಲೆ ಕೆಲವು ವೃತ್ತಿ ಹಾಗೂ ಸಾಮಾಜಿಕ ಕಟ್ಟುಪಾಡುಗಳ ಮೇಲೆ ತೆರಿಗೆಯನ್ನು ನಿರ್ದಿಷ್ಟಪಡಿಸಿ ಸಂಗ್ರಹಿಸಲಾಗುತ್ತಿತ್ತು. ತೆರಿಗೆಯ ಸಂಗ್ರಹಣೆಗಾಗಿ ಸುಂಕಾಧಿಕಾರಿ, ಹೆಜ್ಜುಂಕಾಧಿಕಾರಿ, ಅಚ್ಚುಪನ್ನಾಯದಧಿಕಾರಿ ಮೊದಲಾದ ಅಧಿಕಾರವರ್ಗದವರು ತೆರಿಗೆ ಸಂಗ್ರಹದಲ್ಲಿ ತೊಡಗಿದ್ದರು.

ಪ್ರಾಚೀನ ಮತ್ತು ಮಧ್ಯಕಾಲೀನ ಯುಗದ ಸ್ಥಿತ್ಯಂತರ ಘಟ್ಟದಲ್ಲಿ ಭಾರತೀಯ ಸಮುದಾಯವು ವಿಶೇಷವಾಗಿ ಕರ್ನಾಟಕದ ಪ್ರದೇಶದಲ್ಲಿ ಕಂಡುಬಂದ ಆರ್ಥಿಕ ಮತ್ತು ಸಾಮಾಜಿಕ, ಧಾರ್ಮಿಕ ಪರಿಸ್ಥಿತಿಯಲ್ಲಿ ಸಣ್ಣಮಟ್ಟ ವ್ಯತ್ಯಾಸಗಳು ಪ್ರಾದೇಶಿಕವಾಗಿ ಎದ್ದು ಕಾಣುತ್ತವೆಯೇ ಹೊರತು ವಿಶೇಷವಾದ ಬಹುದೊಡ್ಡ ವ್ಯತ್ಯಾಸಗಳು ಎಲ್ಲಿಯೂ ಕಂಡುಬರುವುದಿಲ್ಲ. ಆದರೂ ಸ್ಥಾನಿಕವಾಗಿ ಕೆಲವೊಂದು ವಿಶೇಷಗಳು ಶಾಸನಗಳಲ್ಲಿ ಉಲ್ಲೇಖವಾಗುತ್ತವೆ. ಉದಾಹರಣೆಗೆ ಪ್ರಸ್ತುತ ಅಧ್ಯಯನ ಕ್ಷೇತ್ರವಾದ ನೊಳಂಬವಾಡಿ ೩೨೦೦೦ ಪ್ರದೇಶವನ್ನು ಆಳ್ವಿಕೆ ನಡೆಸಿದ ಉಚ್ಚಂಗಿಯ ಪಾಂಡ್ಯರು ಕಲ್ಯಾಣದ ಚಾಳುಕ್ಯರ ಸಾಮಂತರಾಗಿ ನೊಳಂಬವಾಡಿ ಭೂಪ್ರದೇಶವನ್ನು ಬಹುತೇಕ ಆಳಿದರಾದರೂ ಇವರ ಕಾಲಘಟ್ಟದಲ್ಲಿ ಯಾವುದೇ ಹೆಚ್ಚಿನ ವ್ಯತ್ಯಾಸಗಳು ಅಥವಾ ಧಾರ್ಮಿಕ ವ್ಯವಸ್ಥೆಯಲ್ಲಿನ ಮಾರ್ಪಾಡುಗಳು ಕಂಡುಬರುವುದಿಲ್ಲ.

ಅಧ್ಯಯನ ಪ್ರದೇಶವು ಕಾವೇರಿ ನದಿ ತೀರದಿಂದ ದೂರವಿದ್ದುದರಿಂದ ಇಲ್ಲಿ ಶೈವ ಪರಂಪರೆ ಅತಿ ಹೆಚ್ಚು ಪ್ರಬಲವಾಗಿ ಬೇರೂರಿದ್ದುದರ ಜೊತೆಗೆ ಲಕುಲೀಶ ಆಗಮನ ಮತ್ತು ವೈದಿಕ ಪರಂಪರೆಯ ಶಿವಾಲಯಗಳು ಚಾಲ್ತಿಯಲ್ಲಿದ್ದವೆಂದು ತಿಳಿದುಬರುತ್ತದೆ. ಈ ಪ್ರದೇಶದಲ್ಲಿ ಕೆಲವೊಂದು ವೈಷ್ಣವ ದೇವಾಲಯಗಳು ಉದಾಹರಣೆಗೆ ನರಸಿಂಹಸ್ವಾಮಿ ದೇವಸ್ಥಾನ, ವಿಷ್ಣುವಿನ ದೇವಾಲಯಗಳು ಇಲ್ಲಿ ನಿರ್ಮಾಣವಾದರೂ ಅವು ಭಾಗವತ ಸಂಪ್ರದಾಯದ ವೈಷ್ಣವ ದೇವಾಲಯಗಳಾಗಿದ್ದವೇ ಹೊರತು ಶಾಸನಗಳಲ್ಲೆಲ್ಲಿಯೂ ಅವರು ವೈಖಾನಸ ಸಿದ್ಧಾಂತವನ್ನಾಗಲೀ, ಪಂಚರಾತ್ರಾಗಮನವನ್ನಾಗಲೀ ಬಳಸಿ ಶ್ರೀವೈಷ್ಣವ ಪರಂಪರೆಯ ಅನುಯಾಯಿಗಳಾಗಿದ್ದರೆಂದು ಉಲ್ಲೇಖಿಸುವುದಿಲ್ಲ. ಇಡೀ ಜಿಲ್ಲೆಯ ಶಾಸನಗಳಲ್ಲಿ ಹೊಯ್ಸಳರ ಅಂತ್ಯದವರೆಗೆ ರಾಮಾನುಜಾ ಚಾರ್ಯರ ಉಲ್ಲೇಖ ಈ ಪ್ರದೇಶದ ಶಾಸನದಲ್ಲಿ ಕಂಡು ಬರುವುದಿಲ್ಲ. ಧಾರ್ಮಿಕ ವಿಚಾರದಲ್ಲಿ ಗಮನಿಸುವುದಾದರೆ ಬ್ರಾಹ್ಮಣರು ಅದರಲ್ಲೂ ವಿಶೇಷವಾಗಿ ಅಗ್ರಹಾರದ ಮಹಾಜನರುಗಳು, ಲಕುಲೀಶ ಪಂಥದ ಶೈವ ದೇವಾಲಯಗಳ ಅಥವಾ ಮಠಗಳ ಸ್ಥಾನಪತಿಗಳು ಸಮಾಜದ ಅತಿ ಮನ್ನಣೆ ಪಡೆದ ವ್ಯಕ್ತಿಗಳಾಗಿದ್ದರು. ಈ ಪ್ರದೇಶದ ಬಹುತೇಕ ಶಾಸನಗಳನ್ನು ಗಮನಿಸಿದಾಗ ಅವುಗಳನ್ನು ಪಡೆದುಕೊಂಡವರು ಮಹಾಜನರು ಇಲ್ಲವೆ ಸ್ಥಾನಪತಿಗಳು. ಬೇರೆಯವರಿಗೆ

ದಾನ ಕೊಡುವಾಗಲೂ ಸಹ ಸ್ಥಾನಪತಿಗಳ ಕಾಲ ತೊಳೆದು ಅವರಿಗೆ ಅಗ್ರಪೂಜೆ ನೀಡಿ ಅವರ ಸಮ್ಮುಖದಲ್ಲಿ ದಾನ ನೀಡಿರುವುದು ಕಂಡುಬರುತ್ತದೆ.

ಸ್ಥಾನಪತಿಗಳು ಮಹಾಜನರಂತೆ ವೇದವಾಙ್ಮಯಗಳಲ್ಲಿ ಅಪಾರವಾದ ಜ್ಞಾನವನ್ನು ಹೊಂದಿದ್ದರು. ಆದರೆ ಅವರು ನೈಷ್ಠಿಕ ಬ್ರಹ್ಮಚಾರಿಗಳಾಗಿ ಸನ್ಯಾಸ ವ್ರತಿಗಳಂತೆ ಜೀವನ ನಡೆಸುತ್ತಿದ್ದುದರಿಂದ ಗೃಹಸ್ಥರಾಗದೆ ತಮ್ಮ ಜೀವನಪೂರ್ತಿ ದೇವಾಲಯಗಳಲ್ಲಿಯೇ ಕಾಲ ಕಳೆಯುತ್ತಿದ್ದರು. ಹೀಗಾಗಿ ಅವರು ಮಾರ್ಗದರ್ಶಕರಾಗಿ ಸಮಾಜದ ನೈತಿಕ ಮಟ್ಟವನ್ನು ಹೆಚ್ಚಿಸುವಲ್ಲಿ ಪ್ರಧಾನ ಪಾತ್ರ ವಹಿಸುತ್ತಿದ್ದರೆಂದು ಇದೇ ಸ್ಥಾನವನ್ನು ಮಹಾಜನರುಗಳು ಅಲಂಕರಿಸಿದ್ದರೆಂದು ಭಾವಿಸಬಹುದು.

ಇವರ ನಂತರದ ಸ್ಥಾನವು ಸಮಾಜದಲ್ಲಿ ರಾಜರಿಗೆ, ಮಾಂಡಲೀಕರಿಗೆ, ದಂಡನಾಯಕರಿಗೆ ಮುಂತಾದ ಕ್ಷತ್ರಿಯ ವೃತ್ತಿಯವರಿಗೆ ಸಲ್ಲುತ್ತಿತ್ತು. ಕ್ಷತ್ರಿಯರನ್ನು ಸಮಾಜದಲ್ಲಿ ಗೌರವದಿಂದ ಕಾಣಲಾಗುತ್ತಿತ್ತು. ಬ್ರಾಹ್ಮಣರು ಮತ್ತು ಕ್ಷತ್ರಿಯರ ನಡುವೆ ಸಮಾನ ಅಂತರವನ್ನು ಸಾಧಿಸಿ ಸರ್ವರಿಂದಲೂ ಮನ್ನಣೆ ಪಡೆದ ಮತ್ತೊಂದು ಸಮುದಾಯವೇ ವಣಿಕ ಸಮುದಾಯ. ರಾಜನ ಅವಶ್ಯಕತೆಯಿಂದ ಹಿಡಿದು ಸಾಮಾನ್ಯನ ಅವಶ್ಯಕತೆಯನ್ನು ಪೂರೈಸುವ ಇವರು ಪಟ್ಟಣದ ಸ್ವಾಮಿಗಳಾಗಿ ಸಂತೆಯ ನಿರ್ವಾಹಕರಾಗಿ ದೇವಾಲಯದ ದಾನದತ್ತಿಗಳ ನಿರ್ವಾಹಕರಾಗಿ ಕಾರ್ಯನಿರ್ವಹಿಸಿ, ದಾನ, ದತ್ತಿಗಳನ್ನು ನೀಡಿ ಸಮಾಜದ ಪುರೋಭಿವೃದ್ಧಿಗೆ ಔದ್ಯೋಗಿಕ ಮುನ್ನಡೆಗೆ ಕಾರಣರಾದವರು.

ಹೀಗಾಗಿ ಇವರಿಗೂ ಕೂಡ ಸಮಾಜದಲ್ಲಿ ಒಂದು ಉನ್ನತ ಸ್ಥಾನವಿತ್ತು. ಇವರನ್ನು ಹೊರತುಪಡಿಸಿದರೆ ಶೂದ್ರರು ಮತ್ತು ನಿರ್ಲಕ್ಷಿತ ವರ್ಗ ಕಂಡುಬರುತ್ತದೆ. ನಿರ್ಲಕ್ಷಿತ ವರ್ಗ ಮತ್ತು ಶೂದ್ರರು ಸಮಾಜದ ಬಹುಮುಖ್ಯ ಭಾಗವಾಗಿದ್ದರೂ ಸಮಾಜದಲ್ಲಿ ಅವರನ್ನು ಕಡೆಗಣಿಸಿದಂತೆ ಕಂಡುಬರುವುದಿಲ್ಲ. ಕಾರಣ ಬಹುತೇಕ ಶಾಸನಗಳಲ್ಲಿ ಪ್ರತಿಯೊಬ್ಬ ವ್ಯಕ್ತಿಗೂ ಹೆಚ್ಚು ಕಡಿಮೆ ಎಂಬ ವ್ಯತ್ಯಾಸವಿಲ್ಲದೆ ಎಲ್ಲರನ್ನು ಅವರವರ ಸ್ಥಾನದಲ್ಲಿ ಗೌರವಿಸುವ ಮತ್ತು ಅವರನ್ನು ಯಥಾಶಕ್ತಿ ಅವರಿಗೆ ಸ್ಥಾನಮಾನ ನೀಡುವ ಪದ್ಧತಿ ಚಾಲ್ತಿಯಲ್ಲಿತ್ತು. ಉದ್ಯೋಗ/ ವೃತ್ತಿ ಮೂಲದಿಂದ ಬಂದ ಈ ಜಾತಿಪದ್ಧತಿ ನಂತರದ ದಿನಗಳಲ್ಲಿ ಹುಟ್ಟಿನಿಂದ ಕಾಠಿಣ್ಯವನ್ನು ಪಡೆದುಕೊಂಡು ಅತಿಹೆಚ್ಚು ಸಂಕಷ್ಟಕ್ಕೆ ಒಳಗಾದವರು ಶ್ರಮಿಕವರ್ಗ. ಕಾರಣ ಕೌಶಲಗಳನ್ನು ಪರಂಪರಾನುಗತದಿಂದ ಅವರು ಪಡೆಯುತ್ತಿದ್ದುದರಿಂದ ಅಂತರ್ಜಾತಿಯ ವಿವಾಹಗಳು ನಿಂತುಹೋದವು. ಆದರೆ ಇತ್ತೀಚಿನ ದಿನಗಳಲ್ಲಿ ಇದಕ್ಕೆ ಬೇರೆಯೇ ಅರ್ಥವನ್ನು ನೀಡಲಾಗುತ್ತಿದೆ.

ಬ್ರಾಹ್ಮಣರು ಕ್ಷತ್ರಿಯರಾಗಿ, ವ್ಯಾಪಾರಿಗಳಾಗಿ ಕೂಡ ಪರಿವರ್ತಿತರಾಗುತ್ತಿದ್ದರು. ಕೆಲವೊಂದು ಸಂದರ್ಭಗಳಲ್ಲಿ ಬ್ರಾಹ್ಮಣರು ರೈತರಾಗಿ ಕೂಡ ಬದಲಾಗಿದ್ದು ಅಂತಹವರ ಮೇಲೆ ಈ ಪ್ರದೇಶದ ಶಾಸನಗಳು ನಿರ್ಬಂಧ ಹಾಕಿರುವುದನ್ನು ಕಾಣಬಹುದು. ಅಂದರೆ ಬ್ರಾಹ್ಮಣನಾದವನು

ವ್ಯವಸಾಯ ಮಾಡಕೂಡದೆಂಬ ನಿರ್ಬಂಧವಿದ್ದುದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಬ್ರಾಹ್ಮಣರು ತಮ್ಮ ಅಧ್ಯಯನ, ಅಧ್ಯಾಪನದ ಜೊತೆಗೆ ಆಡಳಿತ ವ್ಯವಸ್ಥೆಯಲ್ಲಿ ಕೆಲವರು ವ್ಯಾಪಾರಿಗಳಾಗಿ ಅತ್ಯುತ್ತಮ ಯೋಧರಾಗಿ, ಆಡಳಿತಗಾರರಾಗಿ ಕರ್ತವ್ಯ ನಿರ್ವಹಿಸಿದ್ದನ್ನು ಉಲ್ಲೇಖಿಸಬಹುದು. ಆಡಳಿತದಲ್ಲಿ ಬ್ರಾಹ್ಮಣರು ಮಾತ್ರವಲ್ಲದೇ ಜೈನರು ಮತ್ತು ಶ್ರಮಿಕವರ್ಗ ಕೂಡ ತನ್ನ ಅರ್ಹತೆಯ ಆಧಾರದ ಮೇಲೆ ಆಡಳಿತದಲ್ಲಿ ಸ್ಥಾನ ಪಡೆದಿದ್ದರು. ಬ್ರಾಹ್ಮಣ ಸಮುದಾಯವು ತನ್ನ ಅಧ್ಯಯನ, ಅಧ್ಯಾಪನದ ಜೊತೆಗೆ ಆಡಳಿತಾತ್ಮಕ ವ್ಯವಸ್ಥೆಯಲ್ಲಿಯೂ ತನ್ನನ್ನು ತೊಡಗಿಸಿ ಕೊಂಡಿತ್ತೆಂದು ತಿಳಿದುಬರುತ್ತದೆ. ವೀರಶೈವ ಧರ್ಮದ ಯಾವ ಕುರುಹುಗಳು ದೊರೆಯದಿದ್ದರೂ ಅಂದಿನ ಸಮಾಜದಲ್ಲಿ ಜಾತಿ ವ್ಯವಸ್ಥೆ, ಸಮುದಾಯಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕ ಜನವಸತಿ ಅಸ್ತಿತ್ವದಲ್ಲಿದ್ದ ಬಗ್ಗೆ ಸ್ಪಷ್ಟತೆ ದೊರೆಯುತ್ತದೆ. ಅವುಗಳಲ್ಲಿ ಸಂಘರ್ಷದ ಯಾವ ದಾಖಲೆಗಳು ಕಾಣಿಸುವುದಿಲ್ಲ. ಹೀಗಾಗಿ ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಕ್ಷೇತ್ರಗಳು ಕಟ್ಟುನಿಟ್ಟಿನಿಂದ ಚಾಲ್ತಿಯಲ್ಲಿದ್ದವೆನ್ನುವುದಕ್ಕೆ ಬದಲಾಗಿ ಅಂದಿನ ಸಮಾಜದ ಅವಶ್ಯಕತೆ ಯನ್ನು ಪೂರೈಸುತ್ತಿದ್ದವೆಂದು ಹೇಳಬಹುದು.

### ೪.೪. ಕಲೆ ಮತ್ತು ವಾಸ್ತುಶಿಲ್ಪ

**ದೇವಾಲಯ ವಾಸ್ತು**

ದೇವಾಲಯಗಳು ಮಾನವನ ಧಾರ್ಮಿಕ ಶ್ರದ್ಧೆ, ಭಕ್ತಿ, ನಂಬಿಕೆಗಳ ಪ್ರತೀಕಗಳಾಗಿವೆ. ಇಂತಹ ಧಾರ್ಮಿಕ ಸಂಪ್ರದಾಯದ ದೇವಾಲಯ ವಾಸ್ತುವಿದ್ಯೆಗೆ ಸುದೀರ್ಘವಾದ ಪರಂಪರೆ ಉಂಟು. ಕಾಲ, ದೇಶ, ಭಾಷೆ, ಜನಾಂಗ, ಧರ್ಮ, ಸಂಪ್ರದಾಯ, ಅಭಿರುಚಿ, ಶಿಲ್ಪಿಯ ಅಭಿವ್ಯಕ್ತಿ, ಸ್ವಾತಂತ್ರ್ಯ ಇತ್ಯಾದಿ ಹಿನ್ನೆಲೆಯಲ್ಲಿ ಬೆಳೆದುಬಂದ ದೇವಾಲಯ ವಾಸ್ತು ಸಂಪ್ರದಾಯ ವೈವಿಧ್ಯಮಯವಾಗಿದೆ.

ಮಾನವ ತನ್ನ ಜೀವನದಲ್ಲಿ ಪ್ರಕೃತಿಯೊಡನೆ ನಡೆಸಿದ ನಿರಂತರ ಸೆಣಸಾಟದಲ್ಲಿ ಅಗೋಚರ ಶಕ್ತಿಯೊಂದರ ಇರುವಿಕೆಯನ್ನು ಅರಿತು ಅದನ್ನು ದೇವರೆಂದು ಭಾವಿಸಿದ ಅನಂತರ ಅದಕ್ಕೆ ಮೂರ್ತಿ ರೂಪ ನೀಡಿ, ಇದು ಪವಿತ್ರ ಮತ್ತು ಪೂಜಾರ್ಹ ಎಂಬ ಭಾವನೆ ಉದಯವಾದ ತರುವಾಯ ಅದರ ಸುತ್ತಲೂ ರಕ್ಷಣೆಗಾಗಿ ಕಟ್ಟಡ ನಿರ್ಮಿಸಿದ. ಅದೇ ದೇವಾಲಯ ವಾಸ್ತುವಿನ ಉಗಮಕ್ಕೆ ಕಾರಣವಾಯಿತೆನ್ನಬಹುದು.

ಗತಕಾಲದ ಸಾಂಸ್ಕೃತಿಕ ಚರಿತ್ರೆಯ ಹೆಗ್ಗುರುತುಗಳಾಗಿರುವ ದೇವಾಲಯಗಳು ಮಧ್ಯಕಾಲದ ವೇಳೆಗೆ ದೇವಾಲಯಗಳಿಲ್ಲದೆ ಬದುಕೇ ಇಲ್ಲ ಎನ್ನುವಷ್ಟರಮಟ್ಟಿಗೆ ಬೆಳೆದವು. ಇಂತಹ ದೇವಾಲಯಗಳ ಬೆಳವಣಿಗೆಯ ವಿವಿಧ ಹಂತಗಳನ್ನು ಗುರುತಿಸುವುದು ಹಾಗೂ ಉಗಮದ ಬಗ್ಗೆ ನಿಖರವಾಗಿ ವಿವರಿಸಲು ಸಾಧ್ಯವಿಲ್ಲ. ಮಾನವನ ಮೊದಲ ವಸತಿ ತಾಣಗಳಾಗಿದ್ದ ಗುಹೆಗಳಲ್ಲಿ ಭಾರತದ ಮೊದಲ ದೇವಾಲಯಗಳ ರಚನೆಯನ್ನು ಕಾಣಬಹುದು. ಮಾನವ

ತನಗಾಗಿ ನಿರ್ಮಿಸಿಕೊಂಡ ಮನೆ 'ಗೃಹ ವಾಸ್ತುಶಿಲ್ಪ' ಎನಿಸಿದರೆ, ತನ್ನ ದೇವರಿಗಾಗಿ ನಿರ್ಮಿಸಿದ್ದು 'ಧಾರ್ಮಿಕ ವಾಸ್ತುಶಿಲ್ಪ'ವೆಂದಾಯಿತು. ಮಯಮತ ಗ್ರಂಥವು ವಾಸ್ತು ಎಂಬುದನ್ನು ಹೀಗೆ ಹೇಳಿದೆ. ''ಮರ್ತ್ಯರು ಮತ್ತು ಅಮರ್ತ್ಯರು ವಾಸಿಸುವ ಸ್ಥಳಕ್ಕೆ ವಸ್ತು ಎಂದು ಹೆಸರು. ಈ ವಾಸ್ತುವನ್ನು ಆಧರಿಸಿದ್ದು ವಾಸ್ತುಶಿಲ್ಪ ಎಂದು ಗುರುತಿಸಲ್ಪಡುತ್ತದೆ.''[೨೨೫] ಕಾಲ ಕಳೆಂದತೆಲ್ಲಾ ಮಾನವನ ಚಿಂತನೆಗಳು ಬದಲಾದಂತೆ ದೇವಾಲಯವನ್ನು ಮನುಷ್ಯ ದೇಹದೊಡನೆ ಸಮೀಕರಿಸುವ ಭಾವನೆ ಬೆಳೆಯಿತು. ಕಟ್ಟಡದ ಹಲವಾರು ಭಾಗಗಳಿಗೆ ದೇಹದ ವಿವಿಧ ಅಂಗಗಳಾದ ಪಾದ, ಚರಣ, ಅಂಘ್ರಿ, ಜಂಘ, ಕಟಿ, ಕುಕ್ಷಿ, ಗ್ರೀವ, ಕಂಠ, ಶಿಖರ, ಶಿರ, ಮಸ್ತಕ, ಮುಖ, ವಕ್ತ್ರ ನಾಸಿಕ ಇತ್ಯಾದಿ ಹೆಸರುಗಳನ್ನು ಕೊಡಲಾಗಿದೆ.[೨೨೬]

ದೇವರು ಶಾಶ್ವತವೆಂಬ ನಂಬಿಕೆ ಬಂದಿದ್ದರಿಂದ ದೇವರಿಗೆ ನಿರ್ಮಿಸುವ ಕಟ್ಟಡವೂ ಶಾಶ್ವತವಾಗಿ ಇರಬೇಕು ಎಂಬ ನಂಬಿಕೆ ಸಮಾಜದಲ್ಲಿ ಬೆಳೆಯಿತು. ಆಡಳಿತದಲ್ಲಿ ಧರ್ಮ ಪ್ರವೇಶ ಪಡೆದುಕೊಂಡಾಗ ದೇವಾಲಯಗಳ ಬೆಳವಣಿಗೆ ಹೆಚ್ಚಾಗಿ ಅದನ್ನು ಕಲಾತ್ಮಕವಾಗಿ ರಚಿಸುವುದೂ ಮಹತ್ವದ ಸಂಗತಿಯಾಯಿತು. ಇಲ್ಲಿ ಪ್ರಾಚೀನ ಕಾಲದಿಂದಲೂ ನಾನಾ ಶೈಲಿ, ಪ್ರಕಾರ, ನಾನಾ ಪಂಥ ಮಾದರಿಯ ಮಾಧ್ಯಮಗಳು, ರಾಜಮನೆತನಗಳಿಂದ ಪೋಷಿಸಲ್ಪಟ್ಟ ಅಸಂಖ್ಯಾತ ದೇವಾಲಯಗಳು ಕರ್ನಾಟಕದ ಉದ್ದಗಲಕ್ಕೂ ಪಸರಿಸಿವೆ. ದ್ರಾವಿಡ, ನಾಗರ ಮತ್ತು ವೇಸರ ಈ ಮೂರು ಶೈಲಿಗಳ ನಿರ್ಮಾಣಗಳು ಒಂದೆಡೆ ಕಂಡುಬರುವುದು ಕರ್ನಾಟಕದಲ್ಲಿಯೇ ಎಂಬುದು ಗಮನಾರ್ಹ.

ಆರಂಭದಲ್ಲಿ ಸರಳವಾದ ರೀತಿಯಲ್ಲಿ ರೂಪುಗೊಂಡ ದೇವಾಲಯ ನಿರ್ಮಾಣ ಕ್ರಮೇಣ ಅವಶ್ಯಕತೆ ಮತ್ತು ಪ್ರತಿಷ್ಠೆಗೆ ಅನುಗುಣವಾಗಿ ಬೆಳೆದು ವಿಶಾಲವಾದ ದೇವಾಲಯಗಳಾಗಿ ನಿರ್ಮಾಣವಾದವು. ನಾನಾ ರೀತಿಯ ನೈಸರ್ಗಿಕ ವಾತಾವರಣ ಉಪಲಬ್ಧವಾಗುವ ನಿರ್ಮಾಣ ಸಾಮಗ್ರಿಗಳು, ಸ್ಥಳೀಯ ಅವಶ್ಯಕತೆಗಳು, ಅಭಿರುಚಿ ಇತ್ಯಾದಿ ಹಲವು ಅಂಶಗಳ ಹಿನ್ನೆಲೆಯಲ್ಲಿ ದೇವಾಲಯಗಳು ಬಹುಶೈಲಿ, ಬಹುಪ್ರಕಾರ ಮತ್ತು ಬಹುಪ್ರಬೇಧಗಳಾಗಿ ರೂಪುಗೊಂಡವು. ಇಂತಹ ಪ್ರಕಾರಗಳ ಬೆಳವಣಿಗೆಗೆ ಪೋಷಣೆ ನೀಡಿದ ಅರಸು ಮನೆತನಗಳ ಹೆಸರಿನಲ್ಲಿ ವಾಸ್ತುಶೈಲಿಯನ್ನು ಕರೆಯುವ ಪದ್ಧತಿ ಕರ್ನಾಟಕದಲ್ಲಿ ನಡೆದಿದೆ. ಈ ಕಾರ್ಯದಲ್ಲಿ ಅರಸರು ಮಾತ್ರವಲ್ಲದೆ ಮಹಾಮಂಡಳೇಶ್ವರ, ಮಹಾಸಾಮಂತ, ದಂಡನಾಯಕ, ಪೆರ್ಗ್ಗಡೆ, ಪ್ರಭುಗೌಡ, ವರ್ತಕ ವರ್ಗ ಸೇರಿದಂತೆ ಇತರೆ ಅಧಿಕಾರಿಗಳ ಕುಟುಂಬ ವರ್ಗದವರು ಇದರಲ್ಲಿ ತಮ್ಮ ಸೇವೆಗಳನ್ನು ಅರ್ಪಿಸಿದ್ದಾರೆ.

ಮಹಾಮಂಡಳೇಶ್ವರ, ಮಹಾಸಾಮಂತ ಮೊದಲಾದ ಸಾಮಂತ ಅರಸರು ಆಶ್ರಿತ ರಾಜರ ಅಧೀನದಲ್ಲಿದ್ದರೂ ತಮ್ಮ ಆಡಳಿತದ ಭೂ ಪ್ರದೇಶದಲ್ಲಿ ಸಾಂಸ್ಕೃತಿಕವಾಗಿ ಅವರು ಸ್ವತಂತ್ರರಾಗಿದ್ದರು. ಹಾಗಾಗಿ ಕರ್ನಾಟಕದಲ್ಲಿ ಅರಸುಮನೆತನಗಳ ಆಡಳಿತದಲ್ಲಿ ಅವರ

ಪಾದಪದ್ಮೋಪಜೀವಿಗಳಾಗಿದ್ದ ಸಾಮಂತ ಅರಸರುಗಳು ತಮ್ಮ ಭೂಪ್ರದೇಶದಲ್ಲಿ ಆಶ್ರಿತ ಅರಸರಿಗಿಂತ ವಿಶಿಷ್ಟವಾದ ವಾಸ್ತುಶೈಲಿಯನ್ನು ಹುಟ್ಟುಹಾಕಿ ಬೆಳೆಸಿದ್ದಾರೆ. ಗಂಗವಾಡಿ ಪ್ರದೇಶದಲ್ಲಿ ಗಂಗರು ಮತ್ತು ಹೊಯ್ಸಳರು, ನೊಳಂಬವಾಡಿ ಪ್ರದೇಶದಲ್ಲಿ ನೊಳಂಬ ಪಲ್ಲವರು ರಾಷ್ಟ್ರಕೂಟ ಚಾಳುಕ್ಯ ಅರಸರ ಆಡಳಿತ ಅವಧಿಯಲ್ಲಿ ಅವರಿಗಿಂತ ಭಿನ್ನ ಮಾದರಿಯ ವಾಸ್ತುಶೈಲಿಯನ್ನು ರೂಪಿಸಿ ಕೊಂಡಿದ್ದರು. ಡಾ. ದೇವರಕೊಂಡಾರೆಡ್ಡಿ ಅವರು ಗಂಗರ ವಾಸ್ತುಶೈಲಿ ಡಾ. ಎಂ.ಎಸ್. ಕೃಷ್ಣಮೂರ್ತಿ ನೊಳಂಬ ಪಲ್ಲವರ ವಾಸ್ತುಶೈಲಿಯ ಲಕ್ಷಣಗಳನ್ನು ಗುರುತಿಸಿದ್ದಾರೆ.

ನೊಳಂಬರ ನಂತರ ಪಾಂಡ್ಯನಾಡಿನಲ್ಲಿ ಅಧಿಕಾರಿಕ್ಕೆ ಬಂದ ಉಚ್ಚಂಗಿ ಪಾಂಡ್ಯರು ತಮ್ಮ ಅವಧಿಯಲ್ಲಿ ನೊಳಂಬ ಪಲ್ಲವರು ಮತ್ತು ಆಶ್ರಿತ ಚಾಳುಕ್ಯ ಅರಸರ ವಾಸ್ತುಶೈಲಿಗಿಂತ ಭಿನ್ನವಾದ ಹೊಸದೊಂದು ಪ್ರಾದೇಶಿಕ ಶೈಲಿಯ ಬೆಳವಣಿಗೆಗೆ ಕಾರಣರಾದರು. ಈ ಕಾರ್ಯದಲ್ಲಿ ಪಾಂಡ್ಯ ಅರಸರು, ಅವರ ಆಶ್ರಯದಲ್ಲಿದ್ದ ಮಹಾಮಂಡಳೇಶ್ವರರು, ಮಹಾಸಾಮಂತರು ಅವರ ಅಧಿಕಾರಿ ವರ್ಗ, ವರ್ತಕರು, ಊರಗೌಡರು ಮತ್ತು ಅವರ ಕುಟುಂಬವರ್ಗ ಇದಕ್ಕೆ ಪೋಷಣೆ ನೀಡಿ ಗೌರವಿಸಿತ್ತು. ಪಾಂಡ್ಯರ ಶಾಸನಗಳಲ್ಲಿ ಉಲ್ಲೇಖಿಸಿರುವ ದೇವಾಲಯಗಳ ಕ್ಷೇತ್ರಕಾರ್ಯದ ಅಧ್ಯಯನದ ಮೂಲಕ ಮೊಟ್ಟಮೊದಲ ಬಾರಿಗೆ ಉಚ್ಚಂಗಿ ಪಾಂಡ್ಯರ ವಾಸ್ತುಶೈಲಿಯ ಲಕ್ಷಣಗಳನ್ನು ಇಲ್ಲಿ ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಉಚ್ಚಂಗಿ ಪಾಂಡ್ಯರ ದೇವಾಲಯ ವಾಸ್ತುರಚನೆಯನ್ನು ಪ್ರಾದೇಶಿಕ ಶೈಲಿಗಳ ಮಿಶ್ರಣ ಎಂದು ಹೇಳಬಹುದು. ಪ್ರಾಚೀನ ತಮಿಳು-ದ್ರಾವಿಡ ಶೈಲಿಯ ದಕ್ಷಿಣ ಕರ್ನಾಟಕದ ಗಂಗ, ಕದಂಬ, ವಿಜಯನಗರ ಅರಸರ ಕಾಲದ ವಾಸ್ತುಶೈಲಿಯ ಅಂಶಗಳು ಪಾಂಡ್ಯರ ರಚನೆಯಲ್ಲಿ ಮಿಶ್ರಣವಾಗಿವೆ. ದೇವಾಲಯದ ತಳವಿನ್ಯಾಸ ಚತುರಸ್ರ ಮತ್ತು ಆಯತಸ್ರ ಮಾದರಿಯಲ್ಲಿವೆ.

ತ್ರಿಕೂಟ ಮಾದರಿ ಹೆಚ್ಚು ಪ್ರಚಲಿತಕ್ಕೆ ಬಂದು ಉದ್ದ x ಅಗಲ x ಎತ್ತರದಲ್ಲಿ ಮಧ್ಯಮ ಗಾತ್ರದ ದೇವಾಲಯಗಳ ಬೆಳವಣಿಗೆ ಇಲ್ಲಿ ಆರಂಭವಾಯಿತು. ಚಾಳುಕ್ಯ, ರಾಷ್ಟ್ರಕೂಟ, ಗಂಗ, ಕದಂಬರ ಕಾಲದ ಜೈನ ಬಸದಿಯ ವಾಸ್ತು ಲಕ್ಷಣಗಳು ಪಾಂಡ್ಯರ ಕಾಲದ ದೇವಾಲಯ ವಾಸ್ತುಶೈಲಿಯ ಮೇಲೆ ಹೆಚ್ಚು ಪ್ರಭಾವವನ್ನು ಬೀರಿದೆ. ಬ್ರಹ್ಮಗಿರಿಯ ಜಿನ ಬಸದಿ, ಅಕ್ಕನಗುಡಿ, ತ್ರಿಶಂಕೇಶ್ವರ, ಬೆಲಗೂರಿನ ಪ್ರಸನ್ನ ರಾಮೇಶ್ವರ.[೨೨೭] ಹಲಸಿಯ ರಾಮೇಶ್ವರ ದೇವಾಲಯ.[೨೨೮] ದೊಡ್ಡಗದ್ದವಳ್ಳಿಯ ಲಕ್ಷ್ಮೀದೇವಿ ದೇವಾಲಯ.[೨೨೯] ಹಂಪಿಯ ಹೇಮಕೂಟದಲ್ಲಿನ ದೇವಾಲಯಗಳು.[೨೩೦] ಹಂಪಿಯ ಇಮ್ಮಡಿ ರಾಚಮಲ್ಲೇಶ್ವರ ದೇವಾಲಯ, ಪಟ್ಟದಕಲ್ಲಿನ ಮಲ್ಲಿಕಾರ್ಜುನ ದೇವಾಲಯ ಹಾಗೂ ಇತರೆ ಕೆಲವು ದೇವಾಲಯಗಳ ವಾಸ್ತುರಚನೆಯ ಅಂಶಗಳು ಪಾಂಡ್ಯರ ಕಾಲದ ಚಟ್ನಿಹಳ್ಳಿ, ಹೊಳಗುಂದಿ, ಸೋಗಿ, ಗುಂಜಗನೂರು ಅಲಗಿಲವಾಡ ದೇವಾಲಯಗಳಲ್ಲಿ ಗುರುತಿಸಬಹುದು.

ಕರ್ನಾಟಕದ ಪಶ್ಚಿಮ ಕರಾವಳಿಗೆ ಬಂದ ಪಾಂಡ್ಯರು ಅಲ್ಲಿನ ಪ್ರಾದೇಶಿಕ ಶೈವ ಧರ್ಮವನ್ನು ಸ್ವೀಕರಿಸಿದ್ದಾರೆ. ಅಲ್ಲದೆ ಚಾಳುಕ್ಯ ಅರಸರು ಶೈವ ಆರಾಧಕರಾಗಿದ್ದರಿಂದ ಅವರ

ಆಶ್ರಯಕ್ಕೆ ಬಂದ ಇವರು ಸಂಪೂರ್ಣವಾಗಿ ಶೈವ ಧರ್ಮವನ್ನು ಸ್ವೀಕರಿಸಿ ಮುಂದುವರಿಸಿದರು. ಶೈವ ಧರ್ಮವನ್ನು ಸ್ವೀಕರಿಸಿದ ಪಾಂಡ್ಯರು ತಮ್ಮ ಆಡಳಿತದಲ್ಲಿ ಬರಿ ಶೈವ ಧರ್ಮದ ದೇವಾಲಯಗಳನ್ನು ನಿರ್ಮಿಸಿದ್ದಾರೆ. ಅಲ್ಲದೆ ಕೂಡಲೂರಿನ ಶಂಕರನಾರಾಯಣ ದೇವರನ್ನು ತಮ್ಮ ಆರಾಧ್ಯ ದೇವರೆಂದು ಹೇಳಿಕೊಂಡಿದ್ದಾರೆ. ತಮ್ಮ ಕಾಲದಲ್ಲಿ ಒಂದೇ ಒಂದು ಸ್ವತಂತ್ರ ವೈಷ್ಣವ ಧರ್ಮದ ದೇವಾಲಯಗಳನ್ನು ನಿರ್ಮಿಸಲಿಲ್ಲ. ಆದರೆ ತಮ್ಮ ತ್ರಿಕೂಟ ದೇವಾಲಯಗಳಲ್ಲಿ ಸೂರ್ಯ ಮತ್ತು ವಿಷ್ಣು, ಲಕ್ಷ್ಮೀ ಮೂರ್ತಿಗಳ ಆರಾಧನೆಗೆ ಜಾಗ ಕಲ್ಪಿಸಿದ್ದಾರೆ. ಪಾಂಡ್ಯರು ತಮ್ಮ ಆಡಳಿತದಲ್ಲಿ ಶೈವ ಧರ್ಮದಂತೆ ಜೈನ ಮಂದಿರಗಳ ನಿರ್ಮಾಣ ಮತ್ತು ಜೀರ್ಣೋದ್ಧಾರಕ್ಕೆ ದಾನಗಳನ್ನು ನೀಡಿದ್ದಾರೆ. ಆಡಳಿತದಲ್ಲಿ ಜೈನ ಮತದವರಿಗೆ ಹುದ್ದೆಗಳನ್ನು ನೀಡಿ ಅವರ ಸೇವೆಯನ್ನು ಪಡೆದಿರುವುದು ಅವರ ಶಾಸನದಿಂದ ತಿಳಿಯುತ್ತದೆ. ದುಗ್ಗವತ್ತಿ, ಹೊಳಗುಂದಿ, ಬೆತ್ತೂರು, ಅಂಬಳಿ ಉಲವತ್ತಿ ಶಾಸನಗಳು ಪಾಂಡ್ಯರು ಜೈನ ಧರ್ಮವನ್ನು ಪೋಷಿಸಿರುವ ಬಗ್ಗೆ ಮಾಹಿತಿ ನೀಡುತ್ತವೆ. ಶೈವ ದೇವಾಲಯಗಳನ್ನು ಸ್ವಯಂಭು ಕಲ್ಲಿದೇವರು, ನ್ಯೊಯ್ಯೋಶ್ವರ, ರಾಮೇಶ್ವರ, ಮಹಾದೇವ, ಶಂಕರಲಿಂಗ, ಶಂಕರನಾರಾಯಣ, ಕೋಟಿಶಂಕರ, ಬಸವೇಶ್ವರ, ಸೋಮೇಶ್ವರ, ಈಶ್ವರ, ಮಹೇಶ್ವರ, ಚೋಳೇಶ್ವರ, ಹಿಡಿಂಬೇಶ್ವರ, ಸೋಮನಾಥ, ಭೋಗೇಶ್ವರ, ಕುಂಬೇಶ್ವರ/ಲೋಕೇಶ್ವರ, ಪಾಂಡೇಶ್ವರ ಎಂಬ ಮೊದಲಾದ ಹೆಸರಿನಲ್ಲಿ ಶಿವಾಲಯಗಳನ್ನು ನಿರ್ಮಿಸಿದ್ದಾರೆ. ಈ ದೇವಾಲಯಗಳು ಚಾಳುಕ್ಯ, ನೊಳಂಬರ ದೇವಾಲಯಗಳಿಗಿಂತ ಗಾತ್ರದಲ್ಲಿ ಚಿಕ್ಕದಾಗಿದ್ದರೂ ಪೂರ್ಣಪ್ರಮಾಣದಲ್ಲಿ ನಿರ್ಮಾಣವಾಗಿವೆ. ಪ್ರಚಲಿತದಲ್ಲಿದ್ದ ಪ್ರಾದೇಶಿಕ ಮತ್ತು ಅರಸುಮನೆತನಗಳಾದ ಕದಂಬ, ಗಂಗ, ಚಾಳುಕ್ಯ, ನೊಳಂಬ, ಪಲ್ಲವರ ವಾಸ್ತು ಅಂಶಗಳ ಮಿಶ್ರಣದಲ್ಲಿ ನೊಳಂಬವಾಡಿ ಪ್ರಾಂತ್ಯದ ವಾಸ್ತುನಿರ್ಮಾಣದಲ್ಲಿ ಹೊಸದೊಂದು ಪ್ರಾದೇಶಿಕ ವಿನ್ಯಾಸಕ್ಕೆ ಉಚ್ಚಂಗಿ ಪಾಂಡ್ಯರು ಸಾಕ್ಷೀಭೂತರಾದರು.

**ಉಚ್ಚಂಗಿ ಪಾಂಡ್ಯರ ದೇವಾಲಯ ವಾಸ್ತುರಚನೆಯ ಲಕ್ಷಣಗಳು**

ಪುರಾತನ ಸಂಸ್ಕೃತ ಗ್ರಂಥಗಳು ಹಿಂದೂ ದೇವಸ್ಥಾನಕ್ಕೆ ಅತ್ಯಂತ ಸೂಕ್ತ ತಾಣವೆಂದರೆ 'ಮಂದಿರ್' ಎಂದು ಕರೆಯಲ್ಪಡುವ ನೀರಿನ ಪ್ರದೇಶಗಳು ಮತ್ತು ಉದ್ಯಾನಗಳ ಸಮೀಪ ಸ್ಥಳವೆಂದು ಹೇಳುತ್ತವೆ. ಅಲ್ಲಿ ಕಮಲದ ಮತ್ತು ಇತರೆ ಬಗೆಯ ಹೂವುಗಳು ಅರಳುತ್ತವೆ. ಬಾತುಕೋಳಿಗಳು ಮತ್ತು ಇತರ ಪಕ್ಷಿಗಳ ಕಲರವ ಕೇಳಿಬರುತ್ತದೆ. ಅಲ್ಲಿ ಗಾಯಗಳು ಅಥವಾ ಹಾನಿಗಳ ಭಯವಿಲ್ಲದೇ ಪ್ರಾಣಿಗಳು ವಿಶ್ರಾಂತಿ ಪಡೆಯುತ್ತವೆ. ಇಂತಹ ಸಾಮರಸ್ಯದ ಸ್ಥಳಗಳಲ್ಲಿ ದೇವರು ಇರಲು ಅಥವಾ ಆಡಲು ಇಚ್ಚಿಸುತ್ತಾನೆ. ಹೀಗಾಗಿ ನೀರು ಮತ್ತು ಉದ್ಯಾನಗಳು ಇರುವ ಸ್ಥಳಗಳು ದೇವಸ್ಥಾನದ ನಿರ್ಮಾಣಕ್ಕೆ ಅತ್ಯುತ್ತಮ ತಾಣ ಎಂದು ತಿಳಿಸುತ್ತವೆ.[೨೫೧]

ಉಚ್ಚಂಗಿ ಪಾಂಡ್ಯರ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳು ನೀರಿನ ಮೂಲವಿರುವ ಸ್ಥಳದಲ್ಲಿಯೇ ನಿರ್ಮಾಣವಾಗಿವೆ. ಹರಿಹರದ ಶಂಕರನಾರಾಯಣ, ಕೊಟ್ನೆಕಲ್ಲು, ಕೋಟಿಶಂಕರ ದೇವಾಲಯಗಳು ತುಂಗಭದ್ರ ನದಿ ದಂಡೆಯ ಮೇಲೆ ಇವೆ. ಅಂಬಳಿಯ ಕಲೇಶ್ವರ ಬೆಣ್ಣೆಹಳ್ಳಿ

ದೇವಾಲಯಗಳು ಹಗರಿ ನದಿ ದಂಡೆಯ ಮೇಲಿವೆ. ನೈಸರ್ಗಿಕ ಜಲಸಂಧಿಗಳು ಇಲ್ಲದ ಸ್ಥಳಗಳಲ್ಲಿ ಮಾನವ ನಿರ್ಮಿತ ಜಲಸಂಪತ್ತುಗಳ ಅನುಪಸ್ಥಿತಿಯಲ್ಲಿ ದೇವಾಲಯಗಳನ್ನು ನಿರ್ಮಿಸಲು ಶಾಸ್ತ್ರ ಗ್ರಂಥಗಳು ಅವಕಾಶ ನೀಡುತ್ತವೆ ಹಾಗೂ ಗುಹೆಗಳಲ್ಲಿ ದೇವಾಲಯ ನಿರ್ಮಿಸಲು ಸಹ ಶಿಫಾರಸ್ಸು ಮಾಡುತ್ತದೆ. ಕೆರೆ, ಪುಷ್ಕರಣಿ, ಹಳ್ಳ ಪ್ರಶಾಂತವಾದ ತೋಟಗಳ, ಆಶ್ರಯ ಮತ್ತು ಅರಣ್ಯಗಳಲ್ಲಿ ಉದ್ಯಾನಗಳ ಪಕ್ಕದಲ್ಲಿ ಪಟ್ಟಣದ ಬೀದಿಯ ಮೇಲಿನ ತುದಿಯಲ್ಲಿ ನಿರ್ಮಾಣ ಮಾಡಲು ಪುರಾಣ ಮತ್ತು ಶಾಸ್ತ್ರ ಗ್ರಂಥಗಳು ತಿಳಿಸುತ್ತವೆ. ಚಟ್ನಿಹಳ್ಳಿ, ಆನೆಕೊಂಡ, ಹೊಳಗುಂದಿ ದೇವಾಲಯಗಳು ಕೆರೆಯ ದಂಡೆಯ ಮೇಲೆ, ಅಲಗಿಲವಾಡ ಮಾನ್ಯರಮಸಲವಾಡ ದೇವಾಲಯಗಳು ಹಳ್ಳದ ದಂಡೆಯ ಮೇಲೆ ಚಿತ್ರದುರ್ಗದ ಹಿಡಂಬೇಶ್ವರ ದೇವಾಲಯವನ್ನು ಗುಹೆಯಲ್ಲಿ ನಿರ್ಮಿಸಿದ್ದಾರೆ. ಕೋಗಳಿ, ಕೊಟ್ಟೂರು, ಉಚ್ಚಂಗಿದುರ್ಗ ಪಟ್ಟಣಗಳಲ್ಲಿ ನಿರ್ಮಿಸಿದ್ದಾರೆ. ಉಚ್ಚಂಗಿ ಪಾಂಡ್ಯರು ದೇವಾಲಯದ ನಿರ್ಮಾಣದ ಪೂರ್ವದಲ್ಲಿ ಸ್ಥಳದ ಆಯ್ಕೆಯನ್ನು ಶಾಸ್ತ್ರ ಗ್ರಂಥದ ಆಧಾರದ ಮೇಲೆ ಆಯ್ಕೆ ಮಾಡಿರುವುದು ಸ್ಪಷ್ಟವಾಗಿ ತಿಳಿಯುತ್ತದೆ. ಬಹುತೇಕ ದೇವಾಲಯಗಳು ನೀರಿನ ಆಶ್ರಯದಲ್ಲಿ ನಿರ್ಮಾಣವಾಗಿವೆ.

ದೇವಾಲಯದ ಸ್ವರೂಪವನ್ನು 'ತಲವಿನ್ಯಾಸ' ಮತ್ತು ಏರುವಿನ್ಯಾಸಗಳ ಪ್ರತ್ಯೇಕ ಅಧ್ಯಯನದಿಂದ ತಿಳಿಯುವುದು ಸಾಧ್ಯ. ಮೊದಲಿಗೆ ತಲವಿನ್ಯಾಸದ ಲಕ್ಷಣಗಳನ್ನು ವಿವರಿಸಲಾಗಿದೆ. ಇವರ ಕಾಲದ ದೇವಾಲಯಗಳು ಪ್ರಮುಖವಾಗಿ ಗರ್ಭಗೃಹ, ಅಂತರಾಳ ಅಥವಾ ಶುಕನಾಸಿ, ಗೂಢಮಂಟಪ ಅಥವಾ ನವರಂಗ, ಮುಖಮಂಟಪ ಎಂಬ ನಾಲ್ಕು ಪ್ರಕಾರಗಳನ್ನು ಹೊಂದಿರುತ್ತದೆ. ಕೆಲವು ಕಡೆ ಮುಖಮಂಟಪದ ರಚನೆ ಇರುವುದಿಲ್ಲ. ಉಳಿದಂತೆ ಮೂರು ಪ್ರಕಾರಗಳು ಸಾರ್ವತ್ರಿಕವಾಗಿವೆ.

ಹೆಚ್ಚಿನ ಸಂಖ್ಯೆಯ ದೇವಾಲಯಗಳು ತ್ರಿಕೂಟ ವಿನ್ಯಾಸ ಹೊಂದಿರುವುದರಿಂದ ಮೂರು ಗರ್ಭಗೃಹಗಳನ್ನು ನಿರ್ಮಿಸಲಾಗಿದೆ. ಪೂರ್ವಾಭಿಮುಖವಾಗಿರುವ ದೇವಸ್ಥಾನದಲ್ಲಿ ಪಶ್ಚಿಮ, ಉತ್ತರ, ದಕ್ಷಿಣ ಭಾಗಗಳಲ್ಲಿ ದಕ್ಷಿಣಕ್ಕೆ ಪ್ರವೇಶವಿರುವ ದೇವಾಲಯಗಳಲ್ಲಿ ಪೂರ್ವ, ಪಶ್ಚಿಮ, ಉತ್ತರದ ದಿಕ್ಕಿನಲ್ಲಿ ಗರ್ಭಗೃಹಗಳ ರಚನೆ ಇರುತ್ತದೆ. ಪಶ್ಚಿಮ ಭಾಗದಲ್ಲಿರುವ ಗರ್ಭಗೃಹಕ್ಕೆ ಹೆಚ್ಚಿನ ಪ್ರಾಶಸ್ತ್ಯ ಮನ್ನಣೆ ನೀಡಿ ಮೂಲದೇವರ ಪ್ರತಿಷ್ಠಾಪನೆ ಇಲ್ಲಿ ನಡೆದಿರುತ್ತದೆ. ಉಳಿದಂತೆ ವಿಷ್ಣು, ಸೂರ್ಯ, ಮೂರ್ತಿಗಳು ಕೆಲವು ಕಡೆ ಮೂರು ಗರ್ಭಗೃಹದಲ್ಲಿ ಲಿಂಗವನ್ನು ಪ್ರತಿಷ್ಠಾಪಿಸಿರುತ್ತಾರೆ. ಎಲ್ಲಾ ತ್ರಿಕೂಟ, ದ್ವಿಕೂಟ, ಏಕಕೂಟ ದೇವಾಲಯದ ಪಶ್ಚಿಮದ ಮುಖ್ಯ ಗರ್ಭಗೃಹಕ್ಕೆ ಮಾತ್ರ ಅಂತರಾಳವನ್ನು ನಿರ್ಮಿಸಲಾಗಿದೆ. ಉತ್ತರ, ದಕ್ಷಿಣ ಮತ್ತು ಪೂರ್ವ ಗರ್ಭಗೃಹಗಳಿಗೆ ಅಂತರಾಳದ ರಚನೆ ಇಲ್ಲದೆ ನೇರವಾಗಿ ನವರಂಗಕ್ಕೆ ಪ್ರವೇಶ ಕಲ್ಪಿಸಲಾಗಿದೆ. ಈ ಮೂರು ಗರ್ಭಗೃಹಗಳು ಸಮಾನ ಅಳತೆಯನ್ನು ಹೊಂದಿವೆ ಹಾಗೂ ಇವುಗಳ ಪ್ರವೇಶದ್ವಾರದಲ್ಲಿ ಪಂಚಶಾಖೆ ಅಲಂಕಾರವನ್ನು ಮಾಡಲಾಗಿದೆ. ವಜ್ರಶಾಖೆ, ಪದ್ಮಶಾಖೆ, ಸ್ತಂಭಶಾಖೆ, ಅಲಂಕಾರಿಕ ಸ್ತಂಭ ಶಾಖೆ(ಕುಂಭ ದಾರ, ಪದ್ಮಗಳ) ಸರಳಪಟ್ಟಿಕೆ ರತ್ನ ಶಾಖೆಗಳು

ಇಲ್ಲಿ ಕಂಡುಬರುತ್ತವೆ. ಲಲಾಟಬಿಂಬದಲ್ಲಿ ಗಜಲಕ್ಷ್ಮೀ ಮೇಲ್ಛಾವಣಿ ಪದ್ಮಪಟ್ಟಿಕೆಯಿಂದ ಅಲಂಕಾರ ಗೊಂಡಿರುತ್ತದೆ.

ಅಂತರಾಳವು ನೊಳಂಬ ಪಲ್ಲವರ ಕಾಲದ ಅರ್ಧಮಂಟದಂತಿರದೆ ಪೂರ್ಣ ಪ್ರಮಾಣದ ಅಂತರಾಳವನ್ನು ಹೊಂದಿದೆ. ಇದು ಗರ್ಭಗೃಹಕ್ಕೆ ಸಮನಾಗಿರುತ್ತದೆ. ಪಾಂಡ್ಯರ ಕಾಲದ ಎಲ್ಲಾ ದೇವಾಲಯಗಳು ನಿರಂಧಾರ ಮಾದರಿಯಲ್ಲಿದ್ದು ತೆರೆದ ಪ್ರದಕ್ಷಿಣ ಪಥವನ್ನು ಹೊಂದಿವೆ. ಹಾಗಾಗಿ ಅಂತರಾಳ ಗರ್ಭಗೃಹ, ಅಂತರಾಳದ ನಡುವಿನ ಪ್ರದಕ್ಷಿಣ ಪಥದ ರಚನೆಯನ್ನು ತಡೆದು ಹಾಕಿದೆ. ಅಂತರಾಳದ ಪ್ರವೇಶ ದ್ವಾರ ಸರಳವಾಗಿದ್ದು ಜಾಲಂಧರ ಶಾಖೆಯನ್ನು ಹೊಂದಿವೆ. ಇಲ್ಲಿ ಯಾವುದೇ ದೇವರ ಮೂರ್ತಿಗಳು ಇರುವುದಿಲ್ಲ. ಇದರ ಮೇಲ್ಛಾವಣಿಯನ್ನು ಮುಗುಚಿದ ಪದ್ಮಪಟ್ಟಿಕೆಯ ಅಲಂಕಾರದಿಂದ ಶೃಂಗರಿಸಲಾಗಿದೆ. ಪ್ರವೇಶದ್ವಾರದ ಮೇಲೆ ದ್ರಾವಿಡ, ನಾಗರ, ವೇಸರಶೈಲಿಯ ಚಿಕ್ಕ ಶಿಖರಗಳು ಮತ್ತು ದೇವತಾಮೂರ್ತಿಗಳು ಹಾಗೂ ಕೀರ್ತಿ ಮುಖದಿಂದ ಅಲಂಕರಿಸಲಾಗಿದೆ. ಕೊಟ್ನೇಕಲ್ ಗ್ರಾಮದ ಕೋಟೆ ಶಂಕರ ದೇವಾಲಯದ ಅಂತರಾಳದ ಪ್ರವೇಶದ್ವಾರದಲ್ಲಿ ಅಲಂಕೃತಗೊಂಡ ಕಂಬ ಮತ್ತು ಎರಡು ಬದಿಗಳಲ್ಲಿ ಚೌಕ ಪಟ್ಟಿಕೆಗಳಿವೆ. ಇದರ ಪಕ್ಕದಲ್ಲಿ ಜಾಲಂಧರ ಅದರ ಕೆಳಗೆ ಪೂರ್ಣ ಕುಂಭವಿದೆ. ಲಾಲಾಟ ಭಾಗದಲ್ಲಿ ಬ್ರಹ್ಮ, ವಿಷ್ಣು ಮತ್ತು ಶಿವನ ಶಿಲ್ಪಗಳನ್ನು ಸ್ಥಾನಿಕ ಭಂಗಿಯಲ್ಲಿ ವಾಹನಗಳ ಸಹಿತ ಕಂಡರಿಸಲಾಗಿದೆ. ಶಿವನ ಶಿಲ್ಪದಲ್ಲಿ ನಂದಿ ಮತ್ತು ಗಣೇಶ ಶಿಲ್ಪಗಳಿವೆ. ತ್ರಿಮೂರ್ತಿಗಳನ್ನು ಮಂಟಪದ ಮುಂಭಾಗದಲ್ಲಿ ಕಂಡರಿಸಿ ಎರಡು ಬದಿಗಳಲ್ಲಿ ಮಕರ ತೋರಣವನ್ನು ಚಿತ್ರಿಸಲಾಗಿದೆ.

ಗರ್ಭಗೃಹ ಮತ್ತು ಅಂತರಾಳ ಮಂಟಪಗಳಿಗೆ ಹೊಂದಿಕೊಂಡಂತೆ ಗೂಢಮಂಟಪ ಅಥವಾ ನವರಂಗವನ್ನು ನೋಡಬಹುದು. ಈ ನವರಂಗದ ಮಧ್ಯ ಭಾಗದಲ್ಲಿ ನಾಲ್ಕು ಕಂಬಗಳು, ಅದರ ಸುತ್ತಲೂ ಹನ್ನೆರಡು ಅರೆಕಂಬಗಳು ನವರಂಗದ ವಿನ್ಯಾಸವನ್ನು ರಚಿಸಿವೆ. ಈ ಕಂಬಗಳು ಚಾಳುಕ್ಯ, ನೊಳಂಬ ಪಲ್ಲವರ ದೇವಾಲಯದ ಕಂಬಗಳ ಎತ್ತರಕ್ಕಿಂತ ಸ್ವಲ್ಪ ಕಿರಿದಾಗಿವೆ ಹಾಗೂ ಅಲಂಕಾರದಲ್ಲಿ ಭಿನ್ನವಾಗಿವೆ. ಮಧ್ಯದ ನಾಲ್ಕು ಕಂಬಗಳು, ಪೀಠಭಾಗ ಹೊರಮೈ ಸರಳವಾದ ಪದ್ಮದಳಗಳು ಪುಷ್ಪ ಪಟ್ಟಿಕೆಗಳ ಅಲಂಕಾರದಲ್ಲಿ ಚೌಕವಾಗಿರುತ್ತವೆ. ಪಾಂಡ್ಯರ ಕಾಲದ ಈ ಕಂಬಗಳು ಚೌಕವಾಗಿದ್ದು ಶಾಸ್ತ್ರ ಗ್ರಂಥದಲ್ಲಿ ತಿಳಿಸುವಂತೆ ವಜ್ರಕಾಂತ ಮತ್ತು ಪದ್ಮಕಾಂತ ಮಾದರಿಯನ್ನು ಹೋಲುತ್ತವೆ. ಚೌಕಾಕಾರವಾಗಿರುವ ಈ ಕಂಬಗಳ ದಿಂಡುಭಾಗ ಅಥವಾ ಮಧ್ಯಭಾಗದಲ್ಲಿ ಹದಿನಾರು ಪಟ್ಟಿಕೆಗಳನ್ನು(ಷೋಡಷಾಶ್ರವಾಗಿ) ರಚಿಸಿ ಈ ಹದಿನಾರು ಚೌಕ ಪಟ್ಟಿಕೆಗಳನ್ನು ಒಟ್ಟಿಗೆ ಹಿಡಿದು ಪಟ್ಟಿ ಕಟ್ಟಿರುವಂತೆ ಚಿತ್ರಿಸಲಾಗಿದೆ. ಈ ಪಟ್ಟಿಕೆಯನ್ನು ವಜ್ರಪಟ್ಟಿಕೆ ಹಾಗೂ ಪದ್ಮಪತ್ರಗಳ ಪಟ್ಟಿಯಿಂದ ಅಲಂಕರಿಸಲಾಗಿದೆ. ಈ ಅಲಂಕಾರಿಕ ವಜ್ರ ಮತ್ತು ಪದ್ಮಪತ್ರ ಪಟ್ಟಿಕೆಗಳು ಎರಡು ಅಥವಾ ಮೂರು ಸುತ್ತುಗಳಲ್ಲಿ ಹದಿನಾರು ಕೋನಗಳನ್ನು ಸುತ್ತುವರಿದಿರುತ್ತವೆ.

ಚಾಳುಕ್ಯ, ನೊಳಂಬರ ಕಾಲದಲ್ಲಿ ನವರಂಗದ ಕಂಬಗಳು ಕಪ್ಪುಶಿಲೆಯ ಶ್ರೀಕರ ಕಂಬವನ್ನು ಹೊಂದಿವೆ. ಆದರೆ ಪಾಂಡ್ಯರು ಗಟ್ಟಿ ಗ್ರಾನೈಟ್ ಶಿಲೆಯಲ್ಲಿ ನವರಂಗದ ಕಂಬಗಳನ್ನು ನಿರ್ಮಿಸಿದ್ದಾರೆ. ಉಳಿದ ಹನ್ನೆರಡು ಅರೆಕಂಬಗಳು ವಿವಿಧ ಮಾದರಿಯ ಅಲಂಕಾರವನ್ನು ಹೊಂದಿವೆ. ಇವುಗಳು ದೇವಾಲಯದ ಭಿತ್ತಿ ಭಾಗದಿಂದ ಆರು ಅಂಗುಲ ಹೊರಚಾಚಿ ಸ್ವತಂತ್ರ ಕಂಬದಂತೆ ಕಾಣುತ್ತವೆ. ವರ್ಧಮಾನ, ಚಿತ್ರಖಂಡ, ಶ್ರೀಕರ ಮಾದರಿಯ ಕಂಬಗಳು ಇಲ್ಲಿ ಕಂಡು ಬರುತ್ತವೆ. ಹೊಯ್ಸಳ ನೊಳಂಬ ಪಲ್ಲವರ ದೇವಾಲಯಗಳಲ್ಲಿ ಇಂತಹ ಮಾದರಿಯ ಕಂಬಗಳು ನವರಂಗದ ಮುಂದಿನ ಕಂಬ ಮಂಟಪದಲ್ಲಿ ಕಂಡುಬರುತ್ತವೆ. ಪೂರ್ವ, ಉತ್ತರ, ದಕ್ಷಿಣ ದಿಕ್ಕಿಗೆ ಪ್ರವೇಶದ್ವಾರವನ್ನು ಹೊಂದಿರುತ್ತದೆ. ಬಹುತೇಕ ಎಲ್ಲಾ ದೇವಾಲಯಗಳು ಒಂದೇ ಪೂರ್ವಕ್ಕೆ ಪ್ರವೇಶ ದ್ವಾರವನ್ನು ಹೊಂದಿವೆ. ಕೆಲವು ಕಡೆ ಎರಡು ಪ್ರವೇಶದ್ವಾರಗಳಿವೆ. ಚಟ್ನಿಹಳ್ಳಿ ದೇವಸ್ಥಾನ ಅಲಗಿಲವಾಡ ದಕ್ಷಿಣ ದಿಕ್ಕಿಗೆ, ಮಾನ್ಯರಮಸಲವಾಡ ಉತ್ತರ, ದಕ್ಷಿಣ, ಹೊಳಗುಂದಿಯ ಶಂಕರದೇವಾಲಯ ಪೂರ್ವ, ಉತ್ತರಕ್ಕೆ ಪ್ರವೇಶದ್ವಾರವನ್ನು ಹೊಂದಿವೆ. ಮುಖ್ಯ ಪ್ರವೇಶದ್ವಾರಕ್ಕೆ ಮುಖಮಂಟಪವನ್ನು ಕಟ್ಟಲಾಗಿದೆ. ಇದರ ಪ್ರವೇಶದ್ವಾರವು ಗರ್ಭಗೃಹದ ದ್ವಾರದಂತೆ ವಿವಿಧ ಶಾಖೆಗಳಿಂದ ಅಲಂಕರಿಸಲಾಗಿದೆ. ಲಲಾಟ ಭಾಗದಲ್ಲಿ ಗಜಲಕ್ಷ್ಮೀ ಚಿತ್ರವಿದೆ. ಹೊಳಗುಂದಿಯ ಸೋಮೇಶ್ವರ ದೇವಾಲಯದ ಪ್ರವೇಶದ್ವಾರದ ಲಲಾಟದಲ್ಲಿ ಜೈನಮುನಿಯ ಶಿಲ್ಪವಿದೆ.

ದೇವಾಲಯದ ಮಾನಸೂತ್ರಕ್ಕೆ ಹೊಂದಿಕೊಂಡಂತೆ ನವರಂಗ/ಗೂಢಮಂಟಪದ ಪ್ರವೇಶ ದ್ವಾರಕ್ಕೆ ತೆರೆದ ಮುಖಮಂಟಪವನ್ನು ಮುಖ್ಯ ಪ್ರವೇಶ ದ್ವಾರದಲ್ಲಿ ನಿರ್ಮಿಸಲಾಗಿದೆ. ಇದು ಸಾರ್ವತ್ರಿಕವಾಗಿ ಕಂಡು ಬರುವುದಿಲ್ಲ. ಮುಖಮಂಟಪವು ಒಂದು ಅಂಕಣದ ವಿಸ್ತಾರವಾಗಿದ್ದು ನಾಲ್ಕು ಕಂಬಗಳನ್ನು ಹೊಂದಿರುತ್ತದೆ. ಗ್ರಂಥಗಳಲ್ಲಿ ಇದನ್ನು ಮುಖ ಚತುಷ್ಕಿ ಎಂದು ಕರೆಯುತ್ತಾರೆ. ಈ ತೆರೆದ ಮುಖಮಂಟಪದಲ್ಲಿ ಭಕ್ತಾದಿಗಳು ಕುಳಿತುಕೊಳ್ಳಲು ಅನುಕೂಲವಾಗುವಂತೆ ಕಕ್ಷಾಸನಗಳನ್ನು ನಿರ್ಮಿಸಲಾಗಿದೆ. ಶ್ರೀಕರ ಮಾದರಿಯ ಕೂಟ ಸ್ತಂಭಗಳು ಮೇಲ್ಛಾವಣಿಯನ್ನು ಹೊತ್ತು ನಿಂತಿವೆ. ಚಟ್ನಿಹಳ್ಳಿಯ ದೇವಾಲಯದಲ್ಲಿ ಸಿಲಿಂಡರಂ ಮಾದರಿಯ ಕಂಬಗಳಿವೆ. ಮುಖಮಂಟಪದ ಮೇಲ್ಛಾವಣಿ ಇಳಿಜಾರಾದ ಕೂಟ ವ್ಯವಸ್ಥೆಯನ್ನು ಹೊಂದಿದೆ. ಮುಖಮಂಟಪ ವನ್ನು ಪ್ರವೇಶಿಸಲು ಮೆಟ್ಟಿಲುಗಳನ್ನು ನಿರ್ಮಿಸಲಾಗಿದೆ. ಚಟ್ನಿಹಳ್ಳಿಯ ನ್ಯೊಯ್ಯೋಶ್ವರ, ಹೂವಿನಹಡಗಲಿಯ ಕಲ್ಲೇಶ್ವರ, ಹೊಳಗುಂದಿಯ ಮಲ್ಲಿನಾಥ ಜಿನಾಲಯ ಮಾನ್ಯರ ಮಸಲವಾಡದ ಕಲ್ಲೇಶ್ವರ ದೇವಾಲಯದಲ್ಲಿ ತೆರೆದ ಮುಖಮಂಟಪವನ್ನು ಕಾಣಬಹುದು. ನವರಂಗದ ವಿತಾನದಲ್ಲಿ ಅಷ್ಟದಿಕ್ಪಾಲಕರ ಕಟ್ಟುಶಿಲ್ಪಗಳನ್ನು ಕೆತ್ತಿರುತ್ತಾರೆ. ಆನೆಕೊಂಡದ ಪಾಂಡೇಶ್ವರ ದೇವಾಲಯದಲ್ಲಿ ಇದನ್ನು ಗುರುತಿಸಬಹುದು. ಉಳಿದಂತೆ ನಾಬಿಚ್ಛಂದ್ರ ಪದ್ಮಶಿಲೆ ಮತ್ತು ಭುವನೇಶ್ವರಗಳಿಂದ ದೇವಾಲಯದ ಮೇಲ್ಛಾವಣಿಯನ್ನು ಅಲಂಕರಿಸಲಾಗಿದೆ.

ಏರುವಿನ್ಯಾಸ ಲಕ್ಷಣಗಳಲ್ಲಿ ಆರು ಭಾಗಗಳನ್ನು ಹೊಂದಿದೆ. ೧. ಅಧಿಷ್ಠಾನ, ೨. ಭಿತ್ತಿ, ೩. ಪ್ರಸ್ತಾರ, ೪. ಗ್ರೀವ, ೫. ಶಿಖರ, ೬. ಸ್ತೂಪಿ. ಇವುಗಳನ್ನು 'ಷಡ್ವರ್ಗ' ಎಂದು ಕರೆಯಲಾಗಿದೆ. ಮೊದಲ ಮೂರು ವರ್ಗಗಳನ್ನು ಭೂ ಅಥವಾ ಅಧೋವರ್ಗಗಳೆಂದು, ಮೇಲಿನ ವರ್ಗಗಳನ್ನು ಆಕಾಶ ಅಥವಾ ಊರ್ಧ್ವ ವರ್ಗಗಳೆಂದು ಶಾಸ್ತ್ರ ಗ್ರಂಥಗಳು ಗುರುತಿಸುತ್ತವೆ. ಅಧಿಷ್ಠಾನದಲ್ಲಿ ಉಪಾನ, ಜಗತಿ, ತ್ರಿಪಟ್ಟ-ಕುಮುದಗಳ ಮತ್ತು ಮಹಾಪಟ್ಟಿಕೆಗಳು ಕಂಡು ಬರುತ್ತವೆ. ಹೊಳಗುಂದಿಯ ಮಲ್ಲಿನಾಥ ಜಿನಾಲಯ, ಹೂವಿನಹಡಗಲಿಯ ಕೇಶವ ಅಥವಾ ಕಲ್ಲೇಶ್ವರ, ಆನೆಕೊಂಡದ ಈಶ್ವರ ದೇವಾಲಯಗಳ ಮುಖಮಂಟಪದ ಅಧಿಷ್ಠಾನದಲ್ಲಿ ಹೊಯ್ಸಳ ಮತ್ತು ಚಾಳುಕ್ಯ ಶೈಲಿಯ ಪ್ರತಿಬಂಧ ಅಧಿಷ್ಠಾನದ ಲಕ್ಷಣಗಳನ್ನು ಅಳವಡಿಸಲಾಗಿದೆ.

ದೇವಾಲಯದ ಗೋಡೆ ಅಥವಾ ಭಿತ್ತಿಯು ಯಾವುದೇ ಅಲಂಕಾರವಿಲ್ಲದೆ ಬಹಳ ಸರಳವಾಗಿದೆ. ಭಿತ್ತಿಯು ಮೂರು ಪದರಗಳಿಂದ ಕೂಡಿದೆ. ಸಮಾನಾಂತರವಾಗಿ ಎರಡು ಗ್ರಾನೈಟ್ ಶಿಲೆಗಳನ್ನು ಓರೆಯಾಗಿ ನಿಲ್ಲಿಸಿ ಅದರ ಮಧ್ಯಕ್ಕೆ ಕಲ್ಲು ಮತ್ತು ಮಣ್ಣನ್ನು ತುಂಬಲಾಗುತ್ತದೆ. ನಂತರ ಎರಡು ಶಿಲೆಗಳು ಸೇರಿದಂತೆ ಮೇಲ್ಭಾಗದಲ್ಲಿ ಚಪ್ಪಡಿ ಕಲ್ಲಿನಿಂದ ಮುಚ್ಚಲ್ಪಟ್ಟಿವೆ. ಎರಡು, ಮೂರು ಹಂತದವರೆಗೂ ಈ ರೀತಿ ಮಾಡಲಾಗಿದೆ. ಹೊರಮುಖದ 'ಬಾಹ್ಯಭಿತ್ತಿ' ನಯವಾಗಿ ಮಾಡಿರುತ್ತಾರೆ. ಅಂತರ್ಭಿತ್ತಿ ಒರಟಾಗಿಯೂ ಅಸಮತಲವಾಗಿಯೂ ಇರುತ್ತದೆ. ಅರಸಿಕೇರಿ ಮತ್ತು ರಾಮಘಟ್ಟದ ದೇವಾಲಯಗಳನ್ನು ಪ್ರಾದೇಶಿಕ ಕಲ್ಲುಗಳಿಂದ ನಿರ್ಮಿಸಲಾಗಿದೆ. ನಂತರ ಕಾಲದಲ್ಲಿ ಈ ದೇವಾಲಯಗಳ ನವನಿರ್ಮಾಣವಾಗಿರಬೇಕು. ಹೂವಿನಹಡಗಲಿ, ಆನೆಕೊಂಡ, ಅಂಬಳಿ ದೇವಾಲಯಗಳು ಚಾಳುಕ್ಯ ಶೈಲಿಯಲ್ಲಿದ್ದು ದ್ರಾವಿಡ ಮಾದರಿಯ ದೇವಾಲಯದ ಭಿತ್ತಿಭಾಗದಲ್ಲಿರುವಂತೆ ದೇವಕೋಷ್ಠಕ, ತೋರಣ, ಕೂಟ, ಕುಂಭ ಪಂಜರ ಜಾಲಂಧರ, ಕಥನಶಿಲ್ಪಗಳ ರಚನೆ ಕಂಡು ಬರುತ್ತದೆ. ದೇವಾಲಯದ ಪ್ರಸಾದ ಮತ್ತು ಪ್ರಸ್ತಾರ ಭಾಗವು ಬಹುಪಾಲು ನಿರಲಂಕೃತವಾಗಿ ಸರಳವಾಗಿವೆ. ಪಾಂಡ್ಯ ನಾಡಿನ ದೇವಾಲಯಗಳು ಅವಸಾನದಂಚಿನಲ್ಲಿರುವುದರಿಂದ ಕೆಲವು ದೇವಾಲಯಗಳ ಮೇಲಿನ ಭಾಗದ ಲಕ್ಷಣಗಳು ಸ್ಪಷ್ಟವಾಗಿ ಗೋಚರಿಸುವುದಿಲ್ಲ. ಆಚರಣೆಯಲ್ಲಿರುವ ಕೆಲವು ದೇವಾಲಯಗಳು ನವೀಕರಣ ಹೊಂದಿರುವುದರಿಂದ ಇದಕ್ಕೆ ಇನ್ನಷ್ಟು ಸವಾಲು ತಂದೊಡ್ಡಿದೆ.

ದೇವಾಲಯಗಳ ಊರ್ಧ್ವ ವರ್ಗಗಳಾದ ಗ್ರೀವ, ಶಿಖರ, ಸ್ತೂಪಿಗಳು ಕದಂಬ ನಾಗರ ಶೈಲಿಯಲ್ಲಿ ರಚನೆಗೊಂಡಿವೆ. ಪ್ರಾದೇಶಿಕವಾಗಿ ಇದನ್ನು ಪಾಂಸನ ಮಾದರಿ ಎಂದು ಕರೆಯಲಾಗಿದೆ. ಚಟ್ನಿಹಳ್ಳಿ, ಮಾನ್ಯರ ಮಸಲವಾಡ, ಅಲಗಿಲವಾಡ ಕಲ್ಕೆರೆ, ಬೆತ್ತೂರು, ಆನೆಕೊಂಡ, ಹೊಳಗುಂದಿ, ಸೋಗಿ, ಚಿತ್ರದುರ್ಗದ ಬೆಟ್ಟದ ಮೇಲಿನ ವೇಣುಗೋಪಾಲ ದೇವಾಲಯಗಳಲ್ಲಿ ಕದಂಬ ನಾಗರಶೈಲಿಯ ಶಿಖರದ ಲಕ್ಷಣಗಳು ಕಂಡುಬರುತ್ತವೆ. ಇನ್ನುಳಿದ ದೇವಾಲಯಗಳಲ್ಲಿ ಈ ಭಾಗ ಕಾಣಿಸುವುದಿಲ್ಲ, ಸಂಪೂರ್ಣವಾಗಿ ಅವನತಿ ಹೊಂದಿವೆ. ಈ ಶಿಖರವು ಪ್ರಾಸ್ತಾರಕ್ಕೆ ಹೊಂದಿಕೊಂಡಂತೆ ಚೌಕ ಪಟ್ಟಿಕೆಯಲ್ಲಿ ಮೆಟ್ಟಿಲು ರೂಪದಲ್ಲಿ ಕಿರಿದಾಗುತ್ತ ಮೇಲೆ ಸಾಗುತ್ತದೆ.

ದೇವಾಲಯದ ಗಾತ್ರಕ್ಕೆ ಹೊಂದಿಕೊಂಡಂತೆ ಈ ಮೆಟ್ಟಿಲು ಅಥವಾ ಹಂತಗಳು ರೂಪುಗೊಳ್ಳುತ್ತದೆ. ಕೊನೆಯ ಭಾಗದಲ್ಲಿ ಚೌಕವಿನ್ಯಾಸದ ಬ್ರಹ್ಮಚ್ಛಂದ್ರ ಶಿಖರದ ಮೇಲೆ ಅಲಂಕೃತವಾದ ಕುಂಭ. ಕುಂಭದ ಮುಖದಲ್ಲಿ ಪತ್ರಗಳು ಮತ್ತು ಮೇಲ್ಭಾಗದಲ್ಲಿ ಪೂರ್ಣ ಫಲವನ್ನು ಹೊಂದಿರುತ್ತದೆ. ದೇವಾಲಯದ ಸ್ತೂಪಿಯನ್ನು ಕಲ್ಲಿನಿಂದ ಮಾಡಲಾಗಿದೆ. ಹಂಪಿಯ ಹೇಮಕೂಟದ ದೇವಾಲಯ ಗಳು, ಹಲಸಿಯ ರಾಮೇಶ್ವರ, ಪಟ್ಟದಕಲ್ಲಿನ ಮಲ್ಲಿಕಾರ್ಜುನ ಬ್ರಹ್ಮಗಿರಿಯ ದೇವಾಲಯ ಗಳಲ್ಲಿ ಈ ರೀತಿಯ ಶಿಖರವನ್ನು ನೋಡಬಹುದು.

ಮೂರ್ತಿಶಿಲ್ಪಗಳ ರಚನೆಯಲ್ಲಿ ಪಾಂಡ್ಯರು ನೊಳಂಬ ಪಲ್ಲವರಿಗಿಂತ ಹೆಚ್ಚು ಪರಿಪೂರ್ಣತೆ ಯನ್ನು ಪಡೆದುಕೊಂಡಿದ್ದಾರೆ. ಮೂರ್ತಿಶಿಲ್ಪಗಳ ಅಲಂಕರಣೆಯಲ್ಲಿ ಹೊಯ್ಸಳರಷ್ಟು ಪ್ರಾಶಸ್ತ್ಯ ನೀಡಿಲ್ಲ. ನೊಳಂಬ ನಾಡಿನಲ್ಲಿ ಕಂಡುಬರುವ ಚಾಳುಕ್ಯ ಮೂರ್ತಿಶಿಲ್ಪದ ಲಕ್ಷಣಗಳು ಪಾಂಡ್ಯರ ಶಿಲ್ಪಗಳಲ್ಲಿ ಗೋಚರಿಸುತ್ತವೆ. ಪಲ್ಲವರ ಮೂರ್ತಿಶಿಲ್ಪಗಳಲ್ಲಿ ಚಪ್ಪಟೆಯಾದ ಮುಖ ನೀಳದೇಹದ ಲಕ್ಷಣಗಳು ಹೆಚ್ಚಾಗಿ ಕಂಡುಬರುತ್ತದೆ. ಪಾಂಡ್ಯರ ಶಿಲ್ಪಗಳಲ್ಲಿ ದುಂಡು ಮುಖ ಹಾಗೂ ನೈಜ ದೃಷ್ಟಿಯ ಸಮಭಂಗಿಯ ಶಿಲ್ಪಗಳು ರಚನೆಯಾದವು. ಶೈವ, ವೈಷ್ಣವ, ಜೈನ ಧರ್ಮಗಳಿಗೆ ಅನುಸಾರವಾಗಿ ಧರ್ಮ ಗ್ರಂಥಗಳಲ್ಲಿ ಉಲ್ಲೇಖಿಸುವ ದೇವತೆಗಳ ಆಯುಧಗಳನ್ನು ಮತ್ತು ಅಲಂಕಾರಗಳನ್ನು ಸಂದರ್ಭೋಚಿತವಾಗಿ ಬಳಸಿಕೊಳ್ಳಲಾಗಿದೆ. ಇವರ ಶಿಲ್ಪಗಳಲ್ಲಿ ವಸ್ತ್ರಾಲಂಕಾರಕ್ಕಿಂತ ಆಭರಣಗಳ ಅಲಂಕಾರಕ್ಕೆ ಹೆಚ್ಚು ಆದ್ಯತೆ ನೀಡಲಾಗಿದೆ. ಹಾಗೇ ಮಿಥುನ ಶಿಲ್ಪಗಳು ಹಾಸ್ಯ ಭಾವದಲ್ಲಿ ರಚನೆಗೊಂಡಿವೆ. ಶಿವ, ಭೈರವ, ದುರ್ಗಿ, ಪಾರ್ವತಿ, ಸರಸ್ವತಿ, ಗಣೇಶ, ಷಣ್ಮುಖ, ಸೂರ್ಯ, ವಿಷ್ಣು(ಕೇಶವ). ಲಕ್ಷ್ಮೀ ನರಸಿಂಹ, ಗಜಲಕ್ಷ್ಮಿ, ಜಿನಮುನಿಗಳು ಮೊದಲಾದ ದೇವರುಗಳ ಶಿಲ್ಪಗಳ ಪೀಠಭಾಗದಲ್ಲಿ ವಾಹನಗಳನ್ನು ಕಂಡರಿಸಿರುವುದು ಕಂಡು ಬರುತ್ತದೆ.

ಪಾಂಡ್ಯರ ಮೂರ್ತಿಶಿಲ್ಪದಲ್ಲಿ ಶಿವನ ವಾಹನವಾದ ನಂದಿ ಹೆಚ್ಚು ಪ್ರಾಶಸ್ತ್ಯ ಪಡೆದು ಕೊಂಡಿರುವುದು ವಿಶೇಷವೆನಿಸುತ್ತದೆ. ನಂದಿಶಿಲ್ಪದ ರಚನೆಯಲ್ಲಿ ಗಾತ್ರ, ಅಲಂಕಾರ ಮತ್ತು ಆಕರ್ಷಣೆಗೆ ಹೆಚ್ಚು ಪ್ರಾಧಾನ್ಯತೆ ನೀಡಲಾಗಿದೆ. ದೇವಾಲಯದ ಅಂತರಾಳ ಕೆಲವು ಕಡೆ ನವರಂಗದಲ್ಲಿ ಮತ್ತು ಪ್ರತ್ಯೇಕ ನಂದಿಮಂಟಪದಲ್ಲಿ ಒಟ್ಟಾಗಿ ನಂದಿಶಿಲ್ಪಗಳನ್ನು ಪ್ರತಿಷ್ಠಾಪಿಸಿದ್ದಾರೆ. ನವರಂಗ ಮತ್ತು ನಂದಿ ಮಂಟಪದಲ್ಲಿ ಇರುವ ನಂದಿ ಶಿಲ್ಪ ಗಾತ್ರದಲ್ಲಿ ದೊಡ್ಡದಾಗಿದ್ದು ಹೆಚ್ಚು ಅಲಂಕಾರಗೊಂಡಿರುತ್ತದೆ. ನಂದಿ ಎಡಗಾಲನ್ನು ಮಡಚಿ ಬಲಗಾಲನ್ನು ಮುಂಚಾಚಿ ಪಾದವನ್ನು ನೆಲದ ಮೇಲಿಟ್ಟು ಬಲಬದಿಗೆ ಮಲಗಿರುವ ಹಾಗೇ ಕೆತ್ತಲಾಗಿದೆ. ಪಾಂಡ್ಯರ ಕಾಲದ ದೇವಾಲಯಗಳಲ್ಲಿ ಕಂಡುಬರುವ ಎಲ್ಲಾ ನಂದಿಶಿಲ್ಪಗಳು ಇದೇ ಲಕ್ಷಣಗಳನ್ನು ಹೊಂದಿವೆ. ಉಚ್ಚಂಗಿದುರ್ಗದ ಕೋಟೆಯ ಮಳಿಬಾಗಿಲನ ಗೋಡೆಯ ೧೦ ಅಡಿ ಎತ್ತರದಲ್ಲಿ ಹಾಗೂ ಪಾಂಡ್ಯರ ಹೊರಡಿಸಿದ ಗದ್ಯಾಣ ನಾಣ್ಯದಲ್ಲಿ ಈ ಮೇಲಿನ ಲಕ್ಷಣಗಳಿರುವ ನಂದಿಶಿಲ್ಪವನ್ನು ಚಿತ್ರಿಸಲಾಗಿದೆ. ಆನೆಗೊಂಡದ ನಂದಿಮಂಟಪದಲ್ಲಿರುವ ನಂದಿಪೀಠದಲ್ಲಿ ಉಮೆ ಮತ್ತು ಮಹೇಶ್ವರರು ನಂದಿಯ ಮೇಲೆ ಪ್ರಯಾಣ ಹೊರಟಿರುವಂತೆ ಚಿತ್ರಿಸಲಾಗಿದೆ.

ಹಿರೆಮೇಗಳಗೇರೆ ಗ್ರಾಮದ ದೇವಾಲಯದಲ್ಲಿ ಇದೇ ರೀತಿಯ ಉಮಾಮಹೇಶ್ವರ ಶಿಲ್ಪವನ್ನು ಕಾಣಬಹುದು.

ಒಟ್ಟಾರೆಯಾಗಿ ಉಚ್ಚಂಗಿ ಪಾಂಡ್ಯರ ಕಾಲದ ದೇವಾಲಯ ವಾಸ್ತುಶೈಲಿಯ ಲಕ್ಷಣಗಳನ್ನು ಹೇಳುವುದಾದರೆ ತ್ರಿಕೂಟ ದೇವಾಲಯಗಳ ರಚನೆಯನ್ನು ಸಾರ್ವತ್ರಿಕವಾಗಿ ಬಳಸಿಕೊಂಡಿದ್ದಾರೆ. ಶೈವ ಧರ್ಮಕ್ಕೆ ಪ್ರಾಧ್ಯಾನತೆ ನೀಡಿ ಜೈನ ಧರ್ಮವನ್ನು ಪೋಷಿಸಿ, ವೈಷ್ಣವ ಸ್ಮಾರಕಗಳನ್ನು ನಿರ್ಲಕ್ಷಿಸಿದ್ದಾರೆ. ತ್ರಿಕೂಟಗಳಲ್ಲಿ ವಿಷ್ಣು ಮತ್ತು ಸೂರ್ಯ ಆರಾಧನೆಗೆ ಅವಕಾಶ ನೀಡಿದ್ದಾರೆ. ಗರ್ಭಗೃಹ, ಅಂತರಾಳ, ನವರಂಗ, ಮುಖಮಂಟಪಗಳ ನಿರ್ಮಾಣದಲ್ಲಿ ಪೂರ್ಣತೆಯನ್ನು ಕಂಡುಕೊಂಡಿದ್ದಾರೆ. ನವರಂಗದಲ್ಲಿ ನೊಳಂಬ ಪಲ್ಲವರಂತೆ ಗೂಡುಮಂಟಪಗಳನ್ನು ರಚಿಸಿ ಪರಿವಾರ ದೇವತೆಗಳನ್ನು ಪ್ರತಿಷ್ಠಾಪಿಸಿದ್ದಾರೆ. ಪಾಂಡ್ಯರು ನೊಳಂಬ, ಚಾಳುಕ್ಯರ ರೀತಿಯಲ್ಲಿ ದೊಡ್ಡ ದೇವಾಲಯಗಳ ಬದಲು ಮಧ್ಯಮ ಗಾತ್ರದ ತ್ರಿಕೂಟ ರಚನೆಯಲ್ಲಿ ಪೂರ್ಣತೆಯನ್ನು ಹೊಂದಿದ್ದಾರೆ. ದೇವಾಲಯದಲ್ಲಿರುವ ಮೂರ್ತಿಶಿಲ್ಪಗಳ ರಚನೆಯಲ್ಲಿ ನೊಳಂಬರಿಗಿಂತ ನೈಜ, ಪೂರ್ಣಪ್ರಮಾಣದ ಅಲಂಕಾರಿಕ ಶಿಲ್ಪಗಳನ್ನು ಸೃಜಿಸಿದ್ದಾರೆ. ಹೀಗೆ ಉಚ್ಚಂಗಿ ಪಾಂಡ್ಯರು ನೊಳಂಬನಾಡಿನಲ್ಲಿ ತಮಗೆ ಸಿಕ್ಕ ಕಡಿಮೆ ಅವಧಿಯಲ್ಲಿ ವಿಭಿನ್ನ ವಾಸ್ತುಶೈಲಿಯ ಸಂಸ್ಕೃತಿಯನ್ನು ಬಿಟ್ಟು ಹೋಗಿದ್ದಾರೆ. ಅವರ ಕಾಲದ ಶಾಸನೋಕ್ತ ದೇವಾಲಯಗಳ ಲಕ್ಷಣಗಳನ್ನು ಇಲ್ಲಿ ಚರ್ಚಿಸಲಾಗಿದೆ.

**ಪಾಂಡೇಶ್ವರ ದೇವಾಲಯ(ಈಶ್ವರ ದೇವಾಲಯ) (ಆನೆಕೊಂಡ, ದಾವಣಗೆರೆ ತಾಲೂಕು)**

ಆನೆಕೊಂಡ ಗ್ರಾಮದಲ್ಲಿರುವ ಈ ತ್ರಿಕೂಟ ದೇವಾಲಯವನ್ನು ಕ್ರಿಶ. ೧೧೧೪ರ ದಾವಣಗೆರೆ ಶಾಸನ ಉಲ್ಲೇಖಿಸುತ್ತದೆ.[೨೩] ಮಹಾಮಂಡಳೇಶ್ವರ ತ್ರಿಭುವನಮಲ್ಲಪಾಂಡ್ಯ ನಿರ್ಮಿತ ಶ್ರೀಮತ್ರಿಭುವನಮಲ್ಲ ಪಾಂಡೇಶ್ವರ ದೇವರ ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ ಪುರಾಣಶಾಸ್ತ್ರವೇದ ಕಲಿಸುವವರಿಗೆ ಕದಂಬಳಿಗೆ-೧೦೦೦ ದೊಳಗಂಣ ಬೆಳ್ತೂರ ದೇಶದ ಮಧ್ಯೆ ಬೆಳ್ತೂರ ಸೀಮೆಯಲ್ಲಿ ನಿಧಿನಿಧಾನ ನಿಕ್ಷೇಪ ಸಮೇತ ತ್ರಿಭೋಗಾಭ್ಯಂತರವಾಗಿ ದಾನ ನೀಡಿದ. ರಾಯಪಾಂಡ್ಯ ತನ್ನ ಕಾಲದಲ್ಲಿ ಪಾಂಡೇಶ್ವರ ದೇವರ ಆಚಾರ್ಯ ಬಿರಮಾಂಡೀಯರೂ ಸಮಸ್ತ ಹಳ್ಳಿಯ ಜನರ ಮಧ್ಯದಲ್ಲಿ ಪಾಂಡೇಶ್ವರ ಮತ್ತು ಗ್ರಾಮೇಶ್ವರ ದೇವರಿಗೆ ದಾನ ಬಿಡುತ್ತಾನೆ[೨೪]

ಪೂರ್ವಾಭಿಮುಖವಾಗಿರುವ ಈ ತ್ರಿಕೂಟ ದೇವಾಲಯವು ಮೂರು ಗರ್ಭಗೃಹ, ಒಂದು ಅಂತರಾಳ, ನವರಂಗ ಹಾಗೂ ಮುಖಮಂಟಪವನ್ನು ಹೊಂದಿದೆ. ಮುಖ್ಯ ಗರ್ಭಗೃಹವು ಚೌಕಾಕಾರವಾಗಿದ್ದು, ಮಧ್ಯದಲ್ಲಿ ಶಿವಲಿಂಗವಿದೆ. ಪ್ರವೇಶದ್ವಾರವು ಸರಳವಾಗಿದ್ದು, ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬು ಶಿಲ್ಪವಿದೆ. ಇದಕ್ಕೆ ಹೊಂದಿಕೊಂಡಂತೆ ಮುಂಭಾಗದಲ್ಲಿ ಅಷ್ಟೇ ವಿಸ್ತೀರ್ಣದ ಅಂತರಾಳವಿದೆ. ಇಲ್ಲಿಯ ವಿತಾನದಲ್ಲಿಯೂ ಸಹ ಪದ್ಮದ ಅಲಂಕರಣವಿದೆ. ಅಂತರಾಳದ ಪ್ರವೇಶದ್ವಾರವು ರತ್ನ, ವಿದ್ಯಾಧರ, ಸ್ತಂಭ, ವಲ್ಲಿ ಶಾಖೆಗಳಿಂದ ಅಲಂಕೃತಗೊಂಡಿದೆ. ಮೊದಲಿನ

ಎರಡು ಶಾಖೆಗಳು ಲಲಾಟದಲ್ಲೂ ಮುಂದುವರೆದಿವೆ. ವಿತಾನ ಭಾಗವು ಆಕರ್ಷಣೀಯವಾಗಿದ್ದು ಮಧ್ಯದಲ್ಲಿ ಶಿವ ಆತನ ಎಡಭಾಗದಲ್ಲಿ ವಿಷ್ಣು ಮತ್ತು ಕಾರ್ತಿಕೇಯ ಹಾಗೂ ಶಿವನ ಬಲಭಾಗದಲ್ಲಿ ಬ್ರಹ್ಮ ಮತ್ತು ಗಣಪತಿ ಶಿಲ್ಪಗಳು ಎರಡು ಪಾರ್ಶ್ವಗಳಲ್ಲಿವೆ. ಮಕರ ತೋರಣವಿದೆ. ಪೇದ್ಯ ಭಾಗದಲ್ಲಿ ಶೈವ ದ್ವಾರಪಾಲಕರು ಮತ್ತು ಗಂಗ-ಯಮುನೆಯರಿದ್ದಾರೆ. ಅಂತರಾಳದ ಗೋಡೆಯ ಎಡಬಲದಲ್ಲಿ ಗೂಡುಗಳಿವೆ. ಬಲಭಾಗದ ಗೂಡಿನಲ್ಲಿ ಪಾರ್ವತಿ ಮತ್ತು ಸರಸ್ವತಿ ಶಿಲ್ಪ ಎಡಬದಿಯಲ್ಲಿ ನವಿಲು ವಾಹನದಲ್ಲಿರುವ ಷಣ್ಮುಖನ ಶಿಲ್ಪವಿದೆ.

ನವರಂಗದ ಮಧ್ಯದಲ್ಲಿ ನಾಲ್ಕು ಕಂಬಗಳಿವೆ. ನವರಂಗವು ಒಂಬತ್ತು ಅಂಕಣಗಳಿಂದ ಕೂಡಿದೆ. ನವರಂಗದ ಉತ್ತರ ಮತ್ತು ದಕ್ಷಿಣ ದಿಕ್ಕುಗಳಲ್ಲಿ ಮತ್ತೆರಡು ಗರ್ಭಗೃಹಗಳನ್ನು ಕಲ್ಪಿಸಲಾಗಿದೆ. ಉತ್ತರದ ಗರ್ಭಗೃಹವು ಚೌಕಾಕಾರವಾಗಿದೆ. ಇದು ಅರ್ಚಕರ ಉಪಯೋಗಕ್ಕೆ ಬಳಸಲಾಗಿದೆ. ಇದರ ಪ್ರವೇಶದ್ವಾರವೂ ಸಹ ಸರಳವಾಗಿದ್ದು, ಲಲಾಟದಲ್ಲಿ ಗಜಲಕ್ಷ್ಮಿಯನ್ನು ಕಾಣಬಹುದು. ದಕ್ಷಿಣದ ಗರ್ಭಗೃಹ ನೂತನವಾಗಿ ಜೀರ್ಣೋದ್ಧಾರಗೊಂಡಿದೆ. ಇಲ್ಲಿ ಗಣೇಶನ ಶಿಲ್ಪವನ್ನು ಪ್ರತಿಷ್ಠಾಪಿಸಿದೆ. ಇದರ ಪ್ರವೇಶದ್ವಾರವು ಉತ್ತರದ ಪ್ರವೇಶದ್ವಾರದ ಲಕ್ಷಣಗಳನ್ನು ಹೊಂದಿದೆ.

ನವರಂಗದ ನಾಲ್ಕು ಕಂಬಗಳು ಆಕರ್ಷಕವಾಗಿವೆ. ಇವುಗಳ ಕೆಳಭಾಗದಲ್ಲಿ ಪೀಠ-ಚೌಕಾ ಕಾರದ ಹಲವಾರು ಬಳೆಗಳಿಂದ ಕೂಡಿದ ದಿಂಡು, ಚಪ್ಪಟೆ ಮತ್ತು ಚೂಪಾದ ಬಳೆಗಳು, ಘಂಟಾಕೃತಿ, ಕುಂಭಾಕೃತಿ, ಚೂಪಾದ ಕುಶನ್ ಬೋಧಿಗೆಗಳಿಂದ ಕೂಡಿವೆ. ಇಲ್ಲಿ ಮತ್ತೊಂದು ರೀತಿಯ ಅಷ್ಟಮುಖಗಳ ಬಿಡಿಬಿಡಿಯಾದ ದಿಂಡುಗಳನ್ನು ಹೊಂದಿರುವ ವೃತ್ತಾಕಾರದ ಕಂಬಗಳಿದ್ದು, ಇವುಗಳಲ್ಲಿಯೂ ಸಹ ಘಂಟಾ ಮತ್ತು ಕುಂಬದ ಬಾಹ್ಯ ವಿನ್ಯಾಸವನ್ನು ಕಾಣುತ್ತೇವೆ. ಕಂಬದ ದಿಂಡುಗಳಲ್ಲಿ ಅಷ್ಟಮುಖಗಳು, ಗಂಟೆಯ ಭಾಗದಲ್ಲಿ ಮಣಿಸರಗಳ ಅಲಂಕರಣೆಯನ್ನು ಹೊಂದಿದೆ. ಇದಕ್ಕೆ ಪೂರಕವಾಗಿ ಅಭಾಕಸ್ ಮತ್ತು ಕುಷನ್ ಬೋಧಿಗೆಗಳೂ ಸಹ ಅಷ್ಟಮುಖಗಳನ್ನು ಹೊಂದಿ ಅರಳಿದ ಹೂಗಳಂತೆ ಕಾಣುತ್ತವೆ. ಕಂಬದ ಪೀಠಗಳು ಸಹ ಸಂಪೂರ್ಣವಾಗಿ ಮೂರು ಹಂತದ ಬಿಡಿಬಿಡಿಯಾದ ಹೂವಿನ ಎಸಳುಗಳಂತೆ ಕಂಡುಬರುತ್ತವೆ.

ಕಂಬಗಳ ಕೆಳಭಾಗದ ಚೌಕಾಕಾರದ ಪಟ್ಟಿಕೆಗಳಲ್ಲಿ ತೋರಣಗಳ ಮಧ್ಯ ಶೈವ ಪರಂಪರೆಗೆ ಸಂಬಂಧಿಸಿದ ಭೈರವ, ಮೋಹಿನಿ, ಸರಸ್ವತಿ, ಕಾಳಿ, ಬ್ರಹ್ಮ, ರತಿಮನ್ಮಥ, ವಿಷ್ಣು, ಮಹಿಷಮರ್ಧಿನಿ ಮತ್ತು ನರಸಿಂಹ ವಿಗ್ರಹಗಳಿವೆ. ನವರಂಗದ ಮಧ್ಯದ ಮೇಲ್ಛಾವಣಿಯಲ್ಲಿ ಭುವನೇಶ್ವರಿಯು ಅತ್ಯಂತ ಆಕರ್ಷಕವಾಗಿದೆ. ಇದು ಚೌಕಾಕಾರವಾಗಿದ್ದು ಒಂಭತ್ತು ಚೌಕಗಳಿವೆ. ಮಧ್ಯದ ಭಾಗದಲ್ಲಿ ಗಜಸಂಹಾರ ಶಿವ ಇಕ್ಕೆಲಗಳಲ್ಲಿ ಬ್ರಹ್ಮ ಮತ್ತು ವಿಷ್ಣುಗಳಿರುವರು. ಸುತ್ತಲೂ ಅಷ್ಟದಿಕ್ಪಾಲಕರಿಂದ ಅಲಂಕಾರಗೊಂಡಿದೆ. ಅವರು ಉತ್ತರದಿಂದ ಕ್ರಮವಾಗಿ ಕುಬೇರ, ಈಶಾನ, ಇಂದ್ರ, ಅಗ್ನಿ, ಯಮ, ನಿಋತಿ, ವರುಣ ಹಾಗೂ ವಾಯು. ಇದರ ಕೆಳಗಿನ ಪಟ್ಟಿಕೆಗಳಲ್ಲಿ ದ್ವಾದಶಾದಿತ್ಯರು, ಏಕದಶರುದ್ರರು, ಯೋಗನರಸಿಂಹ, ಮೋಹಿನಿ, ನಂದಿಕೇಶ, ರಾಮ, ಲಕ್ಷ್ಮಣ,

ಹನುಮಂತನ ಶಿಲ್ಪಗಳನ್ನು ಚಿಕ್ಕದಾಗಿ ಚಿತ್ರಿಸಲಾಗಿದೆ. ನವರಂಗದ ನೈರುತ್ಯ ಮತ್ತು ವಾಯುವ್ಯ ಭಾಗದಲ್ಲಿರುವ ದೇವಕೋಷ್ಠಗಳಲ್ಲಿ (ಮುಖ್ಯ ಅಂತರಾಳದ ಪಾರ್ಶ್ವಗಳಲ್ಲಿರುವ ದೇವಕೋಷ್ಠಗಳು) ಸರಸ್ವತಿ ಮತ್ತು ಮಹಿಷಮರ್ಧಿನಿ ಶಿಲ್ಪಗಳಿವೆ.

ನವರಂಗದ ಮುಂಭಾಗದಲ್ಲಿ ಮುಖಮಂಟಪವಿದ್ದು, ಸುತ್ತಲೂ ಕಕ್ಷಾಸನವನ್ನು ಕಲ್ಪಿಸಲಾಗಿದೆ. ಕಕ್ಷಾಸನದ ಹೊರಭಾಗದಲ್ಲಿ ಹಲವು ಅಡ್ಡಪಟ್ಟಿಕೆಗಳಿವೆ. ದಕ್ಷಿಣ ಭಾಗದ ಪಟ್ಟಿಕೆಗಳಲ್ಲಿ ಜೋಡಿ ಅರೆಗಂಬಗಳ ನಡುವೆ ನೃತ್ಯಗಾರರು, ಗಣಪತಿ, ಋಷಿಗಳು, ನರ್ತನ ಭಂಗಿಯಲ್ಲಿರುವ ಸ್ತ್ರೀಯರು ಹಾಗೂ ವಿದ್ಯಾಧರರ ಶಿಲ್ಪಗಳಿವೆ. ಉತ್ತರ ಭಾಗದ ಪಟ್ಟಿಕೆಯಲ್ಲಿ ರತಿಮನ್ಮಥ, ಬೇತಾಳ, ಲಜ್ಜಾಗೌರಿ ಮತ್ತು ಬೇಟೆಗಾರರ ಶಿಲ್ಪಗಳನ್ನು ಕಾಣಬಹುದು. ದೇವಸ್ಥಾನದ ಮುಖಮಂಟಪ ಹೊಯ್ಸಳರ ಕಾಲದಲ್ಲಿ ನಿರ್ಮಾಣವಾಗಿರಬೇಕು. ಮುಖಮಂಟಪದ ಮೇಲ್ಛಾವಣಿಯಲ್ಲಿ ಹೊಯ್ಸಳರ ಕಾಲದ ಶಿಲ್ಪಿಯ ಹೆಸರನ್ನು ಕೆತ್ತಲಾಗಿದೆ ಹಾಗೂ ಅಲ್ಲಿನ ಕಂಬಗಳು ಹೊಯ್ಸಳ ಶೈಲಿಯಲ್ಲಿವೆ.

ಏರುವಿನ್ಯಾಸದಲ್ಲಿ ದೇವಾಲಯವು ಅಧಿಷ್ಠಾನದ ಮೇಲೆ ನಿರ್ಮಾಣಗೊಂಡಿದೆ. ಅಧಿಷ್ಠಾನದಲ್ಲಿ ಜಗತಿ, ಉಪಾನ, ಪದ್ಮ, ಚೂಪುಕುಮುದ, ಕಂಠ, ದಂತಪಂಕ್ತಿಗಳಿವೆ. ಬಿತ್ತಿಭಾಗವು ಅಲ್ಲಲ್ಲಿ ಜೀರ್ಣೋದ್ಧಾರಗೊಂಡಿದೆ. ಉಳಿದ ಭಿತ್ತಿ ಭಾಗದಲ್ಲಿ ಅರೆಗಂಬಗಳನ್ನು ಹಾಗೂ ಕೋಷ್ಠ ಪಂಜರಗಳನ್ನು ಅವುಗಳ ಮೇಲೆ ಶಿಖರದ ಮಾದರಿಗಳನ್ನು ಕೆತ್ತಲಾಗಿದೆ. ದೇವಾಲಯದ ಪ್ರತೀ ಹೊರ ಮತ್ತು ಒಳಸರಿತದಲ್ಲಿಯೂ ಕರ್ಣಕುಂಭಗಳು ರಚನೆಗೊಂಡಿವೆ. ಈ ಭಿತ್ತಿ ಭಾಗವು ಹೂವಿನಹಡಗಲಿಯ ಕೇಶವ ದೇವಾಲಯದ ರಚನೆಯನ್ನು ಹೋಲುತ್ತದೆ. ಭಿತ್ತಿಯ ಮೇಲಿನ ಪ್ರಸ್ತರ ಭಾಗದಲ್ಲಿ ಸರಳವಾದ ಕಪೋತವಿದೆ. ಕದಂಬ ನಾಗರ ಅಥವಾ ಪಂಸಾನ ಮಾದರಿಯ ಕಪೋತದಿಂದ ಕೂಡಿದೆ. ಮೇಲಿನ ಭಾಗವು ನವೀಕೃತಗೊಂಡಿದೆ.

ದೇವಾಲಯದ ಮುಂಭಾಗದಲ್ಲಿ ಪೂರ್ವದ ಗರ್ಭಗೃಹಕ್ಕೆ ಎದುರಾಗಿ ಪ್ರತ್ಯೇಕ ನಂದಿ ಮಂಟಪವಿದೆ. ನಂದಿ ಮಂಟಪ ಎರಡು ಅಂಕಣಗಳಿಂದ ಕೂಡಿದ್ದು ನಂದಿಯ ಹಿಂಭಾಗದಲ್ಲಿರುವ ಮಂಟಪದಲ್ಲಿ ಶಿವಲಿಂಗ ಮತ್ತು ಕೇಶಶಿಲ್ಪಗಳು ಕಂಡುಬರುತ್ತವೆ. ಇದರ ಪ್ರವೇಶದ್ವಾರವು ಐದು ಶಾಖೆಗಳಿಂದ ಅಲಂಕೃತವಾಗಿದ್ದು ಲಲಾಟದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ಮಂಟಪದ ಮೇಲ್ಛಾವಣಿಯಲ್ಲಿ ಪದ್ಮದ ಅಲಂಕಾರವಿದೆ. ಈ ಮಂಟಪದಲ್ಲಿರುವ ಕೇಶ ಮತ್ತು ಲಿಂಗ ಶಿಲ್ಪಗಳು ಈಶ್ವರ ದೇವಾಲಯದ ದಕ್ಷಿಣ ಮತ್ತು ಉತ್ತರದ ಗರ್ಭಗೃಹಕ್ಕೆ ಸೇರಿದ್ದು ಆ ಗರ್ಭಗೃಹಗಳು ನವೀಕರಣಗೊಂಡ ಸಮಯದಲ್ಲಿ ಈ ಶಿಲ್ಪಗಳು ಸ್ಥಾನಪಲ್ಲಟವಾಗಿ ಅವುಗಳ ಸ್ಥಾನದಲ್ಲಿ ಹೊಸದಾಗಿ ಗಣೇಶ ಶಿಲ್ಪವನ್ನು ಇನ್ನೊಂದು ಗರ್ಭಗೃಹವನ್ನು ಯಾವುದೇ ಶಿಲ್ಪವಿಲ್ಲದೆ ಅರ್ಚಕರಿಗೆ ಬಳಸಿಕೊಳ್ಳಲಾಗುತ್ತಿದೆ. ಈ ಮಂಟಪದ ಮುಂಭಾಗದಲ್ಲಿ ನಂದಿಶಿಲ್ಪವಿದ್ದು ಇದು ಎಂಟು ಕಂಬಗಳಿಂದ ಕೂಡಿದೆ. ಮಧ್ಯದ ನಾಲ್ಕು ಕಂಬಗಳು ಕೆಳಭಾಗ ಮತ್ತು ಮೇಲ್ಭಾಗದಲ್ಲಿ ಅಷ್ಟಕೋನಗಳನ್ನು ಹೊಂದಿದ್ದು ಮಧ್ಯಭಾಗದಲ್ಲಿ ಚೌಕಪಟ್ಟಿಕೆಯನ್ನು ಹೊಂದಿವೆ. ಪಕ್ಕದಲ್ಲಿರುವ

ಕಂಬಗಳು ಸಿಲಿಂಡರ್ ಮಾದರಿಯಲ್ಲಿ ವೃತ್ತಾಕಾರವಾಗಿ ಆರಂಭದಲ್ಲಿ ಈ ಕಂಬಗಳು ಅರೆಕಂಬಗಳಾಗಿದ್ದು ನಂದಿ ಮಂಟಪ ನವೀಕರಣಗೊಂಡಾಗ ಈ ಕಂಬಗಳನ್ನು ಪ್ರತ್ಯೇಕಿಸಲಾಗಿದೆ. ಚೌಕಕಾರದ ಕಂಬಗಳ ಮಧ್ಯೆ ನಾಲ್ಕು ಅಡಿ ಎತ್ತರದ ನಂದಿಶಿಲ್ಪವಿದ್ದು ಬಲಗಾಲನ್ನು ಮಡಚಿ ಎಡಗಾಲನ್ನು ಮುಂಚಾಚಿ ಬಲಬದಿಗೆ ಮಲಗಿದೆ. ಇದರ ಪೀಠಭಾಗದಲ್ಲಿ ನಂದಿಯ ಮೇಲೆ ಉಮಾಮಹೇಶ್ವರ ಶಿಲ್ಪವನ್ನು ಚಿತ್ರಿಸಲಾಗಿದೆ. ಕೊರಳಲ್ಲಿ ಘಂಟೆಯ ಸರ, ಹಣೆಪಟ್ಟಿ, ಕಾಲಲ್ಲಿ ಗೆಜ್ಜೆಸರದಿಂದ ಅಲಂಕರಿಸಲಾಗಿದೆ. ಈ ಈಶ್ವರ ದೇವಾಲಯವೇ ಪಾಂಡೇಶ್ವರ ದೇವಾಲಯ ಎಂದು ಕೆಲವು ವಿದ್ವಾಂಸರು ಅಭಿಪ್ರಾಯಿಸಿದ್ದಾರೆ. ಹೂವಿನಹಡಗಲಿಯ ಕೇಶವ ದೇವಾಲಯದ ವಾಸ್ತು ಲಕ್ಷಣಗಳು ಈ ದೇವಾಲಯದ ನಿರ್ಮಾಣದಲ್ಲಿ ಯಥಾವತ್ತಾಗಿ ಕಾಣಿಸಿಕೊಳ್ಳುತ್ತವೆ. ರವಿಗ ದಂಡನಾಯಕ ಮತ್ತು ತ್ರಿಭುವನಮಲ್ಲ ಪಾಂಡ್ಯ ಆರನೇ ವಿಕ್ರಮಾದಿತ್ಯನ ನಿಷ್ಠಾವಂತ ದಂಡನಾಯಕರಾಗಿದ್ದರಿಂದ ಇಬ್ಬರಿಗೂ ತಮ್ಮ ತಮ್ಮ ನೆಲೆಗಳಲ್ಲಿ ದೇವಾಲಯ ನಿರ್ಮಿಸಲು ಅನುಮತಿ ನೀಡಿರಬೇಕು. ಹಾಗಾಗಿ ಸ್ಥಳೀಯರೆಲ್ಲದ ಶಿಲ್ಪಿಗಳನ್ನು ಕರೆತಂದು ಒಂದೇ ಲಕ್ಷಣದ ದೇವಾಲಯಗಳನ್ನು ನಿರ್ಮಿಸಿದಂತಿದೆ ಹಾಗೂ ಈ ದೇವಾಲಯ ಪಾಂಡ್ಯರ ರಾಜಧಾನಿಯಾದ ಬೇತೂರಿನ ಪಕ್ಕದಲ್ಲಿಯೇ ಇರುವುದರಿಂದ ಈಶ್ವರ ದೇವಾಲಯವೇ ಪಾಂಡೇಶ್ವರ ದೇವಾಲಯ ಎಂದು ಒಪ್ಪಿಕೊಳ್ಳಬಹುದು.

ಪ್ರತಿವರ್ಷ ಕಾರ್ತಿಕ ಮಾಸದಲ್ಲಿ ಈ ದೇವಸ್ಥಾನದಲ್ಲಿ ಕಾರ್ತಿಕ ನಡೆಯುತ್ತದೆ. ಈ ದೇವಾಲಯವನ್ನು ಮುಸಲ್ಮಾನ ದಾಳಿಗಳಿಂದ ತಪ್ಪಿಸಲು ಮಣ್ಣಿನಲ್ಲಿ ಮುಚ್ಚಲಾಗಿತ್ತು. ಒಂದು ದಿನ ಗ್ರಾಮದವರು ಇಲ್ಲಿ ಮಣ್ಣು ತೆಗೆಯುವಾಗ ಈ ದೇವಸ್ಥಾನ ಮತ್ತೆ ಬೆಳಕಿಗೆ ಬಂತು ಎಂದು ಗ್ರಾಮಸ್ಥರು ಹೇಳುತ್ತಾರೆ.

**ಕೇಶವ ದೇವಾಲಯ, ಹೂವಿನಹಡಗಲಿ (ಹೂವಿನಹಡಗಲಿ ತಾ.)**

ಕ್ರಿ.ಶ. ೧೧೯೦ರಲ್ಲಿ ತ್ರಿಭುವನಮಲ್ಲ ಪಾಂಡ್ಯದೇವ ನೊಳಂಬವಾಡಿ-೩೨೦೦೦ವನ್ನು ಆಳುತ್ತಿರುವಾಗ ಸೇನಾಪತಿ ರವಿಗ ಅಥವಾ ರವಿದೇವನ ಹೆಂಡತಿ ರಬ್ಬಲದೇವಿಯು ತನ್ನ ಹುಟ್ಟೂರಾದ ಪೊವಿನಪೊಸವಡಂಗಿಲೆಯಲ್ಲಿ ಕೇಶವ ದೇವಾಲಯವನ್ನು ಕಟ್ಟಿಸಿ ದೇವರನ್ನು ಸ್ಥಾಪಿಸಿ ದೇವರ ಸೇವಾಕಾರ್ಯಗಳಿಗೆ, ಬ್ರಾಹ್ಮಣರ ಆಹಾರಕ್ಕೆ ಹೂತೋಟಕ್ಕಾಗಿ ದಾನ ಬಿಡುತ್ತಾಳೆ.[೩೪]

ಗ್ರಾಮದ ಮಧ್ಯ ಭಾಗದಲ್ಲಿ ಉತ್ತರಾಭಿಮುಖವಾಗಿ ಇರುವ ಈ ದೇವಾಲಯ ಗರ್ಭಗೃಹ, ಅಂತರಾಳ, ಸಭಾಮಂಟಪ ಹಾಗೂ ಮುಖಮಂಟಪಗಳಿಂದ ಕೂಡಿದೆ. ದೇವಾಲಯದ ಹೊರಭಾಗ ನಕ್ಷತ್ರಾಕಾರ ತಳವಿನ್ಯಾಸವನ್ನು ಹೊಂದಿದೆ. ಐದು ಶಾಖೆಗಳಲ್ಲಿರುವ ಗರ್ಭಗೃಹದ ಪ್ರವೇಶದ್ವಾರಕ್ಕೆ ಪದ್ಮಸಾಲು, ಹೂಬಳ್ಳಿ, ಅರ್ಧಗಂಬಗಳ ಮೇಲೆ ಸುರುಳಿಯಾಕಾರದ ಬಳ್ಳಿಯಲ್ಲಿ ನೃತ್ಯಭಂಗಿ ಯಲ್ಲಿರುವ ಸ್ತ್ರೀಯರು, ಹೂವಿನ ಎಸಳುಗಳಿವೆ. ಮೊದಲಿನ ಒಂದು ಶಾಖೆ ಉತ್ತರಾಶ ಪಟ್ಟಿಕೆಯಲ್ಲಿ ಮುಂದುವರೆದಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿ, ಇಕ್ಕೆಲಗಳಲ್ಲಿ ಚಾಮರಧಾರೆಯು

ಸಹಿತ ವೈಷ್ಣವ ದ್ವಾರಪಾಲಕರ ವಿಗ್ರಹಗಳಿವೆ. ಗರ್ಭಗೃಹದಲ್ಲಿ ಕೇಶವನ ವಿಗ್ರಹ ಗರುಡ ಪೀಠದ ಮೇಲೆ ಸಮಭಂಗಿಯಲ್ಲಿದ್ದು, ನಾಲ್ಕೂ ಕೈಗಳಲ್ಲಿ ಶಂಖ, ಚಕ್ರ, ಗದಾ ಮತ್ತು ಪದ್ಮಗಳನ್ನು ಹೊಂದಿದೆ. ಪಾರ್ಶ್ವಗಳಲ್ಲಿ ಶ್ರೀದೇವಿ - ಭೂದೇವಿಯರಿದ್ದಾರೆ. ಪ್ರಭಾವಳಿಯನ್ನು ಮಕರ ತೋರಣ ಹಾಗೂ ಕೀರ್ತಿ ಮುಖಗಳಿಂದ ಅಲಂಕರಿಸಲಾಗಿದೆ. ಅಂತರಾಳದ ಪ್ರವೇಶದ್ವಾರಕ್ಕೆ ಅರ್ಧಗಂಬ, ಲಲಾಟಬಿಂಬದಲ್ಲಿ ಗಜಲಕ್ಷ್ಮಿ, ಎರಡು ಇಕ್ಕೆಲಗಳಲ್ಲಿ ಜಾಲಂಧರಗಳು ಇವೆ. ಅಂತರಾಳದ ಗೋಡೆಗೆ ಎರಡು ಗೂಡುಗಳಿವೆ. ಆ ಗೂಡಗಳಲ್ಲಿ ಯಾವುದೇ ಶಿಲ್ಪಗಳಿಲ್ಲ.

ಸಭಾಮಂಟಪದಲ್ಲಿರುವ ನಾಲ್ಕು ಕಂಬಗಳು ಕೆಳಗೆ ಚೌಕ, ಮೇಲೆ ವೃತ್ತಾಕಾರದಲ್ಲಿವೆ. ಚೌಕ ಮುಖಗಳಲ್ಲಿ ಅಲಂಕೃತ ಅರ್ಧಕಂಭಗಳ ಮಧ್ಯದಲ್ಲಿರುವ ಕೋಷ್ಟಕಗಳಲ್ಲಿ ವೈಷ್ಣವ ಸಂಪ್ರದಾಯಕ್ಕೆ ಸಂಬಂಧಿಸಿದ ಉಬ್ಬುಶಿಲ್ಪಗಳಿವೆ. ಸಭಾಮಂಟಪದ ಪಶ್ಚಿಮ ಮತ್ತು ಉತ್ತರ ಭಾಗಗಳಲ್ಲಿಯ ಪ್ರವೇಶದ್ವಾರಗಳು ಅರ್ಧಗಂಬ, ಗಜಲಕ್ಷ್ಮಿ ಶಿಲ್ಪಗಳಿಂದ ಅಲಂಕೃತವಾಗಿದೆ. ಅವುಗಳ ಮುಂಭಾಗ ಎರಡು ಚೌಕಾಕಾರ ಕಂಬಗಳಿಂದ ಮುಂಚಾಚಿರುವ ಮುಖಮಂಟಪಗಳಿವೆ. ಈ ಕಂಬಗಳ ಮೇಲ್ಭಾಗ ಮುಂಚಾಚಿದ ಇಳಿಜಾರಾಗಿ ಮಂಜೂರು ನಿರ್ಮಿಸಲಾಗಿದೆ.

ದೇವಾಲಯದ ಹೊರಗೋಡೆಯ ಅಧಿಷ್ಠಾನ ನೆಲದಲ್ಲಿ ಸಂಪೂರ್ಣ ಮುಚ್ಚಿಕೊಂಡಿದೆ. ಹಿಂಸರಿತ ಮತ್ತು ಮುಂಸರಿತಗಳಿಂದ ಕೂಡಿದ ಗೋಡೆಯಲ್ಲಿ ಚೌಕಾಕಾರದ ಬೃಹತ್ ಕಂಬಗಳು ಪ್ರಸ್ತಾರವನ್ನು ತಲುಪಿವೆ. ಅಲ್ಲಲ್ಲಿ ಎರಡು ಜೋಡಿ ಅಲಂಕೃತ ಅರ್ಧಗಂಬಗಳ ಮೇಲೆ ಶಿಖರ ಪಟ್ಟಿಕೆಗಳನ್ನು ನಿರ್ಮಿಸಲಾಗಿದೆ. ಗರ್ಭಗೃಹದ ಭಿತ್ತಿ ಭಾಗದ ಮೂರು ಭಾಗಗಳಲ್ಲಿ ಅರ್ಧಗಂಬ, ಇಳಿಬಿದ್ದ ಪದ್ಮಗುಚ್ಚ, ಮುಂಚಾಚಿದ ಮಂಜೂರು ಮತ್ತು ವೇಸರಶೈಲಿಯ ಶಿಖರ ಪಟ್ಟಿಕೆಗಳಿಂದ ಕೂಡಿದ ಗೂಡುಗಳಿವೆ. ಒಟ್ಟಾರೆ ಭಿತ್ತಿಯ ಭಾಗ ಪದ್ಮ ಮಾದರಿಯ ವಿವಿಧ ಕೋನಗಳ ಕಂಬಗಳಿಂದ ಅಲಂಕೃತಗೊಂಡಿದಂತೆ ಕಾಣಿಸುತ್ತದೆ. ಕಂಬಗಳ ಮೇಲಿರುವ ಕುಬ್ಜ ಶಿಲ್ಪಗಳನ್ನು ಮಂಜೂರು ಭಾಗವನ್ನು ಎತ್ತಿಹಿಡಿದಂತೆ ಬಿಡಿಸಲಾಗಿದೆ. ಗರ್ಭಗೃಹದ ಮೇಲಿನ ಶಿಖರ ಹಾಳಾಗಿದೆ. ಒಟ್ಟಾರೆ ಭಿತ್ತಿ ಭಾಗ ಅಲಂಕೃತ ಪದ್ಮಪಟಿಕೆಯ ಕಂಬಗಳಿಂದ ಜೋಡಿಸಿದಂತೆ ಕಾಣುತ್ತದೆ. ಆನೆಕೊಂಡದ ಪಾಂಡೇಶ್ವರ ದೇವಾಲಯ ಇದೇ ಲಕ್ಷಣ ಹೊಂದಿರುವುದು ವಿಶೇಷವಾಗಿದೆ.

**ಸಿದ್ಧೇಶ್ವರ ಮತ್ತು ವೀರೇಶ್ವರ ದೇವಾಲಯ, ಹೊಳಗುಂದಿ (ಹೂವಿನಹಡಗಲಿ ತಾ.)**

ಈ ದೇವಾಲಯದಲ್ಲಿರುವ ಚಾಳುಕ್ಯ ಅರಸ ತ್ರಿಭುವನಮಲ್ಲನ ಕ್ರಿ.ಶ. ೧೦೯೭ರ ಶಾಸನದಲ್ಲಿ ಚಾವುಂಡರಸನ ಮಗ ಮಹಾಮಂಡಳೇಶ್ವರ ಗಂಗರಸ, ಅವನ ತಂದೆ ತನ್ನದೆಂದು ಕಟ್ಟಿಸಿದ ಬಾಳೇಶ್ವರ ದೇವರ ಸೇವಾಕಾರ್ಯಗಳಿಗೆ ಎರಕಗಾವುಂಡನ ಕೈಯಲ್ಲಿ ಭಾದನ ಮಾಡಿಸಿದ.[೨೩೫] ಅವನು ರಾಜನ ಒಪ್ಪಿಗೆ ಪಡೆದು ಖಳೇಶ್ವರಪಂಡಿತರ ಕಾಲು ತೊಳೆದು ದಾನ ಮಾಡಿದನು. ಇದೇ ವೇಳೆಯಲ್ಲಿ ದೇವರ ಸೇವಾಕಾರ್ಯಗಳಿಗೆ ಅನೇಕ ಗಾವುಂಡರು ದಾನ ಮಾಡಿದ್ದಾರೆ.

ಎತ್ತರದ ಜಗತಿಯ ಮೇಲೆ ಪೂರ್ವಾಭಿಮುಖವಾಗಿ ನಿರ್ಮಾಣವಾದ ಈ ದೇವಾಲಯ ದ್ವಿಕೂಟಾಚಲವಾಗಿದ್ದು, ಎರಡು ಗರ್ಭಗೃಹಗಳು, ಅಂತರಾಳಗಳು ಹಾಗೂ ಸಭಾಮಂಟಪಗಳಿಂದ ಕೂಡಿದೆ. ಸಿದ್ಧೇಶ್ವರ ಗರ್ಭಗೃಹದ ಪ್ರವೇಶದ್ವಾರಕ್ಕೆ ಇಕ್ಕೆಲಗಳಲ್ಲಿ ತ್ರಿಶೂಲ, ಡಮರು ಹಿಡಿದು, ವರದ, ಅಭಯ ಮುದ್ರೆಯಲ್ಲಿರುವ ದ್ವಾರಪಾಲಕರ ವಿಗ್ರಹಗಳು ಮತ್ತು ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ಒಳಗೆ ಕಲ್ಯಾಣ ಚಾಳುಕ್ಯರ ಕಾಲದ ಈಶ್ವರ ಲಿಂಗವಿದೆ. ಸರಳ ಕೆತ್ತನೆಯ ಪ್ರವೇಶದ್ವಾರವನ್ನು ಹೊಂದಿದ ಅಂತರಾಳದಲ್ಲಿ ನಂದಿ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಸಭಾಮಂಟಪದ ಪ್ರವೇಶದ್ವಾರಕ್ಕೆ ಅರ್ಧಗಂಬಗಳು, ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪ ಮತ್ತು ಇಕ್ಕೆಲಗಳಲ್ಲಿ ತ್ರಿಶೂಲ, ಡಮರು ಹಿಡಿದು ನಿಂತ ದ್ವಾರಪಾಲಕರ ವಿಗ್ರಹಗಳಿವೆ. ಸಭಾಮಂಟಪದ ಕಂಬಗಳು ಕೆಳಗೆ - ಮೇಲೆ ಚೌಕ, ಮಧ್ಯ ಎಂಟು - ಹದಿನಾರು ಪಟ್ಟಿಕೆಗಳು, ಮೇಲ್ಭಾಗ ಫಲಕ, ಬೋದಿಗೆಗಳನ್ನು ಹೊಂದಿವೆ.

ಸಿದ್ಧೇಶ್ವರ ದೇವಾಲಯಕ್ಕೆ ಹೊಂದಿಕೊಂಡು ಉತ್ತರಾಭಿಮುಖವಾಗಿ ಗರ್ಭಗೃಹ, ಅಂತರಾಳ, ಸಭಾಮಂಟಪಗಳಿಂದ ಕೂಡಿದ ದೇಗುಲವನ್ನು ನಿರ್ಮಿಸಲಾಗಿದೆ. ಗರ್ಭಗೃಹ, ಅಂತರಾಳಗಳು ಎತ್ತರದ ಜಗತಿಯ ಮೇಲಿವೆ. ಗರ್ಭಗೃಹದಲ್ಲಿ ಸುಮಾರು ಎರಡು ಅಡಿ ಎತ್ತರದ ವೀರಭದ್ರ, ಕೈಗಳಲ್ಲಿ ತ್ರಿಶೂಲ - ಡಮರು, ಖಡ್ಗ - ಗುರಾಣಿಗಳನ್ನು ಹಿಡಿದು ನಿಂತಿದ್ದಾನೆ. ಅಂತರಾಳದ ಪ್ರವೇಶದ್ವಾರಕ್ಕೆ ಹೂವಿನ ಎಸಳುಗಳು, ಇಕ್ಕೆಲಗಳಲ್ಲಿ ತ್ರಿಶೂಲ, ಡಮರು ಹಿಡಿದು ನಿಂತ ದ್ವಾರಪಾಲಕ ವಿಗ್ರಹಗಳಿವೆ. ಸಭಾಮಂಟಪಕ್ಕೆ ಉತ್ತರ, ಪೂರ್ವಭಾಗದಲ್ಲಿ ಪ್ರವೇಶದ್ವಾರಗಳೂ, ಸಭಾಂಗಣದಲ್ಲಿ ಕಲ್ಯಾಣ ಚಾಳುಕ್ಯ ಮಾದರಿಯ ಆರು ಕಂಬಗಳಿವೆ. ದೇವಾಲಯದ ಹೊರಗೋಡೆ ಮತ್ತು ಮೇಲ್ಛಾವಣಿಯನ್ನು ಇತ್ತೀಚೆಗೆ ಜೀರ್ಣೋದ್ಧಾರಗೊಳಿಸಲಾಗಿದೆ.

**ಕಲ್ಲೇಶ್ವರ ದೇವಾಲಯ, ಅಂಬಳಿ (ಹಗರಿಬೊಮ್ಮನಹಳ್ಳಿ ತಾ.)**

ಈ ದೇವಾಲಯದ ಮುಂಭಾಗದಲ್ಲಿರುವ ಕಲ್ಯಾಣ ಚಾಳುಕ್ಯ ಅರಸ ತ್ರಿಭುವನಮಲ್ಲನ ಸಾಮಂತ ತ್ರಿಭುವನಮಲ್ಲ ಪಾಂಡ್ಯನ ಕಾಲದ ಕ್ರಿ.ಶ. ೧೦೮೩ರ ಶಾಸನದಲ್ಲಿ ಅಮ್ಮಳೆಯ ಪಶುಪತಿಭಟ್ಟನ ವಂಶಸ್ಥ ಭೋಗದೇವನ ಮಗನಾದ ಶಿವರಾಜನು ಕಲಿದೇವರ ದೇವಾಲಯವನ್ನು ಕಟ್ಟಿಸಿ ಭೂದಾನ ಮಾಡಿದನೆಂದಿದೆ.[೨೬]

ಪೂರ್ವಾಭಿಮುಖವಾಗಿ ನಿರ್ಮಾಣವಾದ ಈ ದೇವಾಲಯ ಗರ್ಭಗೃಹ, ಅಂತರಾಳ ಹಾಗೂ ಸಭಾಮಂಟಪಗಳಿಂದ ಕೂಡಿದೆ. ಗರ್ಭಗೃಹದ ಪ್ರವೇಶದ್ವಾರ ವಜ್ರಾಕಾರದ ಕೆತ್ತನೆ, ಹೂ-ಬಳ್ಳಿ, ನೃತ್ಯಗಾರ್ತಿಯರು, ಮಿಥುನ ಶಿಲ್ಪಗಳನ್ನೊಳಗೊಂಡು ಐದು ಶಾಖೆಗಳಲ್ಲಿದೆ. ಮೊದಲಿನ ಎರಡು ಶಾಖೆಗಳು ಮೇಲ್ಭಾಗದ ಉತ್ತರಾಸ ಪಟ್ಟಿಕೆಯಲ್ಲಿ ಮುಂದುವರೆದಿವೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿ, ಇಕ್ಕೆಲಗಳಲ್ಲಿ ತ್ರಿಶೂಲ, ಡಮರು, ಗದೆ ಹಿಡಿದು ನಿಂತ ದ್ವಾರಪಾಲಕರ ವಿಗ್ರಹಗಳು ಮತ್ತು ಮುಂಭಾಗ ಅಲಂಕೃತ ಚಂದ್ರಶಿಲಾ ಕೂಡಿಸಲಾಗಿದೆ. ಒಳಗೆ ಸುರುಳಿಯಾಕಾರದ

ಪೀಠದ ಮೇಲೆ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಅಂತರಾಳದ ಪ್ರವೇಶದ್ವಾರಕ್ಕೆ ವಜ್ರಾಕಾರದ ಕೆತ್ತನೆ, ಹೂ-ಬಳ್ಳಿಗಳು, ನೃತ್ಯಗಾರ್ತಿಯರು ಹಾಗೂ ಸಿಂಹದ ಸಾಲುಗಳನ್ನು ಹೊಂದಿದ ನಾಲ್ಕು ಶಾಖೆಗಳಿವೆ. ಇಲ್ಲಿಯು ಮೊದಲಿನ ಎರಡು ಶಾಖೆಗಳು ಮೇಲ್ಭಾಗದ ಉತ್ತರಾಸ ಪಟ್ಟಿಕೆಯಲ್ಲಿ ಮುಂದುವರೆದಿವೆ. ಪ್ರವೇಶದ್ವಾರದ ಪಾರ್ಶ್ವಗಳಲ್ಲಿ ಜಾಲಂಧರಗಳು, ಇದರ ಮೇಲ್ಭಾಗ ಬ್ರಹ್ಮ, ಶಿವ, ವಿಷ್ಣು ಹಾಗೂ ದಿಕ್ಪಾಲಕರ ಉಬ್ಬುಶಿಲ್ಪಗಳಿವೆ.

ತೆರೆದ ಸಭಾಮಂಟಪದಲ್ಲಿ ನಾಲ್ಕು ಕಂಬಗಳು ಕೆಳಗೆ ಚೌಕಾಕಾರ ಮೇಲೆ ವೃತ್ತಾಕಾರದಲ್ಲಿವೆ. ಚೌಕು ಮುಖಗಳಲ್ಲಿ ಅರ್ಧಗಂಬ, ತೋರಣ, ಶಿಖರ ಪಟ್ಟಿಕೆ ಮತ್ತು ಕೀರ್ತಿಮುಖಗಳಿಂದ ಅಲಂಕರಿಸಿದ ಕೋಷ್ಟಕಗಳಲ್ಲಿ ಬ್ರಹ್ಮ, ವಿಷ್ಣು, ಸೂರ್ಯ, ಕೇಶವ, ಗಣೇಶ, ಸರಸ್ವತಿ ಮೊದಲಾದ ಉಬ್ಬುಶಿಲ್ಪಗಳನ್ನು ಬಿಡಿಸಲಾಗಿದೆ. ಸುತ್ತಲಿರುವ ಕಕ್ಷಾಸನಕ್ಕೂ ಕೆಳಗೆ ಚೌಕಾಕಾರ ಮೇಲೆ ವೃತ್ತಾಕಾರಗಳಲ್ಲಿರುವ ಕಂಬಗಳನ್ನು ಜೋಡಿಸಲಾಗಿದೆ. ಸಭಾಮಂಟಪಕ್ಕೆ ಪೂರ್ವ, ಉತ್ತರ ಹಾಗೂ ದಕ್ಷಿಣ ಭಾಗಗಳಲ್ಲಿ ಪ್ರವೇಶಗಳಿವೆ. ಅದರ ಗೋಡೆಯ ಮೇಲಿರುವ ಪಟ್ಟಿಕೆಯಲ್ಲಿ ಬ್ರಹ್ಮ, ವಿಷ್ಣು, ಕೇಶವ, ಸೂರ್ಯ, ಸರಸ್ವತಿ ಹಾಗೂ ಗಣೇಶನ ಉಬ್ಬುಶಿಲ್ಪಗಳಿವೆ.

ಹೊರಗೋಡೆಯ ಅಧಿಷ್ಠಾನವು ಉಪಾನ, ಜಗತಿ, ಕುಮುದ ಹಾಗೂ ಗಳ, ಪಟ್ಟಿಕೆಗಳಿಂದ ಕೂಡಿದೆ. ಗಳಪಾದವನ್ನು ಕೂಡು, ಕೀರ್ತಿಮುಖಗಳಿಂದ ಅಲಂಕರಿಸಿದ್ದು, ಅದರಲ್ಲಿ ಮಕರ, ಸಿಂಹ, ಸ್ತ್ರೀ-ಪುರುಷರ ಶಿಲ್ಪಗಳನ್ನು ಬಿಡಿಸಲಾಗಿದೆ. ಗರ್ಭಗೃಹದ ಹೊರಗೋಡೆಯ ಸುತ್ತಲೂ ದೇವಕೋಷ್ಟಕಗಳಿವೆ. ಅವು ಅರ್ಧಗಂಭ, ಕೀರ್ತಿಮುಖ ಹಾಗೂ ಮಕರ ತೋರಣಗಳಿಂದ ಅಲಂಕೃತಗೊಂಡು ಮೇಲೆರುತ್ತ ಕಪೋತ ಭಾಗವನ್ನು ತಲುಪಿವೆ. ಗೋಡೆಗಳಲ್ಲಿ ಆನೆಗಳು, ಯಕ್ಷರು, ಹಾರಾಡುವ ಗಂಧರ್ವರು, ಹೂ-ಬಳ್ಳಿಗಳು, ನೃತ್ಯಗಾರ್ತಿಯರು ಹಾಗೂ ಭೈರವನ ಉಬ್ಬುಶಿಲ್ಪಗಳಿವೆ. ಮೇಲ್ಕಟ್ಟಡವನ್ನು ಇತ್ತೀಚೆಗೆ ಗಾರೆ, ಇಟ್ಟಿಗೆಯಿಂದ ಜೀರ್ಣೋದ್ಧಾರಗೊಳಿಸಲಾಗಿದೆ.

**ಕೋಟಿಶಂಕರ ದೇವಾಲಯ (ಕೊಟ್ನೆಕಲ್, ಹೂವಿನಹಡಗಲಿ ತಾ.)**

ಬಳ್ಳಾರಿ ಜಿಲ್ಲೆ ಹೂವಿನಹಡಗಲಿ ತಾಲ್ಲೂಕಿನ ಕೊಟ್ನೆಕಲ್ ಕ್ಯಾಂಪಿನ ಪಶ್ಚಿಮಕ್ಕೆ ಸ್ವಲ್ಪ ದೂರದಲ್ಲಿ ನದಿಯ ದಂಡೆಯ ಮೇಲೆ ಈ ದೇವಸ್ಥಾನವಿದೆ. ಕೆಲವು ವರ್ಷಗಳ ಹಿಂದೆ ಈ ಪ್ರದೇಶದಲ್ಲಿ ಕಾಗನೂರು ಎಂಬ ಗ್ರಾಮ ಇತ್ತು ಎಂದು ಸ್ಥಳೀಯರು ಹೇಳುತ್ತಾರೆ. ಪ್ರಸ್ತುತ ದೇವಸ್ಥಾನವು ಗ್ರಾಮದಿಂದ ಮತ್ತು ಜನತೆಯ ಸಂಪರ್ಕದಿಂದ ದೂರದಲ್ಲಿದೆ. ದೇವಸ್ಥಾನದ ನಿರ್ಮಾಣದ ಕುರಿತ ಸ್ಪಷ್ಟವಾದ ದಾಖಲೆಗಳು ಈವರೆಗೆ ದೊರೆತಿಲ್ಲ. ಆದರೆ ಇಲ್ಲೇ ಇರುವ ಕ್ರಿ.ಶ. ೧೨ನೇ ಶತಮಾನದ ಶಿಲಾಶಾಸನವೊಂದು ಈ ಕುರಿತು ಪರೋಕ್ಷ ಮಾಹಿತಿ ನೀಡುತ್ತದೆ. ಈ ಶಾಸನ ಕೊಟ್ಟಿನಕಲ್ಲಿನ ವಿವರ ಹಾಗೂ ಈ ದೇವಸ್ಥಾನಕ್ಕೆ ದಾನ ನೀಡಿದ ವಿವರವನ್ನು ದಾಖಲಿಸುತ್ತದೆ. ಈ ಹಿನ್ನೆಲೆಯಲ್ಲಿ ಕ್ರಿ.ಶ. ೧೧೪೪ರ ಸುಮಾರಿನಲ್ಲಿ ಈ ದೇವಸ್ಥಾನ ನಿರ್ಮಾಣ ವಾಗಿದೆ ಎಂದು ಊಹಿಸಬಹುದಾಗಿದೆ.

ಉಚ್ಚಂಗಿ ಪಾಂಡ್ಯರ ಅರಸ ಜಗದೇಕಮಲ್ಲ ವೀರಪಾಂಡ್ಯನ ಕಾಲದ ಈ ಶಾಸನವು ಕೊಟ್ಟಿನಕಲ್‌ನ ಚತುರ್ಸೀಮೆಯ ವಿವರವನ್ನು ನೀಡುತ್ತದೆ. ವೀರಪಾಂಡ್ಯದೇವನ ಸಂಧಿವಿಗ್ರಹಿ ದುರಂಧೂರನೂ ಆದ ವಿಪ್ರವಂಶ ಚೂಡಾಮಣಿ ಎಂದು ಪ್ರಸಿದ್ಧನಾದ ಶಂಕರದೇವ ಈ ಶಾಸನವನ್ನು ಹಾಕಿಸಿದ್ದಾನೆ. ಈ ಶಾಸನದಲ್ಲಿ ಕೊಟ್ಟಿಗನೂರ ಚತುಸ್ಸೀಮೆಯ ವಿವರ ಈ ಕೆಳಗಿನಂತಿದೆ.

ಶ್ರೀ ತುಂಗಾಭದ್ರಾದೇವಿಯಂ ಮೂಡಲು ಪಡವಮುಖವಾಗಿ ಪರಿತಂದ ಜಲಪ್ರವಾಹ ಆ ಜಲಪ್ರವಾಹದ ತೆಂಕಲು ಮುತ್ತದಭಾಗು, ಆಲ್ಲಿಂ ಮೂಡಲು ಬಸುರಿಯ ಮರಂಗಳು, ಅಲ್ಲಿಂ ಮೂಡಲಾಲದ ಮರಂಗಳಲ್ಲಿಂ ಮೂಡಲು ಕಡಲ ಸರಿವಲ್ಲಿಂ ಮೂಡಲು ಬಿಳಿಯಕಲ್ಲಳ್ ಅಲ್ಲಿಂ ಮೂಡಲು ಅಡಗನ ಕೆರೆಯ ಮಧ್ಯದಲ್ಲಿ ಬಸುರಿಯ ಮರ ಅಲ್ಲಿಂ ಮೂಡಲು ಶ್ವೇತ ಪಾಷಣ ಪಂಕ್ತಿ ಅಲ್ಲಿಂ ಬಡಗಣ ಹೆರೆ ಈ ಶಾಸನದಲ್ಲಿ ಹಂಪನೆರೆ ಅದರ ತೆಂಕಯಿಣ ಹೊರೆಯಿಂ ಪಡುವ ಮಾಗಡೆ ಜಲಪ್ರವಾಹ ಪಡುವ ಸಂಕನ ಕೆರೆಯ ಕೆಳಗಣ ಹುಣಸೇ ಅಲ್ಲಿಂ ಒಡುವ ಮುಖದಿ ತುಂಗಾಭದ್ರದೇವಿಯಿಂ ಮುಟ್ಟೈ ಕುಡೆ ಜಲಪ್ರವಾಹ ಈ ಚತುಸ್ಸೀಮೆಯ ಮಧ್ಯದಲ್ಲಿ ಕೋಟೆಶಂಕರ ಮತ್ತು ಲಕ್ಷ್ಮೀನರಸಿಂಹ ದೇವಸ್ಥಾನಗಳು ನಿರ್ಮಾಣವಾಗಿವೆ. ಈ ಶಾಸನದಲ್ಲಿ ತಿಳಿಸಿದಂತೆ ೪ ವಿವಿಧ ಸಂದರ್ಭದಲ್ಲಿ ದಾನ ನೀಡಿದ ವಿವರವಿವೆ. (೧) ೧೧.೧.೧೧೪೪ರ ಮಂಗಳವಾರ ಮಹಾಜನಗಳು ದೇವರ ಅಂಗಭೋಗಕ್ಕಂ ಚೈತ್ರ ಪವಿತ್ರಕ್ಕಂ ಈಶ್ವರ ಭಟ್ಟನ ಕೆರೆಯ ದಕ್ಷಿಣ ದಿಶಾ ಭಾಗದಲ್ಲು ಎರೆಯ ಭೂಮಿಯ ೫ ಮತ್ತರನ್ನು ಶಿವಮಯ್ಯ ನಾಯಕನು ದೇವರ ನೈವೇದ್ಯಕ್ಕೆ ಕಟ್ಟೆಯಿದೊಳಗೆ ಹುಣಿಸಿಯ ಗದ್ದೆ ಕಂಬ ೭೧೪ ಮುಂ ಧಾರಾಪೂರ್ವಕಂ ಮಾಡಿ ಬಿಟ್ಟರು (೨) ೨೪-೧೨-೧೧೪೮ರ ಶುಕ್ರವಾರ ವೀರಪಾಂಡ್ಯನ ಮಾವ ವಿಕ್ರಮಾದಿತ್ಯ ಅರಸರಿಗೆ ಪುಣ್ಯವಾಗಲೆಂದು ಕೊಟ್ಟನೂರಿನ ಸಮಸ್ತ ಆದಾಯವನ್ನು ಮೂರು ಭಾಗ ಮಾಡಿ ಒಂದು ಭಾಗ ದೇವರಿಗೆ, ಉಳಿದೆರಡು ಭಾಗ ಬ್ರಾಹ್ಮಣ ಭೋಜನಕ್ಕೆ ನೀಡಿದನು. (೩) ೪-೬-೧೧೫೯ರ ಬುಧವಾರ ವಿಕ್ರಮಾದಿತ್ಯ ದೇವರ ನೈವೇದಕ್ಕೆ ೪ ಮತ್ತಾರು ಎರೆಭೂಮಿ ೫ ಮತ್ತಾರು ಕೆಂಗಾಡು ಧಾರೆಯೆರೆದು ನೀಡಿದನು. (೪) ೨೭-೭-೧೧೭೮ರ ಗುರುವಾರ ವಿಜಯಪಾಂಡ್ಯ ದೇವರು ಹಡಗಲಿಯಲ್ಲಿರುವ ಮಾಳಿಗೆ ಮನೆ ಮತ್ತು ಒಂದು ತೋಟವನ್ನು ಧಾರೆಯೆರೆದು ಕೊಟ್ಟಂತೆ ಈ ಶಾಸನದಲ್ಲಿ ಉಲ್ಲೇಖಗಳಿವೆ.[೨೩೭]

ಕ್ರಿಶ. ೧೨೬೨ರ ಇನ್ನೊಂದು ಯಾದವರ ಮಹಾದೇವರಾಯನ ಶಾಸನವಿದ್ದು, ಅದರಲ್ಲಿ ದಕ್ಷಿಣ ಕಾಶಿಯೆಂದು ಪ್ರಸಿದ್ಧ ಪಡೆದಿದ್ದ ತುಂಗಾಭದ್ರಾ ನದಿಯ ದಕ್ಷಿಣದ ದಂಡೆಯಲ್ಲಿನ ಸ್ವಯಂಭೂ ಶ್ರೀ ಕೋಟೆ ಶಂಕರ ದೇವರಿಗೆ ಕೊಟ್ಟಿಗನೂರಿನ ಮಧುವಯ್ಯನು ಆ ೫೦೦ ಕೈಯಲ್ಲಿ ಪಡೆದು ೫ ಮತ್ತಾರು ಭೂಮಿ ದಾನ ಬಿಟ್ಟ ಉಲ್ಲೇಖವಿದೆ.[೨೩೮]

ನಿರಂದರ ಮಾದರಿಯ ಈ ದೇವಸ್ಥಾನವು ತುಂಗಭದ್ರಾ ನದಿಯ ದಕ್ಷಿಣ ದಂಡೆಯಲ್ಲಿದೆ. ಗರ್ಭಗೃಹ, ಅಂತರಾಳ, ನವರಂಗ ಅಥವಾ ಸಭಾಮಂಟಪವನ್ನು ಹೊಂದಿದ್ದು, ಕ್ಲೋರೈಟಿಕ್‌ಶಿಷ್ಟ್

ಶಿಲೆಯಿಂದ ನಿರ್ಮಿಸಲಾಗಿದೆ. ಇತ್ತೀಚಿನ ವರ್ಷಗಳಲ್ಲಿ ಈ ದೇವಾಲಯವನ್ನು ಸಂಪೂರ್ಣವಾಗಿ ಜೀರ್ಣೋದ್ಧಾರ ಮಾಡುವ ಮೂಲಕ ನವೀಕರಿಸಲಾಗಿದೆ. ದೇವಾಲಯದ ಭಿತ್ತಿ ಸಂಪೂರ್ಣವಾಗಿ ಆಧುನಿಕ ರೂಪವನ್ನು ನೀಡಲಾಗಿದೆ. ಒಳಭಾಗದಲ್ಲಿ ಗರ್ಭಗೃಹ, ಅಂತರಾಳ, ನವರಂಗದಲ್ಲಿ ಕಂಬಗಳು ಮತ್ತು ಮೇಲ್ಛಾವಣಿಗಳಲ್ಲಿ ಮಾತ್ರ ದೇವಾಲಯದ ವಾಸ್ತುಶಿಲ್ಪದ ಮೂಲ ಭಾಗಗಳನ್ನು ಗುರುತಿಸಬಹುದು. ನವರಂಗದ ದಕ್ಷಿಣ ಮತ್ತು ಪೂರ್ವದ ಬಾಗಿಲುಗಳು ಪೂರ್ಣ ಆಧುನಿಕ ಶೈಲಿಯಲ್ಲಿವೆ.

ಪೂರ್ವಾಭಿಮುಖವಾಗಿರುವ ಈ ದೇವಸ್ಥಾನದ ಗರ್ಭಗೃಹದಲ್ಲಿ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಇದರ ಮೇಲ್ಛಾವಣಿಯನ್ನು ಮಗುಚಿದ ಚೌಕ ಪಟ್ಟಿಕೆಗಳ ಪದ್ಮದಳದ ರಚನೆಯಿಂದ ಅಲಂಕರಿಸಲಾಗಿದೆ. ಪ್ರವೇಶದ್ವಾರದ ಬಾಗಿಲವಾಡವು ಸರಳವಾಗಿದ್ದು ಐದು ಶಾಖೆಗಳಿಂದ ಅಲಂಕೃತಗೊಂಡಿದೆ. ಇದರ ಮಧ್ಯದಲ್ಲಿ ಪಂಚಕೋನದ ಸ್ತಂಭ ಶಾಖೆಯನ್ನು ಕಾಣಬಹುದು. ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವನ್ನು ತೋರಲಾಗಿದೆ.

ಅಂತರಂಗವು ಸರಳವಾಗಿದ್ದು, ಇದರ ಮೇಲ್ಛಾವಣಿಯಲ್ಲಿ ಮುಗುಚಿದ ಪದ್ಮದ ಅಲಂಕರಣೆಯಿದೆ. ಪ್ರವೇಶದ್ವಾರದ ಬಾಗಿಲವಾಡದಲ್ಲಿ ಐದು ಶಾಖೆಗಳಿದ್ದು, ಪಂಚಕೋನಗಳ ಲತೆಯಿಂದ ಅಲಂಕೃತಗೊಂಡ ಕಂಬ ಮತ್ತು ಎರಡು ಬದಿಗಳಲ್ಲಿ ಚೌಕ ಪಟ್ಟಿಕೆಗಳಿವೆ. ಇದರ ಪಕ್ಕದಲ್ಲಿ ಜಾಲಂಧರ ಮತ್ತು ಈ ಜಾಲಂಧರದ ಕೆಳಭಾಗದಲ್ಲಿ ಪೂರ್ಣ ಕುಂಭವಿದೆ. ಲಲಾಟ ಭಾಗದಲ್ಲಿ ಬ್ರಹ್ಮ, ವಿಷ್ಣು ಮತ್ತು ಶಿವನ ಶಿಲ್ಪಗಳನ್ನು ಸ್ಥಾನಿಕ ಭಂಗಿಯಲ್ಲಿ ವಾಹನಗಳ ಸಹಿತ ಕಂಡರಿಸಲಾಗಿದೆ. ಶಿವನ ಶಿಲ್ಪದಲ್ಲಿ ನಂದಿ ಮತ್ತು ಗಣೇಶನ ಶಿಲ್ಪಗಳಿವೆ. ಈ ತ್ರಿಮೂರ್ತಿಗಳನ್ನು ಮಂಟಪದ ಮುಂಭಾಗದಲ್ಲಿ ಕೆತ್ತಲಾಗಿದೆ. ಈ ಸರಳ ಮಂಟಪಗಳ ಎರಡು ಬದಿಯಲ್ಲಿ ಮೊಸಳೆಗಳ ಬಾಯಿಂದ ಹೊರಟ ಹೂಬಳ್ಳಿಗಳಿಂದ ಅಲಂಕರಿಸಲ್ಪಟ್ಟ ಸುಂದರ ಮಕರತೋರಣವನ್ನು ಕಾಣಬಹುದು.

ನವರಂಗ ಅಥವಾ ಸಭಾಮಂಟಪದ ಮಧ್ಯದಲ್ಲಿ ನಾಲ್ಕು ಚೌಕ ಕಂಬಗಳು, ಈ ಕಂಬಗಳ ಮಧ್ಯೆ ರಂಗ ವೇದಿಕೆಯಿದೆ. ಕಂಬಗಳು ಪೀಠಭಾಗದಲ್ಲಿ ಚೌಕಕಾರವಾಗಿದ್ದು ಸರಳವಾಗಿವೆ. ಕಾಂಡಭಾಗದಲ್ಲಿ ಹದಿನಾರು ಪಟ್ಟಿಕೆಗಳನ್ನು ಚೌಕ ಪಟ್ಟಿಯಿಂದ ಅಲಂಕರಿಸಿದಂತೆ ಕಂಡುಬರುತ್ತದೆ. ಮೇಲಿನ ಭಾಗದಲ್ಲಿ 'ಜಂತ್ರಿ' ಹಿಡಿದು ಮಾಡಿರುವಂತೆ ವೃತ್ತಾಕಾರದ ಕಂಬದ ಭಾಗಗಳು ಕಂಡು ಬರುತ್ತವೆ. ಈ ಕಂಬಗಳ ರಚನೆಗೆ ಕ್ಲೋರೈಟಿಕ್‌ಶಿಷ್ಟ್ ಶಿಲೆಗಳನ್ನು ಬಳಸಲಾಗಿದೆ. ದೇವಸ್ಥಾನದ ಪುನರ್‌ನಿರ್ಮಾಣದ ಕಾಲದಲ್ಲಿ ಕಣಶಿಲೆಯ ಕಲ್ಲುಗಳಿಂದ ತೊಲೆಗಳನ್ನು ಜೋಡಿಸಲಾಗಿದೆ. ನವರಂಗದ ಮಧ್ಯಭಾಗವನ್ನು ಮುಗುಚಿದ ಪದ್ಮದಿಂದ ಮೇಲ್ಛಾವಣಿಯನ್ನು ಅಲಂಕರಿಸಲಾಗಿದೆ. ಉಳಿದಂತೆ ಇಲ್ಲಿ ಅಲಂಕೃತಗೊಂಡ ೧೦ ಅರೆ ಕಂಬಗಳು, ನವರಂಗದ ಮಂಟಪವನ್ನು ಹೊತ್ತುನಿಂತಂತಿವೆ. ಪೂರ್ವ ಮತ್ತು ಉತ್ತರದ ಪ್ರವೇಶದ್ವಾರಗಳು ಆಧುನಿಕ

ಶೈಲಿಯಲ್ಲಿದ್ದು, ಕಪ್ಪುಶಿಲೆಯಿಂದ ರಚಿಸಲಾಗಿದೆ. ಮುಖಮಂಟಪ, ಶಿಖರ, ದೀಪಸ್ತಂಭದ ಯಾವ ಕುರುಹುಗಳು ಇಲ್ಲಿ ದೊರೆಯುವುದಿಲ್ಲ. ಈ ದೇವಸ್ಥಾನದ ಬಲಬದಿಗೆ ಸ್ವಲ್ಪ ಎತ್ತರದಲ್ಲಿ ಲಕ್ಷ್ಮೀನರಸಿಂಹ ದೇವಸ್ಥಾನವನ್ನು ಕಾಣಬಹುದು.

**ಲಕ್ಷ್ಮೀನರಸಿಂಹ ದೇವಸ್ಥಾನ**

ಪೂರ್ವಾಭಿಮುಖವಾಗಿರುವ ಈ ದೇವಸ್ಥಾನವು ಕೋಟೆಶಂಕರ ದೇವಸ್ಥಾನದ ಬಲಬದಿಯಲ್ಲಿದೆ. ಲಕ್ಷ್ಮೀನರಸಿಂಹ ದೇವಸ್ಥಾನದ ಮತ್ತು ಶಂಕರ ದೇವಸ್ಥಾನದ ವಾಸ್ತುಶೈಲಿಯಲ್ಲಿ ಸಾಮ್ಯತೆಯನ್ನು ಕಾಣಬಹುದು. ಆದರೆ ಇದು ಬಳಪದ ಶಿಲೆಯಿಂದ ರಚನೆಗೊಂಡಿದೆ. ಗರ್ಭಗೃಹ, ಶುಕನಾಸಿಗಳು ಮಾತ್ರ ಇದ್ದು ಶಂಕರ ದೇವಸ್ಥಾನದ ಪ್ರವೇಶದ್ವಾರದ ಶೈಲಿಯಲ್ಲಿಯೇ ಇವುಗಳು ಕಂಡುಬರುತ್ತವೆ. ನವರಂಗ, ಸಭಾಮಂಟಪ ಸಂಪೂರ್ಣವಾಗಿ ಶಿಥಿಲಗೊಂಡಿದೆ. ರಂಗವೇದಿಕೆಯ ಕುರುಹುಗಳು ಲಭ್ಯವಿದ್ದು ಕಂಬಗಳು ಕಂಡು ಬರುವುದಿಲ್ಲ.

ಗರ್ಭಗೃಹದಲ್ಲಿ ಸುಮಾರು ೪ ಅಡಿ ಎತ್ತರದ ಲಕ್ಷ್ಮೀನರಸಿಂಹ ಕಿರೀಟ ಮುಕುಟ ಕರ್ಣ, ಕಂಠಭರಣಗಳಿಂದ ಅಲಂಕೃತವಾಗಿದ್ದಾನೆ. ನಾಲ್ಕು ಕೈಗಳನ್ನು ಹೊಂದಿದ್ದು, ಹಿಂದಿನ ಎರಡು ಕೈಗಳಲ್ಲಿ ಶಂಕ, ಚಕ್ರಗಳಿವೆ. ಮುಂದಿನ ಒಂದು ಕೈ ಭಗ್ನವಾಗಿದ್ದು, ಮತ್ತೊಂದು ಕೈಯಲ್ಲಿ ಲಕ್ಷ್ಮೀ ಆವರಿಸಿದೆ. ಲಕ್ಷ್ಮೀಯು ನರಸಿಂಹನ ಎಡ ತೊಡೆಯ ಮೇಲೆ ಕುಳಿತಿದ್ದಾಳೆ. ಬಲಕೈಯಲ್ಲಿ ಪದ್ಮ, ಎಡಕೈಯಲ್ಲಿ ನರಸಿಂಹನನ್ನು ಹಿಡಿದಿದ್ದಾಳೆ. ಹಿಂಭಾಗದಲ್ಲಿ ಪ್ರಭಾವಳಿ, ಮೇಲ್ಭಾಗದಲ್ಲಿ ಕೀರ್ತಿಮುಖವಿದೆ. ಇದು ಇಡೀ ಶಿಲ್ಪವನ್ನು ಅಲಂಕರಿಸಿದೆ. ಕೆಳಭಾಗದಲ್ಲಿ ಒಂದು ಅಡಿ ಎತ್ತರದ ಪೀಠಭಾಗದಲ್ಲಿ ವಿಷ್ಣುವಿನ ವಾಹನ ಗರುಡನನ್ನು ಮನುಷ್ಯನ ರೂಪದಲ್ಲಿ ಕೈ ಮುಗಿದು ಕುಳಿತಂತೆ ಚಿತ್ರಿಸಲಾಗಿದೆ. ದೇವಸ್ಥಾನವು ಸಂಪೂರ್ಣವಾಗಿ ಶಿಥಿಲವಾಗಿದೆ. ಹೊರಭಾಗದ ಭಿತ್ತಿ ಭಾಗವು ಅಲ್ಲಲ್ಲಿ ಹಾಳಾಗಿದೆ. ಶಿಖರವು ಪೂರ್ಣ ಹಾಳಾಗಿದ್ದು, ಕದಂಬ ನಾಗರಶೈಲಿಯ ಒಂದು ಪಟ್ಟಿಕೆ ಮಾತ್ರ ಕಂಡುಬರುತ್ತದೆ.

**ಕಲ್ಲೇಶ್ವರ ದೇವಾಲಯ ಅರಸೀಕೆರೆ (ಹರಪನಹಳ್ಳಿ ತಾ.)**

ನಿರಾಂದರ ಮಾದರಿಯ ಈ ದ್ವಿಕೂಟ ದೇವಸ್ಥಾನವು ಗುಡಿಹಳ್ಳಿಗೆ ಹೋಗುವ ಮಾರ್ಗದಲ್ಲಿ ಕೆರೆ ಏರಿಯ ಕೆಳಗೆ ಇದೆ. ಎರಡು ಗರ್ಭಗೃಹ ಒಂದು ಅಂತರಾಳ ಎರಡು ಗರ್ಭಗೃಹಕ್ಕೂ ಹೊಂದಿಕೊಂಡಂತೆ ಒಂದೇ ನವರಂಗ ಹೊಂದಿದೆ. ಪೂರ್ವಾಭಿಮುಖವಾಗಿರುವ ಈ ದೇವಸ್ಥಾನ ಎರಡು ಪ್ರವೇಶ ದ್ವಾರಗಳಿಂದ ಕೂಡಿದೆ(ಪೂರ್ವ ಮತ್ತು ದಕ್ಷಿಣ).

ಅಧಿಷಾ«ನವು ಬಹಳ ಸರಳವಾಗಿದ್ದು ಉಪಾನ, ಜಗತಿ, ಮಂಚ ಬಂಧದಿಂದ ಕೂಡಿದ ಭಿತ್ತಿಭಾಗವು ಬಹಳ ಸರಳವಾಗಿದ್ದು, ಚಜ್ಜಾ ಅಥವಾ ಕಪೋತ, ಶಿಖರ, ಶುಖನಾಸಿಯ ರಚನೆ ಕಂಡುಬರುವುದಿಲ್ಲ. ಎರಡು ಗರ್ಭಗೃಹದಲ್ಲಿ ಪಶ್ಚಿಮದ ಗರ್ಭಗೃಹ ಚಿಕ್ಕದಾಗಿದ್ದು ಇಲ್ಲಿ ಲಿಂಗವನ್ನು ಪ್ರತಿಷಾ«ಪಿಸಲಾಗಿದೆ. ಇದರ ದ್ವಾರವು ಬಹಳ ಸರಳವಾಗಿದ್ದು, ಇದಕ್ಕೆ ಹೊಂದಿಕೊಂಡಂತೆ

ಅಂತರಾಳವಿದೆ. ಇಲ್ಲಿ ಲಿಂಗಕ್ಕೆ ಅಭಿಮುಖವಾಗಿ ನಂದಿಯನ್ನು ಕೂರಿಸಲಾಗಿದೆ. ಉತ್ತರದ ಗೋಡೆಯಲ್ಲಿ ಇನ್ನೊಂದು ಗರ್ಭಗೃಹದ ರಚನೆ ಇದ್ದು ಇದರಲ್ಲಿ ಲಿಂಗ ಮತ್ತು ಅದರ ಪಕ್ಕದಲ್ಲಿ ನಾಗಶಿಲ್ಪಗಳು ಇವೆ. ಇದಕ್ಕೆ ದ್ವಾರದ ರಚನೆ ಇಲ್ಲ. ಈ ಎರಡು ಗರ್ಭಗೃಹಕ್ಕೂ ಹೊಂದಿಕೊಂಡಂತೆ ೧೨ ಕಂಬಗಳಿಂದ ಕೂಡಿದ ನವರಂಗವಿದೆ. ಮಧ್ಯದ ರಂಗಮಂಟಪವನ್ನು ಪ್ರತ್ಯೇಕವಾಗಿ ರಚಿಸಿದ ಹಾಗೆ ಕಂಡುಬರುತ್ತದೆ. ಇಲ್ಲಿನ ಗ್ರಾನೈಟ್ ಕಲ್ಲಿನ ಈ ಕಂಬಗಳು ಚೌಕಾಕಾರವಾಗಿದ್ದು ಸರಳವಾಗಿವೆ. ವೃತ್ತಾಕಾರದ ಫಲಕ ಹಾಗು ಸರಳ ಬೋದಿಗೆಯಿಂದ ಕೂಡಿದೆ.

ರಂಗಮಂಟಪದ ನಂತರ ನಂದಿ ವಿಗ್ರಹವಿದ್ದು ಪಶ್ಚಿಮದ ಗರ್ಭಗೃಹಕ್ಕೆ ಮುಖಮಾಡಿದೆ. ಎರಡು ಪ್ರವೇಶ ದ್ವಾರಗಳು ಒಂದೇ ಲಕ್ಷಣವನ್ನು ಹೊಂದಿದ್ದು ವಜ್ರಶಾಖೆ(ಪದ್ಮಶಾಖೆ), ಸ್ತಂಭಶಾಖೆ, ಆಲಂಕಾರಿಕ ಸ್ಥಂಭಶಾಖೆ(ಕುಂಭ, ದಾರ, ಪದ್ಮಗಳ) ಸರಳ ಪಟ್ಟಿಕೆ, ರತ್ನಶಾಖೆಯಿಂದ ಕೂಡಿದೆ. ರತ್ನಶಾಖೆಯು ಉತ್ತರಾಂಗ(ಲಲಾಟದ ಮೇಲಿನ ಭಾಗ)ದಲ್ಲಿ ಮುಂದುವರಿದುಕೊಂಡಿದೆ. ಲಲಾಟ ಬಿಂಬದಲ್ಲಿ 'ಗಜಲಕ್ಷ್ಮಿ' ಚಿತ್ರವಿದೆ. ನವರಂಗ, ಗರ್ಭಗೃಹದಲ್ಲಿ ಪದ್ಮ ಮುಚ್ಚಳಿಕೆಯಿಂದ ಮೇಲ್ಛಾವಣಿಯನ್ನು ಅಲಂಕರಿಸಲಾಗಿದೆ. ಈ ದೇವಾಲಯವನ್ನು ಗ್ರಾನೈಟ್ ಕಲ್ಲಿನಿಂದ ನಿರ್ಮಿಸಲಾಗಿದೆ.

**ಕಲ್ಲೇಶ್ವರ ದೇವಸ್ಥಾನ ಚಟ್ನಿಹಳ್ಳಿ (ಹರಪನಹಳ್ಳಿ ತಾ.)**

ಕ್ರಿ.ಶ. ೧೧೪೬ರ ಶಾಸನ ವೀರಪಾಂಡ್ಯನು ಆಳುತ್ತಿರುವಾಗ ದಂಡನಾಯಕ ಉಚ್ಚಂಗಿಯನ್ನು ಆಳುತ್ತಿದ್ದು ಮಾಕೆರೆಯಲ್ಲಿ ದೇವಾಲಯವನ್ನು ಮಾಡಿಸಿ ವೀರಪಾಂಡ್ಯದೇವನಿಗೆ ಅಜೇಯ ರಾಯಪಾಂಡ್ಯದೇವನಿಗೆ ಪುಣ್ಯವಾಗಲಿ ಎಂದು ಬಿನ್ನೈಸಿದಾಗ ವೀರಪಾಂಡ್ಯನು ಅಜೇಯರಾಯ ಪಾಂಡ್ಯ ಮತ್ತು ರಾಣಿ ಸೋವಲದೇವಿಗೆ ಪುಣ್ಯವಾಗಲೆಂದು ನ್ಯೊಯ್ಯೇಶ್ವರ ದೇವರ ಸತ್ರಕ್ಕೆ ಹದಿನಾರು ಬ್ರಾಹ್ಮಣರ ಗ್ರಾಸಕ್ಕಾಗಿ ದಾನ ಬಿಟ್ಟ.[೨೫]

ಶಾಸನಗಳಲ್ಲಿ ಕಲ್ಲೇಶ್ವರ ದೇವರನ್ನು ಮಾಕೆರೆಯ "ನೊಯ್ಯೇಶ್ವರ"ವೆಂದು ಉಲ್ಲೇಖಿಸಲಾಗಿದೆ. ದಕ್ಷಿಣಾಭಿಮುಖವಾಗಿರುವ ಈ ತ್ರಿಕೂಟೇಶ್ವರ ದೇವಾಲಯವು ಪಶ್ಚಿಮದಲ್ಲಿ ಗರ್ಭಗೃಹ, ಅಂತರಾಳ, ಪೂರ್ವ ಮತ್ತು ಉತ್ತರದಲ್ಲಿ ಗರ್ಭಗೃಹ ನವರಂಗ ಮತ್ತು ಮುಖಮಂಟಪವನ್ನು ಹೊಂದಿದೆ.

ಅಧಿಷ್ಠಾನವು ಬಹಳ ಸರಳವಾಗಿದ್ದು ಉಪಾನ, ಜಗತಿ, ಪದ್ಮಗಳನ್ನು ಹೊಂದಿದೆ. ಭಿತ್ತಿ ಕೂಡ ಬಹಳ ಸರಳವಾಗಿದೆ. ಪ್ರಸ್ತಾರದ ರಚನೆ ಇದ್ದು ಇದರ ಮೇಲೆ ಕಳಿಂಗ ನಾಗರಶೈಲಿಯ ಶಿಖರ ಹೊಂದಿದ್ದು ಇದರ ಮೇಲೆ ಕಲಶವಿದೆ. ಆದರೆ ಕಲಶ ಇಂದು ಕಾಣುವುದಿಲ್ಲ. ಅಂತರಾಳದ ಮೇಲೆ ಹೊಯ್ಸಳ ಮಾದರಿಯ ಸುಕನಾಸಿ ಹೊಂದಿದೆ.

ಪಶ್ಚಿಮದ ಗರ್ಭಗೃಹದಲ್ಲಿ ಲಿಂಗವಿದೆ. ಇದಕ್ಕೆ ಹೊಂದಿಕೊಂಡಂತೆ ಅಂತರಾಳವಿದ್ದು ಗರ್ಭಗೃಹದ ದ್ವಾರವು ಬಹಳ ಸರಳವಾಗಿದೆ. ಅಂತರಾಳದ ದ್ವಾರ ಜಾಲಂದ್ರ ಶಾಖೆಯನ್ನು ಹೊಂದಿದೆ. ಪೂರ್ವದಲ್ಲಿ ಗರ್ಭಗೃಹ ಮಾತ್ರವಿದ್ದು ಇದರಲ್ಲಿ ಲಿಂಗಕ್ಕೆ ಅಭಿಮುಖವಾಗಿ ನಂದಿಮೂರ್ತಿಯಿದೆ. ದ್ವಾರವು ಸ್ತಂಭಶಾಖೆಯಿಂದ ಕೂಡಿದ್ದು ಪೇದ್ಯ ಭಾಗದಲ್ಲಿ ಜಯ ವಿಜಯ ಶಿಲ್ಪಗಳಿವೆ. ಲಲಾಟದಲ್ಲಿ

'ಗಜಲಕ್ಷ್ಮಿ ಶಿಲ್ಪ'ವನ್ನು ಚಿತ್ರಿಸಲಾಗಿದೆ. ಲಲಾಟದ ಮೇಲೆ ಶಿಖರಗಳಿದ್ದು ಮಧ್ಯದಲ್ಲಿ ಸಿಂಹದ ಶಿಲ್ಪಗಳು ಇವೆ. ಉತ್ತರದ ಗರ್ಭಗೃಹದಲ್ಲಿ ಲಿಂಗವಿದೆ. ದ್ವಾರವು ವಜ್ರಶಾಖೆ, ಸ್ತಂಭಶಾಖೆಯಿಂದ ಕೂಡಿದ್ದು ಸ್ತಂಭಶಾಖೆಯ ಪೇದ್ಯಭಾಗದಲ್ಲಿ ಕುಂಭಗಳಿದ್ದು ಇವು ಸ್ತಂಭಗಳನ್ನು ಹೊತ್ತು ನಿಂತಂತೆ ಚಿತ್ರಿಸಲಾಗಿದೆ. ಪೂರ್ವದ ಗರ್ಭಗೃಹದಲ್ಲಿ ಯಾವುದೇ ಶಿಲ್ಪ ಮತ್ತು ಪ್ರವೇಶದ್ವಾರ ಇರುವುದಿಲ್ಲ. ಗೋಡೆಯ ಮಧ್ಯದಲ್ಲಿ ಸಣ್ಣ ಕಿಂಡಿಯನ್ನು ಬಿಡಲಾಗಿದೆ.

ಈ ಮೂರು ಗರ್ಭಗೃಹಕ್ಕೆ ಹೊಂದಿಕೊಂಡಂತೆ ನವರಂಗವಿದ್ದು ಚೌಕ ಕಂಬಗಳಿಂದ ಕೂಡಿದೆ. ಉತ್ತರ ಗರ್ಭಗೃಹಕ್ಕೆ ಅಭಿಮುಖವಾಗಿ ದಕ್ಷಿಣದಲ್ಲಿ ಪ್ರವೇಶದ್ವಾರವನ್ನು ಹೊಂದಿದೆ ಪ್ರವೇಶದ್ವಾರ ಬಹಳ ಕಿರಿದಾಗಿದ್ದು ಸರಳವಾಗಿದೆ. ಮುಖಮಂಟಪ ಕೂಟ ಸ್ತಂಭಗಳಿಂದ ಕೂಡಿದ್ದು ಮೇಲೆ ಇಳಿಜಾರಾದ ಕೂಟ ವ್ಯವಸ್ಥೆಯನ್ನು ಹೊಂದಿ ದೇವಸ್ಥಾನದ ಸೌಂದರ್ಯವನ್ನು ಹೆಚ್ಚಿಸಿದೆ. ಈ ದೇವಾಲಯ ಅವಸಾನದ ಅಂಚಿನಲ್ಲಿದೆ.

**ಕಲ್ಲೇಶ್ವರ ದೇವಸ್ಥಾನ: ಗಡಿಗುಡಾಳ್ (ಹರಪನಹಳ್ಳಿ ತಾ.)**

ತುಂಬಿಗೇರಿ ರಸ್ತೆಯ ಹಗರಿ ಹಳ್ಳದ ಮೇಲೆ ಈ ದೇವಸ್ಥಾನವಿದೆ. ಪೂರ್ವಾಭಿಮುಖವಾಗಿರುವ ಈ ತ್ರಿಕೂಟೇಶ್ವರ ದೇವಾಲಯವು ಮೂರು ಗರ್ಭಗೃಹ, ಅಂತರಾಳ, ನವರಂಗ ಹೊಂದಿದೆ. ಸರಳವಾದ ಅಧಿಷ್ಠಾನವಿದ್ದು ಉಪಾನ, ಜಗತಿಗಳಿಂದ ಕೂಡಿದೆ. ಅಲಂಕಾರ ರಹಿತವಾದ ಸರಳವಾದ ಭಿತ್ತಿಯ ರಚನೆ ಕಂಡುಬರುತ್ತದೆ. ಕಪೋತ ಶಿಖರಗಳ ಬದಲಾಗಿ ಕೈಪಿಡಿಗೋಡೆಯನ್ನು ಹೊಂದಿದೆ.

ಪಶ್ಚಿಮದ ಗರ್ಭಗೃಹದಲ್ಲಿ ಶಿವಲಿಂಗ, ನಾಗಶಿಲ್ಪ, ಗಣೇಶ, ಶಿವನ ಮೂರ್ತಿಶಿಲ್ಪಗಳು ಇವೆ. ಸರಳವಾದ ದ್ವಾರಬಂಧವನ್ನು ಹೊಂದಿದೆ. ಅಂತರಾಳದಲ್ಲಿ ಗರ್ಭಗೃಹಕ್ಕೆ ಅಭಿಮುಖವಾಗಿ ನಂದಿ ಮೂರ್ತಿಯಿದೆ. ಇದರ ದ್ವಾರವು ಸರಳವಾಗಿದೆ. ಉತ್ತರ ಮತ್ತು ದಕ್ಷಿಣದ ಗರ್ಭಗೃಹಗಳಲ್ಲಿ ಯಾವುದೇ ಮೂರ್ತಿಗಳು ಇಲ್ಲ. ಇವುಗಳ ದ್ವಾರವು ಬಹಳ ಸರಳವಾಗಿದ್ದು, ಇವುಗಳಿಗೆ ಹೊಂದಿಕೊಂಡಂತೆ ನವರಂಗವಿದ್ದು ಅಂತರಾಳದ ಗೋಡೆಯ ಎರಡು ಕಡೆಗಳಲ್ಲಿ ಸಣ್ಣ ಚೌಕಾಕಾರದ ಕಿಂಡಿಗಳನ್ನು ಬಿಡಲಾಗಿದೆ. ನವರಂಗ ಚೌಕ ಕಂಬಗಳಿಂದ ಕೂಡಿದ್ದು ಬಹಳ ಸರಳವಾಗಿದೆ. ಮೇಲ್ಛಾವಣಿಯು ಪದ್ಮಮುಚ್ಚಳಿಕೆಯಿಂದ ಅಲಂಕೃತಗೊಂಡಿದೆ. ಪ್ರವೇಶ ದ್ವಾರವು ಬಹಳ ಸರಳವಾಗಿದೆ. ಮುಖಮಂಟಪದ ರಚನೆ ಇಲ್ಲಿ ಕಂಡುಬರುವುದಿಲ್ಲ. ಯಾವುದೇ ಧಾರ್ಮಿಕ ಚಟುವಟಿಕೆಗಳು ಪ್ರಸ್ತುತ ಸಂದರ್ಭದಲ್ಲಿ ನಡೆಯದೇ ಅವಸಾನದ ಅಂಚಿನಲ್ಲಿದೆ.

**ರಾಮೇಶ್ವರ ದೇವಾಲಯ: ರಾಮಘಟ್ಟ (ಹರಪನಹಳ್ಳಿ ತಾ.)**

ರಾಮಘಟ್ಟದ ಹೊರವಲಯದಲ್ಲಿ ಪಶು ಆಸ್ಪತ್ರೆಯ ಹತ್ತಿರವಿದೆ. ದೇವಸ್ಥಾನ ಸಂಪೂರ್ಣವಾಗಿ ನೆಲಸಮವಾಗಿದ್ದು, ಗಿಡಗಂಟೆಗಳಿಂದ ಆವೃತವಾಗಿದೆ. ಇಲ್ಲಿ ಲಿಂಗ ಮತ್ತು ನಂದಿಮೂರ್ತಿಗಳು ಇವೆ. ಇಲ್ಲಿ ಒಂದು ಶಾಸನವಿದ್ದು, ಅದು ಒಡೆದು ಹೋಗಿದೆ. ಕ್ರಿ.ಶ.೧೧೨೨ರ ಈ ಶಾಸನ[೨೮೦]

ಹಾಲಮರಸನು ಸ್ವಂತ ಹಣದಲ್ಲಿ ಕಟ್ಟಿಸಿದ ದೇವಾಲಯಕ್ಕೆ ತ್ರಿಭುವನಮಲ್ಲರಾಯನಿಗೆ ನಿವೇದಿಸಿ ರಾಮಘಟ್ಟದ ರಾಮೇಶ್ವರ ದೇವರಿಗೆ ಭೂದಾನ ನೀಡಿದ. ಇದೇ ಸಮಯದಲ್ಲಿ ರಾಮಘಟ್ಟದ ಊರೊಡೆಯ ತಿಕಮಯ್ಯನು ರಾಮೇಶ್ವರ ದೇವರಿಗೆ ತ್ರಿಕೂಟ ದೇವಾಲಯವನ್ನು ಸ್ವಂತ ಹಣದಿಂದ ಮಾಡಿಸಿ ದಾನ ಬಿಟ್ಟ ಉಲ್ಲೇಖವಿದೆ.

**ಕಲ್ಲೇಶ್ವರ ದೇವಸ್ಥಾನ : ಅಲಗಿಲವಾಡ (ಹರಪನಹಳ್ಳಿ ತಾ.)**

ಗ್ರಾಮದಿಂದ ಸ್ವಲ್ಪ ದೂರದಲ್ಲಿ ರಸ್ತೆಯ ಬದಿಯಲ್ಲಿ ಈ ದೇವಸ್ಥಾನವಿದೆ. ಇಲ್ಲಿ ಎರಡು ಶಾಸನಗಳು ಒಂದು ವೀರಗಲ್ಲು ಹಾಗೂ ನಾಗಶಿಲ್ಪಗಳು ಕಂಡು ಬರುತ್ತವೆ. ನಿರಂದರ ಮಾದರಿಯ ದ್ವಿಕೂಟ ದೇವಾಲಯ ದಕ್ಷಿಣಾಭಿಮುಖವಾಗಿದೆ. ದಕ್ಷಿಣದ ಗರ್ಭಗೃಹ ತೆರೆದ ಅಂತರಾಳ, ನವರಂಗ. ಪೂರ್ವದ ಗರ್ಭಗೃಹ ನವರಂಗಕ್ಕೆ ಹೊಂದಿಕೊಂಡಿದೆ. ದಕ್ಷಿಣದ ಗರ್ಭಗೃಹದಲ್ಲಿ ಲಿಂಗವನ್ನು ಪ್ರತಿಷ್ಠಾಪಿಸಿದ್ದು, ನವರಂಗದಲ್ಲಿ ಎರಡು ನಂದಿಗಳಿವೆ. ಪೂರ್ವದ ಗರ್ಭಗೃಹದಲ್ಲಿ ಸೂರ್ಯಶಿಲ್ಪ ಮತ್ತು ವಿಷ್ಣುಶಿಲ್ಪಗಳು ಇವೆ. ನವರಂಗದಲ್ಲಿ ಸಪ್ತಮಾತ್ರಿಕೆ, ಸೂರ್ಯ, ವಿಷ್ಣು, ಭೈರವಿ, ಸರಸ್ವತಿ ಶಿಲ್ಪಗಳು ಕಂಡು ಬರುತ್ತವೆ. ಗರ್ಭಗೃಹ ಮತ್ತು ನವರಂಗದ ಮೇಲ್ಛಾವಣಿಯನ್ನು ಪುಷ್ಪಭೋದಿಗೆಯಿಂದ ಅಲಂಕರಿಸಲಾಗಿದೆ.

ಹೊರಭಾಗದ ಭಿತ್ತಿ ಸರಳವಾಗಿದ್ದು, ಶಿಖರ ಭಾಗ ಹಾಗೂ ಮುಖಮಂಟಪ ಸಂಪೂರ್ಣವಾಗಿ ಶಿಥಿಲಗೊಂಡಿದೆ. ಅದರ ಕೆಲವು ಅವಶೇಷಗಳು ಅಲ್ಲಿ ಕಂಡುಬರುತ್ತವೆ. ಪ್ರಸ್ತಾರದ ಮೇಲ್ಭಾಗದಲ್ಲಿರುವ ಪಂಸಾನ ಅಥವಾ ಕದಂಬ ನಾಗರಿಕ ಶೈಲಿಯ ಶಿಖರವನ್ನು ಹೊಂದಿದೆ. ಈ ದೇವಾಲಯದಲ್ಲಿ ಒಂದೇ ಶೈಲಿಯ ಎರಡೆರಡು ಶಿಲ್ಪಗಳಿದ್ದು, ಇವುಗಳು ಭಗ್ನವಾಗಿರುವುದು ಕಂಡುಬರುತ್ತದೆ.

ಕ್ರಿ.ಶ. ೧೨೮೭ರ ಶಾಸನ ತಿಳಿಸುವಂತೆ ಸ್ವಸ್ತಿಶ್ರೀ ಸಕವರಷ ೧೨೦೯ನೆಯ ಸರ್ವ್ವಜಿತು ಸಂವತ್ಸವರದ ವೈಶಾಖ ಬ೨ ಶನಿವಾರದಲ್ಲಿ ಶ್ರೀಮತು ವೀರಸೋವ ನಾ ಅರಗಿಲವಾಡ ಊರಳಿವಿನಲ್ಲಿ ಹೊಳಲಕೆರೆಯ ಬಣ್ಣಜಿಗ ಸಿಂಗಯ್ಯನ ತಮ್ಮ ಹಂಪಸೆಟ್ಟಿ(ಹರಿಪಸೆಟ್ಟಿ) ಕಾದಿ ಮುಂದಣ ಭವರಗೆಲಿದು ಸ್ವರ್ಗಸ್ಥನಾದ ಎಂದು ತಿಳಿಸುತ್ತದೆ. ಈ ಶಾಸನದಂತೆ ಊರಳಿವಿನ ಸಂದರ್ಭದಲ್ಲಿ ದೇವಾಲಯದಲ್ಲಿರುವ ಪ್ರಾರಂಭದ ಶಿಲ್ಪಗಳು ಭಗ್ನವಾಗಿದ್ದರಿಂದ ಆನಂತರದಲ್ಲಿ ಅದೇ ರೂಪದ ಶಿಲ್ಪಗಳನ್ನು ಮಾಡಿಸಿರುವ ಸಾಧ್ಯತೆ ಇದೆ.

**ಶಂಕರಲಿಂಗ ದೇವಾಲಯ : ಉತ್ತಂಗಿ (ಹೂವಿನಹಡಗಲಿ ತಾ.)**

ಗ್ರಾಮದ ಬಸ್‌ನಿಲ್ದಾಣದ ಹತ್ತಿರದಲ್ಲಿರುವ ಇದು ದಕ್ಷಿಣಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ. ೧೧೫೦ರಲ್ಲಿ ವೀರಪಾಂಡ್ಯ ದೇವನು ನೊಳಂಬವಾಡಿ-೩೨೦೦೦ವನ್ನು ಆಳುತ್ತಿದ್ದಾಗ ಕೋಗಳಿ ನಾಡಿನ ಉತ್ತಂಗಿಯಲ್ಲಿ ಸೌದರ ಬಸವಯ್ಯನು ಬಸವೇಶ್ವರ ದೇವಾಲಯವನ್ನು ಕಟ್ಟಿಸಿ ಅದರ ಸೇವಾಕಾರ್ಯಗಳಿಗೆ ಭೂದಾನ ಮಾಡಿರುವುದರ

ಬಗ್ಗೆ ದೇವಾಲಯದ ನವರಂಗದ ಭಿತ್ತಿ ಭಾಗದಲ್ಲಿರುವ ಶಾಸನವು ತಿಳಿಸುತ್ತದೆ.[೨೮೧] ಇದು ಮಧ್ಯಮ ಸ್ಥಿತಿಯಲ್ಲಿದೆ. ಈ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ ಮತ್ತು ವಿಶಾಲವಾದ ಸಭಾಮಂಟಪಗಳಿಂದ ಕೂಡಿದೆ. ಚೌಕಾಕಾರವಾಗಿರುವ ಗರ್ಭಗೃಹದಲ್ಲಿ ಶಿವಲಿಂಗವಿದೆ. ಗರ್ಭಗೃಹದ ಒಳಭಿತ್ತಿಯು ಮುಂಚಾಚಿದೆ. ಗರ್ಭಗೃಹ ಮತ್ತು ಅಂತರಾಳದ ಬಾಗಿಲುವಾಡಗಳು ಸರಳವಾಗಿವೆ. ಆದರೆ ಅಂತರಾಳದ ಬಾಗಿಲುವಾಡದ ಇಕ್ಕೆಲಗಳಲ್ಲಿ ಪದ್ಮದಳಾಕಾರವುಳ್ಳ ಜಾಲಂಧ್ರಗಳು ಮತ್ತು ದೇವಕೋಷ್ಠಗಳಿವೆ.

ವಿಶಾಲವಾದ ಸಭಾಮಂಟಪದ ಮಧ್ಯದ ವೇದಿಕೆಯ ಮೇಲೆ ಕಲ್ಯಾಣ ಚಾಳುಕ್ಯರ ಮಾದರಿಯ ನಾಲ್ಕು ಸ್ವತಂತ್ರ ಕಂಬಗಳನ್ನು ನಿಲ್ಲಿಸಲಾಗಿದೆ. ಮಧ್ಯದ ಭುವನೇಶ್ವರವು ಪದ್ಮದಳಾದಾಕಾರದಲ್ಲಿದೆ. ನವರಂಗದಲ್ಲಿ ಒಟ್ಟು ಐದು ದೇವಕೋಷ್ಠಗಳಿವೆ. ನವರಂಗದ ಬಾಗಿಲುವಾಡವು ಸರಳವಾಗಿದ್ದು, ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಇದ್ದಾಳೆ ಹಾಗೂ ಮುಂಭಾಗದಲ್ಲಿ ಎರಡು ಸಣ್ಣ ಕೋಣೆಯ ರಚನೆಗಳಿವೆ.

**ಬಸವೇಶ್ವರ ದೇವಾಲಯ : ಉತ್ತಂಗಿ (ಹೂವಿನಹಡಗಲಿ ತಾ.)**

ಉತ್ತಂಗಿ ಗ್ರಾಮದ ಕೋಟೆ ಭಾಗದ ಆಂಜನೇಯ ದೇವಸ್ಥಾನದ ಹಿಂಭಾಗ ಅಥವಾ ಮುದ್ದೇರೋಣಿಯಲ್ಲಿರುವ ಈ ದೇವಸ್ಥಾನ ಪಶ್ಚಿಮ ಅಭಿಮುಖವಾಗಿದ್ದು ಗ್ರಾಮದ ವಾಸು ಮನೆಗಳ ಮಾದರಿಯಲ್ಲಿ ನಿರ್ಮಾಣವಾಗಿದೆ. ಈ ದೇವಸ್ಥಾನವನ್ನು ಕ್ರಿ.ಶ. ೨೦೦೮ರಲ್ಲಿ ಪೂರ್ಣಪ್ರಮಾಣದಲ್ಲಿ ನವೀಕರಿಸಲಾಗಿದೆ. ಶಂಕರಲಿಂಗ ದೇವಸ್ಥಾನದ ಗೋಡೆಯಲ್ಲಿರುವ ಶಾಸನದಲ್ಲಿ ತಿಳಿಸುವಂತೆ ಬಸವೇಶ್ವರ ನಿರ್ಮಿಸಿದ ಬಸವೇಶ್ವರ ದೇವಸ್ಥಾನ ಇದೆ ಇರಬಹುದೆಂಬುದು ನನ್ನ ಊಹೆಯಾಗಿದೆ. ಈ ಕುರಿತು ಗ್ರಾಮಸ್ಥರನ್ನು ವಿಚಾರಿಸಿದಾಗ ಇದು ಅತಿ ಪುರಾತನ ದೇವಾಲಯವಾಗಿದ್ದು ಗ್ರಾಮದಲ್ಲಿ ಬಯಲಾಟ, ದೊಡ್ಡಾಟಗಳು ನಡೆದರೆ ಈ ದೇವಸ್ಥಾನದಲ್ಲಿ ನಾಟಕದ ಪಾತ್ರಧಾರಿಗಳಿಗೆ ಬಣ್ಣ ಮತ್ತು ವಸ್ತ್ರವಿನ್ಯಾಸ ಮಾಡಿ ಈ ದೇವಾಲಯದ ಮುಂಭಾಗದಲ್ಲಿ ನಾಟಕವಾಡಿದರೆ ಅದು ಯಶಸ್ವಿಯಾಗುತ್ತದೆಂಬ ನಂಬಿಕೆ ಈಗಲೂ ಆ ಗ್ರಾಮದಲ್ಲಿ ಜೀವಂತವಾಗಿ ಉಳಿದಿದೆ.

**ಸೋಮೇಶ್ವರ ದೇವಾಲಯ: ಹೊಳಗುಂದಿ (ಹೂವಿನಹಡಗಲಿ ತಾ.)**

ಪೂರ್ವಾಭಿಮುಖವಾಗಿರುವ ದೇವಾಲಯದ ನಿರ್ಮಾಣದ ಕುರಿತು ಕ್ರಿ.ಶ. ೧೧೬೯ಕ್ಕೆ ವಿಜಯ ಪಾಂಡ್ಯದೇವನು ನೊಳಂಬವಾಡಿ-೩೨೦೦೦ ಆಳುತ್ತಿರುವಾಗ ಹೊಳಗುಂದಿಯನ್ನು ಆಳಿದ ಮಲ್ಲಿನಾಥನು ಮಲ್ಲಿನಾಥ ದೇವರಿಗೆ ಬಸದಿ ಕಟ್ಟಿಸಿ ದೇವರ ಬಳಿ ಶ್ರೀ ಬಾ...ಶ್ವರ ಜೋಗವಟ್ಟಿಗೆಯ ಬಸದಿ. ಮಾಡಿಸಿ ದಾನ ನೀಡಿದ ಬಗ್ಗೆ ದೇವಾಲಯದ ಒಳಗಿರುವ ಜಿನಶಾಸನ ತಿಳಿಸುತ್ತದೆ.[೨೮೨] ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕಣಶಿಲೆಯಲ್ಲಿ ನಿರ್ಮಾಣವಾಗಿದೆ. ಮಧ್ಯಮ ಸ್ಥಿತಿಯಲ್ಲಿರುವ ಈ ದೇವಾಲಯ ಎತ್ತರವಾದ ಜಗತಿಯ

ಮೇಲೆ ನಿರ್ಮಾಣವಾಗಿದೆ. ತಲವಿನ್ಯಾಸದಲ್ಲಿ ಗರ್ಭಗೃಹ, ತೆರೆದ ಅಂತರಾಳ ಮತ್ತು ಸಭಾಮಂಟಪಗಳಿಂದ ಕೂಡಿದೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ಬಾಗಿಲುವಾಡವು ಸರಳವಾಗಿದ್ದು, ಇಕ್ಕೆಲಗಳಲ್ಲಿ ಕುಂಭಗಳಿವೆ. ಲಲಾಟಬಿಂಬದಲ್ಲಿ ತೀರ್ಥಂಕರನ ಉಬ್ಬುಶಿಲ್ಪವಿದೆ. ತೆರೆದ ಅಂತರಾಳ ದಲ್ಲಿ ನಂದಿ ವಿಗ್ರಹವಿದೆ. ಸಭಾಮಂಟಪ ನಾಲ್ಕು ಚೌಕಾಕಾರದ ಕಂಬಗಳು ಮೇಲೆ ಕೆಳಗೆ ಚೌಕ ಪಟ್ಟಿಕೆಗಳನ್ನು ಫಲಕ, ಬೋದಿಗೆಗಳನ್ನು ಹೊಂದಿದೆ. ಸಭಾಮಂಟಪದ ಮಧ್ಯದಲ್ಲಿ ಅಲಂಕೃತ ಭುವನೇಶ್ವರಿ ಇದೆ. ಹನ್ನೆರಡು ಅರ್ಧಗಂಬಗಳಿವೆ. ಸಭಾಮಂಟಪದ ಪ್ರವೇಶಕ್ಕೆ ಸೋಪಾನಗಳಿವೆ. ಸಭಾಮಂಟಪದ ಬಾಗಿಲುವಾಡವು ಅರ್ಧಗಂಬ, ಹೂವಿನ ಎಸಳು, ಪದ್ಮಗಳಿಂದ ಅಲಂಕೃತಗೊಂಡಿದೆ. ಮುಖಮಂಟಪದ ಸುತ್ತಲೂ ಕಕ್ಷಾಸನವಿದೆ. ಮುಖಮಂಟಪವು ಎರಡು ಪೂರ್ಣಕಂಬ ಎರಡು ಅರ್ಧಗಂಬಗಳಿಂದ ಕೂಡಿದೆ.

ಸೋಮೇಶ್ವರ ದೇವಾಲಯ ಮೂಲತಃ ಜೈನಬಸದಿಯಾಗಿತ್ತು. ನಂತರದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಿ ಶೈವ ದೇವಾಲಯವನ್ನಾಗಿ ಪರಿವರ್ತಿಸಲಾಗಿರುವುದನ್ನು ಇಲ್ಲಿನ ವಾಸ್ತು ಕುರುಹುಗಳು ಸೂಚಿಸುತ್ತವೆ. ಅಲ್ಲದೆ ಇಲ್ಲಿರುವ ಶಾಸನವೊಂದು ಇದು ಮೂಲತಃ ಜೈನ ದೇವಾಲಯ ವಾಗಿತ್ತೆಂಬುದನ್ನು ಉಲ್ಲೇಖಿಸಿದೆ. ಶಾಸನದ ಮೇಲ್ಭಾಗದಲ್ಲಿ ಜಿನ ಶಿಲ್ಪವಿದೆ.

ಇಲ್ಲಿನ ಶಾಸನ ನಾಚಿದೇವನ ಹೆಸರನ್ನು ಉಲ್ಲೇಖಿಸುತ್ತದೆ. ಹೊಳಗುಂದಿಯನ್ನು ಆಳಿದ ಮಲ್ಲಿನಾಥನು ಮಲ್ಲಿನಾಥ ದೇವರಿಗೆ ಬಸದಿ ಕಟ್ಟಿಸಿ, ಮೂಲಸಂಘ ಸೂರಸ್ತಗಣದ ಚಿತ್ರಕೂಟ್ಟೆಗಚ್ಚಕ್ಕೆ ಸೇರಿದ ನಾಗಚಂದ್ರ ಭಟ್ಟಾರಕನ ಎದುರಿನಲ್ಲಿ ದೇವರ ಸೇವಾಕಾರ್ಯಗಳಿಗಾಗಿ ಭೂದಾನ ಮಾಡಿದನು.

**ಈಶ್ವರ ದೇವಾಲಯ (ಗೌರಮ್ಮ ಗುಡಿ) : ಸೋಗಿ (ಹೂವಿನಹಡಗಲಿ ತಾ.)**

ಗ್ರಾಮದ ಕಲ್ಲೇಶ್ವರ ದೇವಾಲಯದ ಹಿಂಭಾಗದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಬಸಂತಿ ನಾಯಕನ ಆತನ ಮಕ್ಕಳಾದ ಮೂರು ಜನ ಸಹೋದರರಾದ ನಾಗವರ್ಮಯ್ಯ ನಾಯಕ, ಕಾರಮಯ್ಯ ನಾಯಕ ಮತ್ತು ಮಹಾದೇವಯ್ಯ ನಾಯಕರು ವತ್ಸ ಗೋತ್ರದ ಬ್ರಾಹ್ಮಣರಾಗಿದ್ದು ನಾಗವರ್ಮಯ್ಯ ನಾಯಕ ಕಟ್ಟಿಸಿದ ಕೇಶದೇವರ ಸೇವಾ ಕಾರ್ಯಗಳಿಗೆ ದಾನ ನೀಡಿರುವುದನ್ನು ದಬ್ಬಗುಡಿಯ ನವರಂಗದಲ್ಲಿರುವ ಶಾಸನ ತಿಳಿಸುತ್ತದೆ. ಇಂದು ಗೌರಿ ದೇವಾಲಯವೆಂದು ಕರೆಯುವ ಈಶ್ವರ ದೇವಾಲಯವೇ ಈ ಶಾಸನದಲ್ಲಿ ತಿಳಿಸುವ ಕೇಶವ ದೇವಾಲಯವಾಗಿರಬಹುದು.

ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಮಧ್ಯಮ ಸ್ಥಿತಿಯಲ್ಲಿದೆ. ಈ ದೇವಾಲಯವು ಗರ್ಭಗೃಹ ಮತ್ತು ಅಂತರಾಳ ಭಾಗಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಎರಡು ಅಡಿ ಎತ್ತರವುಳ್ಳ ಶಿವಲಿಂಗವಿದೆ. ಗರ್ಭಗೃಹದ ಉತ್ತರ ದಿಕ್ಕಿನ ಒಳಭಿತ್ತಿಯು ಮುಂಚಾಚಿದೆ. ಗರ್ಭಗೃಹ ಮತ್ತು ಅಂತರಾಳಗಳಲ್ಲಿ ಪದ್ಮದಳಾಕಾರವುಳ್ಳ ಸುಂದರವಾದ ಭುವನೇಶ್ವರಿವಿದೆ. ಹಾಗೆಯೇ

ಗರ್ಭಗೃಹ ಮತ್ತು ಅಂತರಾಳದ ಬಾಗಿಲುವಾಡ ಸರಳವಾಗಿದೆ. ಅಂತರಾಳದ ಬಾಗಿಲವಾಡದ ಇಕ್ಕೆಲಗಳಲ್ಲಿ ವಜ್ರಾಕಾರವುಳ್ಳ ಜಾಲಂಧ್ರವಿದೆ. ದೇವಾಲಯದ ಭಿತ್ತಿಯನ್ನು ಒರಟಾದ ಕಲ್ಲುಗಳನ್ನು ಬಳಸಿ ಕಟ್ಟಲಾಗಿದೆ. ಶಿಖರ ಭಾಗದಲ್ಲಿ ಒರಟಾದ ಕಲ್ಲುಹಾಸುಗಳನ್ನು ಹಾಕಲಾಗಿದೆ. ಇದನ್ನು ಸ್ಥಳೀಯರು ಗೌರಮ್ಮನ ಗುಡಿ ಎಂದು ಕರೆಯುತ್ತಾರೆ. ಕಾರಣ ಅಲ್ಲಿ ಪ್ರತಿ ವರ್ಷ ಗೌರಿಹುಣ್ಣಿಮೆಯಂದು ಗೌರಿಯನ್ನು ದೇವಸ್ಥಾನದಲ್ಲಿ ಪ್ರತಿಷ್ಠಾಪಿಸಿ ಹೆಣ್ಣುಮಕ್ಕಳು ಆರತಿ ಬೆಳಗಲು ಬರುತ್ತಾರೆ ಎಂದು ಪೂಜಾರಿ ಹೇಳುತ್ತಾರೆ.

**ಮಹೇಶ್ವರ ದೇವಾಲಯ : ಗಾರೆಹಟ್ಟಿ (ಚಿತ್ರದುರ್ಗ ತಾ.)**

ನಿರಂದರ ಮಾದರಿಯ ಮಹೇಶ್ವರ ದೇವಾಲಯವು ಗರ್ಭಗೃಹ, ಅರ್ಧಮಂಟಪ, ತೆರೆದ ಸಭಾಮಂಟಪ ಹಾಗೂ ಮುಂಭಾಗದಲ್ಲಿ ನಂದಿ ಮಂಟಪಗಳುಳ್ಳ ಪ್ರಾಚೀನ ದೇವಾಲಯವಿದು. ಗರ್ಭಗೃಹದಲ್ಲಿ ಎರಡೂವರೆ ಅಡಿಗಳೆತ್ತರದ ಕಪ್ಪುಶಿಲೆಯ ಪ್ರತಿಷ್ಠಾಪನ ಶಿವಲಿಂಗವಿದೆ. ಅರ್ಧಮಂಟಪದಲ್ಲಿ ಎರಡು ಚಚ್ಚೌಕ, ವೃತ್ತ ಹಾಗೂ ಅಷ್ಟಮುಖಗಳಲ್ಲಿ ಕಡೆಯಲಾದ ಕಂಬಗಳಿವೆ. ಸಭಾಮಂಟಪದ ಸುತ್ತಲೂ ಇದೇ ಬಗೆಯ ಕಂಬಗಳನ್ನು ಕಾಣಬಹುದು. ಹಿಂದೆ ಈ ದೇಗುಲದ ಸಭಾಮಂಟಪವು ತೆರೆದ ಸಭಾಮಂಟಪವಾಗಿತ್ತು; ಸಭಾಮಂಟಪದಲ್ಲಿ ಈಗ ಸುತ್ತಲೂ ಗೋಡೆಯನ್ನು ನಿರ್ಮಿಸಲಾಗಿದೆ. ಸಭಾಮಂಟಪದ ಸುತ್ತಲೂ ಭಕ್ತರು ವಿಶ್ರಮಿಸಿಕೊಳ್ಳಲೆಂದು ನಿರ್ಮಿಸಿದ ಕಕ್ಷಾಸನವಿದೆ. ದೇಗುಲದ ಗರ್ಭಗೃಹದ ಮೇಲೆ ಇತ್ತೀಚೆಗೆ ನಿರ್ಮಿಸಿದ ದ್ರಾವಿಡ ಮಾದರಿಯ ಶಿಖರವಿದ್ದು, ಮೇಲ್ಭಾಗದಲ್ಲಿ ಲೋಹದ ಕಳಸವನ್ನು ಪ್ರತಿಷ್ಠಾಪಿಸಿರುವರು.

ದೇಗುಲಕ್ಕೆ ಎದುರಾಗಿ ನಂದಿ ಮಂಟಪವಿದೆ. ಇದೊಂದು ಚಿಕ್ಕ ದೇಗುಲ. ನಂದಿ ಮಂಟಪದಲ್ಲಿ ಮೂರು ಅಡಿ ಎತ್ತರ ಹಾಗೂ ನಾಲ್ಕು ಅಡಿ ಉದ್ದದ ನಂದಿಯಿದೆ. ಇದನ್ನು ದಂಡೆ, ಗಂಟೆಸರ, ಹಣೆಪಟ್ಟಿ ಮೊದಲಾದವುಗಳಿಂದ ಅಲಂಕರಿಸಲಾಗಿದೆ. ನಂದಿ ಮಂಟಪದ ಕಂಬಗಳನ್ನು ಬಹುಮುಖಗಳಲ್ಲಿ ಕಡೆದಿರುವರು. ಈ ಮಂಟಪದಲ್ಲಿ ಗಣೇಶ ಹಾಗೂ ಭೈರವನ ಶಿಲ್ಪಗಳಿವೆ. ಸಮಭಂಗಿಯಲ್ಲಿ ನಿಂತಿರುವ ಗಣೇಶನ ಎಡಬಲದಲ್ಲಿ ಸಿದ್ಧಿ–ಬುದ್ಧಿಯರನ್ನು ಕಡೆದಿರುವರು. ಸುಂದರ ಕೆತ್ತನೆಯನ್ನು ಒಳಗೊಂಡ ಭೈರವನು ಜಟಾಮುಕುಟವನ್ನು, ಮೇಲ್ಭಾಗದಲ್ಲಿ ಕೀರ್ತಿಮುಖದ ಪ್ರಭಾವಳಿ, ಕೊರಳಲ್ಲಿ ರುಂಡಮಾಲೆ, ಹಾರ, ಕಂಠಹಾರ, ಚೆನ್ನವೀರ, ಸೊಂಟದಲ್ಲಿ ಗಂಟೆಸರವನ್ನು, ಕಾಲ್ಗಳನ್ನು ಸರ್ಪಗಳು ಸುತ್ತಿಕೊಂಡಿವೆ. ಇವುಗಳಲ್ಲದೆ ಕೈಕಡಗ, ಕಾಲ್ಕಡಗ, ಕರ್ಣಕುಂಡಲ ಮೊದಲಾದ ಆಭರಣಗಳನ್ನು ಧರಿಸಿರುವನು. ಭೈರವನ ಇಕ್ಕೆಲಗಳಲ್ಲಿ ಅಸ್ತಿಪಂಜರ ಮಾತ್ರವಿರುವ ವ್ಯಕ್ತಿಗಳನ್ನು ಚಿತ್ರಿಸಲಾಗಿದೆ. ದೇವಾಲಯದ ಎಡಬದಿಯಲ್ಲಿ ವಿಷ್ಣುವಿನ ಮೂರೂವರೆ ಅಡಿಗಳೆತ್ತರದ ಸುಂದರವಾದ ಹೊಯ್ಸಳ ಶೈಲಿಯ ಶಿಲ್ಪವಿದೆ. ಇದರ ಪಕ್ಕದಲ್ಲಿ ಮಹಿಷಮರ್ದಿನಿಯ ಚಿಕ್ಕ ದೇಗುಲವಿದೆ. ಇದರಲ್ಲಿ ಮಹಿಷನನ್ನು ಸಂಹರಿಸುತ್ತಿರುವ ಚಾಮುಂಡಿಯ ಶಿಲ್ಪವಿದೆ.

ಮಹೇಶ್ವರ ದೇವಾಲಯವನ್ನು ಇತ್ತೀಚೆಗೆ ಜೀರ್ಣೋದ್ಧಾರ ಮಾಡಲಾಗಿದ್ದು ಸಭಾಮಂಟಪದ ಮೇಲೆ ಶಿವನ ಬೃಹತ್ ಮೂರ್ತಿಯನ್ನು ಇಟ್ಟಿಗೆ, ಸಿಮೆಂಟ್ ಬಳಸಿ ನಿರ್ಮಿಸಿದ್ದಾರೆ.

ಕ್ರಿ.ಶ. ೧೧೮೭ಕ್ಕೆ ಸೇರಿದ ಶಿಲಾಶಾಸನ[೨೪೩] ವಿಜಯಪಾಂಡ್ಯನ ಸಾಮಂತನಾಗಿ ಕಾಮಯ್ಯ ನಾಯಕ ಬೆಮ್ಮಚನೂರ ನೆಲೆವೀಡನ್ನು ಆಳುತ್ತಿರುವಾಗ ಉದಯಾದಿತ್ಯನ ಹೆಗ್ಗಡೆಯಾದ ಮಾಚಯ್ಯನ ಮಗಳಾದ ಗಂಗವ್ವೆಯು ಶಿವಧರ್ಮೋತ್ತರದಲ್ಲಿ ಲಿಂಗ ಪ್ರತಿಷ್ಠೆಯ ಮಹಾತ್ಮೆಯನ್ನು ಕೇಳಿ ಲಿಂಗ ಪ್ರತಿಷ್ಠೆಯನ್ನು ಮಾಡಿದಳೆಂಬುದು ತಿಳಿಯುತ್ತದೆ. ಇದರಿಂದ ಈ ಮಹೇಶ್ವರ ದೇವಾಲಯ ವನ್ನು ಗಂಗವ್ವೆಯು ಕಾಮಯ್ಯನಾಯಕನನ್ನು ಕೋರಿಕೊಂಡು ಕಟ್ಟಿಸಿದಳೆಂಬುದು ಸ್ಪಷ್ಟವಾಗುತ್ತದೆ. ದೇವಾಲಯವನ್ನು ಕಟ್ಟಿಸಿದುದಲ್ಲದೆ ಸೋಮರಾಶಿ ಪಂಡಿತರ ಕಾಲನ್ನು ತೊಳೆದು ಧಾರಾಪೂರ್ವಕ ವಾಗಿ ಭೂಮಿಯನ್ನು ದಾನ ಮಾಡಿದ ವಿವರವೂ ಶಾಸನದಲ್ಲಿದೆ.

**ಚೋಳೇಶ್ವರ ದೇವಾಲಯ ಗಾರೆಹಟ್ಟಿ (ಚಿತ್ರದುರ್ಗ ಜಿ.)**

ಕ್ರಿ.ಶ. ೧೧೨೪ರಲ್ಲಿ[೨೪೪] ಕಲ್ಯಾಣ ಚಾಳುಕ್ಯ ಅರಸನಾದ ಆರನೇ ವಿಕ್ರಮಾದಿತ್ಯನು ರಾಜ್ಯಭಾರ ಮಾಡುತ್ತಿರುವಾಗ ಅವನ ಮಹಾಮಂಡಳೇಶ್ವರನಾದ ತ್ರಿಭುವನಮಲ್ಲ ಪಾಂಡ್ಯನು ನೊಳಂಬವಾಡಿ ೩೨೦೦೦ವನ್ನು ಆಳುತ್ತಿದ್ದನು. ತ್ರಿಭುವನಮಲ್ಲ ಪಾಂಡ್ಯನ ಮಹಾಸಾಮಂತನಾದ ಉದಯಾದಿತ್ಯನು ಚಿಮ್ಮಚನೂರಿನಲ್ಲಿ ಸುಖಸಂಕಥಾ ವಿನೋದದಿಂದ ಆಳುತ್ತಿದ್ದನು. ಈ ಸಂದರ್ಭದಲ್ಲಿ ಸದ್ಭಕ್ತಿಯಿಂದ ಲಿಂಗವನ್ನು ಪ್ರತಿಷ್ಠಾಪಿಸಿ ಉತ್ತುಂಗ ಪ್ರಾಸಾದವನ್ನು ಒಳಗೊಂಡಂತೆ ಕಲ್ಲಿನ ದೇವಾಲಯವನ್ನು ನಿರ್ಮಿಸಿ, ದೇವಾಲಯದ ಪೂಜಾಕಾರ್ಯ ಮೊದಲಾದವುಗಳಿಗೆಂದು ಶ್ರೀ ರುದ್ರಶಕ್ತಿ ಪಂಡಿತರ ಕಾಲಂಕರ್ಚಿ ಧಾರಾಪೂರ್ವಕವಾಗಿ ಬಿಟ್ಟ ದಾನದತ್ತಿಗಳನ್ನು ಬಿಟ್ಟಿರುವ ಸಂಗತಿ ಸ್ಪಷ್ಟವಾಗುತ್ತದೆ. ಶಾಸನದಲ್ಲಿ ಈ ದೇವಾಲಯವನ್ನು ಚೋಳೇಶ್ವರ ದೇವರೆಂದೇ ಹೇಳಿದೆ. ಅಲ್ಲದೆ ಶಾಸನದಲ್ಲಿ ಉದಯಾದಿತ್ಯನನ್ನು ಶ್ರೀ ಚೋಳೇಶ್ವರದೇವಲಬ್ಧ ವರಪ್ರಸಾದ ಎಂದೇ ಹೇಳಲಾಗಿದೆ.

ಗ್ರಾಮದ ರಸ್ತೆಯ ಬದಿಯಲ್ಲಿರುವ ಚೋಳೇಶ್ವರ ದೇವಾಲಯ ಗರ್ಭಗೃಹ, ಅಂತರಾಳ ಮತ್ತು ನವರಂಗಗಳನ್ನು ಒಳಗೊಂಡ ದೇವಾಲಯವಿದು. ಗರ್ಭಗೃಹದಲ್ಲಿ ಮೂರು ಅಡಿಗಳಷ್ಟು ಎತ್ತರದ ಪ್ರತಿಷ್ಠಾಪನ ಶಿವಲಿಂಗವಿದೆ. ಅಂತರಾಳದಲ್ಲಿ ಒಂದೂವರೆ ಅಡಿ ಎತ್ತರದ ಪೀಠದ ಮೇಲೆ ಒಂದೂವರೆ ಅಡಿ ಎತ್ತರ ಹಾಗೂ ಎರಡು ಅಡಿ ಉದ್ದದ ನಂದಿಯ ಶಿಲ್ಪವನ್ನು ಪ್ರತಿಷ್ಠಾಪಿಸಿರುವರು. ನವರಂಗದಲ್ಲಿ ನಾಲ್ಕು ಕಂಬಗಳಿದ್ದು ಇವುಗಳನ್ನು ಚಚ್ಚೌಕ-ವೃತ್ತ-ಅಷ್ಟಮುಖಗಳಲ್ಲಿ ಕಡೆದಿರುವರು. ನವರಂಗದ ಭುವನೇಶ್ವರಿಯಲ್ಲಿ ಮುಗುಚಿದ ಪದ್ಮವಿದೆ. ಹೊರಬದಿಯಲ್ಲಿ ವಿಷ್ಣುವಿನ ಶಿಲ್ಪವಿದೆ. ಸಮಭಂಗಿಯಲ್ಲಿ ನಿಂತಿರುವ ಹಾಗೂ ಕರಂಡ ಮುಕುಟಧಾರಿಯಾದ ವಿಷ್ಣು ನಾಲ್ಕು ಕೈಗಳನ್ನು ಹೊಂದಿದ್ದಾನೆ. ಬಲಗೈಗಳಲ್ಲಿ ಚಕ್ರ ಮತ್ತು ಗದೆಗಳನ್ನು, ಎಡಗೈಗಳಲ್ಲಿ ಶಂಖ ಮತ್ತು ಪದ್ಮಗಳನ್ನು ಹಿಡಿದಿರುವನು. ಕೆಳಭಾಗದಲ್ಲಿ ಛಾಮರಧಾರಿಯರನ್ನು ಕಡೆಯಲಾಗಿದೆ.

**ಹಿಡಿಂಬೇಶ್ವರ ದೇವಾಲಯ : ಚಿತ್ರದುರ್ಗ (ಚಿತ್ರದುರ್ಗ ತಾ.)**

ದೇವಾಲಯದ ಸಭಾಮಂಟಪದಲ್ಲಿ ಎರಡು ಶಿಲಾಶಾಸನಗಳಿವೆ. ಒಂದು ಶಾಸನವು ಕಲ್ಯಾಣ ಚಾಳುಕ್ಯರ ಜಗದೇಕಮಲ್ಲನ ಕಾಲದ್ದಾಗಿದೆ. ಇದರಲ್ಲಿ ಅವನ ಮಹಾಸಾಮಂತನಾದ

ವಿಜಯಪಾಂಡ್ಯನು ಈ ಪ್ರದೇಶವನ್ನು ಆಳುತ್ತಿರುವಾಗ ಉದಯಾದಿತ್ಯ ನಾಯಕನು ಬೆಮತ್ತನೂರನ್ನು ಆಳುತ್ತಿದ್ದನು. ಉದಯಾದಿತ್ಯ ನಾಯಕನ ಮಗನಾದ ಮಾಚದೇವನು ಕಾಮಯ್ಯ ನಾಯಕ, ಚೋಳಯ್ಯನಾಯಕ ಮೊದಲಾದವರೊಂದಿಗೆ ಕ್ರಿ.ಶ. ೧೧೮೩ರಲ್ಲಿ ಹಿಡಿಂಬೇಶ್ವರ ದೇವರ ನಂದಾದೀವಿಗೆ, ನೈವೇದ್ಯ, ಚೈತ್ರಪವಿತ್ರ ಕಾರ್ಯಗಳಿಗೆ ಭೂಮಿಯನ್ನು ದಾನ ಮಾಡಿದುದಾಗಿ ತಿಳಿದುಬರುತ್ತದೆ. ಹಿಡುಂಬಾ ವನದ ಉಲ್ಲೇಖವೂ ಈ ಶಾಸನದಲ್ಲಿದೆ.[೨೪೫] ಕ್ರಿ.ಶ. ೧೨೮೬ರಲ್ಲಿ ಹೊಯ್ಸಳ ವೀರನರಸಿಂಹನ ಮಹಾಪ್ರಧಾನ ಪೆರುಮಾಳೆದೇವ ದಂಡನಾಯಕ ಈ ದೇವರಿಗೆ ದಾನ ಬಿಡುತ್ತಾನೆ. ಕ್ರಿ.ಶ. ೧೪೧೧ರಲ್ಲಿ ವಿಜಯನಗರದ ಅರಸ ೧ನೇ ದೇವರಾಯನ ಮಗ ವೀರಮಲ್ಲಣ್ಣ ಒಡೆಯನು ಹಿಡಿಂಬಾನಾಥ ದೇವರಿಗೆ ದಾನ ಬಿಡುತ್ತಾರೆ.

ಚಿತ್ರದುರ್ಗದ ಅತ್ಯಂತ ಸುಂದರ ತಾಣಗಳಲ್ಲಿ ಹಿಡಿಂಬೇಶ್ವರ ದೇವಾಲಯವೂ ಒಂದು. ಹಿಡಿಂಬೇಶ್ವರನನ್ನು ಹಿಡುಂಬನಾಥ, ಹಿಡುಬಯ್ಯ, ಕಪ್ಪನೆಯ ನಯವಾದ ಶಿವಲಿಂಗ ಇದಾಗಿರುವುದರಿಂದ ಕರಿಯ ಇಡುಬಯ್ಯ ಎಂದೂ, ಇಲ್ಲಿನ ಸ್ಥಾನಿಕರನ್ನು ಇಡುಬಜೀಯ ಎಂದೆಲ್ಲಾ ಕರೆಯಲಾಗಿದೆ.

ಬಹು ಎತ್ತರದ ಹಾಗೂ ನೂರಾರು ಮೀಟರುಗಳಷ್ಟು ಉದ್ದವಾದ ಕಣಶಿಲೆಯ ಏಕಶಿಲಾ ಬಂಡೆಗಲ್ಲಿನ ಬೆಟ್ಟವನ್ನು ದೇವಾಲಯ ಕಟ್ಟಲು ಬಳಸಿರುವುದು ಗಮನಾರ್ಹ. ಕ್ರಿ.ಶ.೧೦೭೩ರ ಹುಲೆಗೊಂದಿ ಸಿದ್ಧೇಶ್ವರ ದೇವಾಲಯದ ಬಳಿಯ ಶಾಸನದಲ್ಲಿ ಹಿಡಿಂಬೇಶ್ವರ ದೇವಾಲಯದ ಉಲ್ಲೇಖವಿದೆ. ಇದರಿಂದ ೧೦೭೩ಕ್ಕೂ ಪೂರ್ವದಲ್ಲಿ ಸ್ಥಾಪನೆಯಾದ ಈ ದೇವಾಲಯವು ಕೂಡ ಮೂಲತಃ ಗುಹಾಲಯವೇ ಆಗಿದೆ. ಬೃಹತ್ ಬಂಡೆಗಲ್ಲಿನ ಕೆಳಭಾಗದಲ್ಲಿರುವ ಗುಹೆಯನ್ನು ದೇವಾಲಯವಾಗಿ ರೂಪಿಸಿ ಅದರಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಈ ಗುಹಾಲಯಕ್ಕೆ ಮುಂದೆ ನವರಂಗ, ಸಭಾಮಂಟಪ ಹಾಗೂ ಮುಖಮಂಟಪಗಳನ್ನು ನಿರ್ಮಿಸಿ ವಿಸ್ತರಿಸಲಾಗಿದೆ. ಇವುಗಳ ಮುಂದೆ ದ್ವಾರಮಂಟಪ, ಗಾಳಿಮಂಟಪ, ಉಯ್ಯಾಲೆ ಕಂಬ, ದೀಪಸ್ತಂಭಗಳಿವೆ.

ಹಿಡಿಂಬೇಶ್ವರ ದೇವಾಲಯದ ಗರ್ಭಗೃಹದಲ್ಲಿ ಒಂದೂವರೆ ಅಡಿ ಎತ್ತರದ ಪಾಣಿಪೀಠದ ಮೇಲೆ ಮುಕ್ಕಾಲು ಅಡಿ ಎತ್ತರದ ಶಿವಲಿಂಗವನ್ನು ಪ್ರತಿಷ್ಠಾಪಿಸಿರುವರು. ನವರಂಗದಲ್ಲಿ ನಂದಿಯ ಶಿಲ್ಪವಿದೆ. ಇದು ಎರಡು ಅಡಿ ಎತ್ತರ, ಮೂರು ಅಡಿ ಉದ್ದವಾಗಿದ್ದು ವಿವಿಧ ಅಲಂಕರಣೆಗಳನ್ನು ಒಳಗೊಂಡಿದೆ. ನವರಂಗದಲ್ಲಿ ನಾಲ್ಕು ಕಂಬಗಳಿದ್ದು, ಇವುಗಳನ್ನು ಎಂಟು ಮತ್ತು ಹದಿನಾರು ಮುಖಗಳಲ್ಲಿ ಕಡೆದಿರುವರು. ನವರಂಗದಲ್ಲಿ ಅನೇಕ ಶಿಲ್ಪಗಳಿವೆ. ಅವುಗಳಲ್ಲಿ ಕಪಾಲಶಿವ, ಗಣೇಶ, ರಾಹು–ಕೇತು, ಕಾಲಭೈರವ, ಮಹಿಷಮರ್ದಿನಿ ಮುಖ್ಯವಾಗಿವೆ. ಸಭಾಮಂಟಪದಲ್ಲಿ ನಾಲ್ಕು ಕಂಬಗಳಿದ್ದು, ಅವುಗಳನ್ನು ನಾಲ್ಕು–ಎಂಟು–ಹದಿನಾರು ಮುಖಗಳಲ್ಲಿವೆ. ದೇಗುಲದ ಗರ್ಭಗೃಹ, ನವರಂಗಗಳ ಬಾಗಿಲುವಾಡಗಳು ಸರಳವಾಗಿವೆ.

ಸಭಾಮಂಟಪಕ್ಕೆ ಮೂರು ಬಾಗಿಲುಗಳಿವೆ. ದಕ್ಷಿಣಾಭಿಮುಖವಾಗಿರುವ ಮುಖ್ಯ ಬಾಗಿಲವಾಡ ದಲ್ಲಿ ಪೂರ್ಣಕುಂಭಗಳಿದ್ದು, ಲಲಾಟದಲ್ಲಿ ಉತ್ತರಂಗದಲ್ಲಿ ಮುಂಚಾಚಿದ ರಚನೆಯಿದೆ. ಇತರೆ

ದ್ವಾರಗಳ ಬಾಗಿಲುವಾಡಗಳು ಸರಳವಾಗಿವೆ. ಮುಖಮಂಟಪದಲ್ಲಿ ಎರಡು ಕಂಬಗಳನ್ನು ಒಳಗೊಂಡಂತೆ ಕಕ್ಷಾಸನವನ್ನು ನಿರ್ಮಿಸಿರುವರು.

ಗರ್ಭಗೃಹದಲ್ಲಿರುವ ಬೃಹತ್ ಬಂಡೆಗಲ್ಲಿನ ಮೇಲ್ಭಾಗದಲ್ಲಿ ಚಿಕ್ಕದಾದ ಶಿಖರವನ್ನು ನಿರ್ಮಿಸಿರುವುದನ್ನು ಕಾಣಬಹುದು. ಈ ದೇವಾಲಯದ ನವರಂಗ ಮತ್ತು ಸಭಾಮಂಟಪಗಳ ಮೇಲೆ ಕೈಪಿಡಿ ಗೋಡೆಯಿದೆ. ಇದರಲ್ಲಿ ಗಾರೆಗಚ್ಚಿನ ಕೂಡುಗಳಿದ್ದು, ಯಾವುದೇ ಮೂರ್ತಿಗಳಿರುವುದಿಲ್ಲ.

**ಸೋಮನಾಥ (ಕಲ್ಲೇಶ್ವರ) ದೇವಾಲಯ : ಮೆದಕೆರೆಪುರ, (ಚಿತ್ರದುರ್ಗ ತಾ.)**

ಕ್ರಿ.ಶ. ೧೧೧೯ರ ಶಿಲಾಶಾಸನವು[೨೪೬] ಕಲ್ಯಾಣ ಚಾಳುಕ್ಯ ಅರಸ ಆರನೇ ವಿಕ್ರಮಾದಿತ್ಯನನ್ನು ಉಲ್ಲೇಖಿಸುತ್ತದೆ. ವಿಕ್ರಮಾದಿತ್ಯನನ್ನು ತ್ರಿಭುವನಮಲ್ಲನೆಂದು ಕರೆದಿದೆ. ಅಲ್ಲದೆ ಇವನ ಮಹಾಮಂಡಲೇಶ್ವರನಾದ ಪಾಂಡ್ಯ ತ್ರಿಭುವನಮಲ್ಲ ಪಾಂಡ್ಯನು ನೊಳಂಬವಾಡಿ ಮೂವತ್ತಾರು ಸಾವಿರವನ್ನು ನೋಡಿಕೊಳ್ಳುತ್ತಿದ್ದನೆಂದಿದೆ. ಉದಯಾದಿತ್ಯ ನಾಯಕರ ಸುಪುತ್ರನಾದ ಲಕ್ಷ್ಮೀಕಾಂತನು ಇವನ ಮಹಾಸಾಮಂತನಾಗಿದ್ದನು. ಆಗ ಕಾಮಯ್ಯನಾಯಕನು ಬೆಂಮತ್ತನೂರ ನೆಲೆವೀಡಿನಲ್ಲಿ ಆಳುತ್ತಿರುವಾಗ ಅವನ ಅಧಿಕಾರಿ ಹಡುವಂಗೆರೆಯ ಹರಿಯಮ ಗಾವುಂಡನು ಬೆಂಣೆದೋಣೆಯೂರ ನಡುವೆ ಶ್ರೀ ಸೋಮನಾಥದೇವರ ದೇವಾಲಯವನ್ನು ಉತ್ತುಂಗ, ಪ್ರಸಾದ, ಶಿಖರ, ಕಳಸಗಳನ್ನು ಕಲ್ಲಿನಲ್ಲಿ ನಿರ್ಮಾಣ ಮಾಡಿಸಿ ದೇವರ ಅಂಗಭೋಗ ಪೂಜೆ ಪುನಸ್ಕಾರ, ನಂದಾದೀವಿಗೆ, ನೈವೇದ್ಯಗಳಿಗೆ, ಪೂಜಾರಿಗೆ, ಖಂಡ ಸ್ಫುಟಿತ ಜೀರ್ಣೋದ್ಧಾರಕ್ಕಾಗಿ ಒಟ್ಟು ಹನ್ನೆರಡು ಮತ್ತರು ಭೂಮಿಯನ್ನು ದಾನ ನೀಡಿದನೆಂದು ಹೇಳುತ್ತದೆ.

ಮೆದಕೆರೆಪುರದ ಉತ್ತರಕ್ಕೆ ರೈಲ್ವೆ ಹಳಿಯನ್ನು ದಾಟಿ ಮುನ್ನಡೆದರೆ ಪ್ರಾಚೀನ ದೇಗುಲವೊಂದು ಗೋಚರಿಸುತ್ತದೆ. ಈ ದೇವಾಲಯವಿರುವ ಸ್ಥಳವು ಬೇಚರಾಕ್ ಗ್ರಾಮವಾಗಿದೆ. ಆದರೆ ಇಂದು ವಸತಿಯಿರುವುದಿಲ್ಲ. ದೇವಾಲಯವು ಗರ್ಭಗೃಹ, ಅರ್ಧಮಂಟಪ, ನವರಂಗ ಹಾಗೂ ಪ್ರಾಕಾರ ಗೋಡೆಗಳಿಂದ ಕೂಡಿದ ದೇವಾಲಯವಿದು. ದೇವಾಲಯದ ಗರ್ಭಗೃಹದಲ್ಲಿ ಮೂರು ಅಡಿಗಳೆತ್ತರದ ಪ್ರತಿಷ್ಠಾಪನ ಲಿಂಗವಿದೆ. ಗರ್ಭಗೃಹದ ಬಾಗಿಲುವಾಡದಲ್ಲಿ ಪೂರ್ಣ ಕುಂಭಗಳ ಉಬ್ಬುಗೆತ್ತನೆಗಳಿವೆ. ಅಂತರಾಳದಲ್ಲಿ ಒಂದು ಅಡಿ ಎತ್ತರ, ಎರಡು ಅಡಿಗಳಷ್ಟು ಉದ್ದವಾಗಿರುವ ನಂದಿಯ ಶಿಲ್ಪವಿದೆ. ನವರಂಗದಲ್ಲಿ ನಾಲ್ಕು ಕಂಬಗಳಿದ್ದು ಇವು ಕಲ್ಯಾಣ ಚಾಳುಕ್ಯ ಶೈಲಿಯಲ್ಲಿವೆ. ಈ ಕಂಬಗಳು ೧/೨ ಅಡಿ ಎತ್ತರದ ಪೀಠದ ಮೇಲಿವೆ. ಇವುಗಳ ದಿಂಡನ್ನು ಕೆಳಭಾಗದಲ್ಲಿ ಚಚ್ಚೌಕವಾಗಿ, ಮಧ್ಯಭಾಗವನ್ನು ಬಹುಮುಖಗಳಲ್ಲಿ, ಮೇಲ್ಭಾಗವನ್ನು ಚಚ್ಚೌಕ ಮತ್ತು ವೃತಾಕಾರಗಳಲ್ಲಿ ಕಡೆದಿರುವರು. ಕಂಬದ ಮೇಲೆ ಚಕ್ರ ರೂಪದ ವೃತ್ತಾಕಾರದ ಬೋದಿಗೆ ಮತ್ತು ಚಚ್ಚೌಕವಾದ ಫಲಕಗಳಿವೆ. ನವರಂಗದ ಮೇಲಿನ ಭುವನೇಶ್ವರಿಯಲ್ಲಿ ಮುಗುಚಿದ ಪದ್ಮವನ್ನು ಚಿತ್ರಿಸಿರುವರು. ನವರಂಗದ ಸುತ್ತಲೂ ಗೋಡೆಯನ್ನು ಇತ್ತೀಚೆಗೆ ಕಟ್ಟಲಾಗಿದೆ. ನವರಂಗದ ಸುತ್ತಲೂ

ಕುಳಿತುಕೊಳ್ಳಲು ಅನುವಾಗುವ ಕಕ್ಷಾಸನವಿದೆ. ಇದರ ಎಡಬದಿಯ ಗೋಡೆಯಲ್ಲಿ ಸಪ್ತಮಾತೃಕೆಯರ ಶಿಲ್ಪಪಟ್ಟಿಕೆ ಮತ್ತು ಗಜಲಕ್ಷ್ಮೀ ಶಿಲ್ಪಗಳಿವೆ. ನವರಂಗದ ಮುಂಭಾಗದ ಮೆಟ್ಟಿಲುಗಳ ಇಕ್ಕೆಲಗಳಲ್ಲಿ ಯಾಳಿಗಳನ್ನು ಕಡೆದಿರುವರು. ದೇವಾಲಯದ ಗರ್ಭಗೃಹದ ಮೇಲ್ಭಾಗದಲ್ಲಿ ಶಿಖರವಿದ್ದು ಇದು ಪಾಂಸನ ಮಾದರಿಯದ್ದಾಗಿದೆ. ಪಿರಮಿಡ್ಡಿನ ಆಕಾರದಲ್ಲಿರುವ ಶಿಖರವು ಎಂಟು ಹಂತಗಳಲ್ಲಿದೆ. ಮೇಲೆ ಮುಗುಚಿದ ಬೇಸಿನ್ ಆಕಾರದ ಶಿಖರ ಹಾಗೂ ಮೇಲ್ಭಾಗದಲ್ಲಿ ಕಲ್ಲಿನ ಕಳಸಗಳಿವೆ. ಈ ದೇಗುಲದ ಪೂಜಾಕಾರ್ಯಗಳನ್ನು ಪ್ರತಿವರ್ಷ ಶ್ರಾವಣ ಮಾಸದಲ್ಲಿ ಹಮ್ಮಿಕೊಳ್ಳಲಾಗುವುದು.

ದೇವಾಲಯದ ಮುಂಭಾಗದಲ್ಲಿ ದೀಪಸ್ತಂಭ, ಎರಡು ಶಿಲಾಶಾಸನಗಳು, ಕೈಮುಗಿದು ನಿಂತ ರಾಜಸ್ತ್ರೀ, ನಂದಿ, ನಾಗರಕಲ್ಲು ಹಾಗೂ ನಾಲ್ಕು ವೀರಗಲ್ಲುಗಳಿವೆ. ಇದರಿಂದ ಪ್ರಸ್ತುತ ಈ ದೇವಾಲಯವನ್ನು ೧೨ನೆಯ ಶತಮಾನದಲ್ಲಿ ಸೋಮನಾಥ ದೇವಾಲಯವೆಂಬುದು ಸ್ಪಷ್ಟವಾಗುತ್ತದೆ. ಅಲ್ಲದೆ ಈ ದೇವಾಲಯವನ್ನು ಸಂಪೂರ್ಣವಾಗಿ ಕಟ್ಟಿಸಿದುದಲ್ಲದೆ ಅದರ ನಿರ್ವಹಣೆಗೆ ಭೂಮಿಯನ್ನು ದಾನ ನೀಡಿದವನು ಹರಿಯಮ ಗವುಡನೆಂಬುದು ದೃಢವಾಗುತ್ತದೆ. ಪ್ರಾಚೀನ ಕಾಲದ ಈ ದೇಗುಲವು ಇಂದು ರಕ್ಷಣೆಯಿಲ್ಲದೆ ಶಿಥಿಲವಾಗಿದೆ.

**ಭೋಗೇಶ್ವರ ದೇವಾಲಯ : ಯಳಗೋಡು (ಚಿತ್ರದುರ್ಗ ತಾ.)**

ಕ್ರಿ.ಶ. ೧೧೬೮ರ ಶಾಸನ[೨೪೭] ಕಲ್ಯಾಣ ಚಾಳುಕ್ಯ ಮನೆತನದ ಮಹಾಮಂಡಲೇಶ್ವರನಾದ ವಿಜಯಪಾಂಡ್ಯನ ಕಾಲದಲ್ಲಿ ಅವನ ಅಧಿಕಾರಿ ಸೋವಿದೇವ ಎಂಬುವವನು ಮಲ್ಲಿಕಾರ್ಜುನ ಪಂಡಿತದೇವರ ಕಾಲನ್ನು ತೊಳೆದು ಗದ್ದೆಯೊಂದನ್ನು ದಾನ ನೀಡಿದ ವಿವರವಿದೆ. ಇದನ್ನು ದೇವರ ಸ್ನಾನ, ನೈವೇದ್ಯ, ನಂದಾದೀವಿಗೆ, ಚೈತ್ರ ಪವಿತ್ರ ತಪೋಧನರ ಆಹಾರ ದಾನಕ್ಕಾಗಿ ಬಿಟ್ಟುದುದಾಗಿ ಹೇಳಿದೆ.

ಗರ್ಭಗೃಹ, ಅಂತರಾಳ, ಸಭಾಮಂಟಪಗಳಿಂದ ಕೂಡಿರುವ ಪ್ರಾಚೀನ ದೇವಾಲಯವಿದು. ಗರ್ಭಗೃಹದಲ್ಲಿ ಅರ್ಧ ಅಡಿ ಎತ್ತರದ ಪೀಠದ ಮೇಲೆ ಅರ್ಧ ಎತ್ತರದ ಪಾನವಟ್ಟದ ಮೇಲೆ ಒಂದೂವರೆ ಅಡಿ ಎತ್ತರದ ಕಪ್ಪುಶಿಲೆಯ ಸೋಮಸೂತ್ರವಿರುವ ಪ್ರತಿಷ್ಠಾಪನಾ ಶಿವಲಿಂಗವನ್ನು ಸ್ಥಾಪಿಸಿರುವರು. ಗರ್ಭಗೃಹದ ಬಾಗಿಲುವಾಡದ ಇಕ್ಕೆಲಗಳಲ್ಲಿ ಪೂರ್ಣಕುಂಭಗಳು, ಅರೆಗಂಬಗಳಿವೆ. ಲಲಾಟದಲ್ಲಿ ಪದ್ಮದ ರಚನೆಯಿದೆ. ಅರ್ಧಮಂಟಪದಲ್ಲಿ ಬೃಹತ್ ಗಾತ್ರದ ನಂದಿಯ ಶಿಲ್ಪವಿದೆ. ಇದು ಸುಮಾರು ಐದೂವರೆ ಅಡಿ ಉದ್ದ ಮೂರು ಅಡಿ ಅಗಲ ಹಾಗೂ ಮೂರು ಅಡಿಗಳೆತ್ತರದ ಕಪ್ಪುಶಿಲೆಯಲ್ಲಿ ಕಡೆಯಲಾದ ನಂದಿಯಾಗಿದೆ. ಇದಕ್ಕೆ ಹಣೆಪಟ್ಟಿ ಕೊರಳ ದಂಡೆ, ಗಂಟೆ ಸರಗಳಿಂದ ಅಲಂಕರಿಸಲಾಗಿದೆ. ದೇವಾಲಯವನ್ನು ಉಪಾನ, ಜಗತಿ, ತ್ರಿಪಟ್ಟ ಕುಮುದ, ಕಪೋತಗಳಿಂದ ಕೂಡಿದ ಅಧಿಷ್ಠಾನದ ಮೇಲೆ ಕಟ್ಟಲಾಗಿದೆ. ದೇವಾಲಯದ ಮುಂಭಾಗವು ಸಂಪೂರ್ಣವಾಗಿ ಜೀರ್ಣೋದ್ಧಾರವಾಗಿದೆ. ಈ ದೇವಾಲಯದ ಎಡಭಾಗದಲ್ಲಿ

ಇನ್ನೊಂದು ಶಿವಲಿಂಗವಿರುವ ಚಿಕ್ಕ ಗರ್ಭಗೃಹವಿದೆ. ಇದರಲ್ಲಿ ಮುಕ್ಕಾಲು ಅಡಿ ಎತ್ತರದ ವೃತ್ತಾಕಾರದ ಪಾನವಟ್ಟದ ಮೇಲೆ ಎರಡು ಅಡಿ ಎತ್ತರದ ಶಿವಲಿಂಗವಿದೆ. ಇದೂ ಕೂಡ ಪ್ರಾಚೀನ ಕಾಲದ್ದಾಗಿದೆ. ಗರ್ಭಗೃಹವು ಇತ್ತೀಚಿನದು.

ಈ ದೇವಾಲಯದ ಮುಂಭಾಗದಲ್ಲಿ ವಿವಿಧ ಶಿಲ್ಪಗಳಿವೆ. ಅವುಗಳಲ್ಲಿ ಒಂದೂವರೆ ಅಡಿ ಎತ್ತರದ ಗಣೇಶ ಹಾಗೂ ಮೂರೂವರೆ ಅಡಿ ಎತ್ತರದ ವೀರಗಲ್ಲುಗಳಿವೆ. ವೀರಗಲ್ಲು ಮೂರು ಹಂತಗಳಿಂದ ಕೂಡಿದೆ. ಇದರಲ್ಲಿ ಕೆಳಗೆ ಹೋರಾಟದ ಚಿತ್ರಣ, ಅದರ ಮೇಲೆ ಅಪ್ಸರೆಯರೊಂದಿಗೆ ಎರಡು ಜೋಡಿ ಭಕ್ತ ದಂಪತಿಗಳು ನಿಂತಿದ್ದಾರೆ. ಮಹಿಳೆಯರು ತಮ್ಮ ಕೈಗಳನ್ನು ಮೇಲೆತ್ತಿರುವರು. ಮೇಲ್ಭಾಗದಲ್ಲಿ ಶಿವಲಿಂಗ, ನಂದಿ ಭಕ್ತ, ಹಸು-ಕರುಗಳ ಚಿತ್ರಣಗಳಿವೆ. ಇದು ಶಾಸನೋಕ್ತ ವೀರಗಲ್ಲಾಗಿದೆ. ಇದನ್ನು ಕ್ರಿ.ಶ.೧೪೦೫ರಲ್ಲಿ ವೀರನೋರ್ವನ ನೆನಪಿಗಾಗಿ ಹಾಕಿಸಲಾಗಿದೆ. ಇದರಲ್ಲಿ ಹೇಳುವಂತೆ ಎಳಗೋಡ ಗ್ರಾಮಸ್ತರದ ಮಣ್ಣಲಿನಾಯ್ಕನ ಮಗನಾದ ಬೊಮ್ಮಿನಾಯ್ಕ ಬೀರ ಎಂದಿದೆ. ಬೊಮ್ಮಿನಾಯ್ಕನು ಹೋರಾಟದಲ್ಲಿ ಮಡಿದುದರಿಂದ ಅವನ ನೆನಪಿಗೆ ಹಾಕಿಸಿದ ವೀರಗಲ್ಲಿದು.

**ಲೋಕೇಶ್ವರ(ಕುಂಬೇಶ್ವರ) : ಗುಂಜಿಗನೂರು (ಚಿತ್ರದುರ್ಗ ತಾ.)**

ಕ್ರಿ.ಶ. ೧೧೨೭ಕ್ಕೆ ಸೇರಿದ ಈ ಶಾಸನ[೨೪೮]ದಲ್ಲಿ ತ್ರಿಭುವನಮಲ್ಲ ಪಾಂಡ್ಯದೇವನು ನೊಳಂಬವಾಡಿ ೩೨೦೦೦ವನ್ನು ನೋಡಿಕೊಳ್ಳುತ್ತಿದ್ದನು. ಅವನ ಅಡಿಯಲ್ಲಿ ಮಹಾಮಂಡಳೇಶ್ವರನಾದ ಗಂಗರಸನಿದ್ದು, ಈತನು ಕುಕ್ಕವಾಡಿ ೩೦೦ನ್ನು ನೋಡಿಕೊಳ್ಳುತ್ತಿದ್ದನು. ಗಂಗರಸನ ಪಾದಪದ್ಮೋಪಜೀವಿಯಾದ ಗುಂಜಿಗನೂರ ಪ್ರಭುಗಾವುಂಡ, ಕುಂಬಾರ ಬಮ್ಮಣ್ಣನು ವೀರವ್ರತವನ್ನು ಕೈಗೊಂಡು ಕುಂಬೇಶ್ವರ ದೇವರನ್ನು ಪ್ರತಿಷ್ಠೆಯ ಮಾಡಿಸಿದ್ದನೆಂದು ಹೇಳುತ್ತದೆ.

ಮೂರು ಗರ್ಭಗೃಹಗಳನ್ನು ಹೊಂದಿದ ತ್ರಿಕೂಟ ದೇವಾಲಯವಿದು. ದೇವಾಲಯದ ಮೂರ್ತಿಶಿಲ್ಪಗಳು ಹಾಗೂ ಶಿಕ್ಷಣ ಕೇಂದ್ರವೂ ಆದ ಇದು ತ್ರೈಪುರುಷ ದೇವಾಲಯವೂ ಆಗಿದೆ. ಕಲ್ಯಾಣ ಚಾಳುಕ್ಯ ಅರಸ ಆರನೆಯ ವಿಕ್ರಮಾದಿತ್ಯನ ಕಾಲದ ಶಿಲಾಶಾಸನವು ಇಲ್ಲಿದ್ದು, ಅದರಲ್ಲಿ ಈ ದೇವಾಲಯವನ್ನು ಕುಂಬೇಶ್ವರನೆಂದೇ ಕರೆದಿದೆ. ಮೂರು ಗರ್ಭಗೃಹಗಳಲ್ಲಿ ಪೂರ್ವಾಭಿಮುಖವಾಗಿರುವ ಗರ್ಭಗೃಹದಲ್ಲಿ ಶಿವಲಿಂಗ, ಮಧ್ಯದಲ್ಲಿ ವಿಷ್ಣು ಮತ್ತು ಪಶ್ಚಿಮಾಭಿಮುಖ ವಾಗಿರುವ ಗರ್ಭಗೃಹದಲ್ಲಿ ಸೂರ್ಯನ ಶಿಲ್ಪಗಳನ್ನು ಪ್ರತಿಷ್ಠಾಪಿಸಲಾಗಿದೆ. ಕಪ್ಪುಶಿಲೆಯಲ್ಲಿ ಕಡೆಯಲಾದ ಶಿವಲಿಂಗವು ಎರಡು ಅಡಿ ಪಾಣಿಪೀಠದ ಮೇಲೆ ಅರ್ಧ ಅಡಿ ಎತ್ತರವಿದೆ.

ಶಾಸನದಲ್ಲಿ ಕರೆಯಲಾದ ಕುಂಭೇಶ್ವರ ಇದೇ ಎಂಬುದು ಇಲ್ಲಿ ಸ್ಪಷ್ಟವಾಗುತ್ತದೆ. ಈ ಗರ್ಭಗೃಹಕ್ಕೆ ಮಾತ್ರ ಅಂತರಾಳವಿದೆ. ಗರ್ಭಗೃಹದ ಬಾಗಿಲುವಾಡದಲ್ಲಿ ಪೂರ್ಣ ಕುಂಭ ಹಾಗೂ ಸ್ತಂಭಶಾಖೆಗಳಿದ್ದು, ಲಲಾಟದಲ್ಲಿ ಗಜಲಕ್ಷ್ಮಿಯಿದೆ. ಮಧ್ಯದ ಗರ್ಭಗೃಹದಲ್ಲಿ ಒಂದು ಅಡಿ ಎತ್ತರದ ಗರುಡ ಪೀಠದ ಮೇಲೆ ಸಾಬೂನುಗಲ್ಲಿನಲ್ಲಿ ಕಡೆದ ನಾಲ್ಕು ಅಡಿ ಎತ್ತರದ ಸುಂದರ ಹಾಗೂ ಸೂಕ್ಷ್ಮ ಕೆತ್ತನೆಯ ವಿಷ್ಣು ಶಿಲ್ಪವನ್ನು ಪ್ರತಿಷ್ಠಾಪಿಸಿರುವರು. ಸಮಭಂಗಿಯಲ್ಲಿ

ನಿಂತಿರುವ ವಿಷ್ಣುವು ತನ್ನ ನಾಲ್ಕು ಕೈಗಳಲ್ಲಿ ಶಂಖ, ಚಕ್ರ, ಗದೆ ಹಾಗೂ ಅಭಯ ಮುದ್ರೆಗಳಿವೆ. ಗದೆಯು ಭಗ್ನವಾಗಿದೆ. ವಿಷ್ಣುವಿನ ಕೆಳಗೆ ಶ್ರೀದೇವಿ ಮತ್ತು ಭೂದೇವಿಯರನ್ನು ಕಡೆದಿರುವರು. ವಿಷ್ಣು ವಿವಿಧ ಆಭರಣಗಳಿಂದ ಅಲಂಕೃತನಾಗಿದ್ದು, ಮೇಲೆ ಕೀರ್ತಿಮುಖದ ಪ್ರಭಾವಳಿ, ಕರ್ಣಕುಂಡಲ, ಕಂಠಹಾರ, ಹಾರ, ಚನ್ನವೀರ, ಉಪವೀತ, ಕೈಬಳೆ, ಕಡಗ, ಕಾಲಬಳೆ ಮತ್ತು ಕಡಗಗಳನ್ನು ಧರಿಸಿದ್ದಾನೆ.

ಪಶ್ಚಿಮಾಭಿಮುಖವಾಗಿರುವ ಗರ್ಭಗೃಹದಲ್ಲಿ ಸೂರ್ಯನನ್ನು ಪ್ರತಿಷ್ಠಾಪಿಸಿರುವರು. ಇದು ಕೂಡ ವಿಷ್ಣುವಿನಷ್ಟೇ ಎತ್ತರವಾಗಿದೆ. ಒಂದು ಅಡಿ ಎತ್ತರದ ಏಳು ಕುದುರೆಗಳುಳ್ಳ ಪೀಠದ ಮೇಲೆ ಸಮಭಂಗಿಯಲ್ಲಿ ನಿಂತಿರುವ ನಾಲ್ಕು ಅಡಿ ಎತ್ತರದ ಸೂರ್ಯನು ತನ್ನ ಎರಡು ಕೈಗಳಲ್ಲಿ ಪದ್ಮಗಳನ್ನು ಹಿಡಿದಿರುವನು. ವಿವಿಧ ಆಭರಣಗಳಿಂದ ಅಲಂಕೃತನಾಗಿರುವ ಸೂರ್ಯನ ಕೆಳಗೆ ಇಕ್ಕೆಲಗಳಲ್ಲಿ ಬಿಲ್ಲು ಮತ್ತು ಹೂಬಾಣಗಳನ್ನು ಹಿಡಿದಿರುವ ಉಷೆ ಮತ್ತು ಪ್ರತ್ಯುಷೆಯರಿರುವರು.

ನವರಂಗದಲ್ಲಿ ನಾಲ್ಕು ಕಂಬಗಳಿವೆ. ಅವುಗಳನ್ನು ಬಹುಮುಖಗಳಲ್ಲಿ ಕಡೆಯಲಾಗಿದ್ದು, ಚಚ್ಚೌಕ ಭಾಗದಲ್ಲಿ ಇತ್ತೀಚೆಗೆ ೧೯೮೦ರ ಹೊತ್ತಿಗೆ ಅಕ್ಕಮಹಾದೇವಿ, ನಾಗಕನ್ಯೆ ಮೊದಲಾದ ಉಬ್ಬುಶಿಲ್ಪಗಳನ್ನು ಕಡೆದಿರುವರು. ಅವುಗಳಲ್ಲಿ ಅಕ್ಕಮಹಾದೇವಿ, ಶಿವಲಿಂಗ ಮುಖ್ಯವಾಗಿವೆ. ನವರಂಗದಲ್ಲಿ ವಿವಿಧ ಮೂರ್ತಿಶಿಲ್ಪಗಳನ್ನು ಪ್ರತಿಷ್ಠಾಪಿಸಿರುವರು. ಶಿವಲಿಂಗಕ್ಕೆ ಎದುರಾಗಿ ನಂದಿಯಿದೆ. ಇದಲ್ಲದೆ ನಾಗ, ಸೂರ್ಯ, ಭೈರವಿ ಮತ್ತು ಭೈರವ ಶಿಲ್ಪಗಳೂ ಇವೆ. ಸೂರ್ಯ ಶಿಲ್ಪವು ಮುಖ್ಯ ಶಿಲ್ಪದ ಲಕ್ಷಣಗಳನ್ನು ಹೊಂದಿದೆ. ಸುಖಾಸನದಲ್ಲಿ ಕುಳಿತ ಭೈರವನು ಜಟಾಮುಕುಟಧಾರಿಯಾಗಿದ್ದು, ತನ್ನ ಎರಡು ಕೈಗಳಲ್ಲಿ ಖಡ್ಗ ಮತ್ತು ಪಾನಬಟ್ಟಲುಗಳನ್ನು ಹಿಡಿದಿದ್ದಾನೆ. ಭೈರವಿಯು ತನ್ನ ನಾಲ್ಕು ಕೈಗಳಲ್ಲಿ ಕಡ್ಗ, ತ್ರಿಶೂಲ, ಡಮರು ಮತ್ತು ಪಾನಬಟ್ಟಲುಗಳನ್ನು ಹಿಡಿದಿದ್ದಾಳೆ. ನವರಂಗದ ಬಾಗಿಲುವಾಡದಲ್ಲಿ ದ್ವಾರಪಾಲಕರ ಉಬ್ಬು ರಚನೆಗಳಿದ್ದು, ಸ್ತಂಭಶಾಖೆ, ಲತಾಶಾಖೆ, ವಜ್ರಶಾಖೆಗಳಿವೆ. ಉತ್ತರಾಂಗದಲ್ಲಿ ದ್ರಾವಿಡ ಮಾದರಿಯ ಶಿಖರಗಳು, ಇವುಗಳ ಮಧ್ಯೆ ಗಣೇಶ, ಸರಸ್ವತಿಯರ ಚಿಕ್ಕ ಶಿಲ್ಪಗಳಿವೆ. ಲಲಾಟದಲ್ಲಿ ಗಜಲಕ್ಷ್ಮಿಯಿದೆ. ದೇವಾಲಯದ ಬಲಭಾಗದಲ್ಲಿ ಕಲ್ಯಾಣ ಚಾಲುಕ್ಯ ಕಾಲದ ಶಿಲಾಶಾಸನ, ಮುಂಭಾಗದಲ್ಲಿ ಎರಡು ಅಡಿ ಎತ್ತರದ ಗಣೇಶ ಶಿಲ್ಪ ಹಾಗೂ ಲಿಂಗಮುದ್ರೆ ಕಲ್ಲುಗಳಿವೆ. ಈ ಗ್ರಾಮದಲ್ಲಿ ಆಂಜನೇಯ ಮೊದಲಾದ ದೇವಾಲಯಗಳಿವೆ.

**ಮೂರ್ತಿಶಿಲ್ಪ**

ದೇವತಾರಾಧನೆ ಮತ್ತು ದೇವಾಲಯಗಳ ನಿರ್ಮಾಣ ಎಂದು ಆರಂಭವಾಯಿತೋ ಅಂದಿನಿಂದಲೇ ದೇವತಾಮೂರ್ತಿಗಳ ಪ್ರತಿಷ್ಠಾಪನೆ ಮತ್ತು ಆರಾಧನೆ ನಡೆಯುತ್ತ ಬಂದಿದೆ. 'ಶಿಲ್ಪಶಾಸ್ತ್ರ' ಮೂರ್ತಿಗಳ ರಚನೆಯ ಲಕ್ಷಣಗಳನ್ನು ನಿರ್ದಿಷ್ಟವಾಗಿ ತಿಳಿಸುತ್ತದೆ. ಶಿಲ್ಪಶಾಸ್ತ್ರದಲ್ಲಿ

ಪ್ರತಿಮೆಗಳನ್ನು ರಚಿಸುವ ಮೊದಲು ಶಿಲ್ಪಿಯು ಆ ದೇವರ ರೂಪವನ್ನು ಮನನ ಮಾಡಿಕೊಳ್ಳಲು ಅದೇ ದೇವರ ಧ್ಯಾನಶ್ಲೋಕವನ್ನು ಜಪಿಸುತ್ತಾರೆ. ಧ್ಯಾನದ ಮೂಲಕ ಮನಸ್ಸಿನಲ್ಲಿ ಮೂಡಿದ ಶಿಲ್ಪವನ್ನು ಭಾವಶಿಲ್ಪ ಎನ್ನುವರು. ಶಿಲ್ಪಿಗಳು ತಾನು ಕಂಡ ರೂಪವನ್ನು ಮರ, ಕಲ್ಲು, ಮೇಣದಲ್ಲಿ ರೂಪಿಸುತ್ತಾರೆ. ಹೀಗೆ ನಿರ್ಮಿಸಿದ ಮೂರ್ತಿಯನ್ನು ಸುಮುಹೂರ್ತದಲ್ಲಿ ನಿರ್ದಿಷ್ಟ ಸ್ಥಳದಲ್ಲಿ ಪ್ರತಿಷ್ಠಾಪನೆ ಮಾಡಲಾಗಿರುವುದು.[೨೯]

ಮೂರ್ತಿ ಎಂಬುದನ್ನು ಭೌತಿಕ ವಸ್ತು ಎಂದು ಗ್ರಹಿಸಲಾಗುತ್ತದೆ. ಮೂರ್ತಿ ಎಂಬ ಪದಕ್ಕೆ ಸಮನಾರ್ಥವಾಗಿ 'ಪ್ರತಿಮೆ' ಎಂಬ ಪದ ಪ್ರಯೋಗದಲ್ಲಿ ಅಲ್ಲದೆ ಮೂರ್ತಿಶಾಸ್ತ್ರವನ್ನು ಪ್ರತಿಮಾಶಾಸ್ತ್ರ ಎಂದೂ ಕರೆಯುವರು. ಪ್ರತಿಮಾ ಲಕ್ಷಣವೆಂದರೆ ಒಂದು ದೇವತೆಯ ಲಕ್ಷಣವನ್ನು ಮೂರ್ತಿ ರೂಪದಲ್ಲಿ ಪ್ರಮಾಣಬದ್ಧವಾಗಿ ಹೇಗೆ ಇಡಬೇಕೆಂಬುದನ್ನು ನಿರೂಪಿಸುವ ಶಾಸ್ತ್ರ. ಶಾಸ್ತ್ರೀಯ ನಿರೂಪಣೆಗಳ ಪ್ರಕಾರ ಮೂರ್ತಿಯ ಒಂದು ರೂಪವು ನ್ಯಾಸ, ಅಲಂಕಾರ, ಭಾಘರಕ್ಷ, ಮುದ್ರಾ, ವಾಹನ, ಉಪದೇವ ಹಾಗೂ ಸ್ತುವಕ ಎಂಬ ೯ ಬಗೆಯ ಅಂಗಾಂಗಗಳನ್ನು ಒಳಗೊಂಡಿದೆ. ಪ್ರಸ್ತುತ ಅಧ್ಯಾಯವು ಮೂರ್ತಿಶಿಲ್ಪಗಳೊಂದಿಗೆ ಈ ಪರಿಸರದಲ್ಲಿ ಕಂಡುಬರುವ ಗಜಲಕ್ಷ್ಮೀ, ಸಪ್ತಮಾತೃಕೆ, ಮಹಾಸತಿಗಲ್ಲು, ವೀರಗಲ್ಲುಗಳ ವಿವರಣೆಗಳನ್ನು ಒಳಗೊಂಡಿದೆ.

**ಶಿವಲಿಂಗಗಳು**

ಶಿವನನ್ನು ಲಿಂಗರೂಪದಲ್ಲಿ ಪೂಜಿಸುವುದು ಸರ್ವೇಸಾಮಾನ್ಯ. ಈ ಪ್ರದೇಶದಲ್ಲಿ ಹೆಚ್ಚಿನಮಟ್ಟಿಗೆ ಲಿಂಗರೂಪದಲ್ಲಿ ಪೂಜಿಸಲಾಗುತ್ತದೆ. ಶಿವಲಿಂಗಗಳಲ್ಲಿ ಮೊಟ್ಟೆಯಾಕಾರದ(ಅಂಡಾಕಾರ) ಅರ್ಧ ಚಂದ್ರಾಕೃತಿಯ, ವೃತ್ತಾಕಾರದ ಹಾಗೂ ಬಾಣಾಕಾರದ ಲಿಂಗಗಳು ಕಂಡು ಬರುತ್ತದೆ. ಪೀಠದಲ್ಲಿ ವೃತ್ತಾಕಾರ, ಚೌಕಾಕಾರ, ಆಯತಾಕಾರದ ಪೀಠಗಳು ಈ ಪ್ರದೇಶದಲ್ಲಿ ದೊರೆತಿವೆ. ಪೀಠ ಭಾಗಗಳಿಗೆ ಬಳಪದ ಇಲ್ಲವೆ ಕಪ್ಪುಶಿಲೆಯನ್ನು ಹೆಚ್ಚಾಗಿ ಉಪಯೋಗಿಸಿದ್ದಾರೆ. ಲಿಂಗಗಳನ್ನು ತೊಳೆದ ನೀರು ಹೊರಹೋಗಲು 'ಜಲಹರಿ'(ನಾಲ)ಯನ್ನು ಹೊಂದಿದೆ. ಇದು ಎಡಭಾಗಕ್ಕಿರುವುದು ಸಾಮಾನ್ಯವಾಗಿದೆ.

**ನಂದಿಮೂರ್ತಿಗಳು**

ವೃಷಭ ಅಥವಾ ನಂದಿ ಶಿವನ ವಾಹನವಾಗಿದ್ದು ಬಹುತೇಕ ಶೈವ ದೇವಾಲಯಗಳಲ್ಲಿ ಲಿಂಗಕ್ಕೆ ಎದುರಾಗಿ ಅಂತರಾಳ, ಇಲ್ಲವೇ ನವರಂಗದಲ್ಲಿ ಈ ಮೂರ್ತಿಗಳಿರುತ್ತವೆ. ಕೆಲವು ವೇಳೆ ಪ್ರತೇಕ ನಂದಿ ಮಂಟಪವನ್ನು ಕಟ್ಟಿರುವುದುಂಟು. ಅರಸೀಕೆರೆ ಚಟ್ನಿಹಳ್ಳಿ, ಆನೆಕೊಂಡ, ಕುರುಗೋಡು ದೇವಸ್ಥಾನಗಳಲ್ಲಿ ಪ್ರತ್ಯೇಕ ನಂದಿಮಂಟಪವಿದೆ. ಇಲ್ಲಿ ಬೃಹತ್ ಗಾತ್ರದ ನಂದಿಮೂರ್ತಿಗಳಿವೆ. ಈ ಪರಿಸರದಲ್ಲಿ ಸುಮಾರು ೨ ಅಡಿಯಿಂದ ೬ ಅಡಿ ಎತ್ತರದ ನಂದಿಮೂರ್ತಿಗಳು ಕಂಡು ಬರುತ್ತವೆ. ಮರುಳು ಮಿಶ್ರಿತ ಕಪ್ಪುಶಿಲೆ, ಗ್ರಾನೈಟ್, ಬಳಪದ ಕಲ್ಲುಗಳಲ್ಲಿ ಈ ಮೂರ್ತಿಗಳನ್ನು ಕೆತ್ತಲಾಗಿದೆ.

ನಂದಿಮೂರ್ತಿಗಳು ತಲೆಯನ್ನು ತಗ್ಗಿಸಿ ಲಿಂಗಕ್ಕೆ ಎದುರಾಗಿದ್ದು ಮುಂದಿನ ಬಲಗಾಲನ್ನು ಮಡಚಿ ಎಡಗಾಲನ್ನು ಮುಂದೆ ಚಾಚಿ ಒಂದು ಕಡೆ ವಾಲಿ ಮಲಗಿದ ರೀತಿ ಇರುತ್ತವೆ. ಸುಂದರವಾದ ಭುಜವನ್ನು ಹೊಂದಿರುತ್ತವೆ. ಕೊರಳಲ್ಲಿ ಗಂಟೆಹಾರ ಹಣೆಪಟ್ಟಿ, ಕಿವಿಯ ಮೇಲೆ ಅಲಂಕಾರ ಹೊಂದಿವೆ. ಬಾಲವು ಬಾಗಿದ ರೀತಿ ಇರುತ್ತದೆ.

ಅನೇಕ ಕಡೆಗಳಲ್ಲಿ ನಂದಿಮೂರ್ತಿಗಳು ಭಗ್ನಗೊಂಡಿವೆ. ಮೂರ್ತಿಗಳಲ್ಲಿ ನಿಧಿ ಇರುತ್ತದೆ ಎಂಬ ತಪ್ಪು ಕಲ್ಪನೆಗಳಿಂದಾಗಿ ಮೂರ್ತಿಗಳು ಅವಸಾನವನ್ನು ಹೊಂದುತ್ತಿವೆ. ಹೊಸಕೋಟೆ, ಚಟ್ನಹಳ್ಳಿಗಳಲ್ಲಿ ನಂದಿಮೂರ್ತಿಗಳ ಹೊಟ್ಟೆಯನ್ನು ಸೀಳಲಾಗಿದೆ. ನೊಳಂಬವಾಡಿ ನಾಡಿನಲ್ಲಿ ನೊಳಂಬ ಪಲ್ಲವರು ಮತ್ತು ಕಳಚೂರಿಗಳ ಆಳ್ವಿಕೆ ನಡೆಸಿದ್ದರಿಂದ ಅವರ ರಾಜ್ಯಲಾಂಛನವಾದ ನಂದಿ ಇಲ್ಲಿನ ದೇವಾಲಯಗಳಲ್ಲಿ ಹೆಚ್ಚಿನ ಪ್ರಾಶಸ್ತ್ಯ ಪಡೆದುಕೊಂಡಿದೆ. ಪಾಂಡ್ಯರ ಕಾಲದಲ್ಲೂ ಅದು ಮುಂದುವರಿದಿದೆ. ಕಲ್ಯಾಣ ಕ್ರಾಂತಿಯ ಪ್ರಭಾವದಿಂದ ಬಸವಣ್ಣ ನಂದಿಶಿಲ್ಪದಲ್ಲಿ ಸಮೀಕರಣಗೊಂಡು ಅಂದು ನಿರ್ಮಾಣವಾದ ದೇವಾಲಯಗಳಲ್ಲಿದ್ದ ನಂದಿಶಿಲ್ಪಗಳು ಪ್ರತ್ಯೇಕ ಮಂಟಪಗಳಾಗಿ ರಚನೆಗೊಂಡು ಇಂದು ಪೂಜಿಸಲ್ಪಡುತ್ತಿವೆ.

**ಉಮಾಮಹೇಶ್ವರಮೂರ್ತಿ: ಹಿರೇಮೇಗಳಗೆರೆ**

ವಿಷ್ಣುಧರ್ಮೋತ್ತರ ಮತ್ತು ರೂಪಮಂಥನ ಗ್ರಂಥಗಳು ಈ ಮೂರ್ತಿಯ ವಿವರಣೆ ನೀಡುತ್ತವೆ. ಉಮಾಮಹೇಶ್ವರ ಒಟ್ಟಾಗಿಯೇ ಇರುವ ಮೂರ್ತಿಶಿಲ್ಪಗಳನ್ನು ಉಮಾ ಮಹೇಶ್ವರ ಮೂರ್ತಿ ಎಂದು ಕರೆಯುತ್ತಾರೆ. ಈ ಮೂರ್ತಿಯು ಹಿರೇಮೇಗಳಗೆರೆಯ ಹಾಲಸ್ವಾಮಿ ಮಠದಲ್ಲಿ ಮತ್ತು ಆನೆಕೊಂಡ ದೇವಾಲಯದ ನಂದಿಶಿಲ್ಪದ ಪೀಠಭಾಗದಲ್ಲಿ ಕಂಡು ಬರುತ್ತದೆ. ಹಾಲಸ್ವಾಮಿ ಮಠದಲ್ಲಿರುವ ನಂದಿಶಿಲ್ಪ, ನಂದಿಯ ಮೇಲೆ ಉಮೆ ಮತ್ತು ಮಹೇಶ್ವರ ಕುಳಿತಿದ್ದಾರೆ. ತ್ರಿಭಂಗಿಯಲ್ಲಿ ಮಹೇಶ್ವರ ಮುಂದೆ ದ್ವಿಭಂಗಿಯಲ್ಲಿ ಉಮೆ ಹಿಂದೆ ಕುಳಿತಿದ್ದಾಳೆ ದ್ವಿಭುಜಧಾರಿಗಳಾದ ಇವರ ಕೈಯಲ್ಲಿ ಯಾವುದೇ ಆಯುಧಗಳು ಕಂಡುಬರುವುದಿಲ್ಲ. ನಂದಿ ಭಯಗೊಂಡು ತನ್ನ ಮುಂಗಾಲನ್ನು ಎತ್ತಿ ಜಿಗಿಯುತ್ತಿರುವಂತೆ ನಿಂತಿದೆ. ಇದರ ಭಯದಿಂದ ಉಮಾಮಹೇಶ್ವರರು ಕೆಳಗೆ ಹಾರುವ ಪ್ರಯತ್ನದಲ್ಲಿದ್ದರೆ ಇವರ ಕೈಗಳು ಹಾಳಾಗಿ ಹೋಗಿವೆ. ನಂದಿ ಕೊರಳಲ್ಲಿ ಹಾರ, ಹಣೆಪಟ್ಟಿ, ಗಂಟೆಸರ, ಬೆನ್ನಿನ ಮೇಲೆ ಜೂಲಾ ಹೊಂದಿದೆ. ಕಾಲ ಕೆಳಗೆ ವ್ಯಕ್ತಿಯ ಚಿತ್ರವಿದೆ.

**ಶೈವ ದ್ವಾರಪಾಲಕ ಮೂರ್ತಿಗಳು**

ದೇವಾಲಯದ ಪ್ರವೇಶದ್ವಾರದಲ್ಲಿ ಇಲ್ಲಿನ ಅಂತರಾಳದ ಎಡಬಲಗಳಲ್ಲಿ ದ್ವಾರಪಾಲಕರಿರುವುದು ಸಾಮಾನ್ಯ. ಈ ದ್ವಾರಪಾಲಕರನ್ನು ಆಯಾ ಮುಖ್ಯದೇವರ ಸೇವಕರೆಂದು ಕರೆಯಲಾಗಿದೆ. ಈ ಪರಿಸರದ ಶೈವ ದೇವಾಲಯಗಳ ದ್ವಾರದ ಎಡಬಲದಲ್ಲಿ ಅಭಯ ವರದಹಸ್ತರಾಗಿ, ತ್ರಿಶೂಲ, ಡಮರುಗ, ಹಿಡಿದು ನಿಂತಿರುವ ದ್ವಿಭುಜ ಇಲ್ಲವೆ ಚತುರ್ಭುಜವುಳ್ಳ ಶೈವ ದ್ವಾರಪಾಲಕ

ಶಿಲ್ಪಗಳು ಕಂಡುಬರುತ್ತವೆ. ಅರಸೀಕೆರೆ, ಚಟ್ನಹಳ್ಳಿ, ಹೂವಿನಹಡಗಲಿ, ಆನೆಕೊಂಡ, ಹೊಳಗುಂದಿ ಮೊದಲಾದ ದೇವಾಲಯಗಳಲ್ಲಿ ಈ ಶಿಲ್ಪಿಗಳು ದ್ವಾರದ ಪೇದ್ಯ ಭಾಗದಲ್ಲಿ ಕಂಡುಬರುತ್ತವೆ.

**ಸೂರ್ಯಮೂರ್ತಿ: ಕೆರೆಗುಡಿಹಳ್ಳಿ**

ಈ ಮೂರ್ತಿಯು ಕೆರೆಗುಡಿಹಳ್ಳಿ ಬಸವಣ್ಣನ ಗುಡಿಯಲ್ಲಿದೆ. ಪೀಠದ ಮೇಲೆ ಸಮಭಂಗಿಯಲ್ಲಿ ನಿಂತಿರುವ ಈ ಮೂರ್ತಿ ಕಿರೀಟ ಮುಕುಟಧಾರಿಯಾಗಿದೆ. ಕಿವಿಯಲ್ಲಿ ಮಕರ ಕುಂಡಲ, ಕಂಠಾಭರಣ, ಕೊರಳಲ್ಲಿ ಹಾರ ಯಜ್ಞೋಪವೀತಗಳಿದ್ದು, ವೈಜಯಂತಿ ಹಾರ ಮತ್ತು ಉದರಬಂಧವನ್ನು ಈ ಮೂರ್ತಿ ಧರಿಸಿದೆ. ದ್ವಿಭುಜಧಾರಿಯಾದ ಈ ಮೂರ್ತಿಯ ಎರಡು ಕೈಗಳು ದುಷ್ಕರ್ಮಿಗಳ ಕೃತ್ಯಕ್ಕೆ ಬಲಿಯಾಗಿವೆ. ಮಣಿಸರದಿಂದ ಅಲಂಕೃತವಾದ ಇಳಿವಸ್ತ್ರ ಇದ್ದು ದಪ್ಪನೆಯ ಕಾಲ್ಕಡಗ ಹಾಗೂ ಪಾದಸರಗಳಿವೆ. ಸುತ್ತಲೂ ಸರ್ಪಾಲಂಕೃತ ಪ್ರಭಾವಳಿ ಇದೆ.

**ಸೂರ್ಯಮೂರ್ತಿ: ಗುಂಜಿಗನೂರು (ಚಿತ್ರದುರ್ಗ ಜಿಲ್ಲೆ)**

ಪಶ್ಚಿಮಾಭಿಮುಖವಾಗಿರುವ ಗರ್ಭಗೃಹದಲ್ಲಿ ಸೂರ್ಯನನ್ನು ಪ್ರತಿಷ್ಠಾಪಿಸಿರುವರು. ಇದು ಕೂಡ ವಿಷ್ಣುವಿನಷ್ಟೇ ಎತ್ತರವಾಗಿದೆ. ಒಂದು ಅಡಿ ಎತ್ತರದ ಏಳು ಕುದುರೆಗಳುಳ್ಳ ಪೀಠದ ಮೇಲೆ ಸಮಭಂಗಿಯಲ್ಲಿ ನಿಂತಿರುವ ನಾಲ್ಕು ಅಡಿ ಎತ್ತರದ ಸೂರ್ಯನು ತನ್ನ ಎರಡು ಕೈಗಳಲ್ಲಿ ಪದ್ಮಗಳನ್ನು ಹಿಡಿದಿರುವನು. ವಿವಿಧ ಆಭರಣಗಳಿಂದ ಅಲಂಕೃತನಾಗಿರುವ ಸೂರ್ಯನ ಕೆಳಗೆ ಇಕ್ಕೆಲಗಳಲ್ಲಿ ಬಿಲ್ಲು ಮತ್ತು ಹೂಬಾಣಗಳನ್ನು ಹಿಡಿದಿರುವ ಉಷೆ ಮತ್ತು ಪ್ರತ್ಯುಷೆ ಯರಿರುವರು.

**ಲಕ್ಷ್ಮೀನರಸಿಂಹ: ಕೊಟ್ನೆಕಲ್ಲು (ಹೂವಿನಹಡಗಲಿ ತಾ.)**

ಗರ್ಭಗೃಹದಲ್ಲಿ ಸುಮಾರು ೪ ಅಡಿ ಎತ್ತರದ ಲಕ್ಷ್ಮೀನರಸಿಂಹ ಕಿರೀಟ ಮುಕುಟ ಕರ್ಣ, ಕಂಠಾಭರಣಗಳಿಂದ ಅಲಂಕೃತವಾಗಿದ್ದಾನೆ. ನಾಲ್ಕು ಕೈಗಳನ್ನು ಹೊಂದಿದ್ದು, ಹಿಂದಿನ ಎರಡು ಕೈಗಳಲ್ಲಿ ಶಂಕ, ಚಕ್ರಗಳಿವೆ. ಮುಂದಿನ ಒಂದು ಕೈ ಭಗ್ನವಾಗಿದ್ದು, ಮತ್ತೊಂದು ಕೈಯಲ್ಲಿ ಲಕ್ಷ್ಮೀಯನ್ನು ಆವರಿಸಿದೆ. ಲಕ್ಷ್ಮೀಯು ನರಸಿಂಹನ ಎಡತೊಡೆಯ ಮೇಲೆ ಕುಳಿತಿದ್ದಾಳೆ. ಬಲಕೈಯಲ್ಲಿ ಪದ್ಮ, ಎಡಕೈಯಲ್ಲಿ ನರಸಿಂಹನನ್ನು ಹಿಡಿದಿದ್ದಾಳೆ. ಹಿಂಭಾಗದಲ್ಲಿ ಪ್ರಭಾವಳಿ, ಮೇಲ್ಭಾಗದಲ್ಲಿ ಕೀರ್ತಿ ಮುಖವಿದೆ. ಇದು ಇಡೀ ಶಿಲ್ಪವನ್ನು ಅಲಂಕರಿಸಿದೆ. ಕೆಳಭಾಗದಲ್ಲಿ ಒಂದು ಅಡಿ ಎತ್ತರದ ಪೀಠಭಾಗದಲ್ಲಿ ವಿಷ್ಣುವಿನ ವಾಹನ ಗರುಡನನ್ನು ಮನುಷ್ಯನ ರೂಪದಲ್ಲಿ ಕೈ ಮುಗಿದು ಕುಳಿತಂತೆ ಚಿತ್ರಿಸಲಾಗಿದೆ.

**ಶಾಕ್ತ ಶಿಲ್ಪಗಳು**

**ಸರಸ್ವತಿ :** ಗುಡಿಹಳ್ಳಿಯ ನೊಳಂಬೇಶ್ವರ ದೇವಸ್ಥಾನದ ಎಡಭಾಗದಲ್ಲಿ ಈ ದೇವಸ್ಥಾನವಿದೆ. ಪೀಠದ ಮೇಲೆ ಪದ್ಮಾಸನದಲ್ಲಿ ಆಸನವಾಗಿರುವ ಈ ಮೂರ್ತಿಯೂ ಮುಕುಟಧಾರಿಯಾಗಿದೆ. ಕೇಯೂರ, ಕೈಕಡಗ, ಮೂಗುಬೊಟ್ಟು, ಕಂಠಾಭರಣ, ಕೊರಳಹಾರ, ಕುಚಬಂಧಗಳಿದ್ದು ಭುಜಕೀರ್ತಿ ಮೇಲಿನ ಕೈಗಳಲ್ಲಿ ಅಂಕುಶ, ಪಾಶವಿದ್ದು, ಕೆಳಗಿನ ಕೈಗಳಲ್ಲಿ ಅಕ್ಷ ಮಾಲೆಯುಕ್ತ ಅಭಯಹಸ್ತ

ಹಾಗೂ ಪುಸ್ತಕವಿದ್ದು ಕಾಲುಗಳಲ್ಲಿ ದಪ್ಪನೆಯ ಕಾಲ್ಕಡಗ ಪಾದಸರ ಮತ್ತು ಕಾಲಿನ ಬೆರಳುಗಳಲ್ಲಿ ಉಂಗುರುಗಳಿವೆ. ಸುತ್ತಲೂ ಪ್ರಭಾವಳಿಯಿದ್ದು, ಪೀಠದಲ್ಲಿ ಸರಸ್ವತಿ ವಾಹನ ಹಂಸವಿದೆ. ಪಾದಗಳವರೆಗೆ ಇಳಿಬಿದ್ದ ವೈಜಯಂತಿ ಮಾಲೆಯಿರುವುದು. ಆನೆಕೊಂಡ, ಅಲಗಿಲವಾಡ ದೇವಾಲಯದ ಶಿಲ್ಪಗಳು ಇವೇ ಲಕ್ಷಣಗಳನ್ನು ಹೊಂದಿವೆ.

**ಗಜಲಕ್ಷ್ಮೀ :** ಈ ಪರಿಸರದ ದೇವಾಲಯಗಳ ಪ್ರವೇಶದ್ವಾರಗಳ ಲಲಾಟದಲ್ಲಿ 'ಗಜಲಕ್ಷ್ಮಿ'ಯನ್ನು ಚಿತ್ರಿಸಲಾಗಿದೆ. ಕೈಗಳಲ್ಲಿ ಪದ್ಮ ಹಿಡಿದು ಕಮಲದ ಮೇಲೆ ಕುಳಿತಿರುವ ಲಕ್ಷ್ಮೀಯ ಎರಡು ಬದಿಗಳಲ್ಲಿ ಆನೆಗಳು ಸೊಂಡಿಲಲ್ಲಿ ಕುಂಭಗಳನ್ನು ಹಿಡಿದು ಅಭಿಷೇಕ ಮಾಡುತ್ತಿವೆ. ಆನೆಗಳ ದೇಹದ ಎಲ್ಲ ಭಾಗಗಳು ಪ್ರಮಾಣಬದ್ಧವಾಗಿ ಮೂಡಿಬಂದಿರುವುದನ್ನು ಗಜಲಕ್ಷ್ಮಿ ಮೂರ್ತಿಗಳಲ್ಲಿ ನೋಡಬಹುದು. 'ಗಜಲಕ್ಷ್ಮೀ' ಸಂತಾನ ದೇವತೆಯಾಗಿ ಕಂಡುಬರುತ್ತಾಳೆ. ಎಲ್ಲಾ ದೇವಾಲಯಗಳ ಪ್ರವೇಶ್ವದ್ವಾರದ ಲಲಾಟದಲ್ಲಿ ಈ ಶಿಲ್ಪ ಕಂಡುಬರುತ್ತದೆ.

**ಸಪ್ತಮಾತೃಕೆಯರು:** ಶೈವ, ಇಲ್ಲವೇ ವೈಷ್ಣವ ದೇವಾಲಯಗಳಲ್ಲಿ ಸಪ್ತಮಾತೃಕೆಯರ ಶಿಲ್ಪಗಳು ಕಂಡುಬರುತ್ತವೆ. ಪ್ರತ್ಯೇಕ ದೇವಾಲಯಗಳು ಈ ಪರಿಸರದಲ್ಲಿ ಎಲ್ಲಿಯೂ ಇಲ್ಲ ಸಪ್ತಮಾತೃಕೆಯರು ಊರ ಹೆಸರನ್ನು ಪಡೆದು ದೇವತೆಗಳಾಗಿ ಎಲ್ಲಾ ವರ್ಗದ ಜನರಿಂದ ಪೂಜೆಗೊಳ್ಳುವವರಾಗಿರುತ್ತಾರೆ. ಅನೇಕ ವೇಳೆ ಶಿವದೇವಾಲಯಗಳ ಪರಿವಾರ ದೇವತೆಗಳಾಗಿ ಕೆಲವೊಮ್ಮೆ ಸ್ವತಂತ್ರವಾಗಿಯೂ ಪೂಜೆಗೊಳ್ಳುತ್ತಾರೆ. ಇವರನ್ನು ಕನ್ಯೆಯರೆಂದೂ, ಅಮ್ಮನವರೆಂದು ಕರೆಯುವುದು ವಾಡಿಕೆ. ಈ ಮೂರ್ತಿಗಳ ಗಾತ್ರ ಮತ್ತು ಅಂಗಗಳ ವಿನ್ಯಾಸವು ಕಲ್ಲಿನ ಅಳತೆ, ಆಕಾರವನ್ನು ಅವಲಂಬಿಸಿರುತ್ತದೆ. ಚಾಮುಂಡಿಯನ್ನುಳಿದ ಇತರ ವಿಗ್ರಹಗಳು ಒಂದು ಅಥವಾ ಒಂದುವರೆ ಅಡಿ ಎತ್ತರದ ವಿಗ್ರಹಗಳಾಗಿರುತ್ತವೆ.

ಕೌಶಿಕ ದುರ್ಗಿ ರಕ್ತಬೀಜಾಸುರನೊಡನೆ ಹೋರಾಡುತ್ತಿರುವಾಗ ಅಸುರನ ರಕ್ತ ನೆಲಕ್ಕೆ ಬಿದ್ದ ತಕ್ಷಣ ಮತ್ತೊಬ್ಬ ರಕ್ತಬೀಜಾಸುರ ಜನಿಸಿ ದೇವಿಯೊಡನೆ ಹೋರಾಟಕ್ಕಿಳಿಯುತ್ತಿದ್ದ. ಈ ಸಂದರ್ಭದಲ್ಲಿ ದೇವಿಯು ತನ್ನ ಸಹಾಯಕ್ಕಾಗಿ ಏಳು ಜನ ದೇವತೆಯರನ್ನು ಸೃಷ್ಟಿಸಿದಳು. ಈ ದೇವತೆಗಳೇ ಸಪ್ತಮಾತೃಕೆಯರು. ದುರ್ಗಸಪ್ತಸತಿ ಗ್ರಂಥವು ಈ ಬಗ್ಗೆ ವಿವರಣೆ ನೀಡುತ್ತದೆ.[೨೫೦]

ಈ ಪರಿಸರದಲ್ಲಿ ಸಪ್ತಮಾತೃಕೆ ಶಿಲ್ಪಗಳು ಕಂಡುಬರುತ್ತವೆ. ಸಪ್ತಮಾತೃಕೆ ಶಿಲ್ಪಗಳ ಲಕ್ಷಣಗಳನ್ನು ಇಲ್ಲಿ ನೋಡಬಹುದು.

ಪೀಠದ ಮೇಲೆ ಲಲಿತಾಸನದಲ್ಲಿ ಕ್ರಮವಾಗಿ ಬ್ರಾಹ್ಮೀ, ಮಹೇಶ್ವರ, ಕೌಮಾರಿ, ವೈಷ್ಣವಿ, ವರಾಹಿ, ಇಂದ್ರಾಣಿ, ಚಾಮುಂಡೇಶ್ವರಿ ಮೂರ್ತಿಗಳು ಕಿರೀಟ ದಾರಿಗಳಾಗಿವೆ. ಇವರ ಕೈಯಲ್ಲಿ ಕುಂಡಲಗಳಿವೆ. ಕೊರಳಲ್ಲಿ ವಿವಿಧ ಬಗೆಯ ಹಾರಗಳಿದ್ದು ವೀರಭದ್ರ, ಗಣೇಶನನ್ನು ಹೊರತುಪಡಿಸಿ ಉಳಿದ ಎಲ್ಲಾ ಮೂರ್ತಿಗಳಿಗೂ ಕುಚಬಂಧಗಳಿವೆ. ಈ ಮೂರ್ತಿಗಳು ಚತುರ್ಭುಜಗಳನ್ನು ಹೊಂದಿದ್ದು ವೀರಭದ್ರನ ಮೇಲಿನ ಕೈಗಳಲ್ಲಿ ತ್ರಿಶೂಲ, ಡಮರ, ಕೆಳಗಿನ ಬಲಗೈ ವರದ ಮುದ್ರೆಯಲ್ಲಿದೆ. ಎಡಗೈಯಲ್ಲಿ ಫಲವಿದೆ. ಬ್ರಾಹ್ಮಿಯು ಮೂರು ಮುಖಗಳನ್ನು ಹೊಂದಿದ್ದು,

ಮೇಲಿನ ಕೈಗಳಲ್ಲಿ ಅಂಕುಶ, ಪಾಶ, ಕೆಳಗಿನ ಬಲಗೈ ವರದ ಮುದ್ರೆಯಲಿದ್ದು ಎಡಗೈಯಲ್ಲಿ ಪುಸ್ತಕವಿದೆ. ಮಹೇಶ್ವರಿಯ ಮೇಲಿನ ಕೈಗಳಲ್ಲಿ ತ್ರಿಶೂಲ ಮತ್ತು ಡಮರುಗಳಿದ್ದು, ಕೆಳಗಿನ ಬಲಗೈ ವರದ ಮುದ್ರೆಯಲ್ಲಿಯೂ ಹಾಗೂ ಎಡಗೈಯಲ್ಲಿ ಫಲವಿದೆ. ವೈಷ್ಣವಿಯ ಮೇಲಿನ ಕೈಗಳಲ್ಲಿ ಶಂಖ, ಚಕ್ರ, ಕೆಳಗಿನ ಬಲಗೈ ವರದ ಮುದ್ರೆಯಲ್ಲಿದ್ದು ಎಡಗೈಯಲ್ಲಿ ಫಲವಿದೆ. ಕೌಮಾರಿಯು ಮೂರು ಮುಖಗಳನ್ನು ಹೊಂದಿದ್ದು, ಮೇಲಿನ ಕೈಗಳಲ್ಲಿ ಬಾಣವನ್ನು ಕೆಳಗಿನ ಬಲಗೈಯಲ್ಲಿ ಪದ್ಮ ಎಡಗೈಯಲ್ಲಿ ಫಲವಿದೆ. ವರಾಹಿಯ ಮೇಲಿನ ಕೈಗಳಲ್ಲಿ ಬಣಗಳು, ಕೆಳಗಿನ ಕೈಗಳಲ್ಲಿ ವಜ್ರ ಮತ್ತು ಫಲಗಳಿವೆ. ಚಾಮುಂಡಿ ಮೂರ್ತಿಯ ಮೇಲಿನ ಕೈಗಳಲ್ಲಿ ತ್ರಿಶೂಲ, ಡಮರು, ಕೆಳಗಿನ ಕೈಗಳಲ್ಲಿ ಖಡ್ಗ ಮತ್ತು ಕಪಾಲಗಳಿವೆ. ಕೊನೆಯಲ್ಲಿ ಗಣೇಶನ ಮೇಲಿನ ಕೈಗಳಲ್ಲಿ ಅಂಕುಶ, ಪಾಶಗಳಿದ್ದು, ಕೆಳಗಿನ ಕೈಗಳಲ್ಲಿ ದಂತ ಮತ್ತು ಮಾದಕ ಪಾತ್ರೆಯಿದೆ. ಚಾಮುಂಡಿಗೆ ರುಂಡಮಾಲೆಯ ಯಜ್ಞೋಪವೀತ ಇದೆ. ಈ ಎಲ್ಲಾ ಮೂರ್ತಿಗಳಿಗೆ ಕಟಿಬಂಧವಿದ್ದು ಇಳಿವಸ್ತ್ರ ಎರಡು ಕಾಲಿನ ಮಧ್ಯದಿಂದ ಇಳಿಬಿದ್ದಿದೆ.

ಈ ಎಲ್ಲಾ ಮೂರ್ತಿಗಳು ಲಲಿತಾಸನದಲ್ಲಿ ಕುಳಿತುಕೊಂಡಿರುವುದು ವಿಶೇಷವಾಗಿದ್ದು ಪಾದಗಳಲ್ಲಿ ಕಡಗ ಹಾಗೂ ಪಾದಸರಗಳಿವೆ. ಕಾಲಿನ ಬಳಿ ಅವರವರ ವಾಹನಗಳನ್ನು ಕೆತ್ತಲಾಗಿದೆ. ಇಲ್ಲಿ ಕೌಮಾರಿ ಮೂರು ಮುಖಗಳನ್ನು ಹೊಂದಿರುವುದು ವಿಶೇಷ. ಈ ಸಪ್ತಮಾತೃಕೆಯರ ಮೂರ್ತಿ ಶಿಲ್ಪಗಳನ್ನು ಆಧಾರವಾಗಿಟ್ಟುಕೊಂಡು ಇದು ಕಲ್ಯಾಣ ಚಾಳುಕ್ಯರ ಕಾಲಕ್ಕೆ ಸೇರಿದ್ದಾಗಿದೆ ಎಂದು ಹೇಳಬಹುದಾಗಿದೆ. ಸಪ್ತಮಾತೃಕೆಗಳಲ್ಲಿ ವೀರಭದ್ರ ಮತ್ತು ಗಣೇಶ ಶಿಲ್ಪಗಳು ಇರುತ್ತವೆ. ಬ್ರಾಹ್ಮೀಯ ಬಲಭಾಗದಲ್ಲಿ ವೀರಭದ್ರ, ಚಾಮುಂಡಿಯ ಎಡಭಾಗದಲ್ಲಿ ಗಣೇಶನನ್ನು ಇರಿಸಿ ನಡುವೆ ಮಾತೃಗಣಗಳನ್ನಿರಿಸಬೇಕೆಂದು ವಿಧಿಯಿದೆ.[೨೫೧]

**ಮಹಾಸತಿಗಲ್ಲು**

ಸತಿ ಎನ್ನುವ ಪದ ಧಾರ್ಮಿಕ ಆಚರಣೆಯನ್ನು ಬಿಂಬಿಸುವ ಪದವಾಗಿದೆ. ಮಹಾಸತಿ ಎಂಬುದರ ತದ್ಭವ ರೂಪವೇ ಮಾಸ್ತಿ. ಪ್ರಾಚೀನ ಕಾಲದಲ್ಲಿ ಸತಿಪದ್ಧತಿ ಬ್ರಾಹ್ಮಣ ಸಮಾಜದಲ್ಲಿ ಆರಂಭವಾದರೂ ಕ್ರಮೇಣ ಕ್ಷತ್ರಿಯರಲ್ಲಿ ಅದು ಮುಂದುವರಿಯಿತು. ಯುದ್ಧದಲ್ಲಿ ಹೋರಾಡಿ ಮಡಿದವರ ಪತ್ನಿಯರು, ಗೋಗ್ರಹಣ, ಊರಿಳಿವು, ತುರುಗೋಳ್, ಪೆಣ್ಬುಯಲ್‌ಗಳಂತಹ ಸಂದರ್ಭದಲ್ಲಿ ವೀರಮರಣ ಹೊಂದಿದ ವೀರರ ಪತ್ನಿಯರು ತಮ್ಮ ಮುಂದಿನ ಜೀವನದ ಭಯದಿಂದಲೋ ಇಲ್ಲವೆ ಸ್ವರ್ಗಪ್ರಾಪ್ತಿಯಾಗುವುದೆಂಬ ಭಾವನೆಯಿಂದಲೋ ಸತಿ ಆಚರಿಸುತ್ತಿದ್ದರು.[೨೫೨] ಇದರಲ್ಲಿ ಅರಸ, ಸಾಮಂತ, ಗಾವುಂಡ ಅಲ್ಲದೆ ಜನಸಾಮಾನ್ಯರಿಗೂ ಸಂಬಂಧಿಸಿದ ಮಹಿಳೆಯರೂ ಭಾಗಿಗಳಾಗುತ್ತಿದ್ದರು. ಅವರ ಸ್ಮರಣೆಗಾಗಿ ಸ್ಮಾರಕ ಶಿಲೆಗಳನ್ನು ನಿಲ್ಲಿಸಲಾಗುತ್ತಿತ್ತು. ಇಂತಹ ಸ್ಮಾರಕ ಶಿಲೆಗಳನ್ನು ಮಾಸ್ತಿಕಲ್ಲುಗಳೆಂದು ಕರೆಯುತ್ತಾರೆ.

ನೊಳಂಬವಾಡಿ ಪ್ರದೇಶದ ಗ್ರಾಮಗಳಲ್ಲಿ ಮಾಸ್ತಿ ಮತ್ತು ವೀರಮಾಸ್ತಿ ಕಲ್ಲುಗಳು ಕಂಡುಬರುತ್ತವೆ. ಸಮಭಂಗಿಯಲ್ಲಿ ನಿಂತ ಸ್ತ್ರೀ ಅನೇಕ ಆಭರಣಗಳನ್ನು ಧರಿಸಿ, ನೆರಿಗೆಯುಕ್ತ

ವಸ್ತ್ರಧಾರಿಯಾಗಿದ್ದು ಬಲಗೈ ಮೇಲಕ್ಕೆತ್ತಿದ್ದು ನಿಂಬೆಹಣ್ಣು ಹಿಡಿದಿರುತ್ತಾಳೆ. ತಲೆಯ ಕೇಶಗಳನ್ನು ಹಿಂಬಂದಿಗೆ ಗಂಟುಕಟ್ಟಿ ಕೇದಿಗೆಯಿಂದ ಅಲಂಕಾರ ಮಾಡಲಾಗಿದೆ. ಕಿವಿ, ಓಲೆ, ಸೊಂಟಪಟ್ಟಿ ಧರಿಸಿದಂಥ ಮಾಸ್ತಿ ಕಲ್ಲುಗಳು ಸಾಮಾನ್ಯವಾಗಿ ಕಂಡುಬರುತ್ತವೆ.

**ಮಾಸ್ತಿಕಲ್ಲು: ನಂದಿಬೇವೂರು (ಹರಪನಹಳ್ಳಿ ತಾ.)**

ತೇರಿನ ಮನೆಯ ಹತ್ತಿರ ಇರುವ ಆಂಜನೇಯ ದೇವಸ್ಥಾನದ ಪೌಳಿಯ ಒಳಗೆ ಬಲಬದಿಯಲ್ಲಿದೆ(ವಾಯುವ್ಯ ದಿಕ್ಕು). ಇದನ್ನು ಚೌಡಮ್ಮ, ಚೌಡೇಶ್ವರಿ, ಚೌಡಿ ಎಂದು ಪೂಜಿಸುತ್ತಾರೆ. ಈ ಮಾಸ್ತಿಯ ೫ ಅಡಿ ಎತ್ತರ ೨.೬ ಅಡಿ ಅಗಲ ವಿನ್ಯಾಸದಲ್ಲಿ ಮೇಲೆ ವೃತ್ತಾಕಾರದಲ್ಲಿದೆ. ಇದು ಪೂರ್ಣ ಸತಿಶಿಲ್ಪವಾಗಿದೆ. ಪೂರ್ಣ ಸತಿಶಿಲ್ಪವೆಂದರೆ ಶಾಸನ ಫಲಕದಲ್ಲಿ ಕೇವಲ ಮಹಿಳೆಯೊಬ್ಬಳ ಚಿತ್ರ ಮಾತ್ರ ಇರುತ್ತದೆ. ಇಲ್ಲಿ ಬೇರೆ ಇನ್ಯಾರ ಶಿಲ್ಪವೂ ಇರುವುದಿಲ್ಲ. ಇದು ನೋಡಲು ದೇವತೆಯ ಮೂರ್ತಿಶಿಲ್ಪದಂತೆ ಕಾಣುತ್ತದೆ. ಕ್ರಿಶ ೧೨ನೇ ಶತಮಾನಕ್ಕೆ ಇದರ ಕಾಲವನ್ನು ಗುರುತಿಸಬಹುದು. ಆಳೆತ್ತರದ ಈ ಶಿಲೆಯ ಕೆಳಭಾಗದಲ್ಲಿ ಎರಡು ಚೌಕ ಮೆಟ್ಟಿಲುಗಳ ಮೇಲೆ ವೃತ್ತಾಕಾರದ ಪೀಠದ ಮೇಲೆ ಮಹಾಸತಿ ನಿಂತಿದ್ದಾಳೆ. ಅವಳ ಸದೃಢ ದೇಹ ರಚನೆಯ ಸ್ಪಷ್ಟಚಿತ್ರಣವನ್ನು ಶಿಲ್ಪಿ ತೋರಿಸಿದ್ದಾನೆ. ನೇರಭಂಗಿಯಲ್ಲಿ ನಿಂತಿರುವ ಮಾಸ್ತಿಯು ತನ್ನ ಬಲಗೈಯನ್ನು ಯೋಗಮುದ್ರೆಯಲ್ಲಿ ಮೇಲಕ್ಕೆ ಎತ್ತಿದ್ದಾಳೆ. ಹೆಬ್ಬೆರಳು ಮತ್ತು ತೋರುಬೆರಳುಗಳ ಮಧ್ಯೆ ನಿಂಬೆಹಣ್ಣನ್ನು ಹಿಡಿದಿದ್ದಾಳೆ. (ಅಮಂಗಲ ನಿವಾರಕವಾಗಿ ಮದುವೆ ಗಂಡು ಹಿಡಿದಿರುತ್ತಿದ್ದ ನಿಂಬೆಹಣ್ಣನ್ನೇ (ಸ್ವರ್ಗದಲ್ಲಿರುವ) ಗಂಡನ ಬಳಿಗೆ ಹೋಗುತ್ತೇನೆಂದು ನಂಬಿರುತ್ತಿದ್ದ ಸರ್ವಾಭರಣ ಭೂಷಿತೆಯಾದ ಮಹಾಸತಿಯು ತನ್ನ ಕೈಯಲ್ಲಿ ಹಿಡಿದು ಚಿತೆಯ ಬಳಿ ಹೋಗುತ್ತಿದ್ದಳು. ಅದನ್ನೆ ಶಿಲ್ಪದಲ್ಲಿ ಕೆತ್ತಿರುವಂತೆ ತೋರುತ್ತದೆ.) ಬಲಗೈಯ ಕೆಳಗೆ (ಬಲಬದಿಯಲ್ಲಿ) ಕರಂಡಿಕೆಯನ್ನು ಸುಂದರವಾಗಿ ಕೆತ್ತಲಾಗಿದೆ.

ಎಡಗೈಯನ್ನು ಯೋಗ ಮುದ್ರೆಯಲ್ಲಿ ನೀಳವಾಗಿ ಕೆಳಗೆ ಇಳಿಬಿಟ್ಟಿದ್ದು, ಹೆಬ್ಬೆರಳು ಮತ್ತು ತೋರುಬೆರಳುಗಳ ಮಧ್ಯ ಕಮಲದ ಮೊಗ್ಗನ್ನು ಕೆಳಮುಖವಾಗಿ ಹಿಡಿದಿದ್ದಾಳೆ. ಇದನ್ನು ಸಾಮಾನ್ಯವಾಗಿ ನೋಡಿದರೆ ಮಹಿಷ/ಕೋಣದ ತಲೆಯನ್ನು ಹಿಡಿದಂತೆ ಕಾಣುತ್ತದೆ. ನಮ್ಮ ಊಹೆ ಕೂಡ ಅದೇ ಆಗಿತ್ತು. ಆದರೆ ಪುರಾತತ್ವ ತಜ್ಞರಾದ ಅ.ಸುಂದರ ಅವರು ಪರಿಶೀಲಿಸಿ ಕಮಲದ ಮೊಗ್ಗು ಎಂದು ಖಚಿತಪಡಿಸಿದ್ದಾರೆ. ಇದು ಮುತ್ತೈದೆ ಮಹಿಳೆಯ ಸೌಭಾಗ್ಯದ ಸಂಕೇತವಾಗಿದೆ. ಮಹಾಸತಿಯು ತನ್ನ ಎರಡು ಕೈಗಳಲ್ಲಿ ಬಳೆ, ತೋಳ್ಬಂದಿಗಳನ್ನು ತೊಟ್ಟಿದ್ದಾಳೆ, ಇವಳ ಕೇಶಶೃಂಗಾರ ಕೇದಿಗೆ ಗರಿಗಳಿಂದ ಅಲಂಕರಿಸಿ ಆಕರ್ಷಕವಾಗಿದೆ. ಕೊರಳು ಮತ್ತು ಎದೆಯ ಮೇಲೆ ವಿವಿಧ ಬಗೆಯ ಆಭರಣಗಳಿವೆ. ಕತ್ತಿನಲ್ಲಿ ಕಡಗ ಮಾದರಿಯ ಆಭರಣವಿದೆ, ಇದರ ಕೆಳಗೆ ಮಣಿಗಳನ್ನು ಮೂರು ಸಾಲಿನಲ್ಲಿ ಜೋಡಿಸಿ ಮಾಡಿದ ಕಂಠಿಹಾರವಿದೆ. ಕೊರಳಿನಿಂದ ಸ್ತನಗಳ ಮುಂತುದಿಯವರೆಗೂ ಈ ಕಂಠಿಹಾರ ಮೂರು ಹಂತಗಳಲ್ಲಿ ಹರಡಿದ್ದು, ಸೂಕ್ಷ್ಮ ರಚನೆಯಿಂದ ಕೂಡಿದೆ. ಕಿವಿಯಲ್ಲಿ ಕಿವಿಯೋಲೆಗಳಿವೆ. ಸತಿಯು ಬಹಳ ಸಣ್ಣದಾದ

ನಡುವನ್ನು ಹೊಂದಿದ್ದು ಸೀರೆಯ ನೆರಿಗೆಯು ಸೊಂಟದ ಸುತ್ತಲೂ ಹೂವಿನಂತೆ ತೆರೆತೆರೆಯಾಗಿ ಪಾದದವರೆಗೂ ಹರಡಿದ್ದು ಸೊಂಟಕ್ಕೆ ಬೇರೆ ಬಟ್ಟೆಯನ್ನು ಸುತ್ತಿಕೊಂಡಂತೆ ಚಿತ್ರಿಸಲಾಗಿದೆ. ಅದರ ಕುಚ್ಚು ಹೊಕ್ಕಳಿನಿಂದ ಕೆಳಕ್ಕೆ ಇಳಿಬಿದ್ದಿದೆ. ಮಾಸ್ತಿಯ ಕುತ್ತಿಗೆ ಮತ್ತು ಕಂಕುಳ ಭಾಗದಲ್ಲಿ ಎರಡು ರಂಧ್ರಗಳನ್ನು ಮಾಡಲಾಗಿದೆ. ಇದಕ್ಕೆ ಕಾರಣ ಸ್ಪಷ್ಟವಾಗಿ ತಿಳಿದು ಬರುವುದಿಲ್ಲ. ಸ್ಥಳೀಯರು ಹಬ್ಬ-ಹರಿದಿನಗಳಲ್ಲಿ ಮಹಾಸತಿ ಶಿಲ್ಪಕ್ಕೆ ಹೂವಿನ ಹಾರವನ್ನು ಹಾಕಲು ಅಥವಾ ಸೀರೆ ಇನ್ನಿತರ ಬಟ್ಟೆಯನ್ನು ತೊಡಿಸಲು ಸುಲಭವಾಗಲಿ ಎಂದು ಈ ರೀತಿ ರಂಧ್ರ ಮಾಡಿರಬಹುದು. ಮಹಾಸತಿ ಶಿಲ್ಪದ ಮೇಲ್ಭಾಗದಲ್ಲಿ ಸ್ವರ್ಗದ ಕಲ್ಪನೆಯಿದೆ. ಬಲಬದಿಯಲ್ಲಿ ಮಾಸ್ತಿ ದೇವರ ಸನ್ನಿಧಿಯಲ್ಲಿ ಎರಡು ಕೈಗಳನ್ನು ಜೋಡಿಸಿ ಕೈಮುಗಿದು ಪದ್ಮಾಸನದಲ್ಲಿ ಕುಳಿತಿದ್ದಾಳೆ. ಎದುರಿಗೆ ಶಿವಲಿಂಗವಿದೆ. ಇದರ ಮುಂದೆ ನಂದಿ ಮಂಡಿಯೂರಿ ಕುಳಿತಿದೆ. ಹಿಂಬದಿಯಲ್ಲಿ ಯತಿ ಪೂಜಾ ಸಾಮಗ್ರಿಗಳನ್ನು ಹಿಡಿದು ಶಿವಲಿಂಗದ ಕಡೆ ಬರುವಂತೆ ಚಿತ್ರಿಸಲಾಗಿದೆ.

**ವೀರಮಾಸ್ತಿ : ಪುನಭಘಟ್ಟ (ಹರಪನಹಳ್ಳಿ ತಾ.)**

ಪುನಭಘಟ್ಟ ಗ್ರಾಮದ ಆಂಜನೇಯ ದೇವಸ್ಥಾನದ ಹತ್ತಿರ ವೀರಮಾಸ್ತಿಕಲ್ಲು ಇದೆ. ಬಲಬದಿಯಲ್ಲಿ ವೀರ ಕತ್ತಿಧಾರಿಯಾಗಿ ದ್ವಿಭಂಗಿಯಲ್ಲಿ ನಿಂತಿದ್ದಾನೆ. ಬಲಗೈಲಿ ಖಡ್ಗವಿದೆ. ಕೊರಳಲ್ಲಿ ಹಾರ ಧರಿಸಿದ್ದಾನೆ. ಕಾಲಲ್ಲಿ ಕಡಗವಿದೆ. ಬಲಬದಿಯಲ್ಲಿ ಮಾಸ್ತಿ ತನ್ನ ಬಲಗೈಯನ್ನು ಮೇಲಕ್ಕೆತ್ತಿ ನಿಂಬೆಹಣ್ಣು ಹಿಡಿದಿದ್ದಾಳೆ. ಎಡಗೈ ಕೆಳಮುಖವಾಗಿದೆ. ತೆಳುವಾದ ಸೊಂಟಕ್ಕೆ ನೆರಿಗೆಯುಕ್ತ ವಸ್ತ್ರ ಧರಿಸಿದ್ದು ಕೊರಳಲ್ಲಿ ಹಾರ, ಸೊಂಟಪಟ್ಟಿ, ಕಿವಿ ಓಲೆ, ಕೈಕಡಗ ಹೊಂದಿದ ಕೇಶಾಲಂಕಾರದಿಂದ ಕೂಡಿದೆ. ಮೇಲಿನ ಭಾಗದಲ್ಲಿ ಸೂರ್ಯ, ಚಂದ್ರ, ಲಿಂಗದ ಶಿಲ್ಪಗಳಿದ್ದು ವೀರ ಮತ್ತು ಮಾಸ್ತಿ ಅಂಜಲಿ ಮುದ್ರೆಯಲ್ಲಿ ಕುಳಿತಿರುವ ದೃಶ್ಯವಿದೆ. ಮಾಸ್ತಿಕಲ್ಲುಗಳನ್ನು ಕಾಳಮ್ಮ, ಮಾಸ್ತಮ್ಮ ಎಂದು ವಿವಿಧ ಹೆಸರುಗಳಿಂದ ಕೆಲವು ಕಡೆ ಪೂಜಿಸಲಾಗುತ್ತಿದೆ.

**ವೀರಗಲ್ಲು**

ಅರಸನಿಗಾಗಿ, ಸಾಮ್ರಾಜ್ಯದ ರಕ್ಷಣೆಗಾಗಿ, ಇಲ್ಲವೆ ಊರಿನ ಹಿತಕ್ಕಾಗಿ, ವೈರಿಗಳ ವಿರುದ್ಧ ಹೋರಾಡಿ ಮರಣ ಹೊಂದಿದ ವೀರನ ಸ್ಮರಣೆಗಾಗಿ ನೆಟ್ಟ ಶಿಲ್ಪ ಶಿಲಾಫಲಕಗಳು ಇಲ್ಲವೇ ಲಿಪಿಸಹಿತ ಶಿಲ್ಪ ಶಿಲಾಫಲಕಗಳನ್ನು 'ವೀರಗಲ್ಲು'ಗಳೆಂದು ಕರೆಯಲಾಗುತ್ತದೆ.[೨೫೩] ವೀರಗಲ್ಲುಗಳನ್ನು ನಿಲ್ಲಿಸುವುದರಿಂದ ಅವನ ಶೌರ್ಯ, ಸಾಹಸ ಲೋಕಕ್ಕೆ ತಿಳಿಯುತ್ತಿತ್ತು ಹಾಗೂ ಮೃತಪಟ್ಟ ವೀರನಿಗೆ ಸ್ವರ್ಗಪ್ರಾಪ್ತಿ ಎಂಬ ನಂಬಿಕೆ ಸಾಮಾನ್ಯವಾಗಿತ್ತು. ಇವುಗಳನ್ನು ಮೃತಪಟ್ಟ ವ್ಯಕ್ತಿಯ ಹತ್ತಿರದ ಸಂಬಂಧಿಗಳು, ಊರಿನ ಸಾರ್ವಜನಿಕರು, ಕೆಲವು ಸಂದರ್ಭಗಳಲ್ಲಿ ಸತ್ತ ವೀರನ ಹೆಂಡತಿ ಮಕ್ಕಳಿಗಾಗಿ ಬದುಕಿ ಸಹಗಮನ ಮಾಡದೆ ಗಂಡನಿಗಾಗಿ ವೀರಗಲ್ಲನ್ನು ನಿರ್ಮಿಸುತ್ತಿದ್ದಳು.[೨೨೪] ವೀರಗಲ್ಲುಗಳನ್ನು ಇಂಥವರೇ ಹಾಕಿಸಬೇಕೆಂಬ ನಿಯಮಗಳೇನೂ ಇರಲಿಲ್ಲ. ಇಂತಹ ವೀರಗಲ್ಲುಗಳು ಈ ಪರಿಸರದಲ್ಲಿ ಕಂಡುಬರುತ್ತವೆ.

ಸಾಮಾನ್ಯವಾಗಿ ಈ ವೀರಗಲ್ಲುಗಳು ಒಂದರಿಂದ ಮೂರು ಹಂತಗಳಲ್ಲಿರುತ್ತದೆ. ಕೆಳಗಿನ ಹಂತದಲ್ಲಿ ವೀರನು ಶತ್ರುಗಳೊಡನೆ ಹೋರಾಡುತ್ತಿರುವುದು. ಮಧ್ಯದಲ್ಲಿ ಸಖಿಯರು ಅವನನ್ನು ಸ್ವರ್ಗಕ್ಕೆ ಹೊತ್ತೊಯ್ಯುತ್ತಿರುವುದು. ಮೇಲಿನ ಭಾಗದಲ್ಲಿ ಶಿವಲಿಂಗದ ಮುಂದೆ ವೀರನು ಅಂಜಲಿ ಮುದ್ರೆಯಲ್ಲಿ ಕುಳಿತಿರುವ ದೃಶ್ಯ ಹಾಗೂ ನಂದಿ, ಸೂರ್ಯ, ಚಂದ್ರರ ದೃಶ್ಯಗಳಿರುತ್ತವೆ.

ಪುನಭಘಟ್ಟದ ವೀರಗಲ್ಲು ಇವುಗಳಿಗಿಂತ ವಿಶೇಷವಾಗಿವೆ. ಮೂರು ಅಡಿ ಎತ್ತರದ ಬಳಪದ ಶಿಲೆಯಲ್ಲಿ ಇರುವ ಇದು ಬಹಳ ಸುಂದರವಾಗಿದೆ. ಈ ವೀರಗಲ್ಲು ಮೂರು ಪಟ್ಟಿಕೆಗಳಿಂದ ಕೂಡಿದ್ದು, ಕೆಳಗಿನ ಹಂತದಲ್ಲಿ ಮಧ್ಯದಲ್ಲಿ ಇಬ್ಬರು ವೀರರನ್ನು ದೊಡ್ಡ ಗಾತ್ರದಲ್ಲಿ ಚಿತ್ರಿಸಿದ್ದು ಇವರ ಬದಿಗಳಲ್ಲಿ ಸೈನಿಕರನ್ನು ಕಾಣಬಹುದಾಗಿದೆ. ಎಡಭಾಗದಲ್ಲಿ ಶತ್ರುಗಳು ಹಸುಗಳನ್ನು ಅಪಹರಿಸಿಕೊಂಡು ಹೋಗುತ್ತಿರುವ ದೃಶ್ಯವಿದೆ. ಬಲಬದಿಯಲ್ಲಿ ವೀರ ಬಿಲ್ಲುದಾರಿಯಾಗಿ ತನ್ನ ಸೈನಿಕರೊಂದಿಗೆ ಹೋರಾಡುತ್ತಿದ್ದು ಬಿಲ್ಲಿನಿಂದ ಬಂದ ಬಾಣ ವೀರನ ಹೊಟ್ಟೆಯನ್ನು ಪ್ರವೇಶಿಸುವಂತೆ ಚಿತ್ರಿಸಲಾಗಿದೆ. ಎಡಬದಿಯಲ್ಲಿ ಇರುವ ಹಸುಗಳನ್ನು ಗಾಬರಿಗೊಂಡು ಓಡುತ್ತಿರುವಂತೆ ಚಿತ್ರಿಸಲಾಗಿದೆ. ಇದರ ಮೇಲಿನ ಪಟ್ಟಿಕೆ ಭಾಗದಲ್ಲಿ ಹಸುಗಳು ಸಾಲುಗಟ್ಟಿ ಬರುತ್ತಿರುವ ದೃಶ್ಯವಿದೆ. ಮಧ್ಯದ ಪಟ್ಟಿಕೆಯಲ್ಲಿ ಅಲಂಕೃತಗೊಂಡ ಪಲ್ಲಕಿಯಲ್ಲಿ ಇಬ್ಬರು ವೀರರಿದ್ದು ಚಾಮರಧಾರಿಯರು ಸ್ವರ್ಗಕ್ಕೆ ಹೊತ್ತೊಯ್ಯುತ್ತಿರುವರು. ಮೇಲಿನ ಪಟ್ಟಿಕೆಯಲ್ಲಿ ವೀರರು ಅಂಜಲಿ ಮುದ್ರೆಯಲ್ಲಿ ಶಿವಲಿಂಗದ ಎದುರು ಕೈಮುಗಿದು ಕುಳಿತಿದ್ದಾರೆ. ಯತಿ ಲಿಂಗಕ್ಕೆ ಪೂಜೆ ಸಲ್ಲಿಸುತ್ತಿದ್ದಾನೆ. ನಂದಿ, ಸೂರ್ಯ, ಚಂದ್ರರ ಚಿತ್ರವಿದೆ. ಶಾಸನದ ಮೇಲಿನ ಭಾಗ ಅರ್ಧವೃತ್ತಾಕಾರವಾಗಿದೆ. ಇಲ್ಲಿಯ ಇನ್ನೊಂದು ವೀರಗಲ್ಲು ಇದೇ ರೀತಿಯಿದ್ದು ಒಬ್ಬ ವೀರನನ್ನು ಹೊಂದಿದೆ. ಈ ಪರಿಸರದಲ್ಲಿ ದೊರೆತ ವೀರಗಲ್ಲುಗಳಲ್ಲಿ ವ್ಯಕ್ತಿ ಚಿತ್ರಣ ಮತ್ತು ಆಯುಧಗಳನ್ನು ಪ್ರಮಾಣಬದ್ಧವಾಗಿ ಕೆತ್ತಲಾಗಿದೆ.

ನೊಳಂಬರ ನಂತರ ಪಾಂಡ್ಯರು ತಮ್ಮದೇ ಆದ ಹೊಸದೊಂದು ವಾಸ್ತು ಲಕ್ಷಣದ ನೆಲೆಯಲ್ಲಿ ಈ ಪರಿಸರದಲ್ಲಿ ದೇವಾಲಯಗಳನ್ನು ನಿರ್ಮಿಸಿದ್ದಾರೆ. ಆ ಅವಧಿಯಲ್ಲಿ ದಾನ–ದತ್ತಿಗಳನ್ನು ನೀಡುವುದರ ಮೂಲಕ ಅವುಗಳು ಗಟ್ಟಿಗೊಂಡು ಸಮಾಜದ ಕೆಲವು ಜವಾಬ್ದಾರಿಗಳನ್ನು ಹೊತ್ತು ನಿರ್ವಹಿಸಿದವು. ಅಂದು ನಿರ್ಮಾಣದ ದೇವಾಲಯಗಳು ಹರಪನಹಳ್ಳಿ ಪಾಳೇಗಾರರವರೆಗೂ ದಾನ-ದತ್ತಿಗಳನ್ನು ಪಡೆದು ಆರ್ಥಿಕವಾಗಿ ಶ್ರೀಮಂತಿಕೆಯನ್ನು ಪಡೆದಿದ್ದವು. ಇವು ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಜವಾಬ್ದಾರಿಗಳನ್ನು ಅಚ್ಚುಕಟ್ಟಾಗಿ ನಿರ್ವಹಿಸಿಕೊಂಡು ಬಂದಿವೆ. ಕೆಲವು ಸಲ ರಾಜಕೀಯದಲ್ಲಿ ನಿರ್ಣಾಯಕ ಶಕ್ತಿಗಳಾಗಿ ಕಾರ್ಯನಿರ್ವಹಿಸಿವೆ. ಇಂತಹ ಸಾಮಾಜಿಕ ಜವಾಬ್ದಾರಿ ಹೊಂದಿದ ಪ್ರಾಚೀನ ಸ್ಮಾರಕಗಳು ಕ್ರಿ.ಶ. ೧೮ನೇ ಶತಮಾನದ ನಂತರದ ಕಾಲದಲ್ಲಿ ದಾನ-ದತ್ತಿಗಳಿಲ್ಲದೆ ಜೀರ್ಣೋದ್ಧಾರ ಕಾರ್ಯಗಳು ನಡೆಯದೆ ಮನುಷ್ಯನ ಆಧುನಿಕ ಬದುಕಿಗೆ ಸಿಕ್ಕು ಸ್ಮಾರಕಗಳು ಅವಸಾನದ ಹಾದಿ ಹಿಡಿದಿರುವುದು ವಿಷಾದದ ಸಂಗತಿಯಾಗಿದೆ.

ಆಧುನಿಕ ಭವ್ಯ ಹೊಸ ದೇವಾಲಯಗಳ ನಿರ್ಮಾಣದಿಂದ ದೂರ ಸರಿದು ಪ್ರಾಚೀನ ದೇವಾಲಯಗಳನ್ನು ವೈಭವೀಕರಿಸುವ ಕಡೆ ಮನುಷ್ಯ ಸಮಾಜ ಚಿಂತಿಸಬೇಕಿದೆ. ಸ್ಮಾರಕಗಳ ರಕ್ಷಣೆಯ ಕಾರಣಕ್ಕೆ ಹುಟ್ಟಿಕೊಂಡಿರುವ ಇಲಾಖೆಗಳು, ಅಧಿಕಾರಿ ನೌಕರವರ್ಗ ಅಳಿವಿನಂಚಿನಲ್ಲಿರುವ ಸ್ಮಾರಕಗಳ ರಕ್ಷಣೆ ಮತ್ತು ಅವುಗಳ ಪುನರ್‌ನಿರ್ಮಾಣದ ಹೊಣೆಗಾರಿಕೆ ಹೊತ್ತು ಪುರಾತನ ಸಂಸ್ಕೃತಿ ಉಳಿವಿಗೆ ಸಾಕ್ಷಿದಾರರಾಗಬೇಕಿದೆ.

**ರಕ್ಷಣಾ ವಾಸ್ತು**

ಕೋಟೆ ಎಂದರೆ ಆವರಣವುಳ್ಳ ಪ್ರದೇಶ ಎಂದರ್ಥ. ಕೋಟೆ ಅಥವಾ ರಕ್ಷಾವರಣ ಇದನ್ನು ಸಂಸ್ಕೃತದಲ್ಲಿ ದುರ್ಗ ಎಂದು ಹೇಳುತ್ತಾರೆ. ಪ್ರಾಚೀನ ಗ್ರಂಥವಾದ ಋಗ್ವೇದದಲ್ಲಿ 'ಪುರ'ಗಳ ಉಲ್ಲೇಖವಿದೆ. ಪುರ ಅಂದರೆ ಕೋಟೆಯನ್ನು ಹೊಂದಿರುವ ಪಟ್ಟಣ ಎಂದರ್ಥ.

ಮಾನವನು ತನ್ನ ನಾಗರಿಕತೆಯ ಪ್ರಗತಿಯ ಪಥದಲ್ಲಿ ನಡೆದಂತೆ ತನ್ನ ಮತ್ತು ತನ್ನ ಸಮುದಾಯದ ಲೌಕಿಕ ಸಂಪತ್ತನ್ನು ಬೆಳೆಸುತ್ತಾ ನಡೆದನು. ಮನುಷ್ಯನ ಸಾಮಾಜಿಕ ಜೀವನ ಪ್ರಜ್ಞೆಯ ಪರಿಣಾಮವಾಗಿ ತನ್ನ ಸುತ್ತಲಿನ ಪರಿಸರದ ಅಭದ್ರತೆ ಬಗ್ಗೆ ಯೋಚಿಸಿದ. ಅಂತೆಯೇ ನೆಲೆ ನಿಂತಿದ್ದ ಊರಿನ ರಕ್ಷಣೆಗಾಗಿ ಕೋಟೆ ಕಟ್ಟಿಕೊಳ್ಳುವ ಅವಶ್ಯಕತೆ ಕಂಡುಬಂದಿತು. ಹಲವಾರು ಊರುಗಳು ಒಟ್ಟುಗೂಡಿ ರಾಜ್ಯಗಳು ಸ್ಥಾಪನೆಯಾದ ಮೇಲೆ ಆಳುವ ಅರಸರು ತಮ್ಮ ರಾಜ್ಯಗಳನ್ನು ಸಂರಕ್ಷಿಸಲು ರಾಜಧಾನಿಗಳಲ್ಲಿ ಹಾಗೂ ಗಡಿ ಪ್ರದೇಶದಲ್ಲಿ ಬೃಹತ್ ಆಕಾರದ ಕೋಟೆಗಳನ್ನು ಕಟ್ಟಿಸಿದರು. ಹೀಗಾಗಿ ಪ್ರಾಚೀನ ಕಾಲದ ಮಾನವನ ರಕ್ಷಣೆಯ ಕಾರ್ಯದಲ್ಲಿ ಕೋಟೆ ಮಹತ್ತರ ಪಾತ್ರವಹಿಸಿದೆ.

ಕೋಟೆಗಳನ್ನು ಕಟ್ಟುವಾಗ ಸ್ಥಳಗಳ ಆಯ್ಕೆಗೆ ಬಹಳ ಮಹತ್ವವನ್ನು ಕೊಡಲಾಗಿದೆ. ಶತ್ರುಪಡೆ ಸುಲಭವಾಗಿ ಹತ್ತಿರ ಬರದಂತೆ ಕೋಟೆಗಳನ್ನು ಕಡಿದಾದ ಬೆಟ್ಟದ ಮೇಲೆ ಕಾಡಿನ ಮಧ್ಯದಲ್ಲಿ ಮತ್ತು ನದಿಯ ದಂಡೆಯ ಮೇಲೆ ಕಟ್ಟಲಾಗಿದೆ.[೨೫೪] ಇಂತಹ ವಿವಿಧ ಪ್ರಕಾರದ ಕೋಟೆಗಳ ವಿವರಗಳನ್ನು ಪ್ರಾಚೀನ ಗ್ರಂಥಗಳಲ್ಲಿ ಕಾಣಬಹುದು. ಪಂಚತಂತ್ರದ ಕವಿ ದುರ್ಗಸಿಂಹನು ಕೋಟೆಗಳನ್ನು ಎಂಟು ಪ್ರಕಾರಗಳಲ್ಲಿ ವಿಂಗಡಿಸಿದ್ದಾನೆ.[೨೫೫]

**೧. ಜಲದುರ್ಗ : ಅ. ಅಂತರ್ದ್ವೀಪ :** ಎರಡು ನದಿಗಳ ಸಂಗಮದ ಮಧ್ಯದ ಕೋಟೆ.

**ಆ. ಮಹಾಸ್ಥಳ :** ದೊಡ್ಡ ಕೆರೆ, ಮುಳ್ಳುಗಳಿಂದ ತುಂಬಿದ ಸರೋವರಗಳಿಂದ ಸುತ್ತುವರಿದ ಕೋಟೆ.

**೨. ಗಿರಿದುರ್ಗ : ಅ. ಗುಹ್ಯ :** ಬಹಳ ಎತ್ತರವಾದ ಬೆಟ್ಟದ ತುದಿಗಳು ನಾಲ್ಕು ಕಡೆಯಿದ್ದು ಒಂದೇ ಬಾಗಿಲುಳ್ಳ ಕೋಟೆ.

**ಆ. ಪ್ರಸ್ತರ :** ಎಲ್ಲಿಯೂ ಒಳ್ಳೆಯ ದಾರಿಯಿಲ್ಲದ, ಬೆಟ್ಟಗಳ ನಡುವೆ ನೀರು ಬೀಳುವ ಸ್ಥಳದಲ್ಲಿ ಮಾತ್ರ ಕಿರಿದಾದ ದಾರಿಯಿರುವುದು.

೩. ಸ್ಥಲದುರ್ಗ : ಅ. ಉದರಸ್ತಂಭ : ಕೋಟೆಯ ಹೊರವಲಯದಲ್ಲಿ ನೀರು, ಗಿಡ, ಮರ, ಹುಲ್ಲು ಬಳ್ಳಿಗಳಿಲ್ಲದೆ ಒಳಗೆ ಮಾತ್ರ ಹುಲ್ಲುಕಡ್ಡಿ ನೀರಿನಿಂದ ಸಮೃದ್ಧವಾಗಿರುವುದು.

ಆ. ವೈರಿಣಿ : ದುರ್ಗದ ಹೊರಗೆ ಉಪ್ಪಿನ ನೀರು, ಕುಡಿಯಲು ಬಾರದ ನೀರು ಅಥವಾ ಸ್ವಲ್ಪವೇ ನೀರಿರುವುದು.

೪. ವನದುರ್ಗ : ಅ. ಕರ್ದ ಮೇದಕ : ಸುತ್ತ ನೀರು ತುಂಬಿದ ಜಲಾಶಯವಿದ್ದು ಹೆದರಿಸುವಷ್ಟು ಅತಿ ಶೀತಲವಾದ ಕೆಸರುಳ್ಳದ್ದು.

ಆ. ಸ್ತಂಭಗಹನ : ಅನೇಕ ಮರಗಳಿಂದ ಪರಿವೃತವಾಗಿ ಸುತ್ತಮುತ್ತ ಹುಲ್ಲು ಯಥೇಚ್ಛವಾಗಿ ಬೆಳೆದಿರುವುದು. ಶಾಸನಗಳು ಸಹ ಕೋಟೆಯ ಪ್ರಕಾರಗಳನ್ನು ಉಲ್ಲೇಖಿಸುತ್ತವೆ.

ಚಾಳುಕ್ಯರ ಮಾಂಡಳೀಕರಾದ ನೊಳಂಬ ಪಲ್ಲವ ಮತ್ತು ಪಾಂಡ್ಯರ ಆಡಳಿತ ಕಾಲದಲ್ಲಿ ಈ ಪ್ರದೇಶ ರಾಜಧಾನಿಯಾಗಿ ಮೆರೆದಿರುವುದರಿಂದ ಇಲ್ಲಿ ಕೋಟೆಗಳ ರಚನೆ ಸಾಮಾನ್ಯವಾಗಿದೆ. ಕ್ರಿ.ಶ. ೧೮ನೇ ಶತಮಾನದವರೆಗೂ ಈ ಪ್ರದೇಶ ಆಡಳಿತದ ಪ್ರಮುಖ ಕೇಂದ್ರವಾಗಿ ಇತಿಹಾಸದ ಪುಟಗಳಲ್ಲಿ ದಾಖಲಾಗಿದೆ.

**ಉಚ್ಚಂಗಿದುರ್ಗದ ಕೋಟೆ**

ಉಚ್ಚಂಗಿದುರ್ಗ ದಾವಣಗೆರೆ ನಗರದಿಂದ ಉತ್ತರಕ್ಕೆ, ಹರಪನಹಳ್ಳಿ ಪಟ್ಟಣದಿಂದ ದಕ್ಷಿಣಕ್ಕೆ ೨೮ ಕಿ.ಮೀ. ದೂರದಲ್ಲಿದೆ. ಇಲ್ಲಿರುವ ಬೆಟ್ಟದಿಂದಾಗಿ ಈ ಗ್ರಾಮಕ್ಕೆ ಪ್ರಾಚೀನ ಕಾಲದಲ್ಲಿ 'ಉಚ್ಚಶೃಂಗ' ಎಂದು ಕರೆಯಲಾಗಿತ್ತು. ಕದಂಬರ ಆಡಳಿತ ಕಾಲದಲ್ಲಿ ಅವರ ಎರಡನೇ ರಾಜಧಾನಿ ಆಗಿತ್ತು. ಆನಂತರದಲ್ಲಿ ಇಲ್ಲಿನ ಬೆಟ್ಟದ ಮೇಲೆ ಕೋಟೆ ನಿರ್ಮಾಣವಾಗಿದ್ದರಿಂದ ಉಚ್ಚಶೃಂಗಿ ಹೆಸರಿನ ಬದಲಾಗಿ ಉಚ್ಚಂಗಿದುರ್ಗವಾಗಿ ಬದಲಾವಣೆ ಹೊಂದಿತ್ತು. ಇದೊಂದು ಗಿರಿದುರ್ಗವಾಗಿದೆ. ಪ್ರಾಚೀನ ಆಡಳಿತ ವಿಭಾಗಗಳಲ್ಲಿ "ಉಚ್ಚಂಗಿ-೩೦" ೩೦ ಹಳ್ಳಿಗಳ ಪ್ರಮುಖ ಪಟ್ಟಣವಾಗಿತ್ತು. ಉಚ್ಚಂಗಿದುರ್ಗ ಕ್ರಿ.ಶ. ೧೦೭೯ ಈ ನಂತರದಲ್ಲಿ ನೊಳಂಬವಾಡಿ-೩೨೦೦೦ ಆಡಳಿತ ವಿಭಾಗದ 'ರಾಜಧಾನಿ'ಯಾಗಿ ಉಚ್ಚಂಗಿ ಪಾಂಡ್ಯರ ಚರಿತ್ರೆಯಲ್ಲಿ ಇದು ಶತ್ರು ರಾಜರಿಗೆ ಗೆಲ್ಲಲೇಬೇಕು ಎಂಬ ಪ್ರತಿಷ್ಠೆಯ ನೆಲೆಯಾಗಿ ರೂಪುಗೊಂಡಿತ್ತು. ಪಾಂಡ್ಯ ಅರಸರ ನಂತರ ಕೋಟೆಯಲ್ಲಿ ನೆಲೆನಿಂತ ಉಚ್ಚಂಗಿದೇವಿ ಇಂದಿಗೂ ಆರಾಧನ ಕೇಂದ್ರವಾಗಿ ಧಾರ್ಮಿಕ ಚಟುವಟಿಕೆಗಳ ಹಿನ್ನೆಲೆಯಲ್ಲಿ ಅಲಕ್ಷಿತ ಸಮುದಾಯಗಳ ಸಾಂಸ್ಕೃತಿಕ ಕೇಂದ್ರವಾಗಿದೆ.

ಉಚ್ಚಂಗಿದುರ್ಗದ ಕೋಟೆಯ ನಿರ್ಮಾಣದ ಕುರಿತು ನಿಖರ ಆಧಾರಗಳು ದೊರೆಯುವುದಿಲ್ಲ. ಆದರೆ ಚಾಳುಕ್ಯ, ಪಾಂಡ್ಯ, ಹರಪನಹಳ್ಳಿ ಪಾಳೇಗಾರರ ಕಾಲದ ಶಾಸನಗಳಲ್ಲಿ ಈ ಕೋಟೆಯ ಉಲ್ಲೇಖವಿದೆ. ಕ್ರಿ.ಶ. ೯೭೧ರ ಶ್ರವಣಬೆಳ್ಗೊಳ ಶಾಸನ.[೨೫೬] ಕಾಡುವಟ್ಟಿ ಎಂಬುವನು ಈ ಕೋಟೆಯನ್ನು ದೀರ್ಘಕಾಲದವರೆಗೆ ಮುತ್ತಿ ಸ್ಥಳೀಯರನ್ನು ತನ್ನ ಶೌರ್ಯದಿಂದ ದಂಗುಬಡಿಸಿದರೂ ಅವನಿಂದ ಕೋಟೆಯನ್ನು ಗೆಲ್ಲಲಾಗದೆ ಹಿಂತಿರುಗಿದನು. ಇಂತಹ ಅಭೇದ್ಯವಾದ

ಕೋಟೆಯನ್ನು ಚಾಳುಕ್ಯರ ಚೂಡಾಮಣಿಯೆಂದು ಕರೆಯಿಸಿಕೊಂಡ ರಾಜಾದಿತ್ಯನು ಆಳುತ್ತಿದ್ದಾಗ ಗಂಗ ವಂಶದ ಎರಡನೇ ಮಾರಸಿಂಹನು ಕ್ರಿ.ಶ. ೯೭೧ರಲ್ಲಿ ಕೋಟೆಯನ್ನು ಮುತ್ತಿ ವಶಪಡಿಸಿಕೊಂಡನು.

ಉಚ್ಚಂಗಿದುರ್ಗದ ಕ್ರಿ.ಶ. ೧೦೬೪ರ[೫೨] ಚಾಳುಕ್ಯರಾಜ ಆಹವಮಲ್ಲದೇವನ ಆಳ್ವಿಕೆಯಲ್ಲಿ ಅವನ ಮಗ ವೆಂಗಿಮಂಡಳೇಶ್ವರ ವಿಷ್ಣುವರ್ಧನ ಮಹಾರಾಜ ವಿಜಯಾದಿತ್ಯದೇವನು ನೊಳಂಬವಾಡಿಯನ್ನು ಆಳುತ್ತಿರುವಾಗ ಬಿಜ್ಜಳದೇವನು ಕಳೇಶ್ವರ ಪಂಡಿತರ ಪಾದವನ್ನು ತೊಳೆದು ಕಲಿದೇವರಿಗೆ/ಗಳಗೇಶ್ವರದೇವರ್ಗೆ ಉಚ್ಚಂಗಿಯ ಕೋಟೆಯಲು ತೆಂಕ ಬಣ್ಣಸಿಗೆರೆಯುಮಂ ಎಂದು ಉಲ್ಲೇಖಿಸುತ್ತದೆ. ಅನಂತರ ಪಾಂಡ್ಯರ ಶಾಸನಗಳಲ್ಲಿ ಕೋಟೆಯ ಉಲ್ಲೇಖ ಕಂಡುಬರುತ್ತದೆ. ಶ್ರವಣಬೆಳ್ಗೊಳದ ಶಾಸನವೇ ಮೊದಲ ಬಾರಿಗೆ ಕೋಟೆಯ ಬಗ್ಗೆ ಉಲ್ಲೇಖಿಸುವುದರಿಂದ ಕ್ರಿ.ಶ. ೯೭೧ಕ್ಕಿಂತ ಮೊದಲೇ ಈ ಕೋಟೆ ನಿರ್ಮಾಣವಾಗಿತ್ತು ಎಂದು ತಿಳಿಯಬಹುದಾಗಿದೆ.

ಆದರೆ ಕ್ರಿ.ಶ. ೯೭೧ರ ವೇಳೆಗೆ ಇಂದು ಕಾಣಸಿಗುವುಷ್ಟು ಪೂರ್ಣಪ್ರಮಾಣದ ಕೋಟೆ ನಿರ್ಮಾಣವಾಗಿರಲಿಲ್ಲ. ಕೇವಲ ಮೇಲಿನ ಕೋಟೆಯನ್ನು ಹೊರತುಪಡಿಸಿ ಅಂದರೆ ಹೊನ್ನನಾಗತಿ ಜರಿಯ ಬಂಡೆಯಿಂದ ಹರಿಹರ ಬಾಗಿಲನ ಬಲಕ್ಕೆ ಮೇಲಿರುವ ಬಂಡೆಯಿಂದ ದಕ್ಷಿಣಕ್ಕಿರುವ ಮಳಿಬಾಗಿಲು, ಅಗಸಿಬಾಗಿಲು, ದಿಂಡಿ ಬಾಗಿಲು, ಅಣಜಿ ಬಾಗಿಲು, ಹರಿಹರ ಬಾಗಿಲುಗಳು ಒಳಗೊಂಡ ನೆಲ ಹಂತದ ಕೋಟೆ ಮಾತ್ರ ಆರಂಭದಲ್ಲಿತ್ತು. ಕೋಟೆಯ ರಾಜಮಾರ್ಗದ ಬಲಭಾಗದ ಉತ್ತರ ದಿಕ್ಕಿನ ಎತ್ತರದ ಬೆಟ್ಟದ ಮೇಲಿನ ಕೋಟೆ ಅದರೊಳಗಿರುವ ರಾಜ ಮತ್ತು ರಾಣಿಯ ಅರಮನೆಗಳು, ನೀರು ಸಂಗ್ರಹ ತಾಣಗಳು ಪಾಂಡ್ಯರ ಕಾಲಕ್ಕೆ ನಿರ್ಮಾಣವಾಗಿವೆ.

ಕ್ರಿ.ಶ. ೧೦೭೦ರ ಉಚ್ಚಂಗಿದುರ್ಗದ ಶಾ.ಸಂ.೪ರ ಶಾಸನ ನೊಳಂಬ ಪಲ್ಲವ ಪೆರ್ಮಾಡಿ ಜಯಸಿಂಘ ದೇವರು ಉಚ್ಚಂಗಿ ಕೋಟೆಯ ಸೋಮೇಶ್ವರ ಪಂಡಿತರ ಕಾಲನ್ನು ತೊಳೆದು ಗೃಹಪ್ರವೇಶಥ ದಾನ ಕಾಲದಲ್ಲಿ ಉಚ್ಚಂಗಿ ಕೋಟೆಯ ಮೇಗಣ ತ್ರೈಲೇಶ್ವರ ದೇವರ ಭೋಗಕ್ಕೆ ಗಂಟಿಗನಕೆರೆಯಂ ಬಿಟ್ಟು ಕೊಟ್ಟಿರುವ ಬಗ್ಗೆ ಉಲ್ಲೇಖಿಸುತ್ತದೆ. ತ್ರೈಲೇಶ್ವರ ದೇವಾಲಯ ಕೋಟೆಯ ಮೇಲ್ಭಾಗದಲ್ಲಿ ಇತ್ತು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಅಗಸಿಬಾಗಿಲಿನಿಂದ ಮುಂದೆ ಸಾಗಿ ಬಲಕ್ಕೆ ಉತ್ತರ ದಿಕ್ಕಿನ ಕಡೆ ನಡೆದಾಗ ಸಿಗುವ ಮೊದಲ ಬಾಗಿಲು (ಕೋಟೆಯ ಆರನೇ ಬಾಗಿಲು) ಪಕ್ಕದಲ್ಲಿ ಒಂದು ಶಿವ ದೇವಾಲಯವಿದೆ. ಇದರ ಎದುರಿನಲ್ಲಿ ಆನೆಹೊಂಡ ಕಂಡುಬರುತ್ತದೆ. ಇದರ ಮೇಲ್ಭಾಗದಲ್ಲಿ ರಾಜನ ಅರಮನೆಯಲ್ಲಿ ಒಂದು ಶಿವ ದೇವಾಲಯವಿದೆ. ಇವುಗಳನ್ನು ಹೊರತುಪಡಿಸಿ ಬೆಟ್ಟದ ಮೇಲೆ ಯಾವುದೇ ಶಿವ ದೇವಾಲಯಗಳು ಕಂಡು ಬರುವುದಿಲ್ಲ. ಹಾಗಾಗಿ ಈ ಎರಡರಲ್ಲಿ ಯಾವುದಾದರೂ ಒಂದು ತ್ರೈಲೇಶ್ವರ ದೇವಾಲಯ ಆಗಿರಬಹುದು ಎಂಬುವುದು ಸ್ಪಷ್ಟವಾಗುತ್ತದೆ. ಶಾಸನದಲ್ಲಿ ತಿಳಿಸಿದಂತೆ ಕೆಳಹಂತದ ಕೋಟೆಯ ಪಕ್ಕದಲ್ಲಿಯೇ ಮೇಲ್ಭಾಗದಲ್ಲಿ ಇರುವ ಶಿವದೇವಾಲಯವೇ ತ್ರೈಲೇಶ್ವರ ದೇವಾಲಯ

ಎಂಬುವುದು ಸ್ಪಷ್ಟವಾಗುತ್ತದೆ. ಈ ದೇವಾಲಯವನ್ನೊಳಗೊಂಡಂತೆ ಉತ್ತರ ದಿಕ್ಕಿನ ಬೆಟ್ಟದ ಎತ್ತರದ ಭಾಗದಲ್ಲಿ ರಚನೆಯಾದ ಕೋಟೆ ಮತ್ತು ಅದರೊಳಗಿನ ಸ್ಮಾರಕಗಳು ಪಾಂಡ್ಯರ ಕಾಲಕ್ಕೆ ನಿರ್ಮಾಣವಾಗಿವೆ ಎಂದು ಸ್ಪಷ್ಟವಾಗುತ್ತದೆ. ಪಾಳೆಯಗಾರರ ಕಾಲದಲ್ಲಿ ಜೀರ್ಣೋದ್ಧಾರ ವಾಗಿರುವುದು ಕೋಟೆಯ ಲಕ್ಷಣಗಳಲ್ಲಿ ಗುರುತಿಸಬಹುದು.

ಕ್ರಿ.ಶ. ೧೧೦೦ರಲ್ಲಿ ತ್ರಿಭುವನಮಲ್ಲ ಪಾಂಡ್ಯ ದೇವರು ಅನಾದಿ ಸಂಸಿದ್ಧಿಯ ಪಟ್ಟಣ ಉಚ್ಚಂಗಿಯ ಕೋಟೆಯ ಕಾಪೆಯವ್ವೆ ಉಚ್ಚಂಗಿ ದೇವಿಗೆ ಮೊದಲ ಬಾರಿಗೆ ದಾನ ಬಿಟ್ಟಿರುವುದನ್ನು ಶಾಸನ ತಿಳಿಸುತ್ತದೆ. ಈ ಹಿಂದೆ ಆಡಳಿತ ನಡೆಸಿದ ಕದಂಬರು, ನೊಳಂಬ ಪಲ್ಲವರು, ಚಾಳುಕ್ಯ ರಾಜಕುಮಾರರು ನೆಲ ಹಂತದ ಕೋಟೆಯಲ್ಲಿರುವ ಮತ್ತು ಉಚ್ಚಂಗಿದುರ್ಗದ ಗ್ರಾಮದಲ್ಲಿರುವ ದೇವರುಗಳಿಗೆ ಮಾತ್ರ ದಾನ ನೀಡಿರುವುದು ಅಲ್ಲಿನ ಶಾಸನಗಳಿಂದ ತಿಳಿಯುತ್ತದೆ. ಕೋಟೆಯ ಮೇಲ್ಭಾಗದಲ್ಲಿರುವ ಯಾವ ಸ್ಮಾರಕಗಳು ಅವರ ಶಾಸನಗಳಲ್ಲಿ ಕಾಣಿಸುವುದಿಲ್ಲ. ಮಳಿಬಾಗಿಲ ಕೋಟೆಯ ಲಕ್ಷಣಗಳನ್ನು ಸೂಕ್ಷ್ಮವಾಗಿ ಗಮನಿಸಿದ್ದಲ್ಲಿ ಮೂರು ಕಾಲಘಟ್ಟದಲ್ಲಿ ಕೋಟೆ ನಿರ್ಮಾಣವಾಗಿರುವುದು ಕಂಡುಬರುತ್ತದೆ. ಇಲ್ಲಿನ ಕೋಟೆ ಗೋಡೆಯ ಹತ್ತು ಅಡಿ ಎತ್ತರದಲ್ಲಿ ಪಾಂಡ್ಯರ ವಾಸ್ತುಲಕ್ಷಣದ ನಂದಿಶಿಲ್ಪವನ್ನು ಕೆತ್ತಲಾಗಿದೆ.

ಕ್ರಿ.ಶ. ೯೭೧ರಲ್ಲಿ ಈ ಕೋಟೆ ನಿರ್ಮಾಣವಾಗಿದ್ದರೂ ಪೂರ್ಣಪ್ರಮಾಣದ ಕೋಟೆ ನಿರ್ಮಾಣವಾಗಿ, ಅದರ ಕೀರ್ತಿ, ಪ್ರತಿಷ್ಠೆಯ ಪರಾಕಾಷ್ಠೆ ಪಡೆದಿದ್ದು ಪಾಂಡ್ಯರ ಕಾಲದಲ್ಲಿ. ತ್ರಿಭುವನಮಲ್ಲ ಪಾಂಡ್ಯ ಇಲ್ಲಿ ಕೆಲವು ಕಾಲ ಆಡಳಿತ ನಡೆಸಿದ್ದರು. ಶಾಶ್ವತವಾಗಿ ನೆಲೆನಿಲ್ಲಲಿಲ್ಲ. ವೀರಪಾಂಡ್ಯ ತನ್ನ ಆಡಳಿತ ಆರಂಭದಲ್ಲಿಯೇ ನೊಳಂಬವಾಡಿಯ ಆಡಳಿತ ಕೇಂದ್ರವನ್ನು ಉಚ್ಚಂಗಿದುರ್ಗದ ಕೋಟೆಗೆ ವರ್ಗಾಯಿಸಿದ. ಅಲ್ಲಿಂದ ಇದರ ಕೀರ್ತಿ ಹೆಚ್ಚಿತ್ತು ಎಂಬುದು ಅವರ ಶಾಸನದಿಂದ ತಿಳಿಯುತ್ತದೆ.

ಆಲೂರು ಶಾಸನ[೨೫೮] ಧರೆಪೊಗಳೆ ವೀರಪಾಂಡ್ಯ ನೊಳಂಬವಾಡಿಯನಾಳುತ್ತಿರುಲು ಉಚ್ಚಂಗಿಯ ನೆಲೆವೀಡು... ತರಲಕ್ಷ್ಮೀ ವಿಳಾಸವಂಪೊಗಳುವರಾರ್. ಪಿಂಗದೆ ತನ್ನ ನೆಲಗಿಪ ಸೂರ್ಯ್ಯಶ ಶಾಂಕಮರೀಚಿ ಯಿಂದೆಚೆಲ್ವಂಗೆಡೆಗೊಂಡು ಮೇರುಗಿರಿಗೋರಗೆಯಂಬ ವೋಲೆಯೆ ನೀಳ್ದು ತೀರ್ತ್ಥಗ ...... ದ ಪಾವನಮಹದ್ವಿಭವಕ್ಕೆಡೆಯಾಗಿ... ರುಚ್ಚಂಗಿವಿರಾಜಿಕುಂನೆಗಳ್ದ ಪಾಂಡ್ಯ ನೃಪಾಳನರಾಜ್ಯವರ್ದ್ಧನಂ ‖ ನಗುಗುಂಧಾರಾವತಿಯಂಪುಗುಗುಂ ನಿಜಸೋಭೆಯಿಂದವಳ ಕಾಪುರವಂ ಜಗನೇಕಮಲ್ಲಪಾಂಡ್ಯನ ನಗರಿಯಿನಿನ್ನಾವ ನಗರಿಯುಂ ಪೋಲ್ತಪವೇ ‖ ಬಿಂಕಂಬಡೆದುಚ್ಚಂಗಿಯ ತೆಂಕಣ ದೆಸೆಯಲ್ಲಿ ವೀರನಾಗೇಶ್ವರನಿನ್ದಂಕವೆಸೇವ್ಯಧಾತ್ರಿಗಳಂ ಎಂದು ಉಚ್ಚಂಗಿದುರ್ಗದ ಬಗ್ಗೆ ವರ್ಣಿಸುತ್ತದೆ.

ಉಚ್ಚಂಗಿಯ ಕಂದಕವು ಪಾತಾಳದಂತಿತ್ತು. ಮೂರು ಲೋಕಗಳಲ್ಲಿ ಖ್ಯಾತಿ ಪಡೆದಿತ್ತು. ಚೋಳ ಅರಸನು ಪಾಂಡ್ಯರನ್ನು ಗೆಲ್ಲಲು ಹನ್ನೆರಡು ವರ್ಷಗಳ ಕಾಲ ಈ ಕೋಟೆಗೆ ಮುತ್ತಿಗೆ

ಹಾಕಿದರೂ ಅಭೇದ್ಯವಾದ ಕೋಟೆಯನ್ನು ಗೆಲ್ಲಲಾರದೆ ಹಿಂತಿರುಗಿದನು. ಇಂತಹ ಅಭೇದ್ಯವಾದ ಕೋಟೆಯನ್ನು ಹೊಯ್ಸಳ ವೀರಬಲ್ಲಾಳ ಅಣೆಕಲ್ಲುಗಳನ್ನು ಆಡಿದಷ್ಟು ಸುಲಭವಾಗಿ ಗೆದ್ದನು[೨೫] ಎಂದು ವಿದ್ವಾಂಸರು ಹೇಳುತ್ತಾರೆ. ಹೊಯ್ಸಳ ಅರಸರಾದ ವಿಷ್ಣುವರ್ಧನ, ವೀರನರಸಿಂಹ, ವೀರಬಲ್ಲಾಳರ ಶಾಸನಗಳಲ್ಲಿ ಉಚ್ಚಂಗಿಕೋಟೆಯನ್ನು ಮತ್ತು ಪಾಂಡ್ಯರನ್ನು ಗೆದ್ದಿರುವ ಬಗ್ಗೆ ಹೇಳಿಕೊಂಡಿದ್ದಾರೆ. ಆದರೆ ಇದಕ್ಕೆ ಸ್ಪಷ್ಟ ಉಲ್ಲೇಖಗಳು ಇಲ್ಲ. ಆದರೆ ಕ್ರಿ.ಶ. ೧೧೯೩ರ ವೇಳೆಯಲ್ಲಿ ವೀರಬಲ್ಲಾಳ ವಿಜಯಪಾಂಡ್ಯನನ್ನು ಸೋಲಿಸಿರುವ ಬಗ್ಗೆ ದಾಖಲೆಗಳು ಇವೆ.

ಕ್ರಿ.ಶ. ೧೧೮೧ರ ಶ್ರವಣಬೆಳಗೊಳದ ಶಾಸನ[೨೬] ಬಲ್ಲಾಳನ ಗಜಸೈನ್ಯವು ಉಚ್ಚಂಗಿಯ ಶಿಖರವನ್ನು ತನ್ನ ದಂತಗಳಿಂದ ತಿವಿದು ಪುಡಿ ಮಾಡಿತು. ಪಾಂಡ್ಯನ ರೂಪವತಿ ಪತ್ನಿಯನ್ನೂ ದೇಶವನ್ನೂ, ಕೋಶವನ್ನೂ, ತಂದೆಯನ್ನೂ, ಅಶ್ವವೃಂದವನ್ನು ಬಲ್ಲಾಳನು ಸೆರೆ ಹಿಡಿದನು. ಬಹುಕಾಲದಿಂದ ಶತ್ರುಗಳಿಗೆ ಅಸಾಧ್ಯವೆನಿಸಿದ್ದ ಉಚ್ಚಂಗಿಯನ್ನು ಧುರ್ಧ ತೇಜೋನಿಧಿಯಾದ ಬಲ್ಲಾಳನು ಮುತ್ತಿ ಧೂಳಿಪಟ ಮಾಡಿದ್ದಲ್ಲದೆ ಕಾಮದೇವರಾಜನನ್ನೂ, ಒಡೆಯರಾಜನನ್ನೂ, ಭಂಡಾರ, ಸ್ತ್ರೀಯರು ಮತ್ತು ಅಶ್ವದಳ ಸಮೇತ ಸೆರೆ ಹಿಡಿದನು ಎಂದು ಉಲ್ಲೇಖಿಸುತ್ತದೆ. ಉಚ್ಚಂಗಿ ಕೋಟೆ ಪಾಂಡ್ಯರ ಕಾಲದಲ್ಲಿ ಎಷ್ಟು ಬಲಿಷ್ಠವಾಗಿತ್ತು ಎಂಬುದು ಈ ಶಾಸನಗಳಿಂದ ಸ್ಪಷ್ಟವಾಗುತ್ತದೆ.

ಪಾಂಡ್ಯರ ಅನಂತರದಲ್ಲಿ ಹರಪನಹಳ್ಳಿ ಪಾಳೇಗಾರರು ಈ ಕೋಟೆಯಲ್ಲಿ ತಮ್ಮ ಆಡಳಿತವನ್ನು ಸ್ಥಾಪಿಸಿದರು. ಈ ಅವಧಿಯಲ್ಲಿ ಉಚ್ಚಂಗಿ ಕೋಟೆ ಜೀರ್ಣೋದ್ಧಾರ ಮತ್ತು ಹೊಸ ಬೆಳವಣಿಗೆಗಳು ನಡೆದವು. ಕದಂಬ, ಪಾಂಡ್ಯ, ಪಾಳೆಯಗಾರರ ರಾಜಧಾನಿಯಾಗಿ ಮೆರೆದ ದುರ್ಗದ ಈ ಕೋಟೆ ಅವಶ್ಯಕತೆಗಳ ಹೆಚ್ಚಳಕ್ಕೆ ತಕ್ಕಂತೆ ಹಲವು ಬಾರಿ ದುರಸ್ಥಿಯೊಂದಿಗೆ ಹೊಸ ಸುತ್ತುಗಳನ್ನು ಹೊಂದಿದೆ. ಸ್ಥಳೀಯರು ಏಳು ಸುತ್ತಿನ ಕೋಟೆ ಎಂದು ಕರೆಯುತ್ತಾರೆ.

ಡಾ. ಸಿ.ಎಸ್. ಪಾಟೀಲರು ಇದು ಹಲವು ಸುತ್ತುಗಳನ್ನು ಒಳಗೊಂಡಿತ್ತು ಎಂದಿದ್ದಾರೆ. ಡಾ. ಎಂ. ಕೊಟ್ರೇಶ್ ಅವರು ಹೇಳುವಂತೆ ಉಚ್ಚಂಗಿಯ ಕೋಟೆಯು ಸದ್ಯದಲ್ಲಿ ಹರಿದ ಮುರುಕಲಾದ ಮೂರು ಸುತ್ತುಗಳನ್ನು ಒಳಗೊಂಡಿದ್ದು ದಕ್ಷಿಣ ಭಾಗಕ್ಕೆ ವಿಸ್ತರಿಸಿದೆ.

**ಕೋಟೆಯ ಲಕ್ಷಣಗಳು**

ಉಚ್ಚಂಗಿದುರ್ಗದ ಬೆಟ್ಟ ಉತ್ತರ - ದಕ್ಷಿಣ ದಿಕ್ಕಿನಲ್ಲಿ ಸಾಲಾಗಿ ಹರಡಿದೆ. ಬೆಟ್ಟವು ಉತ್ತರ, ಪೂರ್ವ ಮತ್ತು ಪಶ್ಚಿಮ ದಿಕ್ಕುಗಳಲ್ಲಿ ಕಡಿದಾಗಿದೆ. ದಕ್ಷಿಣಕ್ಕೆ ಇಳಿಜಾರಾಗಿದೆ. ಪುನಃ ದಕ್ಷಿಣ ಭಾಗದಲ್ಲಿ ಎತ್ತರಕ್ಕೆ ಹೋಗಿ ಇನ್ನೊಂದು ಚಿಕ್ಕ ಬೆಟ್ಟ ನಿರ್ಮಾಣವಾಗಿದೆ. ಎರಡು ಬೆಟ್ಟಗಳ ನಡುವೆ ಚಿಕ್ಕ ಬಯಲು ಪ್ರವೇಶವಿದೆ. ದಕ್ಷಿಣೋತ್ತರವಾಗಿ ಹಬ್ಬಿರುವ ಎರಡು ಬೆಟ್ಟಗಳನ್ನು ಸುತ್ತುವರಿದು ಹೊರಕೋಟೆಯನ್ನು ಕಟ್ಟಿದೆ. ಈ ಗಿರಿದುರ್ಗವನ್ನು ತಳಪಾಯದ ಆಧಾರವಿಲ್ಲದೆ ಹಾಸುಬಂಡೆಯ ಮೇಲೆ ನಿರ್ಮಿಸಿದಂತಿದೆ. ಕೋಟೆಯ ಗೋಡೆಯು ೧೦ ಅಡಿ ಎತ್ತರವಾಗಿದ್ದು ಕೆಲವು ಭಾಗದಲ್ಲಿ ಹೆಚ್ಚು ಕಡಿಮೆ ಇದೆ. ಈ ಗೋಡೆಯ ಅಗಲ ೫

ಅಡಿ ಕೆಲವು ಕಡೆಗಳಲ್ಲಿ ೧೦ ಅಡಿಯವರೆಗೂ ಇದೆ. ಗೋಡೆಯ ಕೆಳಭಾಗದಲ್ಲಿ ಆಯತಾಕಾರದ ಕಲ್ಲುಗಳನ್ನು ಬಳಸಿದ್ದು ಮೇಲ್ಭಾಗದಲ್ಲಿ ಮಧ್ಯಮ ಗಾತ್ರದ ಕಲ್ಲುಗಳ ಬಳಕೆಯಿದೆ. ಮೇಲ್ಭಾಗದ ಗೋಡೆಯಲ್ಲಿ ಗಾರೆಯ ಉಪಯೋಗವಿದ್ದು ಬಂದೂಕನ್ನು ಬಳಸಲು ಬಂಧೂಕು ಕಿಂಡಿಗಳನ್ನು ಅಳವಡಿಸಲಾಗಿದೆ. ಕೋಟೆಯ ಆಯಕಟ್ಟಿನ ಸ್ಥಳಗಳಲ್ಲಿ(ಬತ್ತೇರಿ) ಕೊತ್ತಳಗಳಿದ್ದು, ಅವು ಇಂದು ೩೦ ಕೊತ್ತಲಗಳು ಮಾತ್ರ ಗೋಚರಿಸುತ್ತಿವೆ. ಶಸ್ತ್ರಗಳ ಸಹಿತ ಮೇಲೇರಲು ಅನುಕೂಲವಾಗದಂತೆ ಚೌಕಾಕಾರ ಮತ್ತು ವರ್ತುಲಾಕಾರದಲ್ಲಿ ನಿರ್ಮಿಸಲಾಗಿದೆ. ಸ್ಥಳೀಯ ಹಿರಿಯರು ಇಲ್ಲಿ ೧೩೦ಕ್ಕೂ ಹೆಚ್ಚು ಕೊತ್ತಲಗಳು ಇದ್ದವೆಂದು ಹೇಳುತ್ತಾರೆ.

ಕೋಟೆಯ ಬೆಟ್ಟದ ತುದಿಯನ್ನು ತಲುಪಲು ಒಂದು ದಾರಿಯಿದೆ. ಈ ದಾರಿಯು ಉಚ್ಚಂಗಿ ಗ್ರಾಮದ ಉಚ್ಚಂಗೆಮ್ಮ ದೇವಿಯ ಪಾದಕಟ್ಟೆಯಿಂದ ಪಶ್ಚಿಮಕ್ಕೆ ಸಾಗಿ ಬೆಟ್ಟುವನ್ನು ಹತ್ತುತ್ತ ಹೊರಟರೆ ಹೊರಗಿನಿಂದ ಕೋಟೆಯನ್ನು ಪ್ರವೇಶಿಸುವಾಗ ಸಿಗುವ ಮೊದಲನೇ ಬಾಗಿಲನ್ನು ಮಳಿ ಬಾಗಿಲೆಂದು ಕರೆಯುತ್ತಾರೆ. ಚೌಕಾಕಾರದ ಎರಡು ದೊಡ್ಡ ಕೊತ್ತಲಗಳ ಮಧ್ಯದಲ್ಲಿರುವ ಈ ಬಾಗಿಲು ದೂರದಿಂದ ಬೇಗನೆ ಗೋಚರಿಸುವುದಿಲ್ಲ. ಉತ್ತರಾಭಿಮುಖವಾಗಿರುವ ದೊಡ್ಡ ಬಾಗಿಲಿನ ಮೇಲೆ ಲಿಂಗವನ್ನು ಕೆತ್ತಿದೆ. ಎರಡು ಆನೆಗಳು ಲಿಂಗದ ಮೇಲೆ ನೀರನ್ನು ಸುರಿಯುತ್ತಿವೆ. ಈ ಬಾಗಿಲಿನ ಹತ್ತಿರದಲ್ಲಿಯೇ ಎರಡನೇ ಬಾಗಿಲಿದೆ. ಇದೂ ಸಹ ಉತ್ತರಾಭಿಮುಖ ವಾಗಿರುವ ದೊಡ್ಡ ಬಾಗಿಲು. ಬಾಗಿಲಿನ ಮೇಲೆ ಗಣೇಶನ ಶಿಲ್ಪವಿದೆ. ದೊಡ್ಡ ಬಾಗಿಲನ ಪಕ್ಕದಲ್ಲಿ ಒಂದು ಚಿಕ್ಕ ಬಾಗಿಲಿದೆ. ದೊಡ್ಡ ಬಾಗಿಲನ್ನು ಮುಚ್ಚಿದಾಗ ಉಪಯೋಗಿಸಲು ಚಿಕ್ಕ ಬಾಗಿಲನ್ನು ನಿರ್ಮಿಸಲಾಗಿದೆ. ಈ ಬಾಗಿಲುಗಳಿರುವ ಗೋಡೆಯ ಮೇಲೆ ದೊಡ್ಡ ಗಾತ್ರದ ತೆನೆಗಳಿವೆ. ದಾರಿಯಲ್ಲಿ ಮುಂದೆ ಹೋಗುವಾಗ ಬಲಬದಿಗೆ ಅಥವಾ ದಾರಿಯ ಪೂರ್ವಕ್ಕೆ ಆಯತಾಕಾರದ ದೊಡ್ಡ ಕಣಜವಿದೆ. ಗಾರೆಯಿಂದ ಮಾಡಿದ ಗೋಡೆಗಳು ಮೇಲಕ್ಕೆ ಹೋದಂತೆ ಒಳಕ್ಕೆ ವಾಲುತ್ತವೆ. ಇದರ ಚಿಕ್ಕ ಬಾಗಿಲನ್ನು ನೆಲಮಟ್ಟದಲ್ಲಿ ನಿರ್ಮಿಸದೇ ಎತ್ತರದಲ್ಲಿ ನಿರ್ಮಿಸಲಾಗಿದೆ. ಇದರ ದಕ್ಷಿಣಕ್ಕೆ ವರ್ತುಲಾಕಾರದ ದೊಡ್ಡ ಬತೇರಿಯಿದೆ. ಕಣಜದ ನಿರ್ಮಾಣದ ಲಕ್ಷಣಗಳನ್ನು ಗಮನಿಸಿದರೆ ಇದು ಪಾಳೆಯಗಾರರ ಅವಧಿಯಲ್ಲಿ ಆಗಿರುವುದು ಸ್ಪಷ್ಟವಾಗುತ್ತದೆ.

ಮುಂದೆ ಎರಡನೆಯ ಕೋಟೆ ಎದುರಾಗುತ್ತದೆ. ಎರಡು ಚೌಕಾಕಾರದ ಕೊತ್ತಲಗಳ ಮಧ್ಯದಲ್ಲಿ ಇಂಗ್ಲಿಷ್ 'L' ಆಕಾರದಲ್ಲಿ ಮೊದಲು ದಕ್ಷಿಣಕ್ಕೆ ಆಮೇಲೆ ಪಶ್ಚಿಮಕ್ಕೆ ಹೋಗುವ ದಾರಿ ಪೂರ್ವಾಭಿಮುಖವಾಗಿರುವ ಮೂರನೇ ಬಾಗಿಲಿಗೆ ಕೊಂಡೊಯ್ಯುತ್ತದೆ. ದೊಡ್ಡದಾದ ಈ ಬಾಗಿಲು ಅನೇಕ ಕಂಬಗಳಿಂದ ಕೂಡಿದೆ. ಈ ಬಾಗಿಲನ್ನು ಅಗಸಿಬಾಗಿಲು ಎಂದು ಕರೆಯುತ್ತಾರೆ. ಕೋಟೆಯಲ್ಲಿ ಹಾಳದ ಸ್ಮಾರಕಗಳ ಕಂಬಗಳು ಮತ್ತು ಇತರ ಅವಶೇಷಗಳನ್ನು ತಂದು ಮಂಟಪವನ್ನು ನಿರ್ಮಾಣ ಮಾಡಲಾಗಿದೆ. ವಿಶ್ರಾಂತಿ ಪಡೆಯಲು ನಿರ್ಮಾಣವಾದಂತಿದೆ. ಈ ಮಂಟಪದ ತಳಪಾಯ ಮಾತ್ರ ಪ್ರಾಚೀನ ಕಾಲಕ್ಕೆ ಸೇರಿದೆ. ಬಾಗಿಲಿನ ಮುಂದೆ ಉತ್ತರ ಗೋಡೆಗೆ ಹೊಂದಿಕೊಂಡು ಬಸವಣ್ಣನ ಚಿಕ್ಕ ದೇವಾಲಯವಿದೆ. ಗರ್ಭಗುಡಿಯ ಗಾತ್ರದಲ್ಲಿರುವ

ಈ ನಂದಿ ಮಂಟಪದ ಪ್ರವೇಶ ದ್ವಾರವು ಐದು ಶಾಖೆಗಳನ್ನು ಹೊಂದಿದೆ. ಬಾಗಿಲನ್ನು ಅಳವಡಿಸಲಾಗಿದೆ. ಕೋಟೆ ಬಾಗಿಲಿನ ಮುಂದೆ ದಕ್ಷಿಣ ಗೋಡೆಯಲ್ಲಿ ಒಂದು ಚಿಕ್ಕ ದಿಡ್ಡಿ ಬಾಗಿಲಿದೆ. ಇಲ್ಲಿಂದ ಕೋಷ್ಠಮ್ಮ ಗುಡಿ ಮತ್ತು ಅಣಜಿ ಬಾಗಿಲಿಗೆ ಹೋಗಲು ದಾರಿ ಇದೆ.

ಮೂರನೇ ಬಾಗಿಲಿನಿಂದ ಮುಂದೆ ಪಶ್ಚಿಮಕ್ಕೆ ಹೋದಾಗ ಎರಡು ಬೆಟ್ಟಗಳ ಮಧ್ಯದ ಬಯಲು ಪ್ರದೇಶವಿದೆ. ಇಲ್ಲಿಯ ದಾರಿಯಲ್ಲಿ ಪಶ್ಚಿಮಾಭಿಮುಖವಾಗಿ ಸಾಗುವಾಗ ಬಲಕ್ಕೆ ಬಸವಣ್ಣನ ಗುಡಿ ಇದೆ. ಇದನ್ನು ಪ್ಯಾಟಿಬಸವಣ್ಣನ ಗುಡಿ ಎಂದು ಕರೆಯುತ್ತಾರೆ. ಇದರ ಪಕ್ಕದಲ್ಲಿ ೧೦-೧೧ನೇ ಶತಮಾನದ ಅನೇಕ ಕಂಬಗಳು ಬಿದ್ದಿವೆ. ಇಲ್ಲಿಂದ ಮುಂದೆ ಸಾಗಿದರೆ ಎಡಕ್ಕೆ ಒಂದು ಬಾವಿ ಮತ್ತು ಆಯತಾಕಾರದ ಚಿಕ್ಕ ಕಣಜ ಮತ್ತು ಬಲಕ್ಕೆ ಮತ್ತೊಂದು ಬಾವಿ ಇದೆ. ಇಲ್ಲಿಂದ ಮುಂದೆ ಎರಡು ವಿಶಾಲವಾದ ಅಧಿಷ್ಠಾನಗಳಿವೆ. ಈ ಅಧಿಷ್ಠಾನದ ಮೇಲೆ ಅಗಸಿಬಾಗಿಲನಲ್ಲಿ ನಿರ್ಮಾಣವಾದ ಮಂಟಪದ ಮಾದರಿಯಲ್ಲಿ ಇಲ್ಲಿ ಮಂಟಪವನ್ನು ನಿರ್ಮಿಸಿರಬೇಕು. ಅದರ ನೇರದಲ್ಲಿಯೇ ಮಂಟಪದ ಅಧಿಷ್ಠಾನದ ಗುರುತುಗಳು ಮಾತ್ರ ಕಾಣಿಸುತ್ತದೆ. ಇನ್ನೂ ಮುಂದೆ ಹೋದಾಗ ಗಣೇಶನ ದೇವಾಲಯವಿದೆ. ಇಲ್ಲಿಂದ ಒಂದು ದಾರಿ ಉತ್ತರಕ್ಕೆ ಬೆಟ್ಟದ ಮೇಲಿನ ಉಚ್ಚಂಗಿಯಮ್ಮನ ದೇವಾಲಯಕ್ಕೆ ಹೋಗುತ್ತದೆ. ದಕ್ಷಿಣಕ್ಕೆ ಹೋಗುವ ದಾರಿ ದಕ್ಷಿಣಕ್ಕಿರುವ ಚಿಕ್ಕ ಬೆಟ್ಟದ ಮೇಲೆ ಹೋಗುತ್ತದೆ. ಪಶ್ಚಿಮಕ್ಕೆ ಮುಂದೆ ಹೋಗುವ ದಾರಿ ಕೋಟೆಯ ಪಶ್ಚಿಮ ಬಾಗಿಲಿಗೆ ಹೋಗುತ್ತದೆ. ಈ ಬಾಗಿಲಿಗೆ ಹರಿಹರದ ಬಾಗಿಲೆಂದು ಹೆಸರು. ಬಾಗಿಲನ್ನು ವೈರಿಯ ಕಣ್ಣಿಗೆ ಕಾಣದಂತೆ ಮಾಡಲು ಮುಂದೆ 'L' ಆಕಾರದ ಗೋಡೆಯನ್ನು ಕಟ್ಟಲಾಗಿದೆ. ದಕ್ಷಿಣ ಭಾಗದಲ್ಲಿರುವ ಚಿಕ್ಕ ಬೆಟ್ಟದ ಮೇಲೆ ಲಿಂಗವಿರುವ ಒಂದು ದೇವಾಲಯ ಮತ್ತು ಮೂರು ವರ್ತುಲಾಕಾರದ ಬತೇರಿಗಳಿವೆ. ಹರಿಹರದ ಬಾಗಿಲಿನ ಮುಂದೆ ಪಶ್ಚಿಮಕ್ಕೆ ಹತ್ತು ಅಡಿ ಅಗಲದ ಕಂದಕವನ್ನು ಬೆಟ್ಟದ/ಕೋಟೆ ಸುತ್ತಲೂ ನಿರ್ಮಿಸಲಾಗಿದೆ. ಮಳೆಗಾಲದಲ್ಲಿ ಬೆಟ್ಟದ ಮೇಲೆ ಬಿದ್ದ ನೀರು ಇದರಲ್ಲಿ ಶೇಖರಣೆಯಾಗುತ್ತಿತ್ತು. ರಾಜರ ಕಾಲದಲ್ಲಿ ಆನೆಗಳಿಗೆ ನೀರು ಕುಡಿಸಲು ಬಳಸುತ್ತಿದ್ದರೆಂದು ಸ್ಥಳೀಯರು ಭಾವಿಸಿದ್ದಾರೆ.

ಎರಡು ಬೆಟ್ಟಗಳ ಮಧ್ಯದ ಬಯಲಿನಿಂದ ಉತ್ತರಾಭಿಮುಖವಾಗಿ ದೊಡ್ಡ ಬೆಟ್ಟವನ್ನು ಹತ್ತುವಾಗ ನಾಲ್ಕನೇ ಬಾಗಿಲು ಇದೆ. ಇದು ಶಿಥಿಲವಾಗಿದೆ. ಮುಂದೆ ಐದನೇ ಬಾಗಿಲು ಇದೆ. ಎರಡು ಚೌಕಾಕಾರದ ಕೊತ್ತಲಗಳ ಮಧ್ಯದಲ್ಲಿರುವ ಬಾಗಿಲಿನ ಮೇಲೆ ಗಣೇಶನ ಶಿಲ್ಪವಿದೆ. ಆರು ಅಂಕಣಗಳ ಈ ಬಾಗಿಲಿನೊಳಗೆ ದಾರಿಯ ಇಕ್ಕೆಲಗಳಲ್ಲಿ ಕಟ್ಟೆಗಳಿವೆ. ಬಾಗಿಲಿನ ಒಳಗೆ ಪ್ರವೇಶಿಸುವಾಗ ಆಯತಾಕಾರದ ಬಾಗಿಲವಾಡದಲ್ಲಿ ಪ್ರವೇಶಿಸಿ ಮುಂದೆ ಕಮಾನಿನ ಮೂಲಕ ಹೊರಬರುತ್ತೇವೆ. ಅಂದರೆ ಬಾಗಿಲಿನ ಒಳಮೈಯನ್ನು ಕಮಾನಿನಿಂದ ಅಲಂಕರಿಸಲಾಗಿದೆ. ಕಮಾನನ್ನು ಕಲ್ಲುಗಳನ್ನು ಕ್ರಮೇಣವಾಗಿ ಮುಂದೆ ಚಾಚಿ ಅವುಗಳ ಕೆಳಭಾಗವನ್ನು ಸ್ವಲ್ಪ ತುಂಡರಿಸಿ ಮಾಡಲಾಗಿದೆ. ಮುಂದೆ ಆರನೇ ಬಾಗಿಲು ಇದೆ. ಇದೂ ಸಹ ಶಿಥಿಲವಾಗಿದೆ.

ಇಲ್ಲಿಂದ ಮುಂದೆ ಹೋದಾಗ ಏಳನೆಯ ಮತ್ತು ಕೊನೆಯ ಬಾಗಿಲು ಇದೆ. ಈ ಬಾಗಿಲು ಇರುವ ಕೋಟೆ ಬಿದ್ದು ಹೋಗಿರುವುದರಿಂದ ಎತ್ತರವಾಗಿಲ್ಲ.

ಏಳನೇ ಬಾಗಿಲು ದಾಟಿದ ಮೇಲೆ ಬೆಟ್ಟದ ಮೇಲಿನ ಬಯಲು ಪ್ರದೇಶವನ್ನು ತಲುಪುತ್ತೇವೆ. ಇಲ್ಲಿ ರಾಜ ಮತ್ತು ರಾಣಿಯರ ಅರಮನೆಗಳಿವೆ. ಇವುಗಳ ಉತ್ತರ ತುದಿಯಲ್ಲಿ ಉಚ್ಚಂಗಿಯಮ್ಮನ ದೇವಾಲಯವಿದೆ. ಇದರ ದಕ್ಷಿಣಕ್ಕೆ ಚೌಕಾಕಾರದ ಕಡೆಗಾಪು (Citadel) ಇದೆ. ಉತ್ತರ ದಿಕ್ಕಿನ ಗೋಡೆಯಲ್ಲಿ ಬಾಗಿಲಿರುವ ಈ ಕಟ್ಟಡದ ನಾಲ್ಕು ಮೂಲೆಗಳಲ್ಲಿ ಚೌಕಾಕಾರದ ಕೊತ್ತಲಗಳಿವೆ. ಮೇಲಿನ ಕೈಪಿಡಿ ಗೋಡೆಯಲ್ಲಿ ಬಂದೂಕು ಕಿಂಡಿಗಳಿವೆ. ಕೊತ್ತಲಗಳನ್ನು ತೆನೆಗಳು ಮತ್ತು ಗಾರೆಯಲ್ಲಿ ಮಾಡಿದ ಮನುಷ್ಯರ ಉಬ್ಬುಶಿಲ್ಪಗಳಿಂದ ಅಲಂಕರಿಸಿದೆ. ಕಡೆಗಾಪಿನ ಪೂರ್ವಕ್ಕೆ ಅರಿಶಿಣ ಹೊಂಡವೆಂಬ ನೀರಿನ ಹೊಂಡ ಇದೆ. ಮೊದಲಿನ ಕಡೆಗಾಪಿನ ದಕ್ಷಿಣಕ್ಕೆ ಮತ್ತೊಂದು ಕಡೆಗಾಪು ಇದೆ. ಇದರ ಮೂಲೆಗಳಲ್ಲಿ ವರ್ತುಲಾಕಾರದ ಕೊತ್ತಲಗಳಿವೆ. ಇದರ ಪಕ್ಕದಲ್ಲಿ ವರ್ತುಲ ಮತ್ತು ಆಯತಾಕಾರದ ಕಣಜಗಳು, ನೀರಿನ ದೊಣೆಗಳು ಇವೆ. ಎರಡನೇ ಕಡೆಗಾಪಿನ ನೈರುತ್ಯಕ್ಕೆ ಒಂದು ಮತ್ತು ದಕ್ಷಿಣಕ್ಕೆ ಮತ್ತೊಂದು ಬತೇರಿಗಳಿವೆ. ಇವುಗಳ ಮೇಲೆ ತೋಪುಗಳಿದ್ದುದರಕ್ಕೆ ಗುರುತುಗಳಿವೆ. ಕೋಟೆಯ ಮೇಲಿರುವ ರಾಜ ಮತ್ತು ರಾಣಿಯ ಅರಮನೆಯಿಂದ ಕೆಳಗಿನ ಮಳಿಬಾಗಿಲನವರೆಗೂ ರಾಜಬೀದಿಯನ್ನು ನಿರ್ಮಿಸಲಾಗಿದೆ. ಕೆಳಹಂತದ ಕೋಟೆಯಲ್ಲಿ ರಾಜಬೀದಿಯಲ್ಲಿ ವಿಶ್ರಾಂತಿ ಪಡೆಯಲು ಎರಡು ವಿಶ್ರಾಂತಿ ಮಂಟಪಗಳ ಜೊತೆಗೆ ನೀರಿನ ಅರವಟ್ಟಿಗೆಗಳನ್ನು ನಿರ್ಮಿಸಿಕೊಂಡಿದ್ದಾರೆ.

**ಅರಮನೆಗಳು**

ಉಚ್ಚಂಗಿದುರ್ಗದ ಬೆಟ್ಟದ ಮೇಲಿನ ಕೋಟೆಯೊಳಗೆ ರಾಜ ಮತ್ತು ರಾಣಿಯ ಎರಡು ಅರಮನೆಗಳಿವೆ. ರಾಜನ ಅರಮನೆ ಚೌಕಾಕಾರದಲ್ಲಿದ್ದು ಉತ್ತರಕ್ಕೆ ಪ್ರವೇಶ ದ್ವಾರವಿದೆ. ಚೌಕಾಕಾರದ ನಾಲ್ಕು ಮೂಲೆಗಳಲ್ಲಿ ಚೌಕಾಕಾರದ ಬುರುಜುಗಳಿವೆ. ಒಂದು ಬುರುಜಿನಿಂದ ಇನ್ನೊಂದಕ್ಕೆ ೧೦೦ ಅಡಿ ಅಂತರವಿದೆ. ಈ ಬುರುಜುಗಳು ಮೂರು ಅಂತಸ್ತುಗಳಿಂದ ಕೂಡಿವೆ. ಮೇಲಿನ ಅಂತಸ್ತಿಗೆ ಹೋಗಲು ಮೆಟ್ಟಿಲುಗಳನ್ನು ಜೋಡಿಸಲಾಗಿದೆ. ಈ ಬುರುಜುಗಳ ಸುತ್ತಲೂ ಕಿಂಡಿಗಳಿವೆ. ಉತ್ತರದ ಪ್ರವೇಶದ್ವಾರದಿಂದ ರಾಜನ ಅರಮನೆಗೆ ಪ್ರವೇಶ ಪಡೆದರೆ ಮೊದಲಿಗೆ ಒಂದು ಶಿವ ದೇವಾಲಯವಿದೆ. ಈ ದೇವಾಲಯ ಪೂರ್ವಾಭಿಮುಖವಾಗಿದೆ. ದೇವಾಲಯದ ಅಧಿಷ್ಠಾನ ಭಾಗ ಮಾತ್ರ ಉಳಿದುಕೊಂಡಿದೆ. ಇದು ಗರ್ಭಗೃಹ, ಅಂತರಾಳ, ನವರಂಗವನ್ನು ಹೊಂದಿದೆ. ನೆಲಮಟ್ಟದಿಂದ ಎತ್ತರದಲ್ಲಿ ಇರುವುದರಿಂದ ಪೂರ್ವ ದಿಕ್ಕಿನಲ್ಲಿ ಮೆಟ್ಟಿಲುಗಳು ಇದ್ದು ಇದರ ಮೂಲಕ ದೇವಾಲಯವನ್ನು ಪ್ರವೇಶಿಸಿರಬೇಕು. ಗರ್ಭಗೃಹದಲ್ಲಿ ದೊಡ್ಡ ಗಾತ್ರದ ಶಿವಲಿಂಗವಿದೆ. ಈ ದೇವಾಲಯದ ಪಕ್ಕದಲ್ಲಿ ೨೦ಕ್ಕೂ ಹೆಚ್ಚು ವೃತ್ತಾಕಾರದ ಬಂದೂಕು ಗುಂಡುಗಳು ಕಂಡು ಬರುತ್ತವೆ.

ಕ್ರಿ.ಶ. ೧೧೭೧ರ ಹರಿಹರ ಶಾಸನ ಉಚ್ಚಂಗಿದುರ್ಗದ ಆದಿನಾಥ ಶ್ರೀ ಶಂಕರನಾರಾಯಣ ದೇವರ ಅನುಗ್ರಹವನ್ನು ಪಡೆದವನು ಎನಿಸಿದ ಕೇತರಸನಿಗೆ ನಾಗತಿಯರಸನು ಜನ್ಮವೆತ್ತಿದನು ಎಂದು ವರ್ಣಿಸುತ್ತದೆ. ರಾಜನ ಅರಮನೆಯಲ್ಲಿರುವ ಶಿವ ದೇವಾಲಯ ಈ ಶಾಸನ ತಿಳಿಸುವ ಶಂಕರನಾರಾಯಣ ದೇವಾಲಯವಾಗಿರಬೇಕು. ಪಾಂಡ್ಯರು ಕೂಡಲೂರು ಶಂಕರ ನಾರಾಯಣ ದೇವರ ಪರಮಭಕ್ತರಾಗಿದ್ದರಿಂದ ತಮ್ಮ ಆಡಳಿತ ಕೇಂದ್ರವನ್ನು ಉಚ್ಚಂಗಿದುರ್ಗಕ್ಕೆ ವರ್ಗಾಯಿಸಿಕೊಂಡಾಗ ತಮ್ಮ ಆರಾಧ್ಯ ದೇವರಾದ ಶಂಕರನಾರಾಯಣ ದೇವಾಲಯವನ್ನು ಅರಮನೆಯ ಆವರಣದೊಳಗೆ ನಿರ್ಮಾಣ ಮಾಡಿಕೊಂಡಿರಬೇಕು.

ಈ ದೇವಾಲಯದ ಹಿಂದಿನ ಭಾಗದಲ್ಲಿ ಅಂದರೆ ಪಶ್ಚಿಮ ಮತ್ತು ದಕ್ಷಿಣ ಭಾಗದಲ್ಲಿ ೯ ಕೋಣೆಗಳ ವಸತಿಗೃಹವಿದ್ದು ಒಂದು ಕೋಣೆಯಿಂದ ಇನ್ನೊಂದು ಕೋಣೆಗೆ ಪ್ರವೇಶ ಕಲ್ಪಿಸಲು ಪ್ರವೇಶ ದ್ವಾರಗಳು ಇವೆ. ದೇವಾಲಯದ ಮುಂದಿನ ಭಾಗದಲ್ಲಿ ಮತ್ತು ಆಗ್ನೇಯ ಭಾಗದಲ್ಲಿ ಎರಡು ದೊಡ್ಡ ಮನೆಗಳು ಇವೆ. ಪಶ್ಚಿಮ ಭಾಗದ ಮತ್ತು ಆಗ್ನೇಯ ಭಾಗದ ಮನೆಗಳಲ್ಲಿ ನೀರಿನ ತೊಟ್ಟಿ ಮತ್ತು ಸ್ನಾನಗೃಹಗಳು ಇವೆ. ನೀರಿನ ಸರಬರಾಜಿಗೆ ಗಾರೆಯಿಂದ ಮಾಡಿದ ಪ್ರನಾಳ ಅಥವಾ ಕಾಲುವೆಯ ವ್ಯವಸ್ಥೆಯನ್ನು ಮಾಡಲಾಗಿದೆ. ರಾಜನ ಅರಮನೆ ಯಲ್ಲಿರುವ ಈ ಅಪರೂಪದ ಸ್ಮಾರಕಗಳ ತಳವಿನ್ಯಾಸ ಮಾತ್ರ ಉಳಿದುಕೊಂಡಿದೆ. ಇಂದಿಗೂ ಯಾವುದೇ ಜೀರ್ಣೋದ್ಧಾರ ಮತ್ತು ಸ್ವಚ್ಛತೆ ಇಲ್ಲದೆ ಸಾರ್ವಜನಿಕರ ದೈನಂದಿನ ಚಟುವಟಿಕೆಗಳ ತಾಣವಾಗಿ ಬಳಕೆ ಆಗುತ್ತದೆ. ರಾಣಿಯ ಅರಮನೆಯಲ್ಲಿ ಇಂತಹ ಯಾವುದೇ ಸ್ಮಾರಕಗಳು ಇಲ್ಲ. ಅಲ್ಲಿ ಇಟ್ಟಿಗೆ ಮತ್ತು ಮಡಿಕೆ ಅವಶೇಷಗಳು ಕಂಡುಬರುತ್ತವೆ.

**ನೀರು ಸಂಗ್ರಹ ತಾಣಗಳು**

ಉಚ್ಚಂಗಿದುರ್ಗದ ಕೋಟೆಯ ಪರಿಸರದಲ್ಲಿ ಪ್ರಕೃತಿ ಸಹಜ ನೀರಿನ ತಾಣಗಳು ಒಂದೆಡೆಯಾದರಲ್ಲಿ ಮನುಷ್ಯ ಉದ್ದೇಶಿತವಾಗಿ ನಿರ್ಮಿಸಿದ ನೀರಿನ ಸಂಗ್ರಹಣ ತಾಣಗಳು ಮನುಷ್ಯ ಮತ್ತು ತನ್ನದೊಂದಿಗಿರುವ ಪ್ರಾಣಿ - ಪಕ್ಷಿಗಳ ದೈನಂದಿನ ಬದುಕಿಗೆ ಆಶ್ರಯ ನೀಡಿದ್ದವು. ಜೊತೆಗೆ ಕೋಟೆಯ ರಕ್ಷಣೆಯ ಜವಾಬ್ದಾರಿಯನ್ನು ನಿರ್ವಹಿಸಿರುವುದನ್ನು ಗುರುತಿಸಬಹುದು. ನೀರು ಸಂಗ್ರಹಣ ತಾಣಗಳ ಉದ್ದೇಶ ಒಂದೇ ಆಗಿದ್ದರೂ ಅದರ ಪ್ರಯೋಜನ ದ್ವಿಮುಖ ವಾಗಿರುವುದು ಇಲ್ಲಿ ವಿಶೇಷವಾಗಿದೆ. ಕೋಟೆಯಲ್ಲಿರುವ ನೀರಿನ ತಾಣಗಳಿಗೆ ಮಳೆ ನೀರನ್ನು ಬಿಟ್ಟು ಇತರ ಯಾವುದೇ ಮೂಲಗಳು ಸಹಾಯ ನೀಡಿಲ್ಲ. ಉಚ್ಚಂಗಿದುರ್ಗದ ಕೋಟೆಯಲ್ಲಿ ಆರು ನೀರಿನ ತಾಣಗಳು ಕಂಡು ಬರುತ್ತವೆ.

ಹರಿಹರದ ಬಾಗಿಲಿನಿಂದ ಮಳಿಬಾಗಿಲನವರೆಗೆ ವಿಶಾಲ ಬಯಲು ಪ್ರದೇಶದಲ್ಲಿ ಬಿದ್ದು ಮಳೆ ನೀರು ರಾಜಬೀದಿಯ ಮೂಲಕ ಹರಿದು ಕೋಟೆಯಿಂದ ಹೊರ ಬರುತ್ತದೆ. ಹೀಗೆ ಹೊರ ಬರುವ ನೀರನ್ನು ಮಳಿಬಾಗಿಲಿನಿಂದ ಸ್ವಲ್ಪ ದೂರದಲ್ಲಿ ಬಲಬದಿಗೆ ತಡೆಗೋಡೆಯನ್ನು ನಿರ್ಮಿಸಿ ನೀರನ್ನು ಸಂಗ್ರಹಿಸಲಾಗಿದೆ. ಈ ನೀರು ಸಂಗ್ರಹದಿಂದ ಕೋಟೆಯ ನೀರು ನೇರವಾಗಿ

ಗ್ರಾಮದ ಒಳಕ್ಕೆ ಹೋಗುವುದನ್ನು ತಡೆಯುತ್ತದೆ ಮತ್ತು ಪೂರ್ವದ ಕೋಟೆಯ ಗೋಡೆಗೆ ಕಂದಕವನ್ನು ನಿರ್ಮಿಸಿ ರಕ್ಷಣೆಯ ಕಾರ್ಯವನ್ನು ನಿರ್ವಹಿಸುತ್ತಿದೆ.

**ಹೊನ್ನೇಜರಿ**

ಅಗಸಿಬಾಗಿಲ ಬಲಭಾಗಕ್ಕೆ ಇರುವ ಬೃಹತ್ ಬಂಡೆಗಲ್ಲಿನಿಂದ ಬೀಳುವ ಮಳೆ ನೀರನ್ನು ತಡೆಯಲು ಕೆಳಭಾಗದಲ್ಲಿ ಬಂಡೆಯ ಅಂಚಿನಲ್ಲಿ ಉತ್ತರ - ದಕ್ಷಿಣವಾಗಿ ತಡೆಗೋಡೆಯನ್ನು ನಿರ್ಮಿಸಿದೆ. ಇದನ್ನು ಹೊನೇಜರಿ ಎಂದು ಕರೆಯುತ್ತಾರೆ. ಪಾಳೆಯಗಾರ ದಾದಯ್ಯ ನಾಯಕನ ಹೆಂಡತಿ ಹೊನ್ನನಾಗತಿ ಈ ಬಂಡೆಯಿಂದ ಬಿದ್ದು ಮರಣ ಹೊಂದಿದ್ದರಿಂದ ಅವಳ ನೆನಪಿನಲ್ಲಿ ಇದನ್ನು ಹೊನೇಜರಿ ಎಂದು ಕರೆಯುತ್ತಿರುವುದಾಗಿ ತಿಳಿಯುತ್ತದೆ. ಎತ್ತರದ ಬೆಟ್ಟದ ನೀರು ಮಳಿಬಾಗಿಲನ ಕಡೆ ಹರಿದು ಹೋಗದಂತೆ ತಡೆಯುತ್ತದೆ. ಇದರ ಪಕ್ಕದಲ್ಲಿ ಮಠ, ಪ್ಯಾಟಿಬಸವಣ್ಣನ ಗುಡಿ, ಬನ್ನಿಮಂಟಪ ಇದ್ದು ಇವುಗಳ ಧಾರ್ಮಿಕ ಕಾರ್ಯಕ್ರಮಗಳಿಗೆ ಹಾಗೂ ಇದರ ಪಕ್ಕದಲ್ಲಿರುವ ಜನವಸತಿಗಳಿಗೂ ಇದು ಆಶ್ರಯ ನೀಡಿದೆ.

**ಆನೆಹೊಂಡ**

ಉತ್ತರದ ಕೋಟೆಯ ಆರನೇ ಬಾಗಿಲಿನ ಬಲಭಾಗದಲ್ಲಿ ಆನೆಹೊಂಡ ಇದೆ. ಮೇಲಿನ ಕೋಟೆಯ ಪೂರ್ವಭಾಗದ ಮಳೆ ನೀರು ಇದರಲ್ಲಿ ಸಂಗ್ರಹವಾಗುತ್ತದೆ. ಇದನ್ನು ಕೆಳಗಿನ ಕೋಟೆಯ ಗೋಡೆಗೆ ಹಾನಿಯಾಗದಂತೆ ತಡೆಯಲು ಹತ್ತು ಅಡಿ ಅಂತರದಲ್ಲಿ ಆನೆಹೊಂಡವನ್ನು 'L' ಆಕಾರದಲ್ಲಿ ನಿರ್ಮಿಸಲಾಗಿದೆ. ಉಚ್ಚಂಗಿದೇವಿಯ ಜಾತ್ರಾ ಮಹೋತ್ಸವದಲ್ಲಿ ಭಕ್ತಾದಿಗಳ ನೆಚ್ಚಿನತಾಣವಿದು. ಉಚ್ಚಂಗಿದೇವಿಯ ಎಲ್ಲಾ ಬಗೆಯ ಧಾರ್ಮಿಕ ಕಾರ್ಯಕ್ರಮಗಳು ಈ ಹೊಂಡದ ಆಶ್ರಯದಲ್ಲಿಯೇ ನಡೆದುಕೊಂಡು ಬರುತ್ತಿವೆ. ಹಾಸುಬಂಡೆಯ ಮೇಲೆ ನೀರು ಸಂಗ್ರಹವಾಗುವುದರಿಂದ ವರ್ಷಪೂರ್ತಿ ಜನತೆಗೆ ನೀರಿನ ದಾಹವನ್ನು ತಣಿಸುತ್ತದೆ. ರಾಜರ ಕಾಲದಲ್ಲಿ ಆನೆಗಳಿಗೆ ಇಲ್ಲಿ ನೀರು ಕುಡಿಸುತ್ತಿದ್ದರಿಂದ ಇದಕ್ಕೆ ಆನೆಹೊಂಡ ಎಂದು ಕರೆಯುತ್ತಿರುವುದಾಗಿ ಸ್ಥಳೀಯರು ಹೇಳುತ್ತಾರೆ.

**ಅರಿಶಿಣ ಹೊಂಡ**

ರಾಜನ ಅರಮನೆಯ ಹಿಂಭಾಗದಲ್ಲಿ ಕೋಟೆಯ ಪೂರ್ವಭಾಗದಲ್ಲಿದೆ. ರಾಜನ ಅರಮನೆ ಅದರ ಹಿಂಭಾಗದಲ್ಲಿ ಮತ್ತು ಗ್ರಾಮದ ವಸತಿ ನೆಲೆಗಳಲ್ಲಿ ಬೀಳುವ ಮಳೆ ನೀರು ಇದರಲ್ಲಿ ಸಂಗ್ರಹವಾಗುತ್ತದೆ. ಈ ನೀರು ಹಸಿರು ಬಣ್ಣದ ಪಾಚಿ ಕಟ್ಟಿರುವುದರಿಂದ ಇದನ್ನು ಅರಿಶಿಣ ಹೊಂಡ ಎಂದು ಕರೆಯುತ್ತಾರೆ. ಅರಮನೆ ಹಿಂಭಾಗದ ಪೂರ್ವದ ಕೋಟೆ ಗೋಡೆಗೆ ನೀರು ಹೋಗುವುದನ್ನು ಇದು ತಡೆಗಟ್ಟುತ್ತದೆ. ಇದರ ಸುತ್ತಲೂ ಇರುವ ಮನೆಗಳು ಮತ್ತು ದೇವಸ್ಥಾನದ ಕಾರ್ಯಗಳಿಗೆ ಇದರ ನೀರನ್ನು ಬಳಕೆಯಾಗುತ್ತದೆ.

**ತಿಗಣೆ ಹೊಂಡ**

ರಾಣಿ ಅರಮನೆ ಮತ್ತು ಉಚ್ಚಂಗಿದೇವಿಯ ದೇವಸ್ಥಾನದ ಮಧ್ಯದಲ್ಲಿ ಕೋಟೆಯ ಪಶ್ಚಿಮ ಭಾಗದಲ್ಲಿದೆ. ಬೆಟ್ಟದ ಮೇಲೆ ಸಮತಟ್ಟಾದ ಪ್ರದೇಶದಲ್ಲಿ ಇದು ಇರುವುದರಿಂದ ನೀರು ಸಂಗ್ರಹ ಸಾಮರ್ಥ್ಯ ಕಡಿಮೆ ಇದೆ. ಈ ಬಯಲು ಪ್ರದೇಶದ ನೀರು ಪಶ್ಚಿಮದ ಕೋಟೆ ಗೋಡೆಗೆ ಮತ್ತು ಅದರ ಹಿಂಬದಿಯಲ್ಲಿರುವ ಕೋಟೆಯ ಬತೇರಿಗೆ ರಕ್ಷಣೆ ನೀಡಿದೆ. ಉಚ್ಚಂಗಿ ದೇವಿಯ ಭಕ್ತರ ಮನೆಯಲ್ಲಿ ತಿಗಣೆ ಕಾಟದಿಂದ ಮುಕ್ತಿ ಪಡೆಯಲು ತಮ್ಮ ಮನೆಯಲ್ಲಿರುವ ತಿಗಣೆಗಳನ್ನು ತಂದು ಇದರಲ್ಲಿ ಹಾಕುವುದರಿಂದ ಮನೆಯಿಂದ ತಿಗಣೆಗಳು ದೂರವಾಗುತ್ತವೆ ಎಂಬುವುದು ಜನರ ನಂಬಿಕೆಯಾಗಿದೆ. ರಾಜ ಮತ್ತು ರಾಣಿ ಅರಮನೆ ಪ್ರದೇಶದಲ್ಲಿ ಇರುವುದರಿಂದ ಇದು ಆಡಳಿತ ವರ್ಗಕ್ಕೆ ಸೀಮಿತವಾಗಿದ್ದಂತೆ ಕಾಣುತ್ತದೆ. ಇದನ್ನು ಬಿಟ್ಟು ಉಳಿದೆಲ್ಲ ನೀರಿನ ತಾಣಗಳು ಇಂದಿಗೂ ಸಾರ್ವಜನಿಕರ ಉಪಯೋಗಕ್ಕೆ ಯೋಗ್ಯವಾಗಿವೆ.

ಈ ಕೋಟೆ ಪರಿಸರದಲ್ಲಿ ಹಲವು ಗುಡಿಗೋಪುರಗಳು ಕಂಡುಬರುತ್ತವೆ. ಬನಶಂಕರಿ ದೇವಾಲಯ, ಅರಸನ ಬಾವಿಯ ಬಳಿ ಈ ದೇವಾಲಯವಿದೆ. ಆಗ್ನೇಯದ ಕೋಟೆಯ ಹೊರಭಾಗದಲ್ಲಿ ತವಕ್ಲೇಶ್ವರ ದೇವಾಲಯ ಮತ್ತು ಇದೇ ಭಾಗದ ಕೋಟೆಯ ಹೊರಮುಖಕ್ಕೆ ಹಾಲಮ್ಮನ ದೇವಾಲಯವಿದೆ. ಕೋಟೆ ಆಂಜನೇಯದ ಬಲಭಾಗದಲ್ಲಿ ಬಸವಣ್ಣ ದೇವಾಲಯ ಕಂಡು ಬರುತ್ತದೆ. ಕೋಟೆಯ ಮಧ್ಯದಲ್ಲಿ ಎತ್ತರ ಪ್ರದೇಶದಲ್ಲಿ ಉಚ್ಚಂಗೆಮ್ಮ ದೇವತೆಯ ದೇಗುಲವಿದೆ. ಹರಿಹರದ ಬಾಗಿಲ ಬಳಿ ಗಣೇಶನ ಗುಡಿ, ಸೇದುಬಾವಿಯ ಬಳಿ ಆಂಜನೇಯ ದೇವಾಲಯ ಸಿದ್ಧೇಶ್ವರ ಮಠ ಒಳಕೋಟೆ ಗೋಡೆಗೆ ಹೊಂದಿಕೊಂಡಿದೆ. ಇಲ್ಲಿ ಜೈನ ಸ್ಮಾರಕವಿದೆ. ಈ ಸ್ಮಾರಕಗಳ ನಿರ್ಮಾಣದ ಕಾಲದ ಕುರಿತು ನಿಖರವಾದ ದಾಖಲೆಗಳು ಇಲ್ಲ. ಕಾಲಕಾಲಕ್ಕೆ ಇವುಗಳು ಜೀರ್ಣೋದ್ಧಾರಗೊಂಡು ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡಿವೆ.

**ಕರಡಿದುರ್ಗ ಕೋಟೆ**

ಕರಡಿದುರ್ಗದ ಕೋಟೆಯ ಉಚ್ಚಂಗಿದುರ್ಗದ ಕೋಟೆಗೆ ಬಹು ಸಮೀಪದಲ್ಲಿದೆ. ಉಚ್ಚಂಗಿ ಕೋಟೆಯ ಹರಿಹರದ ಬಾಗಿಲಿನಿಂದ ಪಶ್ಚಿಮಕ್ಕೆ ಸಣ್ಣ ಬೆಟ್ಟಗಳನ್ನು ದಾಟಿಕೊಂಡು ಕರಡಿದುರ್ಗದವರೆಗೆ ನಡೆದುಕೊಂಡು ಹೋಗುವುದಕ್ಕೆ ಪ್ರಾಚೀನ ಕಾಲದಿಂದಲೂ ದಾರಿ ಇದೆ. ಉಚ್ಚಂಗಿ ಕೋಟೆಗಿಂತ ಕಿರಿದಾಗಿದೆ. ಕರಡಿದುರ್ಗದ ಕೋಟೆಯ ನಿರ್ಮಾಣದ ಬಗ್ಗೆ ಮಾಹಿತಿ ನೀಡುವ ಯಾವ ದಾಖಲೆಗಳು ಕಾಣಿಸುವುದಿಲ್ಲ. ಆದರೆ ಕ್ರಿ.ಶ. ೧೭೦೦ ಅಪ್ರಕಟಿತ ತ್ರುಟಿತ ಶಾಸನ ಮುಮ್ಮಡಿ ಬಸಪ್ಪ ನಾಯಕರು ಕೋಟೆಯ ಒಳಗಿರುವ ಹನುಮಂತ ದೇವರ ಗುಡಿಗೆ ದಾನ ಮಾಡಿರಬಹುದಾದ ಮಾಹಿತಿಯನ್ನು ನೀಡುತ್ತದೆ.[೨೧] ಕೋಟೆಯನ್ನು ಸೂಕ್ಷ್ಮವಾಗಿ ಗಮನಿಸಿದರೆ ಅದು ಪಾಳೆಯಗಾರರ ಕಾಲಕ್ಕೂ ಪೂರ್ವದಲ್ಲಿ ನಿರ್ಮಿಸಿರಬೇಕು ಎಂದೂ

ಊಹಿಸಬಹುದಾಗಿದೆ. ಪಾಂಡ್ಯರು ಮತ್ತು ಹೊಯ್ಸಳರ ನಡುವೆ ನಿರಂತರ ಕದನಗಳು ನಡೆಯುತ್ತಿದ್ದ ಕಾರಣಕ್ಕೆ ಉಚ್ಚಂಗಿದುರ್ಗದ ಸುತ್ತಲ ಪ್ರದೇಶದಲ್ಲಿ ಅಂದರೆ ಕರಡಿದುರ್ಗ ಅರಸಿಕೆರೆ ಹಲವಾಗಿಲು ಪ್ರದೇಶಗಳಲ್ಲಿ ಕೋಟೆಗಳ ರಚನೆ ಆಗಿರಬಹುದು. ಈ ಎಲ್ಲಾ ಗಿರಿದುರ್ಗಗಳ ಕಾರಣಕ್ಕೆ ಉಚ್ಚಂಗಿ ಕೋಟೆ ಹೊಯ್ಸಳ ಮತ್ತು ಚೋಳ ಅರಸರಿಗೆ ಅಭೇದ್ಯವಾಗಿದ್ದು ಗೆಲ್ಲಲು ಕಷ್ಟವಾಗಿರ ಬೇಕು. ಏಕೆಂದರೆ ಈ ಕೋಟೆಗಳು ಒಂದೇ ಬೆಟ್ಟ ಸಾಲಿನಲ್ಲಿ ಬರುವ ಬೆಟ್ಟಗಳಲ್ಲಿ ನಿರ್ಮಾಣ ವಾಗಿವೆ. ಶತ್ರುಗಳು ಆಕ್ರಮಣ ಮಾಡಿದಾಗ ಸೈನ್ಯದ ಒಂದು ತುಕಡಿಯನ್ನು ಇಲ್ಲಿ ಇಟ್ಟು ತಮ್ಮ ರಕ್ಷಣೆ ಮಾಡಿಕೊಳ್ಳಲು ಈ ಕೋಟೆಗಳು ಅನುಕೂಲಕರವಾಗಿದ್ದವು. ಪಾಳೆಯಗಾರರ ಕಾಲದಲ್ಲಿ ಇವು ಮತ್ತೆ ಪ್ರಾಮುಖ್ಯತೆ ಪಡೆದು ಗ್ರಾಮಗಳಾಗಿ ಪರಿವರ್ತನೆ ಪಡೆದಿರಬೇಕು.

**ಕೋಟೆಯ ಲಕ್ಷಣಗಳು**

ಸುತ್ತಲು ಕಿರಿದಾದ ಕಂದಕವನ್ನು ಹೊಂದಿರುವ ಕರಡಿದುರ್ಗ ಬೆಟ್ಟವನ್ನು ಬಳಸಿ ಈ ಕೋಟೆಯನ್ನು ನಿರ್ಮಿಸಲಾಗಿದೆ. ಕೋಟೆಯ ಬಹುಭಾಗ ಬೆಟ್ಟ-ಗುಡ್ಡಗಳಿಂದ ಸುತ್ತುವರೆದಿದ್ದು ಪ್ರಕೃತಿದತ್ತವಾದ ಕಂದಕಗಳಿರುವುದರಿಂದ ಈ ಕೋಟೆ ಚಿಕ್ಕದಿದ್ದರೂ ಬಲಿಷ್ಠವಾಗಿದೆ. ಈ ಕೋಟೆಗೆ ದಕ್ಷಿಣ (ಗ್ರಾಮ ಇರುವು ದಿಕ್ಕಿನಿಂದ) ಪ್ರವೇಶವಿದೆ. ಇದೇ ಮುಖ್ಯದ್ವಾರ. ಸ್ವಲ್ಪ ಶಿಥಿಲವಾಗಿದೆ. ಇದರ ಎರಡೂ ಬದಿಗೆ ೩೦ ರಿಂದ ೪೦ ಅಡಿ ಎತ್ತರವಿರುವ ವೃತ್ತಾಕಾರದ ಕೊತ್ತಲಗಳಿವೆ. ಪ್ರವೇಶದ್ವಾರದ ಎದುರಿಗೆ ಆಂಜನೇಯನ ದೇಗುಲದೆ. ಇದರ ಹಿಂಭಾಗದಲ್ಲಿ ನೂರಾರು ವಾಸದ ಮನೆಗಳು ಗುಂಪು ಗುಂಪಾಗಿವೆ. ಚೌಕಾಕಾರದಲ್ಲಿ ನಿರ್ಮಿಸದ ಕೆಲವು ಮನೆಗಳಿಗೆ ನಾಲ್ಕು, ಇನ್ನು ಕೆಲವು ಮನೆಗಳಿಗೆ ಐದು, ಚಿಕ್ಕ ಮನೆಗಳಿಗೆ ಎರಡು ಕೋಣೆಗಳಿವೆ. ಕೋಣೆಗಳ ಗೋಡೆಗಳಲ್ಲಿ ಚಿಕ್ಕ ಚಿಕ್ಕ ಗೂಡುಗಳಿವೆ. ಇವುಗಳನ್ನು ಮನೆ ಬಳಕೆಯ ವಸ್ತುಗಳನ್ನಿಡುವುದಕ್ಕಾಗಿ ಮಾಡಿರಬಹುದು. ಮುಖ್ಯವಾದ ಕೋಷ್ಟಕದಲ್ಲಿ ದೇವರನ್ನು ಇಟ್ಟು ಪೂಜಿಸುವುದಕ್ಕಾಗಿ ನಿರ್ಮಿಸಿದ್ದರು. ಕೋಣೆಗಳ ಮುಂಭಾಗದಲ್ಲಿ ಹಜಾರ ಅಥವಾ ಪಡಸಾಲೆಗಳಿವೆ. ಕೋಟೆ ತುಂಬಾ ಕಿರಿದಾಗಿದ್ದು ಇದರ ತುಂಬಾ ಮನೆಗಳಿರುವುದರಿಂದ ವಿಶಾಲವಾದ ಬೀದಿಗಳಿಲ್ಲ. ಮನೆಗಳನ್ನು ಬಹಳ ಹತ್ತಿರ ಹತ್ತಿರವಾಗಿ ನಿರ್ಮಿಸಿದ್ದು, ಓಡಾಡಲು ಐದು ಅಡಿಗಳಷ್ಟು ಸ್ಥಳವನ್ನು ಮಾತ್ರ ಬಿಡಲಾಗಿದೆ. ಅಲ್ಲಿಯೇ ಹೇರಳವಾಗಿ ದೊರೆಯುವ ಕಣಶಿಲೆಯಿಂದ ಈ ಮನೆಗಳನ್ನು ನಿರ್ಮಿಸಲಾಗಿದೆ. ಇವುಗಳ ಛಾವಣಿಗಳು ಮಾತ್ರ ಉಳಿದಿಲ್ಲ. ಈ ಮನೆಗಳ ಮಧ್ಯದಲ್ಲಿ ಅಲ್ಲಲ್ಲಿ ದವಸ ಧಾನ್ಯಗಳನ್ನು ಸಂಗ್ರಹಿಸುವುದಕ್ಕಾಗಿ ಉಗ್ರಾಣಗಳನ್ನು, ಕಣಜಗಳನ್ನು ನಿರ್ಮಿಸಲಾಗಿದೆ. ಇವುಗಳನ್ನು ಮಧ್ಯಮ ಗಾತ್ರದ ಕಲ್ಲು ಮತ್ತು ಮಣ್ಣಿನಿಂದ ಕಟ್ಟಲಾಗಿದೆ. ಕೆಲವು ವರ್ತುಲಾಕಾರ ಮತ್ತು ಕೆಲವು ಆಯತಾಕಾರವನ್ನು ಹೊಂದಿವೆ.

ಕೋಟೆಯ ಮಧ್ಯಭಾಗದಲ್ಲಿ ಸುಮಾರು ೫೦ ಅಡಿ ಎತ್ತರದ ಬೃಹದಾಕಾರದ ಕೊತ್ತಲವಿದೆ. ಇದು ಸುಮಾರು ೫೦ ಅಡಿ ಸುತ್ತಳತೆಯನ್ನು ಹೊಂದಿದೆ. ಇದರ ಮೇಲ್ತುದಿಗೆ ಹೋಗಲು

ಮೆಟ್ಟಿಲುಗಳಿವೆ. ಈ ಕೊತ್ತಲದ ಮೇಲ್ಭಾಗದಿಂದ ನೋಡಿದರೆ ಸಂಪೂರ್ಣ ಕೋಟೆ ಭಾಗವಲ್ಲದೆ ಗುಡ್ಡದ ಸುತ್ತಲಿನ ಪರಿಸರವೆಲ್ಲವೂ ಗೋಚರಿಸುತ್ತದೆ. ಕೋಟೆಯ ಆಯಕಟ್ಟಿನ ಸ್ಥಳಗಳಲ್ಲಿ ಕೊತ್ತಲಗಳನ್ನು ನಿರ್ಮಿಸಲಾಗಿದೆ.

ಕೋಟೆಯ ಗೋಡೆಯು ಸರಾಸರಿ ೧೫ ಅಡಿ ಎತ್ತರವಾಗಿದೆ. ಕೆಲವು ಕಡೆ ಹೆಚ್ಚು ಕಡಿಮೆ ಇದೆ. ಇದು ಸರಾಸರಿ ೨ರಿಂದ ೪ ಅಡಿಗಳವರೆಗೆ ಅಗಲವಾಗಿದೆ. ಕೋಟೆಯ ಗೋಡೆಯು ತಳಪಾಯವಿಲ್ಲದೆ ಹಾಸುಬಂಡೆಯ ಮೇಲೆ ನಿಂತಿದೆ. ಇದನ್ನು ಕೆಳಭಾಗದಲ್ಲಿ ಆಯತಾಕಾರದ ಕಲ್ಲುಗಳನ್ನು ಬಳಸಿ, ಮೇಲ್ಭಾಗದಲ್ಲಿ ಮಧ್ಯಮ ಗಾತ್ರದ ಕಲ್ಲುಗಳಿಂದ ಕಟ್ಟಲಾಗಿದೆ. ಈ ಗೋಡೆಯ ಸುತ್ತಲೂ ಮೇಲ್ಭಾಗದಲ್ಲಿ ಬಂದೂಕು ಕಿಂಡಿಗಳಿವೆ.

ಕೋಟೆಯಲ್ಲಿ ಕುಡಿಯುವ ನೀರಿಗೆ ಸಾಕಷ್ಟು ಗಮನಹರಿಸಿರುವುದು ಕಂಡುಬಂದಿದೆ. ಬಂಡೆಗಳ ಸಂದುಗಳಿಗೆ ಗೋಡೆಗಳನ್ನು ಕಟ್ಟಿ ಮಳೆಯ ನೀರನ್ನು ಸಂಗ್ರಹಿಸಲಾಗುತ್ತಿತ್ತು. ಇಂತಹ ಮಳೆಯ ನೀರಿನ ಸಂಗ್ರಹದ ಹೊಂಡಗಳು ಇಂದಿಗೂ ಇವೆ. ಕೋಟೆಯ ಪ್ರವೇಶದ ಎದುರು ಭಾಗದಲ್ಲಿ ಆಂಜನೇಯ ದೇವಾಲಯವಿದೆ. ಈ ಕೋಟೆಯಲ್ಲಿ ವಸತಿ ಮನೆಗಳ ಸ್ಮಾರಕ ಅವಶೇಷಗಳು ಕಂಡು ಬರುತ್ತವೆ.

**ಅರಸೀಕೆರೆ ಕೋಟೆ**

ಅರಸೀಕೆರೆಯಿಂದ ಪಶ್ಚಿಮ ದಿಕ್ಕಿನ ಯರಬಳ್ಳಿಗೆ ಹೋಗುವ ದಾರಿಯಲ್ಲಿ ವಾಯವ್ಯ ದಿಕ್ಕಿಗೆ ೪ ಕಿ.ಮೀ. ಅಂತರದಲ್ಲಿ ಒಂದು ಪರ್ವತವಿದೆ. ಇದನ್ನು ನರಸಪ್ಪನ ಗುಡ್ಡ, ಯರಬಳ್ಳಿಗುಡ್ಡ ಎಂದು ಸ್ಥಳೀಯರು ಕರೆಯುತ್ತಾರೆ. ಈ ಗುಡ್ಡದ ತುತ್ತತುದಿಯಲ್ಲಿ ಕೋಟೆ ಕಂಡುಬರುತ್ತದೆ. ಈ ಗುಡ್ಡ ಸುಮಾರು ೮೦೦ರಿಂದ ೯೦೦ ಅಡಿ ಎತ್ತರದಲ್ಲಿರಬಹುದು. ಇದರ ಸುತ್ತಲೂ ವಿಶಾಲವಾದ ಕೃಷಿ ಭೂಪ್ರದೇಶ ಹೊಂದಿದೆ.

**ಕೋಟೆಯ ನಿರ್ಮಾಣದ ಕಾಲ :** ಪ್ರಾಚೀನ ಕಾಲದ ದೇವಾಲಯ ಮತ್ತು ಕೋಟೆಯ ಕಾಲವನ್ನು ನಿರ್ಣಯಿಸುವುದು ಕಠಿಣವಾದುದು. ಆಧಾರಗಳ ಕೊರತೆಯೇ ಇದಕ್ಕೆ ಕಾರಣ. ಕಲ್ಯಾಣದ ಚಾಳುಕ್ಯರ ಪೂರ್ವದ ಅರಸುಮನೆತನಗಳ ಯಾವುದೇ ಶಾಸನಗಳಾಗಲೀ, ಅವಶೇಷಗಳಾಗಲೀ ಈ ಪರಿಸರದಲ್ಲಿ ಕಂಡುಬರುವುದಿಲ್ಲ. ಚಾಳುಕ್ಯರ ಮಾಂಡಲೀಕರಾದ ನೊಳಂಬ ಪಲ್ಲವರ ಆಳ್ವಿಕೆಯ ಶಾಸನಗಳು ಈ ಪ್ರದೇಶದಲ್ಲಿ ಮೊದಲಿಗೆ ಕಾಣಿಸಿಕೊಳ್ಳುತ್ತವೆ. ಅಲ್ಲದೆ ಅರಸೀಕೆರೆಯನ್ನು ಶಾಸನಗಳಲ್ಲಿ 'ನೊಳಂಬನರಸಿಕೆರೆ' ಎಂದು ಉಲ್ಲೇಖಿಸಲಾಗಿದೆ. ನೊಳಂಬರ ನಂತರ ಪಾಂಡ್ಯರ ಕಾಲದಲ್ಲಿ ಅರಸೀಕೆರೆ ಆಡಳಿತದ ಪ್ರಮುಖ ಕೇಂದ್ರವಾಗಿತ್ತು. ಹಾಗಾಗಿ ಈ ಕೋಟೆಯು ಕ್ರಿ.ಶ. ೧೦ನೇ ಶತಮಾನದಲ್ಲಿ ಪಾಂಡ್ಯರ ಕಾಲಘಟ್ಟದಲ್ಲಿ ನಿರ್ಮಾಣ ವಾಗಿರಬಹುದು. ಕುಂ.ಬಾ. ಸದಾಶಿವಪ್ಪನವರು ಒಂಬತ್ತನೆಯ ಶತಮಾನದಲ್ಲಿ ನೊಳಂಬ ಪಲ್ಲವರ ಒಬ್ಬ ಅರಸಿ ಒಂದು ಕೆರೆಯನ್ನು ನಿರ್ಮಿಸಿದಳು. ಆಗ ಈ ಕೋಟೆಯಲ್ಲಿನ ಜನರು

ಈ ಸ್ಥಳವನ್ನು ತೊರೆದು ಕೆರೆಯ ಪಕ್ಕದಲ್ಲಿ ಹೊಸ ಗ್ರಾಮವನ್ನು ಸ್ಥಾಪಿಸಿಕೊಂಡರು ಎಂದು ಹೇಳುತ್ತಾರೆ.[೨೬] ಅರಸೀಕೆರೆ ಕೋಟೆ ಪ್ರದೇಶ ಜನವಸತಿಗೆ ಯೋಗ್ಯವಾಗಿರುವುದಿಲ್ಲ. ಕೆಲವರು ಹರಪನಹಳ್ಳಿ ಪಾಳೇಗಾರರ ಕಾಲದಲ್ಲಿ ನಿರ್ಮಾಣವಾಗಿದೆ ಎಂದು ಹೇಳುತ್ತಾರೆ. ಕೋಟೆಯ ಲಕ್ಷಣ ಹಾಗೂ ಅರಸೀಕೆರೆ ಪರಿಸರದ ಸುತ್ತಮುತ್ತಲಿನ ಶಾಸನಗಳ ಹಿನ್ನೆಲೆಯಲ್ಲಿ ಈ ಕೋಟೆಯು ಕ್ರಿ.ಶ. ೧೦ನೇ ಶತಮಾನದ ಉತ್ತರಾರ್ಧದಲ್ಲಿ ನಿರ್ಮಾಣವಾಗಿರಬಹುದೆಂದು ಹೇಳಬಹುದು.

**ಲಕ್ಷಣಗಳು**

ಪೂರ್ವ ಪಶ್ಚಿಮವಾಗಿರುವ ಬೆಟ್ಟವನ್ನು ಬಳಸಿ ಹೊರಕೋಟೆಯನ್ನು ಕಟ್ಟಿದ್ದು ಇದೊಂದು ಗಿರಿದುರ್ಗವಾಗಿದೆ. ಇದು ನರಸಪ್ಪನ ಗುಡ್ಡದ ತುತ್ತತುದಿಯಲ್ಲಿದೆ. ಆಯತಾಕಾರದ ವಿನ್ಯಾಸದಲ್ಲಿ ಇರುವ ಇದನ್ನು ತಳಪಾಯದ ಆಧಾರವಿಲ್ಲದೆ ಹಾಸುಬಂಡೆಯ ಮೇಲೆ ನಿರ್ಮಿಸಿದಂತಿದೆ. ಬೆಟ್ಟದ ತುದಿಯನ್ನು ತಲುಪಲು ಶತ್ರುಗಳಿಗೆ ಸಾಧ್ಯವಾಗದಂತೆ ಕೋಟೆ ನಿರ್ಮಾಣಗೊಂಡಿದೆ. ಕೋಟೆಯು ಪೂರ್ವ ಪಶ್ಚಿಮವಾಗಿದ್ದು, ದಕ್ಷಿಣದಲ್ಲಿ ಪ್ರವೇಶದ್ವಾರವನ್ನು ಹೊಂದಿದೆ. ಕೋಟೆ ಗೋಡೆಯು ಕೆಲವು ಭಾಗದಲ್ಲಿ ಎತ್ತರವಾಗಿದ್ದು, ಕೆಲವು ಭಾಗದಲ್ಲಿ ಕಡಿಮೆ ಇದೆ. ಇಂದು ಬಹುತೇಕ ಗೋಡೆ ಭಾಗಗಳು ಬಿದ್ದು ಹೋಗಿವೆ. ಇದರ ಅಗಲ ೪ ಅಡಿ ಇದ್ದು ಅಲ್ಲಿಯೇ ದೊರೆಯುವ ಕಲ್ಲುಗಳನ್ನು ಬಳಸಿಕೊಂಡಿದ್ದಾರೆ.

ಉತ್ತರದ ಕೋಟೆ ಗೋಡೆಗಳಲ್ಲಿ ತೋಪುಕಿಂಡಿಗಳನ್ನು ರಚಿಸಲಾಗಿದೆ. ಈ ಕೋಟೆಯಲ್ಲಿ ಆರು ಬುರ್ಜುಗಳಿದ್ದು ಇವು ವೃತ್ತಾಕಾರದಲ್ಲಿವೆ. ಇವುಗಳಲ್ಲಿ ಕೂಡ ತೋಪುಕಿಂಡಿಗಳನ್ನು ರಚಿಸಲಾಗಿದೆ. ದಕ್ಷಿಣದಲ್ಲಿ ಇರುವ ಮೂರು ಭುರ್ಜುಗಳು ಎತ್ತರವಾಗಿವೆ. ಪಶ್ಚಿಮ ಭಾಗದ ದಕ್ಷಿಣ ಮೂಲೆಯಲ್ಲಿರುವ ಬುರ್ಜು ಎತ್ತರವಾಗಿದೆ. ಇದರ ಮೇಲೆ ನಿಂತರೆ ಇಡೀ ಕೋಟೆ ಗೋಚರಿಸುತ್ತದೆ. ಅಲ್ಲದೆ ಸುತ್ತಲಿನ ಪ್ರದೇಶ ಸಂಪೂರ್ಣವಾಗಿ ಕಾಣಿಸುತ್ತದೆ. ಪೂರ್ವದ ತುದಿಯಲ್ಲಿರುವ ಬುರ್ಜುಗಳು ಹಾಳಾಗಿವೆ.

ಈ ಕೋಟೆ ಎರಡು ಅಂಕಣವನ್ನು ಹೊಂದಿದೆ. ಇವುಗಳನ್ನು ಪೂರ್ವ ಅಂಕಣ ಮತ್ತು ಪಶ್ಚಿಮದ ಅಂಕಣವೆಂದು ಗುರುತಿಸಲಾಗಿದೆ. ಈ ಅಂಕಣಗಳನ್ನು ಪ್ರತ್ಯೇಕಿಸಲು ಮಧ್ಯ ಗೋಡೆ ಇದ್ದು ಇದು ಸುಮಾರು ೩ ಅಡಿ ಅಗಲವಾಗಿದೆ. ಈ ಗೋಡೆಯಲ್ಲಿ ಎರಡು ತೋಪು ಕಿಂಡಿಗಳು ಇವೆ. ಪೂರ್ವದ ಅಂಕಣ ಬಹಳ ಚಿಕ್ಕದಾಗಿದೆ. ಕೋಟೆಯ ಮುಖ್ಯ ಪ್ರವೇಶದ್ವಾರ ಈ ಅಂಕಣದಲ್ಲಿದೆ. ದಕ್ಷಿಣ ಗೋಡೆಯ ಎರಡನೇ ಬುರ್ಜಿನ ಎಡಭಾಗದಲ್ಲಿ ಪ್ರವೇಶ ದ್ವಾರವಿದೆ. ದ್ವಾರವು ಸಂಪೂರ್ಣವಾಗಿ ನಾಶ ಹೊಂದಿದೆ. ಆದರೆ ಗಚ್ಚುಗಾರೆಯಿಂದ ಮಾಡಿದ ದ್ವಾರದ ನೆಲೆಗಟ್ಟು ಕಂಡುಬರುತ್ತದೆ. ಇದರ ಪಕ್ಕದಲ್ಲಿ ಪಶ್ಚಿಮದ ಅಂಕಣಕ್ಕೆ ಪ್ರವೇಶಿಸಲು ದ್ವಾರವಿದೆ. ಇದು ಕೂಡ ಹಾಳಾಗಿ ಹೋಗಿದೆ. ಪಶ್ಚಿಮದ ಅಂಕಣದ ಮಧ್ಯದಲ್ಲಿ ಚೌಕಾಕಾರದ ವೇದಿಕೆ ಇದೆ. ಇದರ ಬದಿಯಲ್ಲಿ ನೀರಿನ ತೋಟಿ ಇದೆ. ಮುಂಭಾಗದಲ್ಲಿ ನೈಸರ್ಗಿಕ ಕಲ್ಲು ಬಂಡೆ ಇದೆ.

ಪೂರ್ವ ಮತ್ತು ಪಶ್ಚಿಮದಲ್ಲಿ ಕಡಿದಾದ ಕಲ್ಲು ಬಂಡೆಗಳು ಕೋಟೆಗೆ ನೈಸರ್ಗಿಕ ರಕ್ಷಣೆ ಒದಗಿಸುತ್ತವೆ. ಉತ್ತರದಲ್ಲಿ ಜನ ಸಂಪರ್ಕಕ್ಕೆ ಯೋಗ್ಯವಾಗಿದ್ದರೂ ಬಹಳ ಕಡಿದಾಗಿದೆ. ದಕ್ಷಿಣದಲ್ಲಿ ಇದರ ಪ್ರವೇಶದ್ವಾರವಿದ್ದು, ಇದು ಕೂಡ ಬಹಳ ಕಡಿದಾದ ದಾರಿಯನ್ನು ಹೊಂದಿದೆ. ಕಲ್ಲುಬಂಡೆಗಳನ್ನು ದಾಟುತ್ತಾ ಕೋಟೆಯನ್ನು ಪ್ರವೇಶಿಸಬೇಕು. ಕಷ್ಟಕರವಾದ ಈ ನಿರ್ಜನ ಪ್ರದೇಶ ರಕ್ಷಣೆಗೆ ಸೂಕ್ತವಾದ ಪ್ರದೇಶವಾಗಿದೆ. ಈ ಕೋಟೆಯಿಂದ ನೋಡಿದರೆ ಸುಮಾರು ೨೦ ಕಿ.ಮೀ. ಸುತ್ತಮುತ್ತಲ್ಲಿನ ಪ್ರದೇಶದ ಚಟುವಟಿಕೆಗಳನ್ನು ಗುರುತಿಸಬಹುದು.

ಈ ಕೋಟೆಯನ್ನು ಪ್ರವೇಶಿಸುವ ಪೂರ್ವದಲ್ಲಿ ಗುಡ್ಡದ ಮಧ್ಯ ಭಾಗದಲ್ಲಿ ಬೃಹತ್ ಗ್ರಾನೈಟ್ ಬಂಡೆಗಳ ಮಧ್ಯೆ ಇರುವ ಯೋಗನರಸಿಂಹ ಮತ್ತು ಬೈರಿಗೆ ಸಿದ್ದೇಶ್ವರ ದೇವಾಲಯಗಳನ್ನು ನೋಡಬಹುದು. ಇವು ತಮ್ಮ ಮೂಲನೆಲೆಯನ್ನು ಕಳೆದುಕೊಂಡಿವೆ. ನರಸಿಂಹ ಮೂರ್ತಿಯನ್ನು ಇತ್ತೀಚೆಗೆ ಪ್ರತಿಷ್ಠಾಪಿಸಲಾಗಿದೆ. ಮೂಲಮೂರ್ತಿ ನಿಧಿ ಆಸೆಗೆ ಬಲಿಯಾಗಿದೆ. ಗುಹೆಯಲ್ಲಿ ಬೈರಿಗೆ ಸಿದ್ದೇಶ್ವರ ಲಿಂಗವಿದೆ. ಇಲ್ಲಿ ವೀರಭದ್ರನ ಮೂರ್ತಿ ಇದೆ. ದೇವಸ್ಥಾನದಿಂದ ಕೆಳಗೆ ಇಳಿಯಲು ಮೆಟ್ಟಿಲುಗಳು ಇವೆ.

ಕೋಟೆಗಳ ನಿರ್ಮಾಣ ಕ್ರಿಸ್ತಶಕದ ಆರಂಭ ಕಾಲದಿಂದ ಪ್ರಾರಂಭವಾಗಿ ೧೯ನೇ ಶತಮಾನದವರೆಗೆ ನಿರಂತರವಾಗಿ ನಡೆದುದುರ ಇತಿಹಾಸ ಕೋಟೆಗಳ ಅಧ್ಯಯನದಿಂದ ತಿಳಿಯುತ್ತದೆ. ಆದರೆ ಎಲ್ಲ ಕೋಟೆಗಳು ಉಳಿದಿಲ್ಲ. ಕೆಲವು ಕೋಟೆಗಳು ನಾಶವಾಗಿವೆ. ಕೆಲವು ಪದೇ ಪದೇ ದುರಸ್ತಿ ಅಥವಾ ಬಲಪಡಿಸಿರುವುದರಿಂದ ಮೂಲರಚನೆಯಲ್ಲಿ ಬದಲಾವಣೆ ಕಂಡಿದೆ. ರಕ್ಷಣೆಯ ದೃಷ್ಟಿಯಿಂದ ಆಯಕಟ್ಟಿನ ಸ್ಥಳಗಳನ್ನು ಆಯ್ಕೆ ಮಾಡಿ ಕೋಟೆಗಳನ್ನು ಕಟ್ಟಲಾಗುತ್ತಿತ್ತು. ಉಚ್ಚಂಗಿದುರ್ಗ ಅದರ ಬೆಟ್ಟಸಾಲಿನಲ್ಲಿಯೇ ಇರುವ ಕರಡಿದುರ್ಗ, ಅರಸೀಕೆರೆ ಹಾಗೂ ಹಲವಾಗಿಲು ಪ್ರದೇಶದಲ್ಲಿರುವ ಗಿರಿದುರ್ಗಗಳು ಉಚ್ಚಂಗಿ ಪಾಂಡ್ಯರ ಆಡಳಿತಕ್ಕೆ ರಕ್ಷಣೆ ನೀಡಿದ್ದವು. ಈ ಕೋಟೆಗಳ ಕಾರಣಕ್ಕಾಗಿ ಉಚ್ಚಂಗಿದುರ್ಗದ ಕೋಟೆ ಮಹತ್ವವನ್ನು ಪಡೆದು ಚೋಳ ಮತ್ತು ಹೊಯ್ಸಳರಿಗೆ ಪ್ರತಿಷ್ಠೆಯ ಕಣವಾಗಿತ್ತು. ಈ ಕೋಟೆಯ ಸ್ಮಾರಕಗಳು ರಕ್ಷಣೆ ಇಲ್ಲದೆ ಅವಸಾನದ ಹಾದಿ ಹಿಡಿದಿವೆ.

**ಅಲಗಿಲವಾಡ : ಕೆರೆ (ಹರಪನಹಳ್ಳಿ ತಾ.)**

ಹರಪನಹಳ್ಳಿ ತಾಲ್ಲೂಕು ತೆಲಗಿ ಹೋಬಳಿಯಲ್ಲಿ ಬರುವ ಈ ಗ್ರಾಮವು ತೆಲಗಿ ಗ್ರಾಮದಿಂದ ೫ ಕಿ.ಮೀ. ದೂರದಲ್ಲಿದೆ. ಕ್ರಿ.ಶ. ೧೨ನೇ ಶತಮಾನದ ಶಾಸನಗಳಲ್ಲಿ ಈ ಗ್ರಾಮವನ್ನು ಅರಗಿಲ್ವಾಡ ಎಂದು ಉಲ್ಲೇಖಿಸಿವೆ. ಪ್ರಾಚೀನ ಕಾಲದಲ್ಲಿ ಅರಗು ಉತ್ಪಾದನೆ ಮಾಡುತ್ತಿದ್ದರಿಂದ ಈ ಗ್ರಾಮಕ್ಕೆ ಅರಗಿನವಾಡ ಅಥವಾ ಅರಗಿಲ್ವಾಡ ಎಂದು ನಂತರದ ದಿನಗಳಲ್ಲಿ ಅಲಗಿಲವಾಡ ಎಂದು ಕರೆಯಲಾಗುತ್ತದೆ ಎಂಬುದು ಆ ಗ್ರಾಮದ ಜನರ ಹೇಳಿಕೆ. ಈ ಗ್ರಾಮದಲ್ಲಿರುವ ಕಲ್ಲೇಶ್ವರ ದೇವಾಲಯ, ಕ್ರಿ.ಶ. ೧೨ನೇ ಶತಮಾನದ ೪ ಶಾಸನಗಳು, ಐತಿಹಾಸಿಕ ಕೆರೆ ಅಂದಿನ ಚರಿತ್ರೆಯ ಮೇಲೆ ಬೆಳಕು ಚೆಲ್ಲುತ್ತವೆ.

**ಕೆರೆ**

ಗ್ರಾಮದಿಂದ ಆಗ್ನೇಯ ದಿಕ್ಕಿಗೆ ೨ ಕಿ.ಮೀ. ದೂರದಲ್ಲಿ ಈ ಐತಿಹಾಸಿಕ ಕೆರೆ ಕಂಡುಬರುತ್ತದೆ. ಕೆರೆಯ ರಚನೆಯ ಕಾಲವನ್ನು ಕುರಿತು ಕಲ್ಲೇಶ್ವರ ದೇವಸ್ಥಾನದ ಬಳಿ ಇರುವ ಕ್ರಿಶ. ೨೫.೧೨.೧೧೫೪ರ ಶಾಸನ ತಿಳಿಸುತ್ತದೆ. ಶ್ರೀಮನ್ಮಹಾಮಣ್ಡಳೇಶ್ವರ ವೀರಪಾಂಡ್ಯ ದೇವರು, ಶ್ರೀಮತು ವಿಜಯ ದೇವರು ...... ನೊಳಂಬವಾಡಿ ಮೂಮತ್ತಿಚ್ಛಾಸಿರಮು ಸುಖಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತಮಿರ್ಪ್ಪಂದು ...... ಸತಂಮಾಡಿ ...... ರುವಿಜಯಂಗೆಯ್ದು ಆವೂರಮುಮಂ ಎರಡು ಕೆರೆಯುಮಂ ಮಾಡಿ...... ಸಭಾ ...... ಯುತಂದು ಅರಗಿಲ್ವಾಡ ದೂರೊಡೆಯರೆಲ್ಲರುಮಂ ಶ್ರೀಮತು ವೀರಪಾಂಡ್ಯ ......ಸಮಿ ...... ಗೊಂಡು ಪೋಗಿ ಭಾವ ಸಂವತ್ಸರದ ಪುಷ್ಯ ಮಾಸದಲು ಉತ್ತರಾಯನ ಸಂಕ್ರಮಣ ವ್ಯತಿಪಾತದನ್ದು ಶ್ರೀಮತು ವೀರಪಾಂಡ್ಯದೇವ ...... ಮಹಾದೇವಿಯರು ಮಿ.. ಪರದ ಸಾಸಿರ ಆದೆ. ರೆಯ ಪಲವಾಗಿರ್ದ್ದಂ ತಪ್ಪ ಪುರದ ತೋಂಟಮಲಿ... ಯರ್ಗ್ಗೆ ಧಾರಾಪೂರ್ವ್ವಕಂ ಮಾಡಿಬಿಟ್ಟ(ಶಾಸನ ಸಂಪುಟ–೧ ಬಳ್ಳಾರಿ ಜಿಲ್ಲೆ ಕ.ವಿ.ವಿ. ಹಂಪಿ) ಆದರೆ ಸೌತ್ ಇಂಡಿಯನ್ ಇನ್‌ಸ್ಕ್ರಿಪ್‌ಷನ್ ಸಂಪುಟ–೯ರಲ್ಲಿ ವೀರಪಾಂಡ್ಯ ಮತ್ತು ವಿಜಯದೇವಿಯವರು ಕೆರೆಯುಮಂ ನೋಡಿ ಎಂದು ದಾಖಲಿಸಿದೆ. ಮುಂದೆ ಶಾಸನ ಅಸ್ಪಷ್ಟವಾಗಿದೆ. ಹಾಗಾಗಿ ಯಾವುದಕ್ಕೆ ದಾನ ಬಿಡಲಾಗಿದೆ ಎಂಬುದು ಸ್ಪಷ್ಟವಾಗುವುದಿಲ್ಲ. ಕೆಲವರು ಹಳ್ಳಿಯನ್ನು ಮತ್ತು ಎರಡು ಕೆರೆಗಳನ್ನು ಕಟ್ಟಿಸಿದಂತೆಯೂ ಇದಕ್ಕಾಗಿ ತೋಟವನ್ನು ಮಲ್ಲಿ ಎಂಬುವವನಿಗೆ ದಾನ ನೀಡಿದಾಗಿ ದಾಖಲಿಸಿರುತ್ತಾರೆ. ಇಲ್ಲಿ ವೀರಪಾಂಡ್ಯ ಮತ್ತು ವಿಜಯಪಾಂಡ್ಯ ಹಾಗೂ ಕ್ರಿ.ಶ. ೧೨೨೯ನೇ ಕಾಲದ ವೀರಗಲ್ಲು ಹಾಗೂ ತೇದಿಯಿಲ್ಲದ ಇನ್ನೊಂದು ಶಾಸನಗಳನ್ನು ಹೊರತುಪಡಿಸಿ ಬೇರೆ ಶಾಸನಗಳು ಕಂಡು ಬರುವುದಿಲ್ಲ. ಹಾಗಾಗಿ ಈವರೆಗೂ ದೊರೆತಿರುವ ಈ ಆಧಾರಗಳ ಹಿನ್ನೆಲೆಯಲ್ಲಿ ವೀರಪಾಂಡ್ಯನ ಆಡಳಿತ ಅವಧಿಯಲ್ಲಿ ಕೆರೆ ನಿರ್ಮಾಣವಾಗಿರಬಹುದೆಂದು ಒಪ್ಪಬಹುದಾಗಿದೆ.

**ಕೆರೆಯ ರಚನೆ**

ಈ ಕೆರೆಯು ಪೂರ್ವ ಪಶ್ಚಿಮವಾಗಿ ಎರಡು ಕಿ.ಮೀ. ದೂರದ ಏರಿಯನ್ನು, ೫೦೦ ಎಕರೆ ಭೂ ವಿಸ್ತೀರ್ಣವನ್ನು ಹೊಂದಿದೆ. ಅಲಗಿಲವಾಡ, ಚಿರಸ್ಥಳ್ಳಿ, ದಾದಾಪುರ, ನೀಲಗುಂದ, ಶ್ರೀನಿವಾಸಪುರ, ತೆಲಗಿ ಗ್ರಾಮಗಳಿಂದ ಈ ಕೆರೆಗೆ ನೀರು ಸಂಗ್ರಹವಾಗುತ್ತದೆ. ಸುಮಾರು ಸಾವಿರ ಎಕರೆ ಭೂಮಿಗೆ ಈ ಕೆರೆಯ ನೀರನ್ನು ಬಳಸಲಾಗುತ್ತಿದೆ. ಕೆರೆಯ ಪೂರ್ವ ಭಾಗದಲ್ಲಿ ಪಶ್ಚಿಮ ಮತ್ತು ಉತ್ತರ ದಿಕ್ಕುಗಳಲ್ಲಿ ಎರಡು ಕೋಡಿಗಳನ್ನು ನಿರ್ಮಿಸಲಾಗಿದೆ. ಪಶ್ಚಿಮಕ್ಕೆ ಇರುವ ಕೋಡಿಯು ೬೦ ಮೀ. ಉದ್ದ, ೪ ಅಡಿ ಎತ್ತರದ ಕಟ್ಟೆಯನ್ನು ಕಟ್ಟಿ ಮೇಲಿನ ಭಾಗದಲ್ಲಿ ಗ್ರಾನೈಟ್ ಹಾಸುಬಂಡೆಗಳನ್ನು ಹೊದಿಸಲಾಗಿದೆ. ದಕ್ಷಿಣ ದಿಕ್ಕಿನ ಕೋಡಿ ಚಿಕ್ಕದಾಗಿದ್ದು, ೫ ಮೀ. ಉದ್ದ, ೪ ಅಡಿ ಎತ್ತರದ ಕಟ್ಟೆಯನ್ನು ಕಟ್ಟಿ ಮೇಲಿನ ಭಾಗದಲ್ಲಿ ಗ್ರಾನೈಟ್ ಹಾಸುಬಂಡೆಗಳನ್ನು ಹೊದಿಸಲಾಗಿದೆ. ಈ ಎರಡೂ ಕೋಡಿಯ ನೀರು ಸುಮಾರು

ಎರಡೂವರೆ ಕಿ.ಮೀ. ದೂರ ಪ್ರತ್ಯೇಕವಾಗಿ ಹರಿದು ಮುಂದೆ ಒಂದಾಗಿ ಮತ್ತೂರು ಹಳ್ಳದ ಮೂಲಕ ತುಂಗಭದ್ರಾ ನದಿಯನ್ನು ಸೇರುತ್ತದೆ.

ಕೆರೆಯ ಪೂರ್ವ ಮತ್ತು ಪಶ್ಚಿಮ ಭಾಗದಲ್ಲಿ ತೂಬುಗಳನ್ನು ನಿರ್ಮಿಸಲಾಗಿದೆ. ಪಶ್ಚಿಮ ಭಾಗದಲ್ಲಿರುವ ತೂಬು ದೊಡ್ಡದಾಗಿದ್ದು, ಇದನ್ನು ದೊಡ್ಡ ತೂಬು ಎಂದು ಪೂರ್ವದ ತೂಬು ಸಣ್ಣದಾಗಿರುವುದರಿಂದ ಚಿಕ್ಕ ತೂಬು ಎಂದು ಕರೆಯುತ್ತಾರೆ. ಇತ್ತೀಚೆಗೆ ಇವುಗಳನ್ನು ನವೀಕರಿಸಲಾಗಿದೆ. ಪಶ್ಚಿಮ ಭಾಗದಲ್ಲಿರುವ ತೂಬನ್ನು ಕೆರೆಯ ಏರಿಯಿಂದ ೧೦ ಮೀ. ದೂರದಲ್ಲಿ ನಿರ್ಮಿಸಲಾಗಿದೆ. ಇತ್ತೀಚೆಗೆ ನವೀಕರಿಸಿದ ಹೊಸ ತೂಬನ್ನು ಏರಿಗೆ ಹೊಂದಿಕೊಂಡಂತೆ ನಿರ್ಮಿಸಲಾಗಿದೆ. ಪೂರ್ವದ ತೂಬಿನ ಹಿಂಭಾಗದಲ್ಲಿ ಆಯಾತಾಕಾರದ ಮೂರು ಕಂಬಗಳನ್ನು ಕೆರೆಯ ಏರಿಗೆ ಸಮಾನಾಂತರವಾಗಿ ನಿರ್ಮಿಸಿ ಏರಿಯಿಂದ ತೂಬಿಗೆ ಸಂಪರ್ಕ ಕಲ್ಪಿಸುವ ವ್ಯವಸ್ಥೆಯನ್ನು ಮಾಡಿದಂತೆ ಕಂಡು ಬರುತ್ತದೆ. ಈ ಸಂಪರ್ಕ ಸೇತುವೆಯು ಇಂದು ಕಂಡು ಬರುವುದಿಲ್ಲ. ಪಶ್ಚಿಮ ತೂಬಿನ ಹತ್ತಿರದಲ್ಲಿ ಮಲ್ಲತ್ಯಮ್ಮ ದೇವಿಯ ದೇವಸ್ಥಾನವಿದೆ. ಪೂರ್ವ ಭಾಗದಲ್ಲಿರುವ ಚಿಕ್ಕ ತೂಬು ಕೆರೆಯ ಏರಿಯಿಂದ ೫ ಮೀ. ಅಂತರದಲ್ಲಿ ನಿರ್ಮಿಸಲಾಗಿದೆ. ಪ್ರಾರಂಭದ ಯಾವುದೇ ಗುರುತುಗಳು ಇಲ್ಲಿ ಕಂಡುಬರುವುದಿಲ್ಲ. ಈ ತೂಬುಗಳಿಗೆ ಸಮಾನಾಂತರ ವಾಗಿ ಏರಿಯ ಹಿಂಭಾಗದಲ್ಲಿ ಕಾಲುವೆ ಮೂಲಕ ನೀರು ಹರಿದು ಹೋಗುವ ವ್ಯವಸ್ಥೆಯನ್ನು ಮಾಡಲಾಗಿದೆ.

**ಆಚರಣೆ**

ಗ್ರಾಮಸ್ಥರು ಹೇಳುವ ಹಾಗೆ ಈ ಕೆರೆಗೆ ಸಂಬಂಧಿಸಿದಂತೆ, ಎರಡು ಬಗೆಯ ಆಚರಣೆಗಳು ತಿಳಿದು ಬರುತ್ತವೆ. ಮೇಲ್ವರ್ಗದ ಲಿಂಗಾಯತ (ಗೌಡರು), ಜಂಗಮ ಹಾಗೂ ತಳಸಮುದಾಯಗಳು ಪ್ರತ್ಯೇಕವಾಗಿ ಇಲ್ಲಿ ಆಚರಣೆ ಮಾಡಿಕೊಂಡು ಬರುವುದು ತಿಳಿದು ಬರುತ್ತದೆ.

ಒಮ್ಮೆ ಗ್ರಾಮದಲ್ಲಿ ಭೀಕರ ಬರಗಾಲ ಕಾಣಿಸಿಕೊಂಡಾಗ ಗ್ರಾಮದ ಜನರೆಲ್ಲರೂ ಆ ಊರಿನ ಗೌಡರಲ್ಲಿ ಕೆರೆಗೆ ಪೂಜೆ ಮಾಡಿಸುವಂತೆ ಕೇಳಿಕೊಳ್ಳುತ್ತಾರೆ. ಜನರ ಬೇಡಿಕೆಯಂತೆ ಗೌಡ ಕೆರೆಯ ಪೂಜೆಗೆ ವ್ಯವಸ್ಥೆ ಮಾಡಿ, ಒಂದು ದಿನ ಕೆರೆಯಲ್ಲಿ ಗ್ರಾಮದ ಜನರೆಲ್ಲರೂ ಸೇರಿ ಪೂಜಾ ಕಾರ್ಯಕ್ರಮವನ್ನು ಪೂರ್ಣಗೊಳಿಸುತ್ತಾರೆ. ಪೂಜಾ ಕಾರ್ಯಕ್ರಮ ಮುಗಿದು ಕೆರೆಯಿಂದ ಜನರೆಲ್ಲರೂ ಊರ ಕಡೆಗೆ ಹೊರಡುತ್ತಾರೆ. ಆಗ ಆ ಗೌಡನ ಮನೆಯವರು ಪೂಜೆಗೆ ತಂದಿದ್ದ ತಂಬಿಗೆಯನ್ನು ಕೆರೆಯಲ್ಲಿ ಬಿಟ್ಟು ಹೋಗಿರುತ್ತಾರೆ. ದಾರಿ ಮಧ್ಯದಲ್ಲಿ ಅದರ ನೆನಪಾಗುತ್ತದೆ. ಆಗ ಅದನ್ನು ತರಲು ಗೌಡನ ಸೊಸೆ ಕೆರೆಗೆ ಬಂದು ಬಿಟ್ಟು ಹೋಗಿದ್ದ ತಂಬಿಗೆಯನ್ನು ತೆಗೆದುಕೊಂಡು ಹೊರಡುವಾಗ ಭಾರೀ ಪ್ರಮಾಣದಲ್ಲಿ ಮಳೆಯಾಗಿ ಕೆರೆ ತುಂಬಿದಾಗ ಗೌಡನ ಸೊಸೆ ಆ ಕೆರೆಯಲ್ಲಿ ಮುಳುಗಿ ಹೋಗುತ್ತಾಳೆ. ಇದರಿಂದ ಭೀಕರ ಬರಗಾಲದಿಂದ ಬೇಸತ್ತ ಜನರಲ್ಲಿ ಹರ್ಷೋದ್ಗಾರ ಮೊಳಗುತ್ತವೆ. ಆದರೆ ಕೆರೆಗೆ ಹಾರವಾದ ಸೊಸೆಯ ನೆನಪಿಗಾಗಿ ಗೌಡ ತಮ್ಮ ಮನೆತನದಲ್ಲಿ ಮದುವೆ ಕಾರ್ಯಕ್ರಮ ನಡೆದಾಗ ಮೊದಲು ಕೆರೆಗೆ ಪೂಜೆಯನ್ನು ಮಾಡುವಂತೆ ಆಜ್ಞೆ ಮಾಡುತ್ತಾನೆ. ಅದರಂತೆ ಈವರೆಗೂ

ಗ್ರಾಮದಲ್ಲಿರುವ ಗೌಡರ ಮನೆತನದವರು ಇದನ್ನು ಪಾಲಿಸಿಕೊಂಡು ಬರುತ್ತಿರುವುದನ್ನು ಕಾಣಬಹುದು.

**ಬಲಿ ಪದ್ಧತಿ**

ಗ್ರಾಮದ ತಳ ಸಮುದಾಯಗಳು ಕೆರೆಯು ಸಂಪೂರ್ಣವಾಗಿ ತುಂಬಿ ಕೋಡಿ ಬಿದ್ದಾಗ ಮೇಕೆ ಅಥವಾ ಕುರಿಯನ್ನು ಪೂರ್ವ ಭಾಗದಲ್ಲಿರುವ ತೂಬಿನ ಹತ್ತಿರ ಬಲಿ ನೀಡುತ್ತಾರೆ. ಈ ಆಚರಣೆಗೆ ಕೋಡಿಬಲಿ ಎಂದು ಕರೆಯುತ್ತಾರೆ. ವರ್ಷದ ಪ್ರಾರಂಭದ ಜೂನ್ ಅಥವಾ ಜುಲೈ ತಿಂಗಳಿನಲ್ಲಿ ಬಿತ್ತನೆ ಕಾರ್ಯ ಮುಗಿದ ನಂತರ ಪ್ರತಿವರ್ಷ ಇದೇ ಜಾಗದಲ್ಲಿ ಮೇಕೆ ಅಥವಾ ಕುರಿಯನ್ನು ಬಲಿ ನೀಡುತ್ತಾರೆ. ಇದನ್ನು ಹಸಿರು ಬಲಿ ಎಂದು ಹೇಳುತ್ತಾರೆ. ಈ ಆಚರಣೆಯನ್ನು ಇತ್ತೀಚೆಗೆ ಅಂದರೆ ಸುಮಾರು ೫-೬ ವರ್ಷಗಳಿಂದ ಖಡ್ಡಾಯವಾಗಿ ಮಲ್ಲತ್ಯಮ್ಮ ದೇವಸ್ಥಾನದ ಹತ್ತಿರ ಮಾಡುತ್ತಾರೆ. ಇಲ್ಲಿ ಬಲಿ ಕೊಡುವ ಪ್ರಾಣಿಯನ್ನು ಗ್ರಾಮಸ್ಥರು ಕೊಡುತ್ತಾರೆ. ಇದೇ ಸಮಯದಲ್ಲಿ ಪಶ್ಚಿಮ ಭಾಗದಲ್ಲಿರುವ ದೊಡ್ಡ ತೂಬಿನ ಹತ್ತಿರ ಮೇಲ್ವರ್ಗದ ಜನರು ಪೂಜೆ ಮಾಡಿ ಅನ್ನ ದಾಸೋಹ (ಪರ್ವು) ಮಾಡುತ್ತಾರೆ. ಈ ಊರಿನ ಎರಡು ಸಮುದಾಯಗಳು ಪ್ರತ್ಯೇಕ ಆಚರಣೆಗಳನ್ನು ಸಾಂಪ್ರದಾಯಿಕವಾಗಿ ಮುಂದುವರಿಸಿಕೊಂಡು ಬರುತ್ತಿದ್ದಾರೆ.

**ಕೊನೆ ಟಿಪ್ಪಣಿಗಳು**

೧. ಡಾ. ಬಿ.ಆರ್. ಗೋಪಾಲ್, ೧೯೮೧, ದಿ ಚಾಲುಕ್ಯಾಸ್ ಆಫ್ ಕಲ್ಯಾಣ ಅಂಡ್ ಕಳಚುರೀಸ್, ಕರ್ನಾಟಕ ಯೂನಿವರ್ಸಿಟಿ, ಧಾರವಾಡ, ಪು. ೪೦೭-೪೧೯.

೨. ಡೆರೆಟ್- ೧೯೫೭, ದಿ ಹೊಯ್ಸಳಾಸ್, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ಮದ್ರಾಸ್, ಪು. ೩೮-೭೯.

೩. ದೇವರಕೊಂಡಾರೆಡ್ಡಿ (ಸಂ), ೧೯೯೮, ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂಪುಟ-೧, ಪ್ರಸ್ತಾವನೆ, XVII-LXXX.

೪. ಅದೇ

೫. ಲ. ನ. ಸ್ವಾಮಿ, ೨೦೦೯, ತುಮಕೂರು ಜಿಲ್ಲೆಯ ಪ್ರಾಚೀನ ಶಿಕ್ಷಣ ಕೇಂದ್ರಗಳ ಸಮೀಕ್ಷೆ, ತುಮಕೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ತ್ವ, ಮೈಸೂರು, ಪು. ೪೨೮-೪೩೭; ಜಯಮ್ಮ ಕರಿಯಣ್ಣ, ೨೦೦೯, ತುಮಕೂರು ಜಿಲ್ಲೆಯ ಶಾಸನೋಕ್ತ ಅಗ್ರಹಾರಗಳು, ತುಮಕೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ತ್ವ, ಮೈಸೂರು, ಪುಟ ೧೧೫-೧೨೬. ಲ.ನ. ಸ್ವಾಮಿ, ೨೦೧೦, ಮೈಸೂರು ಜಿಲ್ಲೆಯ ಪ್ರಾಚೀನ ಶಿಕ್ಷಣ ಕೇಂದ್ರಗಳ ರಚನೆಯ ಉದ್ದೇಶ ಮತ್ತು ಮಹತ್ವ, ಮೈಸೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಡಾ. ಆರ್. ಗೋಪಾಲ್ (ಸಂ), ಮೈಸೂರು, ಪು. ೧೯೭-೨೦೭. ಲ. ನ. ಸ್ವಾಮಿ ಮಂಡ್ಯ ಜಿಲ್ಲೆಯ ಶಾಸನಗಳಲ್ಲಿ ಕಂಡಂತೆ ಪ್ರಾಚೀನ ಶಿಕ್ಷಣ, ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಡಾ. ಆರ್. ಗೋಪಾಲ್ (ಸಂ) ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೨೦೦೭,

೬. ಡಾ. ಪಿ.ಬಿ. ದೇಸಾಯಿ, ೧೯೮೨ ಹಿಸ್ಟರಿ ಆಫ್ ಕರ್ನಾಟಕ, ಧಾರವಾಡ, ಹೊಯ್ಸಳರ ಮೇಲಿನ ಅಧ್ಯಾಯ ಓದಿ. ಪು. ೩೮–೭೯.

೭. ಬಿ.ಆರ್. ಗೋಪಾಲ್, ೧೯೮೧, ಪೂರ್ವೋಕ್ತ, ಪು. ೪೦೭–೪೧೯.

೮. ಅದೇ, ಪು. ೪೦೭–೪೧೯.

೯. ಎಂ. ಚಿದಾನಂದಮೂರ್ತಿ, ೧೯೭೯, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಬೆಂಗಳೂರು, ಪು. ೧೪೭–೧೬೬.

೧೦. ಎ.ಕ. ಹಳೆ ಆವೃತ್ತಿ ಸಂಪುಟ–೭, ಶಿಕಾರಿಪುರ, ಪು. ೧೨೬.

೧೧. ಕನ್ನಡ ಇನ್ಸ್ಕ್ರಿಪ್ಷನ್ ಆಫ್ ಆಂಧ್ರಪ್ರದೇಶ, ಮೆಹಬೂಬ್ ನಗರ್, ಪು. ೫೫–೫೨.

೧೨. ಎ.ಕ. ಹಳೆಆವೃತ್ತಿ ಸಂಪುಟ–೭, ಶಿಕಾರಿಪುರ, ೨೭೬.

೧೩. ಎಂ. ಚಿದಾನಂದಮೂರ್ತಿ, ೧೯೭೯, ಪೂರ್ವೋಕ್ತ, ಪು. ೧೪೭–೧೬೬.

೧೪. ಎ.ಕ. ಹಳೆ ಆವೃತ್ತಿ ಸಂಪುಟ–೮, ಸಾಗರ, ಪು. ೧೦೮–೧೧೯.

೧೫. ಕರ್ನಾಟಕ ಇನ್ಸ್ಕ್ರಿಪ್ಷನ್ಸ್, ಸಂಪುಟ–೨, ಪು. ೨೪.

೧೬. ಕರ್ನಾಟಕ ಇನ್ಸ್ಕ್ರಿಪ್ಷನ್ಸ್, ಸಂಪುಟ–೧, ಪು. ೨೫.

೧೭. ಕರ್ನಾಟಕ ಇನ್ಸ್ಕ್ರಿಪ್ಷನ್ಸ್, ಸಂಪುಟ–೨, ಪು. ೧೨.

೧೮. ಅದೇ, ಪು. ೧೩.

೧೯. ಕನ್ನಡ ಇನ್ಸ್ಕ್ರಿಪ್ಷನ್ ಆಫ್ ಆಂಧ್ರಪ್ರದೇಶ, ಸಂ–೩, ನಂ.೬.

೨೦. ಅದೇ, ನಂ.೮.

೨೧. ಕ.ವಿ.ವಿ.ಶಾ.ಸಂ. ೧, ಶಾ.ಸಂ. ೨೦, ಕುಡುತಿನಿ, ಬಳ್ಳಾರಿ (ತಾ).

೨೨. ಅದೇ.

೨೩. ಅದೇ, ಶಾ.ಸಂ. ೧, ಸಿರುಗುಪ್ಪ, ಸಿರುಗುಪ್ಪ (ತಾ).

೨೪. ಅದೇ, ಶಾ.ಸಂ. ೩, ಹಳ್ಯ, ಕೂಡ್ಲಿಗಿ (ತಾ).

೨೫. ಅದೇ, ಶಾ.ಸಂ. ೧೮, ಕುರುಗೋಡು, ಬಳ್ಳಾರಿ (ತಾ).

೨೬. ಅದೇ, ಶಾ.ಸಂ. ೧೨, ಕೊಟ್ಟೂರು, ಕೂಡ್ಲಿಗಿ (ತಾ).

೨೭. ಅದೇ, ಶಾ.ಸಂ. ೧೬, ಕೊಟ್ಟೂರು, ಕೂಡ್ಲಿಗಿ (ತಾ).

೨೮. ಅದೇ, ಶಾ.ಸಂ. ೧, ಹನಸಿ, ಹಗರಿಬೊಮ್ಮನಹಳ್ಳಿ (ತಾ).

೨೯. ಅದೇ, ಶಾ.ಸಂ. ೩, ಅಂಬಳಿ, ಹಗರಿಬೊಮ್ಮನಹಳ್ಳಿ (ತಾ).

೩೦. ಅದೇ, ಶಾ.ಸಂ. ೬, ಅಂಬಳಿ, ಹಗರಿಬೊಮ್ಮನಹಳ್ಳಿ (ತಾ).

೩೧. ಅದೇ, ಶಾ.ಸಂ. ೭, ಅಲಬೂರು, ಹಗರಿಬೊಮ್ಮನಹಳ್ಳಿ (ತಾ).

೩೨. ಅದೇ, ಶಾ.ಸಂ. ೨೨, ಉಲುವತ್ತಿ, ಹಗರಿಬೊಮ್ಮನಹಳ್ಳಿ (ತಾ).

೩೩. ಅದೇ, ಶಾ.ಸಂ. ೧, ಕುರುವತ್ತಿ, ಹೂವಿನಹಡಗಲಿ (ತಾ).

೩೪. ಅದೇ, ಶಾ.ಸಂ. ೧೩, ಕುರುವತ್ತಿ, ಹೂವಿನಹಡಗಲಿ (ತಾ).

೩೫. ಅದೇ, ಶಾ.ಸಂ. ೧೫, ಕುರುವತ್ತಿ, ಹೂವಿನಹಡಗಲಿ (ತಾ).

೩೬. ಅದೇ, ಶಾ.ಸಂ. ೧೬-೧೭, ಕುರುವತ್ತಿ, ಹೂವಿನಹಡಗಲಿ (ತಾ).

೩೭. ಅದೇ, ಶಾ.ಸಂ. ೩೬, ಹೊಳಲು, ಹೂವಿನಹಡಗಲಿ (ತಾ).

೩೮. ಅದೇ, ಶಾ.ಸಂ. ೩೯, ಹೊಳಲು, ಹೂವಿನಹಡಗಲಿ (ತಾ).

೩೯. ಅದೇ, ಶಾ.ಸಂ. ೫೪, ಹಿರೇಹಡಗಲಿ, ಹೂವಿನಹಡಗಲಿ (ತಾ).

೪೦. ಅದೇ, ಶಾ.ಸಂ. ೬೧, ಮಾನ್ಯರಮಸಲವಾಡ, ಹೂವಿನಹಡಗಲಿ (ತಾ).

೪೧. ಅದೇ, ಶಾ.ಸಂ. ೮೧, ಕೊಟ್ನೆಕಲ್, ಹೂವಿನಹಡಗಲಿ (ತಾ).

೪೨. ಅದೇ, ಶಾ.ಸಂ. ೪೨, ಹ್ಯಾರಡ, ಹೂವಿನಹಡಗಲಿ (ತಾ).

೪೩. ಅದೇ.

೪೪. ಅದೇ, ಶಾ.ಸಂ. ೮೪, ಹೂವಿನಹಡಗಲಿ, ಹೂವಿನಹಡಗಲಿ (ತಾ).

೪೫. ಅದೇ, ಶಾ.ಸಂ. ೮೫, ಹೂವಿನಹಡಗಲಿ, ಹೂವಿನಹಡಗಲಿ (ತಾ).

೪೬. ಅದೇ.

೪೭. ಅದೇ, ಶಾ.ಸಂ. ೯೩, ಹೊಳಗುಂದಿ, ಹೂವಿನಹಡಗಲಿ (ತಾ).

೪೮. ಅದೇ.

೪೯. ಅದೇ, ಶಾ.ಸಂ. ೧೦೧, ಸೋಗಿ, ಹೂವಿನಹಡಗಲಿ (ತಾ).

೫೦. ಅದೇ, ಶಾ.ಸಂ. ೧೦೭, ಉತ್ತಂಗಿ, ಹೂವಿನಹಡಗಲಿ (ತಾ).

೫೧. ಅದೇ, ಶಾ.ಸಂ. ೧, ಚಿಟ್ನಹಳ್ಳಿ, ಹರಪನಹಳ್ಳಿ (ತಾ).

೫೨. ಅದೇ, ಶಾ.ಸಂ. ೫, ಉಚ್ಚಂಗಿದುರ್ಗ, ಹರಪನಹಳ್ಳಿ (ತಾ).

೫೩. ಅದೇ, ಶಾ.ಸಂ. ೩೪, ರಾಗಿಮಸಲವಾಡ, ಹರಪನಹಳ್ಳಿ (ತಾ).

೫೪. ಅದೇ, ಶಾ.ಸಂ. ೩೬, ದುಗ್ಗವತಿ, ಹರಪನಹಳ್ಳಿ (ತಾ).

೫೫. ಅದೇ, ಶಾ.ಸಂ. ೩೭, ದುಗ್ಗವತಿ, ಹರಪನಹಳ್ಳಿ (ತಾ).

೫೬. ಅದೇ, ಶಾ.ಸಂ. ೬೦, ಯರಬಳ್ಳಿ, ಹರಪನಹಳ್ಳಿ (ತಾ).

೫೭. ಅದೇ, ಶಾ.ಸಂ. ೭೮, ನೀಲಗುಂದ, ಹರಪನಹಳ್ಳಿ (ತಾ).

೫೮. ಅದೇ, ಶಾ.ಸಂ. ೭೯, ನೀಲಗುಂದ, ಹರಪನಹಳ್ಳಿ (ತಾ).

೫೯. ಅದೇ, ಶಾ.ಸಂ. ೮೮, ನೀಲಗುಂದ, ಹರಪನಹಳ್ಳಿ (ತಾ).

೬೦. ಅದೇ.

೬೧. ಅದೇ, ಶಾ.ಸಂ. ೯೨, ಮಾಡಲಗೇರಿ, ಹರಪನಹಳ್ಳಿ (ತಾ).

೬೨. ಅದೇ, ಶಾ.ಸಂ. ೯೩, ಮಾಡಲಗೇರಿ, ಹರಪನಹಳ್ಳಿ (ತಾ).

೬೩. ಅದೇ, ಶಾ.ಸಂ. ೯೫, ಬಾಗಳಿ, ಹರಪನಹಳ್ಳಿ (ತಾ).

೬೪. ಅದೇ, ಶಾ.ಸಂ. ೧೦೦, ಬಾಗಳಿ, ಹರಪನಹಳ್ಳಿ (ತಾ).

೬೫. ಅದೇ, ಶಾ.ಸಂ. ೧೦೫, ಬಾಗಳಿ, ಹರಪನಹಳ್ಳಿ (ತಾ).

೬೬. ಅದೇ, ಶಾ.ಸಂ. ೧೦೬, ಬಾಗಳಿ, ಹರಪನಹಳ್ಳಿ (ತಾ).

೬೭. ಅದೇ, ಶಾ.ಸಂ. ೧೦೮, ಬಾಗಳಿ, ಹರಪನಹಳ್ಳಿ (ತಾ).

೬೮. ಅದೇ, ಶಾ.ಸಂ. ೧೦೨, ಬಾಗಳಿ, ಹರಪನಹಳ್ಳಿ (ತಾ).

೬೯. ಅದೇ, ಶಾ.ಸಂ. ೧೦೪, ಬಾಗಳಿ, ಹರಪನಹಳ್ಳಿ (ತಾ).

೭೦. ಅದೇ.

೭೧. ಅದೇ.

೭೨. ಅದೇ, ಶಾ.ಸಂ. ೧೧೫, ಬಾಗಳಿ, ಹರಪನಹಳ್ಳಿ (ತಾ).

೭೩. ಅದೇ, ಶಾ.ಸಂ. ೧೧೬, ಬಾಗಳಿ, ಹರಪನಹಳ್ಳಿ (ತಾ).

೭೪. ಅದೇ, ಶಾ.ಸಂ. ೧೨೭, ಬಾಗಳಿ, ಹರಪನಹಳ್ಳಿ (ತಾ).

೭೫. ಅದೇ.

೭೬. ಅದೇ, ಶಾ.ಸಂ. ೧೭೯, ಬಾಗಳಿ, ಹರಪನಹಳ್ಳಿ (ತಾ).

೭೭. ಅದೇ, ಶಾ.ಸಂ. ೧೮೦, ಬಾಗಳಿ, ಹರಪನಹಳ್ಳಿ (ತಾ).

೭೮. ಅದೇ, ಶಾ.ಸಂ. ೧೮೨, ಬಾಗಳಿ, ಹರಪನಹಳ್ಳಿ (ತಾ).

೭೯. ಅದೇ, ಶಾ.ಸಂ. ೧೮೧, ಬಾಗಳಿ, ಹರಪನಹಳ್ಳಿ (ತಾ).

೮೦. ಅದೇ, ಶಾ.ಸಂ. ೧೯೯, ಬೆಣ್ಣೆಹಳ್ಳಿ, ಹರಪನಹಳ್ಳಿ (ತಾ).

೮೧. ಅದೇ, ಶಾ.ಸಂ. ೨೦೭, ಕೆರೆಗುಡಿಹಳ್ಳಿ, ಹರಪನಹಳ್ಳಿ (ತಾ).

೮೨. ಅದೇ, ಶಾ.ಸಂ. ೧೦೮, ಬಾಗಳಿ, ಹರಪನಹಳ್ಳಿ (ತಾ).

೮೩. ಅದೇ, ಶಾ.ಸಂ. ೨೧೭, ತಲವಾಗಿಲು, ಹರಪನಹಳ್ಳಿ (ತಾ).

೮೪. ಎಪಿಗ್ರಾಫಿಯ ಕರ್ನಾಟಿಕ ಹಳೆಯ ಆವೃತ್ತಿ, ಸಂ. ೧೨, ಶಾ.ಸಂ.೭, ಶಿರಾ (ತಾ).

೮೫. EC=XI, ಶಾ.ಸಂ. ೧೩, ಚಿತ್ರದುರ್ಗ, ಚಿತ್ರದುರ್ಗ (ತಾ).

೮೬. ಅದೇ, ಶಾ.ಸಂ. ೩೩, ಗಾರೇಹಟ್ಟಿ, ಚಿತ್ರದುರ್ಗ (ತಾ).

೮೭. ಅದೇ, ಶಾ.ಸಂ. ೬೪, ಕಾಳುಹಾಳು, ಚಿತ್ರದುರ್ಗ (ತಾ).

೮೮. ಅದೇ, ಶಾ.ಸಂ. ೭೭, ಇಸಾಮುದ್ರ, ಚಿತ್ರದುರ್ಗ (ತಾ).

೮೯. ಅದೇ, ಶಾ.ಸಂ. ೧೨೮, ಹೂವಿನಮಡಗು, ಚಿತ್ರದುರ್ಗ (ತಾ).

೯೦. ಅದೇ, ಶಾ.ಸಂ. ೧೩೪, ಹಿರೇತೊಗಲೇರಿ, ಚಿತ್ರದುರ್ಗ (ತಾ).

೯೧. ಅದೇ, ಶಾ.ಸಂ. ೧೪೯, ಕೊಡಗನೂರು, ಚಿತ್ರದುರ್ಗ (ತಾ).

೯೨. ಅದೇ, ಶಾ.ಸಂ. ೧೧, ಕಬ್ಬೂರು, ಚಿತ್ರದುರ್ಗ (ತಾ).

೯೩. ಕ.ವಿ.ವಿ.ಶಾ.ಸಂ. ೧, ಶಾ.ಸಂ. ೧೦೩, ಸೋಗಿ, ಹೂವಿನಹಡಗಲಿ.

೯೪. ಅದೇ, ಶಾ.ಸಂ. ೧೮೩, ಬಾಗಳಿ, ಹರಪನಹಳ್ಳಿ (ತಾ).

೯೫. ಅದೇ, ಶಾ.ಸಂ. ೧೮೪, ಬಾಗಳಿ, ಹರಪನಹಳ್ಳಿ (ತಾ).

೯೬. ಅದೇ, ಶಾ.ಸಂ. ೪೦, ಹೊಳಲು, ಹೂವಿನಹಡಗಲಿ (ತಾ).

೯೭. ಅದೇ, ಶಾ.ಸಂ. ೬, ಅಂಬಳಿ, ಹಗರಿಬೊಮ್ಮನಹಳ್ಳಿ (ತಾ).

೯೮. ಅದೇ, ಶಾ.ಸಂ. ೮೧, ಕೊಟ್ನೆಕಲ್ಲು, ಹೂವಿನಹಡಗಲಿ (ತಾ).

೯೯. ಅದೇ, ಶಾ.ಸಂ. ೮೩, ಹೂವಿನಹಡಗಲಿ, ಹೂವಿನಹಡಗಲಿ (ತಾ).

೧೦೦. ಅದೇ, ಶಾ.ಸಂ. ೧೧೫, ಬಾಗಳಿ, ಹರಪನಹಳ್ಳಿ (ತಾ).

೧೦೧. EC=XI, ಶಾ.ಸಂ. ೨, ದಾವಣಗೆರೆ, ದಾವಣಗೆರೆ (ತಾ).

೧೦೨. ಅದೇ, ಶಾ.ಸಂ. ೧೪೯, ಕೊಡಗನೂರು, ದಾವಣಗೆರೆ (ತಾ).

೧೦೩. ಅದೇ, ಶಾ.ಸಂ. ೧೬೬, ಆಲೂರು, ದಾವಣಗೆರೆ (ತಾ).

೧೦೪. ಕ.ವಿ.ವಿ.ಶಾ.ಸಂ. ೧, ಶಾ.ಸಂ.೭, ಉಚ್ಚಂಗಿದುರ್ಗ, ಹರಪನಹಳ್ಳಿ (ತಾ).

೧೦೫. ಅದೇ, ಶಾ.ಸಂ. ೨೨, ಕುಡುತಿನಿ, ಬಳ್ಳಾರಿ (ತಾ).

೧೦೬. ಎಪಿಗ್ರಾಫಿಯ ಕರ್ನಾಟಿಕ ಹಳೆಯ ಆವೃತ್ತಿ, ಸಂ.೭, ಶಿಕಾರಿಪುರ, ಪು. ೧೩೬.

೧೦೭. ಕ.ವಿ.ವಿ.ಶಾ.ಸಂ. ೧, ಶಾ.ಸಂ.೯೪, ಹೊಳಗುಂದಿ, ಹೂವಿನಹಡಗಲಿ (ತಾ).

೧೦೮. ಅದೇ, ಶಾ.ಸಂ. ೧೧೭, ಬಾಗಳಿ, ಹರಪನಹಳ್ಳಿ (ತಾ).

೧೦೯. ಅದೇ, ಶಾ.ಸಂ. ೧, ಸಿರುಗುಪ್ಪ, ಸಿರುಗುಪ್ಪ (ತಾ).

೧೧೦. ಅದೇ, ಶಾ.ಸಂ. ೨೦೩, ಬಾಡ, ಹರಪನಹಳ್ಳಿ (ತಾ).

೧೧೧. ಅದೇ, ಪ್ರಸ್ತಾವನೆ. ಪು. XL.

೧೧೨. ವಾಸುದೇವ ಬಡಿಗೇರ, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ, ಪು. ೨೬೫-೨೭೩

೧೧೩. ಅದೇ.

೧೧೪. ಕ.ವಿ.ವಿ.ಶಾ.ಸಂ. ೧, ಶಾ.ಸಂ. ೭, ಕುರುವತ್ತಿ, ಹಡಗಲಿ (ತಾ).

೧೧೫. ಅದೇ.

೧೧೬. ವಾಸುದೇವ ಬಡಿಗೇರ, ೨೦೧೨, ಪೂರ್ವೋಕ್ತ, ಪು. ೨೬೫-೨೭೩.

೧೧೭. ಕ.ವಿ.ವಿ.ಶಾ.ಸಂ. ೧, ಶಾ.ಸಂ. ೭-೨೨, ಉಚ್ಚಂಗಿದುರ್ಗ, ಹರಪನಹಳ್ಳಿ (ತಾ).

೧೧೮. ಕೆ.ಎಸ್. ಶಿವಣ್ಣ, ಕರ್ನಾಟಕ ಚರಿತ್ರೆ, ಸಂಪುಟ-೩, ಪುಟ ೧೫೩-೨೪೦; ಸರಸ್ವತಿ ಎನ್. ಮತ್ತು ಸಾವಿತ್ರಿ, ಎನ್. ೨೦೦೮, ಹೊಯ್ಸಳರ ಕಾಲದ ಸಾಂಸ್ಕೃತಿಕ ಕೊಡುಗೆಗಳು, ಪು. ೧೦-೨೮; ಡೆರೆಟ್-೧೯೫೭, ದಿ ಹೊಯ್ಸಳಾಸ್, ಪು. ೩೮-೭೯.

೧೧೯. ಕ.ವಿ.ವಿ.ಶಾ.ಸಂ. ೧, ಪ್ರಸ್ತಾವನೆ, ಪು. ೩೮.

೧೨೦. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು. ೧೩೮-೧೪೫.

೧೨೧. ಅದೇ, ಪು. ೧೩೮-೧೪೫.

೧೨೨. ಬಿ.ಆರ್. ಗೋಪಾಲ್, ಪೂರ್ವೋಕ್ತ, ಪು. ೪೦೭-೪೧೯.

೧೨೩. ಶೇಷನವರತ್ನ, ನಿರ್ಣಯಸಿಂಧು, ಬ್ರಾಹ್ಮಣಧರ್ಮ, ಪು. ೬೭೧-೭೯೭.

೧೨೪. ಅದೇ, ಪಿತೃಕಾರ್ಯ, ಪು. ೭೯೮-೮೫೦ .

೧೨೫. ಚಿದಾನಂದಮೂರ್ತಿ ಎಂ, ಪೂರ್ವೋಕ್ತ, ಪು. ೨೨೬-೨೭೧.

೧೨೬. ವಾಸುದೇವ ಬಡಿಗೇರ, ಪೂರ್ವೋಕ್ತ, ಪು. ೧೭೪-೧೭೭; ೧೯೪-೨೦೨.

೧೨೭. ಅದೇ, ಪು. ೧೯೪-೨೦೨.

೧೨೮. ಅದೇ, ಪು. ೧೯೪-೨೦೨.

೧೨೯. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು. ೨೨೬-೨೭೧.

೧೩೦. ಕ.ವಿ.ವಿ.ಶಾ.ಸಂ. ೧, ಶಾ.ಸಂ. ೮೮, ನೀಲಗುಂದ, ಹರಪನಹಳ್ಳಿ (ತಾ).

೧೩೧. ಅದೇ, ಶಾ.ಸಂ. ೧, ಕುರುವತ್ತಿ, ಹೂವಿನಹಡಗಲಿ (ತಾ).

೧೩೨. ಡಾ. ಎಸ್. ಗುರುರಾಜಾಚಾರ್, ಸಮ್ ಆಸ್‌ಪೆಕ್ಟ್ಸ್ ಆಫ್ ಎಕನಾಮಿಕ್ ಅಂಡ್ ಸೋಶಿಯಲ್ ಲೈಫ್ ಆಫ್ ಕರ್ನಾಟಕ, ಪು. ೧೦೨-೧೩೦. ಮತ್ತು ಡಾ. ಎಸ್. ಗುರುರಾಜಾಚಾರ್, ಎಕನಾಮಿಕ್ ಕಂಡೀಷನ್ಸ್ ಇನ್ ಕರ್ನಾಟಕ ಅಪ್‌ಟು ೧೬೦೦ ಇನ್ ಸೌತ್ ಇಂಡಿಯನ್ ಸ್ಟಡೀಸ್, ಪು. ೩೦೦-೩೦೯.

೧೩೩. ಕ.ವಿ.ವಿ.ಶಾ.ಸಂ. ೧, ಶಾ.ಸಂ. ೮೩, ಹೂವಿನಹಡಗಲಿ, ಹೂವಿನಹಡಗಲಿ (ತಾ).

೧೩೪. ಅದೇ, ಶಾ.ಸಂ. ೨೦, ಕುಡುತಿನಿ, ಬಳ್ಳಾರಿ (ತಾ).

೧೩೫. ಅದೇ.

೧೩೬. ಅದೇ.

೧೩೭. ಅದೇ, ಪು. ೧೯೪-೨೦೨.

೧೩೮. ಡಾ. ಪಿ.ಬಿ.ದೇಸಾಯಿ ಅವರ ಎ ಹಿಸ್ಟರಿ ಆಫ್ ಕರ್ನಾಟಕ ಗ್ರಂಥದಲ್ಲಿನ ಕರ್ನಾಟಕದ ವಂಶಗಳ ಅಧ್ಯಯನದ ನಂತರ ಮೂಡಿಬಂದ ಅಭಿಪ್ರಾಯವನ್ನು ದಾಖಲಿಸಲಾಗಿದೆ.

೧೩೯. ವಾಸುದೇವ ಬಡಿಗೇರ, ಪೂರ್ವೋಕ್ತ, ಪು. ೧೭೪.

೧೪೦. ಎಂ.ವಿ. ಕೃಷ್ಣರಾವ್ ಮತ್ತು ಎಂ. ಕೇಶವಭಟ್ಟ, ಕರ್ನಾಟಕದ ಇತಿಹಾಸ ದರ್ಶನ, ಪು. ೯೭೫-೯೭೬.

೧೪೧. ಜಿ.ಆರ್. ಕುಪ್ಪಸ್ವಾಮಿ, ಎಕನಾಮಿಕ್ ಕಂಡೀಶನ್ಸ್ ಇನ್ ಕರ್ನಾಟಕ, ಪು. ೯೯-೧೨೧.

೧೪೨. ಕ.ವಿ.ವಿ.ಶಾ.ಸಂ. ೧, ಪು. ೧೬, ೪೯೪, ೬೨೨.

೧೪೩. ಎಂ.ವಿ. ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ, ಕರ್ನಾಟಕದ ಇತಿಹಾಸ ದರ್ಶನ, ಪು. ೯೭೫-೯೭೬

೧೪೪. ಕ.ವಿ.ವಿ.ಶಾ.ಸಂ. ೧, ಪು. ೧೬, ೪೯೪, ೬೨೨.

೧೪೫. ಅದೇ, ಪು. ೧೦, ೩೪೬

೧೪೬. ಅದೇ, ಪು. ೯, ೨೭೮, ೨೭೯, ೪೬೮, ೫೨೦.

೧೪೭. ವಾಸುದೇವ ಬಡಿಗೇರ, ಪೂರ್ವೋಕ್ತ, ಪು. ೨೩೭-೨೩೮.

೧೪೮. ಸರಸ್ವತಿ ಎನ್. ಮತ್ತು ಸಾವಿತ್ರ ಎನ್., ಪೂರ್ವೋಕ್ತ, ಪು. ೧೧-೨೮.

೧೪೯. ಅದೇ, ಪು. ೧೧-೨೮.

೧೫೦. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು. ೪೮೭-೪೯೪.

೧೫೧. ಅದೇ, ಪು. ೪೮೭-೪೯೪.

೧೫೨. ಅದೇ, ಪು. ೪೮೭-೪೯೪.

೧೫೩. ಅದೇ, ಪು. ೪೮೭-೪೯೪.

೧೫೪. ಯೋಗೀಶ್ವರಪ್ಪ ಡಿ.ಎನ್., ಕಲ್ಪಶೋಧ, ಪು. ೭೭-೧೦೭.

೧೫೫. ವಾಸುದೇವ ಬಡಿಗೇರ, ಪೂರ್ವೋಕ್ತ, ಪು. ೧೮೪-೧೮೬.

೧೫೬. ಅದೇ, ಪು. ೧೮೪-೧೮೬.

೧೫೭. ಸರಸ್ವತಿ ಎನ್, ಮತ್ತು ಸಾವಿತ್ರ ಎನ್., ಪೂರ್ವೋಕ್ತ, ಪು. ೧೧-೨೮.

೧೫೮. ಅದೇ.

೧೫೯. ಧರ್ಮಶಾಸ್ತ್ರದ ಇತಿಹಾಸ, ಸಂಪುಟ-೨, ಭಾಗ-೧, ಪು. ೩೨೧-೪೦೬.

೧೬೦. ಕ.ವಿ.ವಿ.ಶಾ.ಸಂ. ೧, ಶಾ.ಸಂ. ೧೩೫, ಬಾಗಳಿ, ಹರಪನಹಳ್ಳಿ (ತಾ).

